ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ
ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

# ಸತ್ಕಥಾಸಾಗರ

## ಸದಾಚಾರ ತರಂಗ–3



ಸಂಗ್ರಹ - ಪ್ರೇರಣೆ

ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರು, ಶ್ರೀಭಂಡಾರಕೇರಿ ಮಠ , ಉಡುಪಿ

ಶ್ರೀ ಐತರೇಯಶೋಧಪ್ರಕಾಶನಪೀಠ
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ, ಶ್ರೀಭಂಡಾರಕೇರಿ ಮಠ, ಗಿರಿನಗರ, ಬೆಂಗಳೂರು-560 085

# ಸತ್ಕಥಾಸಾಗರ

## ಸದಾಚಾರ ತರಂಗ-೩

(ದಿ.ವಿದ್ವಾನ್. ಕೊಯಮತ್ತೂರು ವಾದಿರಾಜಾಚಾರ್ಯ
ಇವರು ಬರೆದ ''ಸಾವಿರ ಕಥೆಗಳು'' ಇಂದ ಆಯ್ದ ಕಥೆಗಳು)

ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ
ಜನ್ಮಶತಮಾನೋತ್ಸವ ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ
ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

ಸಂಗ್ರಹ - ಪ್ರೇರಣೆ

ಶ್ರೀ ಶ್ರೀ ೧೦೮ ಶ್ರೀ ವಿದ್ಯೇಶತೀರ್ಥಶ್ರೀಪಾದರು

ಶ್ರೀಭಂಡಾರಕೇರಿ ಮಠ - ಉಡುಪಿ

ಪ್ರಕಾಶನ

''ಶ್ರೀ ಐತರೇಯಶೋಧಪ್ರಕಾಶನಪೀಠ''

ಶ್ರೀ ಭಾಗವತಾಶ್ರಮ ಪ್ರತಿಷ್ಠಾನ

ಶ್ರೀಭಂಡಾರಕೇರಿ ಮಠ,

ಗಿರಿನಗರ, ಬೆಂಗಳೂರು-560 085

ದೂ. 080-26721527

www.vidyeshabhandara.org

Satkatha Sagara - Sadachara Taranga-3 -Collection of short stories from Puranas and Mahabharata, Upanishats written by **Nyaya Siromani, Late Vidwan Sri Coimbatore Vadirajacharya,** Udupi.

*This book is published in commemoration of Janmasatamanotsava of His Holiness Sri Vidyamanya Tirtha Swamiji and Sastyabda Mahotsava of H.H. Sri Vidyesa Tirtha Swamiji of Bhandarakeri Matha, Udupi.*


| | | |
|---|---|---|
| Edited by | : | **Dr. G. Sheshagiri Acharya Vedagarbha** |
| Published by | : | **Aitareya Shodha Prakashana Peetha**<br>a research and publication unit of<br>Sri Bhagavatashrama Pratisthana,<br>Sri Bhandarakeri Matha(Udupi).<br>Bengaluru-560 085. Ph. 080-26721527 |
| First edition | : | 2014 |
| Copies | : | 1000 |
| Copyright | : | Reserved |
| Price | : | Rs. 300 |
| Pages | : | 392 + 22 |
| Page Design | : | **Sri R.S.Premkumar** |
| Cover Page | : | **Sri K.M.Sheshagiri** |
| Copies available at | | **Sri Bhagavatashrama Pratishthana,**<br>Sri Bhandarakere Matha,<br>1343, Ist H Main, 8th Cross,<br>2nd Stage, Girinagar, Bengaluru-85.<br>Ph. 080-26721527 |
| Printed at | : | **Vagartha Printers**, N.R.Colony, Bengaluru-4<br>Ph. 080-22427677 |

# ಹೃದಯವಾಣಿ

ಸದಾಚಾರ, ವ್ರತ, ತೀರ್ಥಸ್ನಾನ, ದಾನ, ಧರ್ಮಗಳ ಆಚರಣೆಯಿಂದ ನಮ್ಮ ಮನಸ್ಸು ಪರಿಶುದ್ಧವಾಗಬಲ್ಲದು. ಶುದ್ಧಮನಸ್ಸಿನಿಂದ ದೇವರ ಬಗೆಗಿನ ಶ್ರವಣ–ವಿಚಾರಮಂಥನವನ್ನು ಮಾಡಲು ನಾವು ಸಮರ್ಥರಾಗಬಲ್ಲೆವು. ಈ ದಿಶೆಯಲ್ಲಿ ಇವುಗಳ ಬಗ್ಗೆ ಇತಿಹಾಸ ಪುರಾಣಗಳು ಬೆಳಕನ್ನು ಚೆಲ್ಲಿವೆ. ಇತಿಹಾಸ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟ ಇವುಗಳ ಮಹತ್ತ್ವವನ್ನು ನಮ್ಮ ಗುರುಗಳಾದ ಶ್ರೀ ವಿದ್ಯಾಮಾನ್ಯತೀರ್ಥರ ನೆಚ್ಚಿನ ಶಿಷ್ಯರಾದ ದಿ|| ಕೊಯಮತ್ತೂರು ಶ್ರೀವಾದಿರಾಜ ಆಚಾರ್ಯರು ಬರೆದ ಸಾವಿರ ಕಥೆಗಳಲ್ಲಿ ಕಾಣಬಹುದು.

ಈ ಸಾವಿರ ಕಥೆಗಳಲ್ಲಿ ವ್ರತನಿಯಮ-ತೀರ್ಥಯಾತ್ರೆಗಳ ಬಗ್ಗೆ ಮಹತ್ತ್ವವನ್ನು ಪ್ರಸ್ತುತಪಡಿಸುವ ಅನೇಕ ಕಥೆಗಳನ್ನು ಕ್ರಮಬದ್ಧವಾಗಿ ಸಂಪಾದಿಸಿ, ಸಂಶೋಧಿಸಿ ಆ ಕಥೆಗಳ ಆಕಾರ ಗ್ರಂಥಗಳನ್ನು ಉಲ್ಲೇಖಿಸಿ ಅವುಗಳ ಪರಿಷ್ಕೃತ ಪ್ರಕಾಶನ ಕಾರ್ಯವು ಸುಗಮವಾಗಿ ನೆರವೇರುವಂತೆ ನಮ್ಮ ಶಿಷ್ಯರಾದ ವೇದಗರ್ಭ ಶೇಷಗಿರಿರಾಯರು ಶ್ರಮವಹಿಸಿದ್ದಾರೆ. ಅವರನ್ನು ಈ ಕಾರ್ಯಕ್ಕಾಗಿ ಅಭಿನಂದಿಸುತ್ತೇವೆ. ಶುಭ ಹಾರೈಸುತ್ತೇವೆ. ನಮ್ಮ ಇನ್ನೊಬ್ಬ ಶಿಷ್ಯನಾದ ಶ್ರೀನಿಧಿ ವಾಸಿಷ್ಠನು 'ಸತ್ಕಥಾ ಸಾಗರದ ಸದಾಚಾರ ತರಂಗ-3' ಇದರ ಪ್ರಕಾಶನ ಕಾರ್ಯವು ಸಕಾಲದಲ್ಲಿ ಆಗು ವಂತೆ ಪರಿಶ್ರಮಪಟ್ಟಿದ್ದಾನೆ. ಚಿತ್ರಕಲಾವಿದರಾದ ಕೆ.ಎಂ.ಶೇಷಗಿರಿಯರು ಅಂದವಾದ ಮುಖಪುಟ ವಿನ್ಯಾಸವನ್ನು ಮಾಡಿ ಸೇವೆ ಸಲ್ಲಿಸಿದ್ದಾರೆ. ಇವರಿಗೆ ಅಭಿನಂದನೆಗಳು. ಶುಭ ಹಾರೈಕೆ. ಸಕಾಲದಲ್ಲಿ ಮುದ್ರಿಸಿದ ವಾಗರ್ಥ ಪ್ರಕಾಶನವನ್ನು ಅಭಿನಂದಿಸುತ್ತೇವೆ.

ಈ ತೃತೀಯ ತರಂಗದ ಪ್ರಕಾಶನ ಕಾರ್ಯಕ್ಕೆ ಆರ್ಥಿಕಸೇವೆಯನ್ನು ಸಲ್ಲಿಸಿದ ಶ್ರೀಮತಿ ತ್ರಿವೇಣಿ-ಜಯಸಿಂಹ ದೇಶಪಾಂಡೆ ದಂಪತಿಗಳನ್ನು ಭಗವಾನ್ ಮಧ್ವಾಂತರ್ಗತ ಶ್ರೀ ವೇದವ್ಯಾಸಾಭಿನ್ನ ರಾಮಚಂದ್ರನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ. ಗುರುಗಳಾದ ಶ್ರೀವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ ಹಾಗೂ ನಮ್ಮ ಷಷ್ಟ್ಯಬ್ದ ಮಹೋತ್ಸವದ ಅಂಗವಾಗಿ ಸತ್ಕಥಾಸಾಗರದ ತೃತೀಯ ತರಂಗವನ್ನು ಜಿಜ್ಞಾಸುವರ್ಗಕ್ಕೆ ಜ್ಞಾನಪ್ರಸಾದರೂಪದಲ್ಲಿ ನೀಡುತ್ತಿದ್ದೇವೆ. ಇದರ ಉಪಯೋಗವನ್ನು ಪಡೆದು ಹಿರಿಯರು ತಮ್ಮ ಮುಂದಿನ ಪೀಳಿಗೆಗೆ ದಾರಿದೀಪವಾದರೆ ಶ್ರಮವು ಸಾರ್ಥಕವೆನಿಸುತ್ತದೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು

**ಶ್ರೀ ವಿದ್ಯೇಶತೀರ್ಥರು**

ಶ್ರೀಭಂಡಾರಕೇರಿ ಮಠ

# **ಕನ್ನಡ ಸಾಹಿತ್ಯ ಪರಿಷತ್ತು**

ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು-೫೬೦ ೦೧೮

ದೂ : ೨೬೬೧೨೯೯೧, ೨೬೬೨೩೫೮೪ ಫ್ಯಾಕ್ಸ್ : ೨೨೪೨೩೮೬೭

ಸ್ಥಾಪನೆ ೧೯೧೫ ಕ್ರಮಸಂಖ್ಯೆ: ಕಸಾಪ/ದಾಖಲೆ/೨೦೧೩-೧೪

ದಿನಾಂಕ: ೧೨-೦೩-೨೦೧೪

ಇವರಿಂದ

**ಪುಂಡಲೀಕ ಹಾಲಂಬಿ**

ಅಧ್ಯಕ್ಷರು

ಇವರಿಗೆ

**ಪೂಜ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರು**

ಭಂಡಾರಕೆರೆ ಮಠ, ಉಡುಪಿ

ಪೂಜ್ಯರೇ,

ತಮ್ಮ ಪತ್ರ ಡಾ.ಶೇಷಗಿರಿಆಚಾರ್ಯರ ಮೂಲಕ ತಲುಪಿತು. ತಮ್ಮ ಮಠದಿಂದ ಪ್ರಕಾಶಿತವಾಗಲಿರುವ ''**ಸಾವಿರ ಕಥೆಗಳು**'' ಇದರ ಕೆಲವು ಮಾದರಿ ಕಥೆಗಳನ್ನು ಅವಲೋಕಿಸಿದೆ. ಸುಂದರವಾದ ಕನ್ನಡ ಗದ್ಯದಲ್ಲಿ ದಿ|| ಕೊಯ ಮತ್ತೂರು ವಾದಿರಾಜಾಚಾರ್ಯರು ಅವರು ಬರೆದ ಈ ಕಥಾಸಂಕಲನ ಕನ್ನಡಿಗರಿಗೆ ತುಂಬಾ ಉಪಯುಕ್ತವಾಗಿದೆ. ವಿಶೇಷವಾಗಿ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ಪುರಾಣ, ಮಹಾಭಾರತ, ರಾಮಾಯಣಗಳಲ್ಲಿ ಬಂದಿರುವ ಕಥೆಗಳಲ್ಲಿ ಬಂದಿರುವ ವಿಷಯ ಸಂದೇಶದಿಂದ ಕೂಡಿದೆ.

ಕೃತಿ ಉತ್ತಮವಾಗಿ ಲೋಕಾರ್ಪಣೆಗೊಂಡು ಜನರಿಗೆ ತಲುಪಲಿ ಎಂದು ನಿಮ್ಮಲ್ಲಿ ನಮಸ್ಕಾರಗಳೊಂದಿಗೆ ಪ್ರಾರ್ಥಿಸುತ್ತೇನೆ.

ಇಂತಿ ನಮಸ್ಕಾರಗಳು

ತಮ್ಮ ವಿಶ್ವಾಸಿ

ಸಹಿ

**(ಪುಂಡಲೀಕ ಹಾಲಂಬಿ)**

ಅಧ್ಯಕ್ಷರು

**ಪ್ರೊ.ಜಿ.ವೆಂಕಟಸುಬ್ಬಯ್ಯ** ಎಂ.ಎ ಬಿ.ಟಿ
ನಂ. 58,31ನೆ ಕ್ರಾಸ್, 7ನೆ ಬ್ಲಾಕ್, ಜಯನಗರ, ಬೆಂಗಳೂರು 560 070
ದೂ : 080-26649232
ನಿವೃತ್ತ ಪ್ರಾಧ್ಯಾಪಕರು ವಿಜಯ ಕಾಲೇಜು ಬೆಂಗಳೂರು
ನಿವೃತ್ತ ಪ್ರಾಂಶುಪಾಲರು ವಿಜಯ ಸಂಜೆ ಕಾಲೇಜು ಬೆಂಗಳೂರು
ಮಾಜಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
ಮಾಜಿ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು ಬೃಹತ್ ಕನ್ನಡ-ಕನ್ನಡ ನಿಘಂಟು
ಅಧ್ಯಕ್ಷರು ಶ್ರೀ ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ

ಡಾ।। ವೇದಗರ್ಭ ಜಿ. ಶೇಷಗಿರಿರಾಯರಲ್ಲಿ ವಿಜ್ಞಾಪನೆಗಳು

ಸನ್ಮಾನ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಮಹಾಸ್ವಾಮಿಗಳಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ತಿಳಿಸಿ. ತಾವು ನನಗೆ ಕೊಟ್ಟ ಕೆಲವು ಜ಼ೆರಾಕ್ಸ್ ಪುಟಗಳನ್ನು ಆಳವಾಗಿ ಪರಿಶೀಲಿಸಿದ್ದೇನೆ. ತಾವು ತಿಳಿಸಿದ **ಸಾವಿರಕಥೆ**ಗಳ ಸಂಬಂಧದ ಈ ಬರವಣಿಗೆಯನ್ನು ಮಾಡಿರುವವರು ನಿಜವಾಗಿ ರಾಮಾಯಣ, ಮಹಾಭಾರತ, ಭಾಗವತ ಮತ್ತು ಎಲ್ಲ ಮಹಾಪುರಾಣಗಳನ್ನು ಓದಿ ಜೀರ್ಣಿಸಿಕೊಂಡಿರುವ ವಿದ್ವಾಂಸರಾಗಿರಬೇಕು. ಈ ಪುಸ್ತಕಗಳಲ್ಲಿರುವ ಎಲ್ಲ ಬರಹಗಳೂ ಜನೋಪಯೋಗಿ ದೃಷ್ಟಿಯಿಂದ ರಚಿತವಾಗಿದೆ. ಎಲ್ಲಿಯೂ ಲೇಖಕರು ತಮ್ಮ ವಿದ್ವತ್ತನ್ನು ಪ್ರದರ್ಶಿಸಲು ಪ್ರಯತ್ನಪಟ್ಟಿಲ್ಲ.

ಅವರ ವಾಕ್ಯ ಸರಣಿಯು ಸರಳವಾಗಿದ್ದು ವಾಕ್ಯಗಳು ಚಿಕ್ಕದಾಗಿದ್ದು ಓದುಗರಿಗೆ ಸುಲಭವಾಗಿ ಅರ್ಥವಾಗುತ್ತದೆ. ವಾಕ್ಯಗಳು ವ್ಯಾಕರಣಬದ್ಧವಾಗಿದೆ, ಶೈಲಿಯು ಸುಲಲಿತ ವಾಗಿದೆ. ಸಾಮಾನ್ಯರು ಓದಿ ತಮ್ಮ ಪ್ರಾಚೀನ ಗ್ರಂಥಗಳ ಸಾರವನ್ನು ಅರ್ಥಮಾಡಿ ಕೊಂಡು ಸಜ್ಜನರಾಗಿ ಬಾಳಲಿ ಎಂಬ ಉದ್ದೇಶವನ್ನು ಹೊಂದಿರುವುದು ಸ್ಪಷ್ಟ.

ತಾವು ಈ ಲೇಖಕರ ಎಲ್ಲ ಹಸ್ತಪ್ರತಿಗಳನ್ನು ಸಂಗ್ರಹಿಸಿ ಭಾಗಗಳಾಗಿ ಪ್ರಕಟಿಸಿದರೆ ಕನ್ನಡ ಜನತೆಗೆ ಸಹಾಯ ಮಾಡಿದ ಹಾಗಾಗುತ್ತದೆ, ತಮಗೆ ಪುಣ್ಯಬರುತ್ತದೆ, ಪರಮಾಚಾರ್ಯರ ಆಶೀರ್ವಾದ ಲಭಿಸುತ್ತದೆ. ನನಗೆ ನಿಜವಾಗಿ ಸಂತೋಷವಾಗುತ್ತಿದೆ.

ಇಂತಿ ತಮ್ಮವ

27-02-2014 **ಜಿ. ವೆಂಕಟಸುಬ್ಬಯ್ಯ**

**ನಾಡೋಜ ಡಾ॥.ಎಂ.,ಚಿದಾನಂದಮೂರ್ತಿ,**

ಎಂ.ಎ., ಪಿ.ಎಚ್.ಡಿ(ಮೈ).,ಡಿ.ಲಿಟ್(ಬೆಂ)

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು(ಬೆಂಗಳೂರು ವಿಶ್ವವಿದ್ಯಾಲಯ)

ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಪಂಪ ಪ್ರಶಸ್ತಿ ವಿಜೇತರು

'ವಿಜಯ' ನಂ 1013/ಬಿ, 4ನೆ ಅಡ್ಡರಸ್ತೆ ,11ನೆ ಮುಖ್ಯರಸ್ತೆ ,

ಹಂಪಿನಗರ, ಬೆಂಗಳೂರು-560 104 ದೂ. 080-23300687

ದಿನಾಂಕ 20-2-2014

## ಅಪೂರ್ವ ಪೌರಾಣಿಕ ಕಥೆಗಳ ಸಂಕಲನ

ದಿ ॥ ವಿದ್ವಾನ್ ಕೊಯಮತ್ತೂರು ವಾದಿರಾಜಾಚಾರ್ಯರು ಹುಟ್ಟಿನಿಂದ ಕರ್ನಾಟಕ ಉಡುಪಿ ಪ್ರಾಂತದವರು, ದ್ವೈತವೇದಾಂತ ಮತ್ತು ಇತರ ಭಾರತೀಯ ತತ್ವಶಾಸ್ತ್ರ ಶಾಖೆಗಳನ್ನು ಆಳವಾಗಿ ಬಲ್ಲವರಾಗಿದ್ದು ಅವರು ಉಡುಪಿಯ ತಮ್ಮ ಗುರುಗಳ ಆದೇಶದ ಮೇರೆಗೆ ತಮಿಳುನಾಡಿನ ಕೊಯಮತ್ತೂರಿನಲ್ಲಿ ನೆಲಸಿ ಅಲ್ಲಿ ಸಂಸ್ಕೃತ ಪಾಠ ಪ್ರವಚನಗಳನ್ನು ಮಾಡಿಕೊಂಡು ಶಿಷ್ಯರ ಜ್ಞಾನವನ್ನು ಬೆಳಗಿದ ಮಹಾಮೇಧಾವಿಗಳು. ಕರ್ನಾಟಕದ ದಕ್ಷಿಣದ ಗಡಿಗೆ ಅಂಟಿಕೊಂಡಂತಿರುವ ಕೊಯಮತ್ತೂರು ಇಂದಿಗೂ ತಮಿಳು-ಕನ್ನಡ ದ್ವಿಭಾಷಾ ಪ್ರದೇಶ, ಹೀಗಾದ್ದ ರಿಂದಲೇ ಶ್ರೀ ಪರಮಾಚಾರ್ಯರು ಸಂಸ್ಕೃತದಲ್ಲಿ ಸ್ಥಳೀಯ ತಮಿಳಿನಲ್ಲಿ ಮತ್ತು ತಮ್ಮ ಮಾತೃಭಾಷೆ ಕನ್ನಡದಲ್ಲಿಯೂ ಪ್ರವಚನ ನೀಡುತ್ತಿರಬಹುದು.

ಅವರು ಮಹಾಭಾರತ, ರಾಮಾಯಣ ಮತ್ತು ಇತರ ಪುರಾಣಗಳಿಂದ ಸಂಗ್ರಹಿಸಿ ರಚಿಸಿರುವ **'ಒಂದು ಸಾವಿರ ಕಥೆಗಳು'** ಕೃತಿಯ ಪೂರ್ಣಪಾಠ ಲಭ್ಯವಾಗಿರದಿದ್ದರೂ ಅದರ ಹಸ್ತಪ್ರತಿಯ ಆರುನೂರುಎಪ್ಪತ್ತು ಕತೆಗಳು ಲಭ್ಯವಾಗಿದೆ. ಸಂಸ್ಕೃತಗಳಲ್ಲಿನ ಕತೆಗಳನ್ನು ಕನ್ನಡೀಕರಿಸಿ ಮನಮುಟ್ಟುವಂತೆ ಬಹು ಅಚ್ಚುಕಟ್ಟಾಗಿ, ಕೆಲವೆಡೆ ಮೋಹಕವಾದ ಶೈಲಿಯಲ್ಲಿ ನೀಡಿದ್ದಾರೆ. ಉದಾಹರಣೆಗೆ ಹರಿಶ್ಚಂದ್ರನ ಕಥೆ, ನರಕಾಸುರನ ವಧೆ,ಪಾಂಡವರ ಕಥೆಗಳನ್ನು ನೋಡಬಹುದು.

ನಮ್ಮ ರಾಷ್ಟ್ರ ಭಾರತದ ಸಮೃದ್ಧ ಸಾಂಸ್ಕೃತಿಕ ಸಂಪತ್ತನ್ನು ಅರಿಯಬೇಕಾದರೆ ರಾಮಾಯಣ, ಮಹಾಭಾರತ ಕಥೆಗಳನ್ನು , ಪುರಾಣಗಳಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ನೋಡಬೇಕು. ಎಲ್ಲ ಕಡೆ ಕಾಣುವ ಆತ್ಮವೆಂದರೆ 'ಧರ್ಮ'ದ ಪರಿಕಲ್ಪನೆ.

'ಧರ್ಮ'ವೆಂಬುದು ಮತವಲ್ಲ ಅದೊಂದು ಇನ್ನೊಂದು ಬಾಷೆಗೆ ಅನುವಾದಿಸಲು ಸಾಧ್ಯವಾಗದಂತಹ ಉದಾತ್ತ ಪರಿಕಲ್ಪನೆಯನ್ನು ಹೊಂದಿದೆ. ಅದರ ಅರ್ಥವಂತಿಕೆ ಗಡಿಯನ್ನು ಮೀರಿದ್ದು. 'ಸತ್ಯಂ ವದ ಧರ್ಮಂ ಚರ' ಈ ಮಾತೇ ಅದನ್ನು ಸೂಚಿಸುತ್ತದೆ. ಬದುಕಿನಲ್ಲಿ ಸತ್ಯಪ್ರಿಯತೆ, ನ್ಯಾಯಯುತ ನಡವಳಿಕೆ, ಪರೋಪಕಾರ, ದ್ವೇಷ ಅಸೂಯೆಗಳ ತ್ಯಾಜ್ಯ ಇತ್ಯಾದಿಗಳನ್ನು ಮೋಹಕ ಕತೆಗಳ ಮೂಲಕ ರಾಮಾಯಣ, ಮಹಾಭಾರತದ ಕಥೆಗಳು, ಪೌರಾಣಿಕ ಕತೆಗಳು ಜನರಿಗೆ ತಮ್ಮದೇ ಆದ ರೀತಿಯಲ್ಲಿ ತಲುಪಿಸುತ್ತವೆ. ಅಂತಹ ನೂರಾರು ಕಥೆಗಳನ್ನು ದಿ। ವಾದಿರಾಜಾಚಾರ್ಯರು ತಮ್ಮ ಕೃತಿಯಲ್ಲಿ ನೀಡಿ ಕನ್ನಡದ ಸಂಪತ್ತನ್ನು ಹೆಚ್ಚಿಸಿರುವುದಲ್ಲದೆ ಭಾರತೀಯ ಸಂಸ್ಕೃತಿಯ ಬಗೆಗಿನ ನಮ್ಮ ಅಭಿಮಾನವನ್ನು ವರ್ಧಿಸಿದ್ದಾರೆ. ಅವರ ಕೃತಿಯು ಓದುಗರಿಗೆ ಮುದವನ್ನು ನೀಡುತ್ತದೆ, ಅಂತೆಯೇ ಅದರ ಪರಂಪರೆಯ ಬಗ್ಗೆ ಓದುಗರಿಗೆ ಅರಿವನ್ನು ಹೆಚ್ಚಿಸುವುದಲ್ಲದೆ ಅವರ ಜೀವನ ವಿಧಾನವನ್ನೂ ಬದಲಾಯಿಸುತ್ತದೆ, ನಮ್ಮ ರಾಷ್ಟ್ರ ಭಾರತದ ಬಗ್ಗೆ ಅಭಿಮಾನವನ್ನು ವರ್ಧಿಸುತ್ತದೆ.

**ಎಂ. ಚಿದಾನಂದ ಮೂರ್ತಿ**



ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ

# ಲೇಖಕರ ಕಿರು ಪರಿಚಯ

| | | |
|---|---|---|
| ಲೇಖಕರು | : | **ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**, ಉಡುಪಿ (ಕೊಯಮತ್ತೂರು ವಾದಿರಾಜಾಚಾರ್ಯ) |
| ಮಾತಾಪಿತೃಗಳು | : | **ದಿ|| ಶ್ರೀ ರಾಮಚಂದ್ರ ಭಟ್ ಹಾಗೂ ಶ್ರೀಮತಿ ಭೂಮಿ** |
| ವಂಶದ ಹೆಸರು | : | **ಪೆರಲ್ತಾಯ** |
| ಹುಟ್ಟಿದ ಊರು | : | **ಕೃಷ್ಣಾಪುರ** |
| ಹುಟ್ಟಿದ ವರ್ಷ | : | **1916** |
| ವಿದ್ಯಾಭ್ಯಾಸ | : | ಬನ್ನಂಜೆಯ ಪ್ರಾಥಮಿಕ ಶಾಲೆಯಲ್ಲಿ ಓದಿದ ನಂತರ ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ಮದ್ರಾಸು ವಿಶ್ವವಿದ್ಯಾಲಯದಿಂದ **''ನ್ಯಾಯಶಿರೋಮಣಿ''** ಎಂಬ ಪದವಿ ಪ್ರಾಪ್ತಿ. |
| ವಿದ್ಯಾಗುರುಗಳು | : | ಪರಮಪೂಜ್ಯ **ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು** ಇವರಲ್ಲಿ **ಶ್ರೀಮನ್ನ್ಯಾಯಸುಧಾ** ಗ್ರಂಥದ ಅಧ್ಯಯನ. ನಂತರ ವ್ಯಾಸರಾಜರ **ತರ್ಕತಾಂಡವದ** ಅಧ್ಯಯನವನ್ನು **ದಿ. ಪಾಂಡುರಂಗೀ ಜಯತೀರ್ಥಾಚಾರ್ಯರ** ಬಳಿ ನಡೆಸಿದರು. ಇವರೇ ಮುಂದೆ ಉತ್ತರಾದಿ ಮಠಾಧೀಶರಾದ **ಶ್ರೀ ಸತ್ಯಪ್ರಜ್ಞ ತೀರ್ಥ ಶ್ರೀಪಾದರಾದರು.** |

1937ರಲ್ಲಿ ಉಚ್ಚಿಲದಲ್ಲಿ ದಾಂಪತ್ಯ ಜೀವನ ಪ್ರವೇಶಿಸಿ ಗುರುಗಳ ಆದೇಶದ ಮೇರೆಗೆ ಕೊಯಮತ್ತೂರಿನಲ್ಲಿ ನೆಲೆಸಿ ಅಲ್ಲಿ ಜಿಜ್ಞಾಸುಗಳಿಗೆ ತತ್ವಜ್ಞಾನ ಪ್ರಸಾರ ಮಾಡುತ್ತಾ ದ್ವೈತಸಿದ್ಧಾಂತದ ಪ್ರಚಾರದಲ್ಲಿ ನಿರತರಾದರು. ನ್ಯಾಯಸುಧೆಯ ಮಂಗಳವನ್ನು ಹನ್ನೆರಡು ಬಾರಿ ನಡೆಸಿದರು. 108 ಬಾರಿ ಶ್ರೀಮಧ್ಭಾಗವತ ಸಪ್ತಾಹ ಮಂಗಳವನ್ನು ಮಾಡಿದ್ದಾರೆ. **ಭಾಗವತ ದಶಮ ಸ್ಕಂದದ ಹೋಮವನ್ನು ಮಾಡಿದ್ದಾರೆ. ಮುತ್ತಿನಂತಹ ತಮ್ಮ ಹಸ್ತಾಕ್ಷರದಲ್ಲಿ 'ಸಾವಿರ ಕಥೆಗಳು' ಎಂಬ ಸತ್ಕಥಾ ಸಂಕಲನ ಸಂಗ್ರಹಿಸಿದ್ದಾರೆ.** ಕೊಯಮತ್ತೂರಿನ ಪ್ರಖ್ಯಾತರಾದ ದಿ। ತಾಮ್ರಪರ್ಣಿ ಸುಬ್ಬಾಚಾರ್ಯರೇ ಮೊದಲಾದ ಶಿಷ್ಯರಿಗೆ ಪಾಠಹೇಳಿ ಅವರಿಂದ ಅನೇಕ ಗ್ರಂಥಗಳನ್ನು ರಚನೆ ಮಾಡಲಿಕ್ಕೆ ಮಾರ್ಗದರ್ಶನ ನೀಡಿದ್ದಾರೆ.

ಸಾರ್ಥಕ ದಾಂಪತ್ಯ ಜೀವನ ನಡೆಸಿದ ಆಚಾರ್ಯರು ಪತ್ನಿಯಾದ ಶ್ರೀಮತಿ ಲಕ್ಷ್ಮಿಯಲ್ಲಿ ಎರಡು ಗಂಡು ಹಾಗೂ ಒಬ್ಬ ಮಗಳನ್ನು ಪಡೆದಿದ್ದಾರೆ.

॥ श्रीरस्तु ॥

**जयति हरिरचिन्त्यः सर्वदेवैकवन्द्यः परमगुरुरभीष्टावाप्तिदः सज्जानाम् ॥**
**निखिलगुणगणार्णो नित्यनिर्मुक्तदोषः सरसिजनयनोऽसौ श्रीपतिर्मानदो नः ॥**

श्रीमन्मध्वशास्त्र संपन्न वेदमूर्ति उडुपीश्री वादिराजभट्टरवर पादसन्निधानग ळल्लि, कोयमुत्तूरु पुर वासिगाळाद नावेल्लरु विद्वत् शिरोभूषणराद निंमन्नु अनेक सा ष्टांग नमस्कारगुलु निंम पादगळल्लि समार्पिसिरुव मान्य पत्र ॥

**महनीयरे**

श्रीमत्परमहंसेत्यादि गुणगणालंकृतराद श्री श्री १०८ श्री भण्डारकेरी मठाधीश श्री विद्यामान्यतीर्थ श्रीपादंगळवरिंद आज्ञप्तरागि नीवु ई कोयमुत्तूरिगे बंदु अज्ञगळाद नंमन्नु उद्धरिसि इरूविरि । निंमिंद कोयमुत्तुरिन अनेक माध्वरु **नावु माध्वरु यंत हेळि कोळ्ळुव बगेयल्लि मध्व** शास्त्रद ज्ञानैश्वर्यवन्नु पडदिरुवरु । नीवु हरि वायुगुरुगळल्लि निर्व्याज भक्तियन्नु माडि अवर कृपाकटाक्षक्के पात्ररागि इरूविरि ।

**पूज्यरे**

कळेद साधारण संवत्सर कार्तिकमासदल्लि नीवु परमानुग्रह माडिद कारण कोयमुत्तूरिन अशेष स्त्री पुरुष माध्वरु ७ दिनगळ पर्यन्तवागि ''श्रीमद्भागवत, श्रीमन्नयसुधा श्रीसर्वमूल ग्रन्थगळ पारायण अर्थ कथन गळन्नु श्रवणमाडि ग्रन्थगळ प्रतिपाद्य श्री भारतीरमण मुख्यप्राणांतर्गत वेदव्यास देवर परमानुग्रहवन्नु होंदिरुवरु ॥ ईरीतियागि पदे पदे नमगेश्रवण माडुव भाग्यवन्नु कोडिसबेकु ॥

**मध्वशास्त्रदल्लि दीक्षा उळ्ळवरे**

ई काल पर्यन्त याव मनुष्यन दया दाक्षिण्यक्कू नीवु ओळगागदे पारमार्थिकदिंद प्रवर्तकरागि इरुविरि । कोयमुत्तूरिन माध्वरु मडिद भाग्य विशेषदिंद निम्मन्नु श्रीहरियु नमगे कोट्टिरुवनु । नीवु हरि वायु गुरुगळ अनुग्रहदिंद बहुकाल नम्मेल्लरिगू ज्ञानोपदेशकरागि इरबेकेनुत श्रीभारतीरमण मुख्यप्राणान्तर्गत सर्व स्वामी श्रीकृपणनन्नु पदे पदे प्रार्थना माडि निमगे नंम विनय भक्तिपूर्वकवाद साष्टंग नमस्कारगळन्नु समर्पिसिरुत्तेवे ॥

**कोयमुत्तूरु** **कोयमुत्तूरु पुरवासिनः**

विरोधकृत् श्रावणकृष्णद्वितीय । ८.८.१९७१

# ಸಂಪಾದಕೀಯ

''ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ ।
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ ॥
ದೇವೀಂ ವಂದೇ ಸುಪರ್ಣೇಮಹಿಪತಿದಯಿತಾಂ ವಾರುಣೀ ಮಪ್ಯುಮಾಂ ತಾಂ ।
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲ ಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥''

''ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ।''

''ಯತ್ಸಂಬಂಧೇನ ಕರ್ಮಾಣಿ ಫಲವಂತಿ ಭವಂತಿ ಹಿ ।
ಯಃ ಸರ್ವಕರ್ಮಣಾಂ ಕರ್ತಾ ತಸ್ಮೈ ಭಗವತೇ ನಮಃ ॥''

''ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ಅನೇನ ವಚಸಾ ಗೋಪ್ತ್ರೇ ಫಲದಾತ್ರೇ ನಮೋ ನಮಃ ॥''

ಶ್ರೀ ಶ್ರೀ 108 ಶ್ರೀ ವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ ಹಾಗೂ ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರ ಷಷ್ಟ್ಯಬ್ದ ಮಹೋತ್ಸವದ ಅಂಗವಾಗಿ ಹಲವು ಅಧ್ಯಾತ್ಮಿಕ ಕೃತಿಗಳು ಪ್ರಕಟಿಸಲ್ಪಡುತ್ತಿವೆಯಷ್ಟೆ. ಅದರಲ್ಲಿ ಈಗಾಗಲೇ ಸತ್‌ಕಥಾ ಸಾಗರ-ಭಾಗ1 ಮತ್ತು ಭಾಗ-2 ಪ್ರಕಟವಾಗಿವೆ. (ಭಗವತ್ಕಥಾ ಹಾಗೂ ಭಾರತ ಕಥಾತರಂಗ) ಮೂರನೆಯದಾಗಿ **'ಸದಾಚಾರ ತರಂಗ-3'**ವನ್ನು ಜಿಜ್ಞಾಸುಗಳಿಗೆ ಜ್ಞಾನಪ್ರಸಾದವಾಗಿ ಶ್ರೀ ವಿದ್ಯೇಶತೀರ್ಥಶ್ರೀಪಾದರು ನೀಡುತ್ತಿದ್ದಾರೆ.

ಇದರಲ್ಲಿ ಸಾಧಕನ ಜೀವನದಲ್ಲಿ ಬೇಕೇಬೇಕಾದ ಸದಾಚಾರದ ಹಲವು ಮಜಲುಗಳುಳ್ಳ ದಿ.ಕೊಯಮತ್ತೂರು ವಾದಿರಾಜಾಚಾರ್ಯರು ಬರೆದ 126 ಕಥೆಗಳಿಂದ ಸಂಗ್ರಹಿಸಿ, ವಿಭಾಗಿಸಿ ಸಂಪಾದಿಸಲಾಗಿದೆ.

ಸದಾಚಾರವಿಲ್ಲದವನನ್ನು ವೇದಗಳು ಪವಿತ್ರಗೊಳಿಸವು. ಆದ್ದರಿಂದ ಮೋಕ್ಷವು ಇಲ್ಲ.

**''ಆಚಾರಹೀನಂ ನ ಪುನಂತಿ ವೇದಾಃ''**

**''ಆಚಾರಃ ಪ್ರಥಮೋ ಧರ್ಮಃ ಧರ್ಮಸ್ಯ ಪ್ರಭುರಚ್ಯುತಃ''**

ಎಂಬ ಶಾಸ್ತ್ರದ ಮಾತುಗಳು ಮೋಕ್ಷಕ್ಕೆ ಸದಾಚಾರವನ್ನು ಮೊದಲ ಮೆಟ್ಟಲನ್ನಾಗಿ ಗುರುತಿಸುತ್ತವೆ.

ಬೆಳಗಿನಿಂದ ರಾತ್ರಿವರೆಗಿನ ಎಲ್ಲ ವಿಹಿತ ಕಾರ್ಯಗಳು ಸದಾಚಾರಗಳೇ. ಅವುಗಳು ನಿತ್ಯ, ನೈಮಿತ್ತಿಕ ಹಾಗೂ ಕಾಮ್ಯಕರ್ಮಗಳನ್ನಾಗಿ ವಿಭಾಗಿಸಲಾಗಿದೆ. ಸ್ನಾನ, ಸಂಧ್ಯಾ, ದೇವರಪೂಜೆ, ಏಕಾದಶ್ಯಾದಿ ವ್ರತಸೇವನೆ, ನಿತ್ಯ ಸದಾಚಾರ ಕಾರ್ಯಗಳಾದರೆ ತೀರ್ಥಯಾತ್ರೆ, ದಾನ ಮೊದಲಾದವು ನೈಮಿತ್ತಿಕಗಳಾಗಿವೆ. ನಿತ್ಯ ದಾನವು ವಿಹಿತವಾಗಿದೆಯಾದರೂ, ನೈಮಿತ್ತಿಕವೂ ಹೌದು. ತೀರ್ಥವಿಧಿಯೂ ನೈಮಿತ್ತಿಕ. ಯಾವುದೇ ಕರ್ಮವನ್ನು ಫಲದ ಆಶೆಯಿಟ್ಟುಕೊಂಡು ಮಾಡಿದಾಗ ಅದು ಕಾಮ್ಯಕರ್ಮವಾಗುತ್ತದೆ. ಫಲದಾಶೆ ಬಿಟ್ಟು ಹರಿಪ್ರೀತಿಗಾಗಿ ಮಾಡಿದಾಗ ನಿಷ್ಕಾಮ ಕರ್ಮವಾಗುತ್ತದೆ. ಸಕಾಮಕರ್ಮ ಐಹಿಕ ಸುಖ, ಸ್ವರ್ಗಾದಿ ಸುಖ ಕೊಡಬಲ್ಲದು. ಹರಿಸರ್ವೋತ್ತಮಮತ್ವಜ್ಞಾನಪೂರ್ವಕವಾದ ಭಕ್ತಿಪೂರ್ವಕವಾದ ನಿಷ್ಕಾಮಕರ್ಮ ಮೋಕ್ಷಕ್ಕೆ ಸಾಧನವಾಗುತ್ತದೆ ಎನ್ನುವುದು ತತ್ತ್ವ. ಮೊದಲನೆಯದು ಪ್ರವೃತ್ತಕರ್ಮ, ಎರಡನೆಯದು ನಿವೃತ್ತಕರ್ಮ.

**''ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ।**
**ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ॥''**

ವ್ಯಾಸಸ್ಮೃತಿ-ಮನುಸ್ಮೃತಿ

ಅಧ್ಯಾತ್ಮಿಕ ಜೀವನದಲ್ಲಿ ನಾವು ಮಾಡುವ ತೀರ್ಥಯಾತ್ರೆ, ದಾನ, ದೇಹದಂಡನೆ ರೂಪದ ತಪಸ್ಸು (ವ್ರತಾದಿಗಳು) ಯಜ್ಞ ಇವೇ ಮೊದಲಾದವು ಶ್ರೀಹರಿಯ ಸೇವೆಯಲ್ಲಿ ಅಂಗಮಾತ್ರ. ಮೋಕ್ಷ ಸಾಧನೆಯಲ್ಲಿ ಇವುಗಳ ಪಾತ್ರ ಅಪ್ರಧಾನ. ಆದರೆ ಪ್ರಧಾನಾಂಗವು ಭಕ್ತಿಯೇ ಹೊರತು ಉಳಿದವುಗಳಲ್ಲ ಎನ್ನುವುದು ಶಾಸ್ತ್ರ ಪರ್ಯಾಲೋಚನೆಯಿಂದ ತಿಳಿಯುತ್ತದೆ.

**''ದಾನತೀರ್ಥತಪೋಯಜ್ಞ ಪೂರ್ವಾಃ ಸರ್ವೇಽಪಿ ಸರ್ವದಾ ।**
**ಅಂಗಾನಿ ಹರಿಸೇವಾಯಾಂ ಭಕ್ತಿ ಸ್ತ್ವೇಕಾ ವಿಮುಕ್ತಯೇ ॥**

ಮ.ತಾ.ನಿ.

ಆದರೆ ಶಾಸ್ತ್ರಗ್ರಂಥಗಳಲ್ಲಿ ಅಲ್ಲಲ್ಲಿ ತೀರ್ಥಯಾತ್ರಾದಿಗಳು, ಸ್ನಾನಾದಿಗಳು,

ದೀಪಬೆಳಗುವುದು, ತೀರ್ಥಕ್ಷೇತ್ರದಲ್ಲಿ ಮರಣ ಹೊಂದುವುದು ಮೊದಲಾದವು ಮೋಕ್ಷಕ್ಕೆ ಕಾರಣವೆಂದು ಹೇಳಿದಂತೆ ತೋರುತ್ತದೆ.

**''ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।**
**ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥''**
**''ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ ॥''** ಗೀತಾ.3-20
**''ಜನ್ಮ ಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥''** ಗೀತಾ 4-9

ಮೇಲಿನ ಗೀತೆಯ ವಾಕ್ಯಗಳಿಂದ ''ಕರ್ಮದಿಂದಲೇ ಮುಕ್ತಿ', ''ಕೃಷ್ಣನ ದಿವ್ಯ ಜನ್ಮ, ದಿವ್ಯ ಕರ್ಮಗಳನ್ನು ತಾತ್ತ್ವಿಕವಾಗಿ ತಿಳಿಯುವುದರಿಂದಲೇ ಪುನರ್ಜನ್ಮ ರಹಿತ ಮೋಕ್ಷ ಲಾಭ'' ಎಂಬ ಅರ್ಥ ತೋರುತ್ತದೆ.

ಈ ಪ್ರಸಂಗವನ್ನು ಆಚಾರ್ಯರು ಗೀತಾಭಾಷ್ಯದಲ್ಲಿ ವಿವರವಾಗಿ ಚರ್ಚಿಸಿ ಬರೀ ಸ್ನಾನಾದಿಗಳಿಂದಾಗಲೀ ತೀರ್ಥಕ್ಷೇತ್ರಗಳಲ್ಲಿ ಮರಣದಿಂದಾಗಲಿ, ಭಗವಂತನ ಬಗ್ಗೆ ಆಂಶಿಕ ಜ್ಞಾನವಾಗಲೀ ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಪೂರ್ಣಜ್ಞಾನಯುಕ್ತ ಸ್ವಬಿಂಬಾ ಪರೋಕ್ಷವೇ ಮುಖ್ಯಕಾರಣ (ಅಪರೋಕ್ಷ ಜ್ಞಾನ) ಹೊರತು ಉಳಿದುವೆಲ್ಲ ಅಪರೋಕ್ಷ ಜ್ಞಾನಕ್ಕೆ ಕಾರಣವಾದ ಉಪಾಯಗಳೆಂದು ನಿರ್ಧರಿಸಿರುತ್ತಾರೆ.

**''ಬ್ರಹ್ಮಜ್ಞಾನಂ ವಿನಾ ಮುಕ್ತಿರ್ನಕಥಂಚಿ ದಕ್ಷೀಷ್ಯತೇ ।**
**ಪ್ರಯಾಗಾದೇಸ್ತು ಯಾ ಮುಕ್ತಿರ್ಜ್ಞಾನೋಪಾಯತ್ವಮೇವ ಹಿ ॥''**

ತೀರ್ಥಾದಿಗಳಿಂದ ಮೋಕ್ಷವೆಂಬ ಮಾತುಗಳು ತೀರ್ಥಕ್ಷೇತ್ರಗಳ ಸ್ತುತಿಪರ ವಾಕ್ಯಗಳೇ ಹೊರತು ಬೇರೇನೂ ಅಲ್ಲ.

**''ಅತೋಽಪರೋಕ್ಷ ಜ್ಞಾನಾದೇವ ಮೋಕ್ಷಃ ಕರ್ಮ ತು ತತ್ಸಾಧವಮೇವ॥''**
ಗೀತಾ.ಭಾ. 3-20

ಹೆಚ್ಚಿನ ವಿವರಗಳಿಗೆ ಮೇಲಿನ ಮೂಲ ಹಾಗೂ ಟೀಕಾಟಿಪ್ಪಣಿಗಳನ್ನು ನೋಡುವುದು.

ಈ ಹಿನ್ನೆಲೆಯಲ್ಲಿ ಪ್ರಕೃತ ಪ್ರಕಾಶನವಾಗುತ್ತಿರುವ ಸದಾಚಾರ ತರಂಗದ ಕಥೆಗಳನ್ನು ಅಪರೋಕ್ಷ ಜ್ಞಾನಕ್ಕೆ ಸಾಧನವಾಗಲಿ ಎಂದು ಭಕ್ತಿಯಿಂದ ಓದಿ ಅನುಸಂಧಾನ ಮಾಡಬೇಕು.

ಪ್ರಸಕ್ತ ಪುಸ್ತಕವನ್ನು (1) ವ್ರತ ಪರಿಚ್ಛೇದ (2) ದಾನಪರಿಚ್ಛೇದ (3) ತೀರ್ಥಕ್ಷೇತ್ರ ಪರಿಚ್ಛೇದ (4) ಮಾಸಮಾಹಾತ್ಮ್ಯ ಪರಿಚ್ಛೇದ ಹಾಗೂ (6) ಸಂಕೀರ್ಣ

ಪರಿಚ್ಛೇದಗಳಾಗಿ ವಿಂಗಡಿಸಿ 127 ಕಥೆಗಳನ್ನು ಜೋಡಿಸಿದೆ. ವ್ರತಗಳಲ್ಲೆಲ್ಲ ಏಕಾದಶೀ ಸರ್ವಶ್ರೇಷ್ಠ. ಕೃಷ್ಣಾಷ್ಟಮಿಯೂ ಏಕಾದಶಿಯೇ. 20 ಕೋಟಿ ಏಕಾದಶೀ ಪುಣ್ಯ ಅದರಿಂದ ಬರುತ್ತದೆ. ನಮ್ಮೆಲ್ಲ ಇಂದ್ರಿಯಗಳಿಂದ ಮಾಡುತ್ತಿರುವ ಪಾಪಪರಿಹಾರಕ ವಾಗಿ ಏಕಾದಶೀ ಉಪವಾಸ ವಿಹಿತವಾಗಿದೆ. ಉಳಿದ ವ್ರತಗಳನ್ನೂ ಯಥಾಶಕ್ತಿ ನಿರ್ವಂಚನೆಯಿಂದ ಮಾಡಬೇಕು. ಆದರೆ ಅವ್ಯಾವೂ ಕಡ್ಡಾಯವಲ್ಲ. ಏಕಾದಶೀ, ಕೃಷ್ಣಾಷ್ಟಮೀ, ಚಾತುರ್ಮಾಸ್ಯಗಳು ಮಾತ್ರ ಎಲ್ಲರಿಗೂ ಕಡ್ಡಾಯ.

ವ್ರತ ಸಂಪೂರ್ತಿಗಾಗಿ ವಿವಿಧ ದಾನಗಳನ್ನು ಹೇಳಲಾಗಿದ್ದು ಅವುಗಳಲ್ಲಿ ಕೆಲವನ್ನು ಇಲ್ಲಿ ಕಥಾರೂಪವಾಗಿ ತೋರಿಸಲಾಗಿದೆ.

ತೀರ್ಥಕ್ಷೇತ್ರಗಳಿಗೆ ಯಾತ್ರೆ ಹೋಗುವುದರಿಂದ ದೇಹ–ಅಂತಃಕರಣ ಶುದ್ಧಿ, ಸಜ್ಜನರ ಸಹವಾಸದಿಂದ ಶಾಸ್ತ್ರ ಅಧ್ಯಯನಕ್ಕೆ ಹೆಚ್ಚಿನ ಅಧಿಕಾರ ಸಿಗುತ್ತದೆ.

ಮಾಸಮಾಹಾತ್ಮೆಗಳಲ್ಲಿ ಮೇಲಿನ ವಿಷಯಗಳೆಲ್ಲ ದೃಷ್ಟಾಂತ ಸಮೇತ ಬಂದಿದ್ದು ತತ್ತ್ವಗಳ ನಿಶ್ಚಯಕ್ಕೆ ಅನುವಾಗುತ್ತದೆ.

ಸಂಕೀರ್ಣ ತರಂಗದಲ್ಲಿ ಪುಣ್ಯಪಾಪಗಳ ಸ್ವರೂಪ, ಲಕ್ಷಣ, ವರ್ಗೀಕರಣ, ಫಲ ನಿರೂಪಣೆ, ವಿವಿಧ ನರಕಗಳ ವರ್ಣನೆ, ಭೂಗೋಲ ಹಾಗೂ ಇತರೆ ಲೋಕಗಳ ವಿವರಗಳು ಬಂದು ಬ್ರಹ್ಮಾಂಡದ ಕಲ್ಪನೆ ತಿಳಿಯುತ್ತದೆ. ಭಗವನ್ಮಹಿಮೆಯ ಅರಿವಾಗುತ್ತದೆ. ಪ್ರಪಂಚದಲ್ಲಿ ವೈರಾಗ್ಯ, ಪರಮೇಶ್ವರನಲ್ಲಿ ಭಕ್ತಿಗೆ ಇಂಬುಕೊಡುತ್ತದೆ.

ಹೀಗೆ ಪ್ರಕೃತ ಪ್ರಕಾಶನವಾಗುತ್ತಿರುವ ಪುಸ್ತಕದ ಜ್ಞಾನವು ಬ್ರಹ್ಮ ಜಿಜ್ಞಾಸೆಗೆ ಬೇಕಾದ '**ಅಥ**' ಎಂದರೆ 'ಅಧಿಕಾರ ಸಂಪತ್ತು' – **ಶಮದಮಾದಿ ಸಂಪತ್ತು** ಹೊಂದಲು ಸ್ಫೂರ್ತಿ ನೀಡಲು ಈ ಕಥೆಗಳು ಸಹಾಯ ಮಾಡುತ್ತವೆ.

ಇಂತಹ ಅತ್ಯಂತ ಯೋಗ್ಯವಾದ ಅಧ್ಯಾತ್ಮಜ್ಞಾನಕ್ಕೆ ದಾರಿದೀಪವಾಗಿರುವ ಈ ಕಥಾ ಸಂಗ್ರಹವನ್ನು ಮಾಡಿರುವ ದಿ.ಪೂಜ್ಯ ವಾದಿರಾಜಾಚಾರ್ಯ, ಕೊಯಮತ್ತೂರು, ಇವರು ನಿಜವಾಗಿಯೂ ಧನ್ಯರೇ ಸರಿ. ಅವರ ಸ್ಮರಣೆಯು ನಮಗೆ ದಾರಿದೀಪವಾಗಿದೆ.

ಪ್ರಕೃತ ಸಂಪಾದನೆಯಲ್ಲಿಯೂ ಸಾಧ್ಯವಾದಷ್ಟು ಮಟ್ಟಿಗೆ ಕಥೆಗಳ ಆಕರಗಳನ್ನು ಗುರುತಿಸಲು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಕಥೆಗಳ ವರ್ಗೀಕರಣವನ್ನು ತಾತ್ತ್ವಿಕವಾಗಿ ಬೇರೊಂದು ರೀತಿಯಲ್ಲೂ ಮಾಡಬಹುದು. ಇಲ್ಲಿ ನಿರ್ದಿಷ್ಟ ಉದ್ದೇಶ್ಯವನ್ನು ಇಟ್ಟುಕೊಂಡು ಮಾಡಲಾಗಿದೆ. ಈ ಕಥೆಗಳ ಪ್ರಕಾಶನದ ಉದ್ದೇಶ್ಯ

ಜನಪ್ರಿಯ ಆವೃತ್ತಿಯಾಗಲೆಂದು (Popular Edition) ಹೊರತು ಪಂಡಿತ ಆವೃತ್ತಿ (Critical Edition)ಯ ಉದ್ದೇಶ್ಯವಲ್ಲ. ಈ ಇತಿಮಿತಿಯಲ್ಲಿ ಇವೆಲ್ಲವನ್ನು ಸಿದ್ಧಗೊಳಿಸಲಾಗಿದೆ. ಕೆಲವು ಕಥೆಗಳ ಆಕರಗಳನ್ನು ಗುರುತಿಸಲು ಸಮಯದ ಅಭಾವವೇ ಮೊದಲಾದ ಕಾರಣಗಳಿಂದ ಸಾಧ್ಯವಾಗಿಲ್ಲ. ಸಂಪಾದನೆಯ ಈ ಕೊರತೆಯನ್ನು ವಿಷಾದಿಸಲಾಗಿದೆ. ಜಿಜ್ಞಾಸುಗಳ ಧನಾತ್ಮಕ ಸಲಹೆಗಳಿಗೆ ಸ್ವಾಗತವಿದೆ.

**ಕೃತಜ್ಞತೆಗಳು**

1. ಪುಸ್ತಕದ ಸಂಪಾದನೆಯನ್ನು ಮಾಡಲು ಆದೇಶಿಸಿರುವ ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರಿಗೆ ಅನಂತ ಸಾಷ್ಟಾಂಗ ಪ್ರಣಾಮಗಳು.
2. ಕಥಾ ಕರ್ತೃಗಳಾದ ಪೂಜ್ಯ ಕೊಯಮತ್ತೂರು ವಾದಿರಾಜಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.
3. ಪೂಜ್ಯ ಲೇಖಕರ ಕೃತಿಯನ್ನು ನೋಡಿ ಅವುಗಳನ್ನು ಪರಿಶೀಲಿಸಿ ತಮ್ಮ ಅಮೂಲ್ಯ ಅಭಿಪ್ರಾಯಗಳನ್ನು ನೀಡಿದ ಸನ್ಮಾನ್ಯರಾದ ಶ್ರೀಯುತ ಪುಂಡಲೀಕ ಹಾಲಂಬಿ, ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪ್ರೊ.ಜಿ.ವೆಂಕಟ ಸುಬ್ಬಯ್ಯ, ನಾಡಿನ ಹಿರಿಯ ದಿಗ್ಗಜ ಸಾಹಿತಿಗಳು, ನಾಡೋಜ ಡಾ.ಎಂ. ಚಿದಾನಂದಮೂರ್ತಿ, ಖ್ಯಾತ ಕನ್ನಡ ಇತಿಹಾಸ ತಜ್ಞರು, ಸಂಶೋಧಕರು ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.
4. ಸಂಪಾದನೆಯ ಕೆಲಹಂತದಲ್ಲಿ ನೆರವಾಗಿರುವ ಶ್ರೀಯುತ ಹೆಚ್.ಪಿ. ನರಸಿಂಹಮೂರ್ತಿ, ನಾಗೇಂದ್ರಪ್ರಸಾದ್, ರಾಯಸಂ ಶ್ರೀಧರ ಇವರಿಗೆ ಕೃತಜ್ಞತಪೂರ್ವಕ ಅಭಿನಂದನೆಗಳು.
5. ಮುಖಪುಟ ವಿನ್ಯಾಸಕಾರರಾದ ಕಲಾನಿಧಿ ಶ್ರೀ ಕೆ.ಎಂ.ಶೇಷಗಿರಿಯವರಿಗೆ ಅನೇಕ ಅಭಿನಂದನೆಗಳು.
6. ಸುಂದರವಾಗಿ ಅಚ್ಚುಕಟ್ಟಾಗಿ ಅತಿ ಶೀಘ್ರವಾಗಿ ಅಕ್ಷರಜೋಡಣೆ ಮಾಡಿರುವ ಶ್ರೀ ಆರ್.ಎಸ್.ಪ್ರೇಮ್‌ಕುಮಾರ್ ಅವರಿಗೆ ಅನೇಕ ಅಭಿನಂದನೆಗಳು.
7. ಮುದ್ರಣ ವ್ಯವಸ್ಥೆ ಮಾಡಿರುವ ಡಾ.ವಾಸಿಷ್ಠ ಶ್ರೀನಿಧಿಗೆ ಅನೇಕ ಕೃತಜ್ಞತೆಗಳು.
8. ಅಂದವಾಗಿ ಸಕಾಲದಲ್ಲಿ ಮುದ್ರಣ ಮಾಡಿಕೊಟ್ಟಿರುವ ವಾಗರ್ಥ ಪ್ರಿಂಟರ್ಸ್, ಬೆಂಗಳೂರು-4 ಇವರಿಗೆ ಅನೇಕ ಅಭಿನಂದನೆಗಳು.

ಬೆಂಗಳೂರು — **ಡಾ. ಜಿ. ಶೇಷಗಿರಿ ಆಚಾರ್ಯ ವೇದಗರ್ಭ**

ಜ್ಯೇಷ್ಠ ಶುಕ್ಲ ಅಷ್ಟಮಿ 5-6-2014 — ದೂರವಾಣಿ : 080-26721028

# ವಿಷಯಾನುಕ್ರಮಣಿಕೆ

**ದಾನ ಪರಿಚ್ಛೇದ**



**ಮಾಸ ಮಹಿಮಾ ಪರಿಚ್ಛೇದ**



**ತೀರ್ಥಕ್ಷೇತ್ರ ಪರಿಚ್ಛೇದ**

## 970 ದೀಪದಾನಮಾಡಿದ ಸುಮತಿಯು

ಪೂರ್ವದಲ್ಲಿ ವೈದೇಶದೇಶದಲ್ಲಿ ಸುಮತಿಯೆಂಬ ಧರ್ಮಿಷ್ಠನಾದ ರಾಜನಿದ್ದನು. ಇವನಿಗೆ ಸುನಂದೆಯೆಂಬ ಹೆಸರುಳ್ಳ ಪತಿವ್ರತೆಯಾದ ಹೆಂಡತಿಯಿದ್ದಳು. ಒಂದು ದಿವಸ ಇವನ ಮನೆಗೆ ಅಗಸ್ತ್ಯರು ಬಂದರು. ರಾಜನು ಅವರಿಗೆ ಅರ್ಘ್ಯಪಾದ್ಯಾದಿಪೂಜೆಯನ್ನು ಮಾಡಿ ತಾವು ಬಂದಿರುವ ಉದ್ದೇಶವೇನೆಂದು ಕೇಳಿದನು. ಅದಕ್ಕೆ ಅಗಸ್ತ್ಯರು 'ರಾಜನೇ! ಕಣ್ವಾಶ್ರಮದಲ್ಲಿ ಯಜ್ಞವು ನಡೆಯುತ್ತದೆ ಎಂದು ಕೇಳಿದೆನು. ಆ ಯಜ್ಞಕ್ಕಾಗಿ ಹೋಗುತ್ತಿರುವೆನು. ಹೋಗುವಾಗ ಮಾರ್ಗದಲ್ಲಿ ನಿನ್ನ ಮನೆಯನ್ನು ನೋಡಿ ಯಾರಿರುವರೆಂದು ನೋಡಲು ಬಂದೆನು. ನಿನ್ನ ಸತ್ಕಾರದಿಂದ ನನಗೆ ಬಹಳ ಸಂತೋಷವಾಯಿತು. ಇನ್ನು ನಾನು ಹೋಗುವೆನು. ನನಗೆ ಬಹಳ ನೀರಡಿಕೆಯಾಗುತ್ತಿದೆ.' ಎಂದು ಹೇಳಿದರು. ಕೂಡಲೇ ರಾಜನು ಒಳಗೆ ಹೋಗಿ ಹೆಂಡತಿಯೊಡನೆ ಹೇಳಿದನು. ಕೂಡಲೆ ಸುನಂದೆಯು ಕಲಶದಲ್ಲಿ ನೀರನ್ನು ತೆಗೆದುಕೊಂಡು ಬಂದಳು. ಅದನ್ನು ನೋಡಿ ಅಗಸ್ತ್ಯರು 'ರಾಜನೇ! ಮಕ್ಕಳಿಲ್ಲದೆ ಇರುವ ನಿನ್ನ ನೀರನ್ನು ನಾನು ತೆಗೆದುಕೊಳ್ಳುವುದಿಲ್ಲ. ಪುತ್ರನಿಂದ ಉದ್ಧಾರವಾಗುವದು. ಮಕ್ಕಳಿಲ್ಲದವರ ಮನೆಯಲ್ಲಿ ದೇವತೆಗಳು ಹವಿಸ್ಸನ್ನು ಸ್ವೀಕರಿಸುವುದಿಲ್ಲ. ಆದುದರಿಂದ ನೀನು ಮಕ್ಕಳಾಗುವಂತೆ ಸಾಧನವನ್ನು ಮಾಡು. ಆಮೇಲೆ ಬಂದರೆ ನಿನಗೆ ಮಕ್ಕಳಾದ ಮೇಲೆ ನಿನ್ನ ಮನೆಯಲ್ಲಿ ನೀರು ಮೊದಲಾದುದನ್ನು ಸ್ವೀಕರಿಸುವೆನು' ಎಂದು ಹೇಳಿದರು. ಅದನ್ನು ಕೇಳಿ ರಾಜನು ದುಃಖಭರಿತವಾಗಿ ಮುಕುಳಿತಕರನಾಗಿ ಅಗಸ್ತ್ಯರ ಕಾಲುಗಳನ್ನು ಹಿಡಿದು ನನಗೆ ಮಕ್ಕಳಾಗುವಂತೆ ಉಪಾಯವನ್ನು ಹೇಳಬೇಕೆಂದು ಪ್ರಾರ್ಥಿಸಿಕೊಂಡನು. ಅಗಸ್ತ್ಯರು ನೀನು ಪುಷ್ಯಮಾಸದಲ್ಲಿ ದೀಪದಾನವನ್ನು ಮಾಡಿದರೆ ಮಕ್ಕಳಾಗುವುವು ಎಂದರು. ಹೊರಟು

# ಸಂಕೇತಾಕ್ಷರಗಳು

| | | |
|---|---|---|
| ಭ.ಪು | : | ಭವಿಷ್ಯತ್ ಪುರಾಣ |
| ಬ್ರ.ಪು. | : | ಬ್ರಹ್ಮಾಂಡ ಪುರಾಣ |
| ಪ.ಪು. | : | ಪದ್ಮ ಪುರಾಣ |
| ಉ.ಖಂ. | : | ಉತ್ತರ ಖಂಡ |
| ಸ್ಕಂ.ಪು. | : | ಸ್ಕಂದ ಪುರಾಣ |
| ಕಾ.ಮಾ.ಮಾ. | : | ಕಾರ್ತೀಕಮಾಸ ಮಾಹಾತ್ಮ್ಯ |
| ಭಾ.ಮಾ.ಮಾ. | : | ಭಾದ್ರಪ್ರದಮಾಸ ಮಾಹಾತ್ಮ್ಯ |
| ಬೃ.ನಾ.ಪು. | : | ಬೃಹನ್ನಾರದೀಯ ಪುರಾಣ |
| ಮಾ.ಮಾ. | : | ಮಾಸ ಮಾಹಾತ್ಮ್ಯ |
| ಬ್ರಹ್ಮ.ಪು. | : | ಬ್ರಹ್ಮಪುರಾಣ |
| ಬ್ರ.ಖಂ. | : | ಬ್ರಹ್ಮೋತ್ತರ ಖಂಡ |
| ಯ.ಪ್ರ.ಕ. | : | ಯತಿಪ್ರಣವ ಕಲ್ಪ |
| ನ್ಯಾ.ಪ. | : | ನ್ಯಾಸ ಪದ್ಧತಿ |
| ಕೃ.ಮ. | : | ಕೃಷ್ಣಾಮೃತಮಹಾರ್ಣವ |
| ಸ.ಸ್ಮೃ. | : | ಸದಾಚಾರ ಸ್ಮೃತಿ |
| ಭಾ.ತಾ. | : | ಭಾಗವತ ತಾತ್ಪರ್ಯ |
| ಪು.ಮಾ.ಮಾ. | : | ಪುಷ್ಯಮಾಸದ ಮಹಾತ್ಮ್ಯೆ |
| ಫಾ.ಮಾ.ಮಾ. | : | ಫಾಲ್ಗುನಮಾಸ ಮಹಾತ್ಮ್ಯೆ |
| ಜ್ಯೇ.ಮಾ.ಮಾ. | : | ಜ್ಯೇಷ್ಠ ಮಾಸ ಮಾಹಾತ್ಮ್ಯ |
| ಹ.ವಾ.ಸ್ತು | : | ಹರಿವಾಯುಸ್ತುತಿ |

# ವ್ರತ ಪರಿಚ್ಛೇದ

## ಕೃಷ್ಣಾಷ್ಟಮೀವ್ರತ ಕಥೆಯು [1]

ಅಂಗದೇಶದಲ್ಲಿ ಮಿತಜಿತ್ ಎಂಬ ರಾಜನಿದ್ದನು. ಅವನಿಗೆ ಸತ್ಯಜಿತ್ ಎಂಬ ಮಗನಿದ್ದನು. ರಾಜನು ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಹೀಗೆ ಇರುತ್ತಿರಲು ದೈವೇಚ್ಛೆಯಿಂದ ಒಂದು ಸಮಯದಲ್ಲಿ ಅವನಿಗೆ ಪಾಷಂಡಿಗಳ ಸಹವಾಸವುಂಟಾಯಿತು. ಅವರ ಸಹವಾಸದಿಂದ ರಾಜನು ಅಧರ್ಮದಲ್ಲಿ ಆಸಕ್ತನಾದನು. ಅವನು ಅನೇಕಬಾರಿ ವೇದಶಾಸ್ತ್ರಪುರಾಣಗಳನ್ನು ನಿಂದಿಸಿದನು. ವರ್ಣಾಶ್ರಮ ಧರ್ಮದಲ್ಲಿ ಪರಮದ್ವೇಷವನ್ನು ಮಾಡಿದನು. ಹೀಗೆಯೇ ಬಹಳ ಸಮಯವು ಕಳೆದುಹೋಗಲು ಅವನು ಮೃತನಾದನು. ಯಮದೂತರು ಅವನನ್ನು ಪಾಶಗಳಿಂದ ಕಟ್ಟಿ ಯಮದೇವರ ಬಳಿಗೆ ಎಳೆದುಕೊಂಡು ಹೋದರು. ಚೆನ್ನಾಗಿ ಬಡೆಯುತ್ತಾ ಕರೆದುಕೊಂಡು ಹೋದರು. ಯಮದೇವರು ನಾನಾ ನರಕಗಳಲ್ಲಿ ಹಾಕಿಸಿದರು. ಬಹು ನರಕಗಳನ್ನು ಅನುಭವಿಸಿ ಪಾಪಶೇಷದಿಂದ ಪಿಶಾಚಯೋನಿ ಯನ್ನು ಹೊಂದಿದನು.

ಹಸಿವೆದಾಹದಿಂದ ಪೀಡಿತನಾಗಿ ಮರುಪ್ರದೇಶದಲ್ಲಿ ಸಂಚರಿಸುತ್ತಾ ಒಬ್ಬ ವೈಶ್ಯನ ದೇಹವನ್ನು ಪ್ರವೇಶಮಾಡಿ ಇದ್ದನು. ವೈಶ್ಯನು ಪವಿತ್ರವಾದ ಮಧುರಾ ಪಟ್ಟಣಕ್ಕೆ ಅವನು ಹೋಗಲು ಅವನ ಒಟ್ಟಿ ಆ ಪಿಶಾಚನೂ ಹೋದನು. ಆ ವೈಶ್ಯನ ರಕ್ಷಕರು ಆ ಪಿಶಾಚನನ್ನು ಆ ವೈಶ್ಯನ ದೇಹದಿಂದ ಹೊರಗೆ ಮಾಡಿದರು. ತರುವಾಯ ಆ ಪಿಶಾಚನು ವನದಲ್ಲಿ ಋಷಿಗಳ ಆಶ್ರಮಗಳಲ್ಲಿ ಸಂಚರಿಸುತ್ತಿದ್ದನು. ದೈವೇಚ್ಛೆ ಯಿಂದ ಒಂದು ದಿವಸದಲ್ಲಿ ಅವನು ಕೃಷ್ಣಜನ್ಮಾಷ್ಟಮಿ ದಿನದಲ್ಲಿ ಋಷಿಗಳು ಮಾಡು ತ್ತಿರುವ ಮಹಾಪೂಜೆಯನ್ನು ನಾಮಸಂಕೀರ್ತನಾದಿಗಳಿಂದ ರಾತ್ರಿಯಲ್ಲಿ ಜಾಗರವನ್ನು ನೋಡಿದನು. ಪರಮಾತ್ಮನ ಕಥೆಯನ್ನು ಕೇಳಿದನು. ಆದರಿಂದ ಶುದ್ಧವಾಗಿ ಪಾಪ ರಹಿತನಾದನು. ಪಿಶಾಚದೇಹವನ್ನು ಬಿಟ್ಟು ವಿಮಾನದಲ್ಲಿ ಕೂತುಕೊಂಡು ದಿವ್ಯದೇಹ ವುಳ್ಳವನಾಗಿ ವಿಷ್ಣುಲೋಕಕ್ಕೆ ಹೋದನು. ಆದುದರಿಂದ ಈ ಜನ್ಮಾಷ್ಟಮೀವ್ರತವನ್ನು ಭಕ್ತಿಯಿಂದ ಯಾರು ಮಾಡುವನೋ ಅವನು ಸರ್ವಾಭೀಷ್ಟವನ್ನು ಹೊಂದುವನು. ಸರ್ವಪಾಪರಹಿತನಾಗುವನು.



---

1. ಭವಿಷ್ಯತ್ಪುರಾಣ. ಬ್ರಹ್ಮಾಂಡ ಪುರಾಣದಲ್ಲೂ ಮತ್ತೊಂದು ವ್ರತಕಥೆ ಇದೆ.

# ಏಕಾದಶ್ಯುಪವಾಸವು [1]

ದೇವತೆಗಳೂ ಅಸುರರೂ ಸೇರಿ ಮಂದರಪರ್ವತವನ್ನು ತಂದು ಸಮುದ್ರದಲ್ಲಿ ಹಾಕಿದರು. ಮಥನ ಮಾಡುವವರಾದರು. ಮಧ್ಯದಲ್ಲಿ ಮಂದರಪರ್ವತವು ಮುಳುಗಿ ಹೋಗಲು ಪರಮಾತ್ಮನು ಕೂರ್ಮರೂಪದಿಂದ ಎತ್ತಿದನು. ತರುವಾಯ ಭಗವಂತನಿಂದ ಸಹಿತರಾಗಿ ದೇವತೆಗಳೂ ಅಸುರರೂ ಮಂದರಪರ್ವತಕ್ಕೆ ವಾಸುಕಿ ಸರ್ಪನಿಂದ ಸುತ್ತಿ ಕ್ಷೀರಸಮುದ್ರವನ್ನು ಮಥನ ಮಾಡಿದರು. ಲಕ್ಷ್ಮೀದೇವಿಯರು ಆವಿರ್ಭೂತರಾಗಬೇಕೆಂದು ಆಸೆಯಿಂದ ಋಷಿಗಳು ಉಪವಾಸಮಾಡಿ ನಿಯಮ ವುಳ್ಳವರಾಗಿ ಶ್ರೀಸೂಕ್ತವನ್ನು ಜಪಿಸಿದರು. ಸಹಸ್ರನಾಮವನ್ನು ಪಠಿಸಿದರು. ಹೀಗೆ ಏಕಾದಶೀದಿನದಲ್ಲಿ ಉಪವಾಸ ಮಾಡಿ ಲಕ್ಷ್ಮೀನಾರಾಯಣರನ್ನು ಧ್ಯಾನಮಾಡುತ್ತಾ ಶ್ರೀದೇವಿಯರು ಆವಿರ್ಭವಿಸಬೇಕೆಂದು ಋಷಿಗಳು ಪೂಜಿಸಿದರು. ತರುವಾಯ ಆಮೂಹರ್ತದಲ್ಲಿಯೇ ಕಾಲಕೂಟ ವಿಷವು ಬಂದಿತು. ಅದನ್ನು ದೇವತೆಗಳಿಂದ ಪ್ರಾರ್ಥಿತರಾಗಿ ರುದ್ರದೇವರು ವಾಯುದೇವರು ಕೊಟ್ಟ ಸ್ವಲ್ಪ ಭಾಗವನ್ನು ಪಾನಮಾಡಿದರು. ಉಳಿದ ಸಂಪೂರ್ಣಭಾಗವನ್ನು ವಾಯುದೇವರು ಪಾನಮಾಡಿ ಜೀರ್ಣಿಸಿಕೊಂಡರು. ರುದ್ರದೇವರು ಆ ವಿಷದಿಂದ ನೀಲಕಂಠರಾದರು. ಪರಮಾತ್ಮನ ನಾಮತ್ರಯಜಪದಪ್ರಭಾವದಿಂದ ರುದ್ರದೇವರೂ ಆ ವಿಷವನ್ನು ಜೀರ್ಣಿಸಿಕೊಂಡರು. ಓಂ ಅಚ್ಯುತಾಯ ನಮಃ ಓಂ ಅನಂತಾಯನಮಃ ಓಂ ಗೋವಿಂದಾಯ ನಮಃ ಎಂದು ನಾಮತ್ರಯಮಂತ್ರವನ್ನು ಯಾರು ಜಪಿಸುವನೋ ಅವನಿಗೆ ಮೃತ್ಯುಭಯವೂ ವಿಷರೋಗ ಅಗ್ನಿಗಳಿಂದ ಭಯವೂ ಉಂಟಾಗಲಾರದು.

ತರುವಾಯ ದೇವತೆಗಳೂ ಅಸುರರೂ ಸೇರಿ ಸಮುದ್ರದಲ್ಲಿ ಮಥಿಸಲು ಕೆಂಪುಸೀರೆಯನ್ನು ಉಟ್ಟುಕೊಂಡು ಜ್ಯೇಷ್ಠಾದೇವಿಯು ಅಂದರೆ ಕಲಿಲಕ್ಷ್ಮಿಯು ಹುಟ್ಟಿದಳು. ಅವಳನ್ನು ನೋಡಿ ದೇವತೆಗಳು 'ಯಾರ ಮನೆಯಲ್ಲಿ ನಿತ್ಯವೂ ಜಗಳವಾಗುತ್ತಾ ಇರುತ್ತದೆಯೋ ಆ ಮನೆಯನ್ನು ನಿನಗೆ ವಾಸಕ್ಕೆ ಕೊಟ್ಟಿರುವೆವು. ಅಲ್ಲಿ ನೀನು ಅಶುಭವನ್ನು ಉಂಟು ಮಾಡುತ್ತಾ ಇರು. ಯಾರ ಮನೆಯಲ್ಲಿ ಓಡುಗಳೂ ಎಲುಬುಗಳೂ ಬೂದಿಯೂ ಕೂದಲೂ ಇರುತ್ತವೆಯೋ ನಿತ್ಯವೂ ಕಠಿಣ ಮಾತನ್ನು ಆಡುವರೋ, ಸುಳ್ಳು ಹೇಳುವರೋ ಸಂಧ್ಯಾಕಾಲದಲ್ಲಿ ಮಲಗಿ ನಿದ್ದೆ ಮಾಡುವರೋ ಅವರ ಮನೆಯಲ್ಲಿ ದುಃಖದಾರಿದ್ರ್ಯಗಳನ್ನು ಕೊಡುತ್ತಾ ವಾಸಮಾಡು. ಓಡುಗಳು

1. ಪ.ಪು.ಉ.ಖಂ. ಅ.259

ಎಲುಬು ಬೂದಿ ಹೊಟ್ಟು ಬೊಗ್ಗು ಇವುಗಳೆಲ್ಲ ಯಾವ ಮನೆಯಲ್ಲಿ ಇರುವುವೋ ಆ ಮನೆಯಲ್ಲಿ ಕಲಿಯಿಂದ ಸಹಿತಳಾಗಿ ಯಾವಾಗಲೂ ವಾಸಮಾಡುತ್ತಿರು. ಯಾರು ಕಾಲನ್ನು ತೊಳೆದುಕೊಳ್ಳದೆ ಆಚಮನೆಯನ್ನು ಮಾಡುವನೋ ಅವನನ್ನು ನೀನು ಆಶ್ರಯಿಸು. ಹೊಟ್ಟಿನಿಂದ ಬೊಗ್ಗಿನಿಂದ ಓಡಿನಿಂದ ಕಲ್ಲಿನಿಂದ ಉಸುಬಿನಿಂದ ವಸ್ತ್ರದಿಂದ ಚರ್ಮದಿಂದ ಹಲ್ಲನ್ನು ಉಜ್ಜಿಕೊಳ್ಳುವರೋ ಅವರ ಮನೆಯಲ್ಲಿ ನಿತ್ಯವೂ ಕಲಿಯಿಂದ ಸಹಿತಳಾಗಿ ವಾಸಮಾಡು. ಯಾರು ನಿತ್ಯವೂ ಎಳ್ಳಿನ ಪುಡಿಯನ್ನು ನೊಗ್ಗೆ ಕಾಯಿ ನಾಯಿಕೊಡೆ ಬಿಲ್ವ ಸೋರೆಕಾಯಿ ನೀರುಳ್ಳಿ ಮೊದಲಾದ ನಿಷಿದ್ಧ ಪದಾರ್ಥ ಗಳನ್ನು ತಿನ್ನುತ್ತಿರುವರೋ ಅವರ ಮನೆಯಲ್ಲಿ ಯಾವಾಗಲೂ ದಾರಿದ್ರ್ಯವನ್ನು ಕೊಡುತ್ತಾ ಇರು' ಎಂದು ಹೇಳಿ ಕಳುಹಿಸುವವರಾಗಿ ಪುನಃ ಸಮುದ್ರವನ್ನು ಮಥಿಸಿದರು.

ತರುವಾಯ ವಾರುಣೀದೇವಿಯು ಹುಟ್ಟಿದಳು. ಅವಳನ್ನು ಶೇಷ ದೇವರು ಮದುವೆಯಾದರು. ಆಮೇಲೆ ತರುವಾಯ ಸರ್ವಾಭರಣಗಳಿಂದ ಅಲಂಕೃತಳಾದ ಗರುಡದೇವರ ಪತ್ನಿಯಾದ ಸೌಪರ್ಣಿದೇವಿಯು ಬಂದಳು. ಅನಂತರದಲ್ಲಿ ದಿವ್ಯ ಅಪ್ಸರಸ್ತ್ರೀಯರೂ ಮಹಾಸಾಮರ್ಥ್ಯವುಳ್ಳ ಚಂದ್ರಸೂರ್ಯರಂತೆ ಕಾಂತಿಯುಳ್ಳವ ರಾದ ರೂಪವಂತರಾದ ಗಂಧರ್ವರೂ ಹುಟ್ಟಿದರು. ಆಮೇಲೆ ಐರಾವತವೆಂಬ ಆನೆಯೂ ಉಚ್ಚೈಃಶ್ರವಾ ಎಂಬ ಕುದುರೆಯೂ (ಧನ್ವಂತರಿ ದೇವರೂ) ಪಾರಿಜಾತ ವೃಕ್ಷವೂ ಕಾಮಧೇನುವೂ ಬಂದವು. ಇವುಗಳನ್ನು ಇಂದ್ರದೇವರು ಸ್ವೀಕರಿಸಿದರು. ತರುವಾಯ ಮರುದಿನ ದ್ವಾದಶೀದಿನದಲ್ಲಿ ಬೆಳಿಗ್ಗೆ ಸೂರ್ಯನು ಉದಯಿಸುತ್ತಿರು ವಾಗ ಸಂತೋಷಯುಕ್ತವಾದ ಮುಖವುಳ್ಳವರಾಗಿ ಇಂದ್ರಾದಿದೇವತೆಗಳು ಸಮುದ್ರ ವನ್ನು ಮಥಿಸುತ್ತಿರಲು ಮಹರ್ಷಿಗಳಿಂದ ಸ್ತೋತ್ರ ಮಾಡಲ್ಪಟ್ಟವರಾಗಿ, ಕೋಟಿ ಸೂರ್ಯರಂತೆ ಪ್ರಕಾಶಿಸುತ್ತಾ ಬಂಗಾರದ ಕಮಲದಲ್ಲಿ ಕೂತುಕೊಂಡು ಸರ್ವಲಕ್ಷಣ ಗಳಿಂದ ಅಲಂಕೃತರಾಗಿ ಪದ್ಮದಳದಂತೆ ವಿಶಾಲವಾದ ಕಣ್ಣುಉಳ್ಳವರಾಗಿ, ಕಪ್ಪಾದ ಉಂಗುರವಾದ ಕೂದಲುಉಳ್ಳವರಾಗಿ, ಮೈಯಲ್ಲಿ ಗಂಧವನ್ನು ಹಚ್ಚಿಕೊಂಡವರಾಗಿ ದಿವ್ಯಪುಷ್ಪಗಳಿಂದ ಅಲಂಕೃತರಾಗಿ ನಾನಾ ರತ್ನಗಳಿಂದ ಖಚಿತಗಳಾದ ದಿವ್ಯ ಆಭರಣಗಳಿಂದ ಯುಕ್ತರಾಗಿ, ಯೌವನವುಳ್ಳವರಾಗಿ, ನಾಲ್ಕೆ ಕೈಗುಳ್ಳವರಾಗಿ, ಪೂರ್ಣಚಂದ್ರನಿಗೆ ಸದೃಶವಾದ ಮುಖವುಳ್ಳವರಾಗಿ, ಸರ್ವಾಭರಣಗಳಿಂದ ಅಲಂಕೃತಗಳಾದ ನಾಲ್ಕು ಕೈಗಳಿಂದ ಧನದ ಪಾತ್ರೆಯನ್ನು ಮಾತುಲಿಂಗ ಎಂಬ ಫಲವನ್ನು ಎರಡು ಬಂಗಾರದ ಕಮಲಗಳನ್ನು ಹಿಡಿದುಕೊಂಡು ಬಾಡಿಹೋಗದ

ಇದ್ದ ತಾವರೆ ಹೂವುಗಳ ಮಾಲೆಯನ್ನು ಎದೆಯಲ್ಲಿ ಧರಿಸಿಕೊಂಡು ಮಹಾಲಕ್ಷ್ಮೀದೇವಿಯರು ಮೇಲೆ ಬಂದರು. ಲೋಕಕ್ಕೇ ತಾಯಿಯಾದ ಅವರನ್ನು ನೋಡಿ ಎಲ್ಲಾ ದೇವತೆಗಳೂ ಸಂತುಷ್ಟರಾಗಿ ಆಕಾಶದಲ್ಲಿ ಪಟಹ ಎಂಬ ವಾದ್ಯಗಳನ್ನು ಬಾರಿಸಿದರು. ವನದೇವತೆಗಳು ಎಡೆಬಿಡದೆ ಹೂವಿನ ಮಳೆಯನ್ನು ಸುರಿಸಿದರು. ಗಂಧರ್ವಶ್ರೇಷ್ಠರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ಒಳ್ಳೇ ಗಾಳಿಯು ಬೀಸಿತು. ಸೂರ್ಯನು ಅತಿಪ್ರಕಾಶಿದನು. ಶಾಂತಗಳಾದ ಅಗ್ನಿಗಳು ಜ್ವಲಿಸಿದವು. ದಿಕ್ಕುಗಳು ಪ್ರಸನ್ನವಾದವು. ತರುವಾಯ ಸಮುದ್ರದಲ್ಲಿ ಚಂದ್ರನು ಉದ್ಭವಿಸಿದನು. ತರುವಾಯ ಪರಮಾತ್ಮನ ಪತ್ನಿಯಾದ ಲೋಕವನ್ನು ಪವಿತ್ರವನ್ನಾಗಿ ಮಾಡುವ ಜಗತ್ತಿಗೆ ತಾಯಿಯಾದ ತುಲಸಿಯು ಪರಮಾತ್ಮನ ಪೂಜೆಗಾಗಿ ಹುಟ್ಟಿದಳು.

ತರುವಾಯ ದೇವತೆಗಳೆಲ್ಲರೂ ಸಂತುಷ್ಟರಾಗಿ ಮಂದರಪರ್ವತವನ್ನು ಪೂರ್ವ ದಂತೆ ಇಟ್ಟು ಪರಿಪೂರ್ಣಮನೋರಥವುಳ್ಳವರಾಗಿ ಬ್ರಹ್ಮರುದ್ರಾದಿ ದೇವತೆ ಗಳೆಲ್ಲರೂ ಬಂದು ಜಗತ್ತಿಗೆ ತಾಯಿಯಾದ ರಮಾದೇವಿಯರನ್ನು ಸಹಸ್ರನಾಮ ಗಳಿಂದ ಸ್ತುತಿಸಿ ಶ್ರೀಸೂಕ್ತವನ್ನು ಜಪಿಸಿದರು. ಇದರಿಂದ ಶ್ರೀದೇವಿಯರು ಸಂತುಷ್ಟ ರಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದರು. ಆಗ ಎಲ್ಲಾ ದೇವತೆಗಳೂ ಕೈಮುಗಿದು ಕೊಂಡು 'ದೇವಿ! ಪ್ರಸನ್ನಳಾಗು. ನಮ್ಮನ್ನು ಪರಿತ್ಯಜಿಸಬೇಡ. ಮೂರು ಲೋಕವನ್ನು ನೀನು ಪರಿತ್ಯಜಿಸಬಾರದು. ಸ್ಥಾವರಜಂಗಮಾತ್ಮಕವಾದ ಈ ಜಗತ್ತೆಲ್ಲವೂ ನಿನ್ನ ಕಟಾಕ್ಷವನ್ನು ಆಶ್ರಯಿಸಿಕೊಂಡು ಇರುವುದು. ನಿನ್ನ ಕೃಪಾಕಟಾಕ್ಷವು ವಿಷಯರಾದ ದೇವತೆಗಳೆಲ್ಲರೂ ಸಮರ್ಥರಾಗುವರು. ಬ್ರಹ್ಮರುದ್ರಾದಿದೇವತೆಗಳ ಐಶ್ವರ್ಯವು ನಿನ್ನ ಕಟಾಕ್ಷದಿಂದ ಉಂಟಾದದ್ದು' ಎಂದು ಪ್ರಾರ್ಥಿಸಿಕೊಂಡರು. ಆಗ ದೇವಿಯು ಹಾಗೆಯೇ ಆಗಲಿ ಎಂದು ಹೇಳಿದರು.

ತರುವಾಯ ಶಂಕಚಕ್ರಗದಾಧಾರಿ ಯಾದ ಪರಮಾತ್ಮನು ಪೂರ್ವದಂತೆಯೇ ಕ್ಷೀರಸಮುದ್ರದಿಂದ ಆವಿರ್ಭೂತನಾದನು. ದೇವತೆಗಳು ಭಗವಂತನನ್ನು ನಮಸ್ಕರಿಸಿ ಸ್ತೋತ್ರ ಮಾಡಿದರು. ಕೈಮುಗಿದುಕೊಂಡು 'ಶ್ರೀಭಗವಂತನೇ! ನಿನ್ನ ಪ್ರೀತಿಪಾತ್ರರಾದ ದೇವಿಯರನ್ನು ಜಗತ್ತಿನ ರಕ್ಷಣೆಗಾಗಿ ಅಂಗೀಕರಿಸು' ಎಂದು ಪ್ರಾರ್ಥಿಸಿದರು. ತರುವಾಯ ಮುನಿಗಳಿಂದ ಸಹಿತರಾಗಿ ಬ್ರಹ್ಮಾದಿದೇವತೆಗಳು ನಾನಾ ರತ್ನಮಯವಾದ ಉದಯಿಸಿಕೊಂಡು ಬರುವ ಸೂರ್ಯನಂತೆ ಇರುವ ದಿವ್ಯವಾದ ಪೀಠದಲ್ಲಿ ಪರಮಾತ್ಮನನ್ನು ಶ್ರೀದೇವಿಯನ್ನು ಕೂತುಕೊಳ್ಳಿರಿ ಆನಂದಬಾಷ್ಪವುಳ್ಳವರಾಗಿ ದಿವ್ಯ ವಸ್ತ್ರ ಪುಷ್ಪ ಆಭರಣಗಳು ಗಂಧ ಧೂಪ ದೀಪ

ನೈವೇದ್ಯ ನಾನಾ ಫಲಗಳು ಇವುಗಳಿಂದ ಪೂಜಿಸಿದರು. ಅಮೃತದಿಂದ ಹುಟ್ಟಿದ ತುಲಸೀದೇವಿಯಿಂದ ಪಾದವನ್ನು ಪ್ರಕ್ಷಾಲನು ಮಾಡಿಸಿದರು. ಮೂರು ಪ್ರದಕ್ಷಿಣೆಗಳನ್ನು ಬಂದು ಪುನಃ ಪುನಃ ನಮಸ್ಕರಿಸಿದರು. ಆನಂದಬಾಷ್ಪವನ್ನು ಸುರಿಸುತ್ತಾ ನಾನಾ ವಿಧ ಸ್ತೋತ್ರಗಳನ್ನು ಮಾಡಿದರು. ತರುವಾಯ ರಮಾದೇವಿ ಯಿಂದ ಸಹಿತನಾದ ಭಗವಂತನು ಪ್ರಸನ್ನನಾಗಿ ದೇವತೆಗಳಿಗೆ ಬೇಕಾದ ವರಗಳನ್ನು ಕೊಟ್ಟನು. ತರುವಾಯ ದೇವತೆಗಳೂ ಮನುಷ್ಯರೇ ಮೊದಲಾದವರೂ ರಮಾದೇವಿಯರ ಕೃಪಾಕಟಾಕ್ಷದಿಂದ ಪವಿತ್ರರಾಗಿ ಬೇಕಾದ ಧನಧಾನ್ಯ ಉಳ್ಳವರಾಗಿ ದೋಷರಹಿತರಾಗಿ ಸರ್ವದಾ ಸುಖವನ್ನು ಹೊಂದಿದರು.

ತರುವಾಯ ಶ್ರೀದೇವಿಯಿಂದ ಸಹಿತನಾದ ಪರಮಾತ್ಮನು ಸಂತುಷ್ಟವಾದ ಮನುಸುಳ್ಳವನಾಗಿ ಸರ್ವಲೋಕಹಿತಕ್ಕಾಗಿ ಸಮಸ್ತ ಮಹಾಮುನಿಗಳೊಡನೆ 'ಮುನಿ ಗಳೂ ದೇವತೆಗಳೂ ಎಲ್ಲರೂ ಕೇಳಿರಿ. ಏಕಾದಶಿಯು ಮಹಾಪವಿತ್ರವಾದದ್ದು. ಸಮಸ್ತ ಉಪದ್ರವನ್ನು ನಾಶ ಮಾಡುವುದು. ಲಕ್ಷ್ಮಿಯನ್ನು ನೋಡಬೇಕೆಂಬ ಆಸೆಯಿಂದ ಏಕಾದಶಿಯಲ್ಲಿ ಉಪವಾಸ ಮಾಡಿದಿರಿ. ಆದಕಾರಣ ಯಾವಾಗಲೂ ನನಗೆ ಏಕಾದಶಿಯೂ ದ್ವಾದಶಿಯೂ ನನಗೆ ಪ್ರಿಯವಾದದ್ದು. ಈ ದಿನವಾರಂಭಿಸಿ ಯಾರು ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯಲ್ಲಿ ಸೂರ್ಯೋದಯ ಸಮಯದಲ್ಲಿ ಶ್ರದ್ಧೆಯುಳ್ಳವರಾಗಿ ತುಲಸಿಯಿಂದಲೂ ಶ್ರೀದೇವಿಯಿಂದಲೂ ಸಹಿತ ನಾದ ನನ್ನನ್ನು ಭಕ್ತಿಯಿಂದ ಪೂಜಿಸುವರೋ ಅವರೆಲ್ಲರೂ ಸಂಸಾರಬಂಧರಹಿತರಾಗಿ ಆಗುವರು. ಯಾರು ದ್ವಾದಶೀದಿನದಲ್ಲಿ ನನ್ನನ್ನು ಪೂಜಿಸುವುದಿಲ್ಲವೋ ಅವರು ಮಹಾಪಾಪಿಗಳಾಗುವರು. ನನ್ನ ಬಂಧಕಶಕ್ತಿಯಿಂದ ಮೋಹಿತರಾಗುವರು. ಯಾರು ದ್ವಾದಶಿಯಲ್ಲಿ ನನ್ನನ್ನು ಪೂಜಿಸುವುದಿಲ್ಲವೋ ಅವರು ಪಾಪಿಗಳಾಗುವರು. ಅವರು ನರಕವನ್ನು ಹೊಂದುವರು. ನನ್ನ ಪೂಜೆಯನ್ನು ಬಿಟ್ಟ ಆ ಪಾಪಿಗಳನ್ನು ನನ್ನ ಬಂಧಕ ಶಕ್ತಿಯು ವಿಷಯಗಳಿಂದ ಬಂಧಿಸಿ ಯಾವಾಗಲೂ ಸಂಸಾರದಲ್ಲಿಯೇ ಹಾಕುವುದು' ಎಂದು ಹೇಳಿ ಮುನಿಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಹೊರಟುಹೋದನು.

ದೇವತೆಗಳ ದರ್ಶನಕ್ಕಾಗಿ ಕ್ಷೀರಸಮುದ್ರದಲ್ಲಿ ಶೇಷದೇವರಲ್ಲಿ ರಮಾದೇವಿಯ ರಿಂದ ಸಹಿತನಾಗಿ ಇದ್ದನು. ತರುವಾಯ ದೇವತೆಗಳು ಕೂರ್ಮರೂಪಿಯಾದ ಪರಮಾತ್ಮ ನನ್ನು ಸ್ತೋತ್ರ ಮಾಡಿದರು. ಅದರಿಂದ ಕೂರ್ಮರೂಪವುಳ್ಳ ಪರಮಾತ್ಮನು ಸಂತುಷ್ಟನಾಗಿ ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದನು. ದೇವತೆಗಳು ಬಹಳ ಸಂತೋಷವುಳ್ಳವರಾಗಿ ಕೈಮುಗಿದುಕೊಂಡು 'ಶೇಷದೇವರ

ದಿಗ್ಗಜಗಳ ಸಹಾಯಕ್ಕಾಗಿ ಸಪ್ತದ್ವೀಪಗಳಿಂದ ಸಹಿತವಾದ ಈ ಭೂಮಿಯನ್ನು ಎತ್ತಿಕೊಂಡು ಇರಬೇಕು' ಎಂದು ಹೇಳಿದರು. ಕೂರ್ಮರೂಪಿ ಪರಮಾತ್ಮನು ಹಾಗೆಯೇ ಆಗಲಿ ಎಂದು ಹೇಳಿ ಭೂಮಿಯನ್ನು ಧರಿಸಿದನು. ದೇವತೆಗಳೇ ಮೊದಲಾದವರು ಮಹರ್ಷಿಗಳಿಂದ ಅನುಜ್ಞೆಯನ್ನು ಪಡೆಯುವವರಾಗಿ ತಮ್ಮ ತಮ್ಮ ಲೋಕಕ್ಕೆ ಹೋದರು. ಆ ಕಾಲವನ್ನು ಆರಂಭಿಸಿ ಸಮಸ್ತರಾದ ಬ್ರಹ್ಮಾದಿದೇವತೆಗಳೂ ಸಿದ್ಧರೂ ಮನುಷ್ಯರೂ ಯೋಗಿಗಳೂ ಮುನಿಶ್ರೇಷ್ಠರೂ ಭಗವಂತನ ಆಜ್ಞೆಯನ್ನು ಶಿರಸಾವಹಿಸುವವರಾಗಿ ಭಕ್ತಿಯಿಂದ ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯಲ್ಲಿ ವಿಧಿಪ್ರಕಾರವಾಗಿ ಭಗವಂತನನ್ನು ಪೂಜಿಸುತ್ತಿರುವರು.



# ಅಖಂಡ ಏಕಾದಶೀ ವ್ರತವು

ಕಾಶೀನಗರದಲ್ಲಿ ವೀರಬಾಹು ಎಂಬ ರಾಜನಿದ್ದನು. ಅವನು ಧರ್ಮಿಷ್ಠನಾಗಿಯೂ ಭಗವದ್ಭಕ್ತನಾಗಿಯೂ ಇದ್ದನು. ಅವನು ಯಾವಾಗಲೂ ಭಗವಂತನ ಕಥೆಯಲ್ಲಿ ಆಸಕ್ತನಾಗಿದ್ದನು. ಬೇಕಾದ ಸಂಪತ್ತು ಉಳ್ಳವನಾಗಿದ್ದನು. ಅವನಿಗೆ ಸುಂದರಿಯಾದ ಕಾಂತಿಮತಿಯೆಂಬ ಹೆಂಡತಿಯಿದ್ದಳು. ಅವಳು ಪರಮಪತಿವ್ರತೆಯಾಗಿದ್ದಳು. ರಾಜನು ಅವಳೊಡನೆ ಸುಖದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಪರಮಾತ್ಮ ನನ್ನೇ ಭಜನೆ ಮಾಡುತ್ತಿದ್ದನು.

ಒಂದು ದಿವಸದಲ್ಲಿ ಅವನ ಮನೆಗೆ ಭರದ್ವಾಜಋಷಿಗಳು ಬಂದರು. ರಾಜನು ಅವರಿಗೆ ಬೇಕಾದ ಪೂಜೆಯನ್ನು ಮಾಡಿದನು. ತಾವು ಬಂದ ಕಾರಣ ನನ್ನ ಜನ್ಮವು ಸಫಲವಾಯಿತು. ಇತ್ಯಾದಿ ರೀತಿಯಿಂದ ಅವರನ್ನು ಪ್ರಶಂಸಿದನು. ಏಕಾದಶಿಯ ವಿಷಯವಾಗಿ ಪೂರ್ವದಲ್ಲಿ ನಾರದರೂ ವಸಿಷ್ಠರೂ ಹೇಳಿದರು. ನೀವು ಎಲ್ಲವನ್ನೂ ತಿಳಿದವರು. ಆದುದರಿಂದ ಏಕಾದಶಿಯ ವಿಷಯವಾಗಿ ಹೇಳಬೇಕು ಎಂದು ಕೇಳಿಕೊಂಡನು.

ಆಗ ಭರದ್ವಾಜರು 'ರಾಜನೇ! ನೀನು ವಿಷ್ಣುಭಕ್ತನಾಗಿರುವಿ. ಬಹಳ ಸಂತೋಷ. ಯಾವ ಊರಲ್ಲಿ ವಿಷ್ಣುಭಕ್ತನಾದ ರಾಜನಿಲ್ಲವೋ ಅಲ್ಲಿ ವಾಸಮಾಡು ವುದು ಸರಿಯಲ್ಲ. ಅಲ್ಲಿ ವಾಸಮಾಡುವುದಕ್ಕಿಂತ ವನದಲ್ಲಿ ವಾಸಮಾಡುವುದು ಶ್ರೇಷ್ಠವು. ಭಗವದ್ಭಕ್ತನಾದ ರಾಜನು ಆಳುವ ರಾಜ್ಯವೇ ವೈಕುಂಠಲೋಕಕ್ಕೆ ಸಮವೆನ್ನಬಹುದು. ಕಣ್ಣಿಲ್ಲದ ದೇಹದಂತೆಯೂ ಪತಿಹೀನಳಾದ ಸ್ತ್ರೀಯಂತೆಯೂ

**ದಶಮೀವೇಧವುಳ್ಳ ಏಕಾದಶಿಯು ಪರಿತ್ಯಾಜ್ಯವು. ಅಂದರೆ ದಶಮೀವೇಧವುಳ್ಳ ಏಕಾದಶಿಯಲ್ಲಿ ಉಪವಾಸಮಾಡದೆ ದ್ವಾದಶಿದಿನವೇ ಉಪವಾಸ ಮಾಡಬೇಕು.** ಹಾಗೆಯೇ ವಿಷ್ಣುಭಕ್ತಿಯಿಲ್ಲದ ರಾಜನೂ ಪರಿತ್ಯಾಜ್ಯನು. ನೀನು ವಿಷ್ಣುಭಕ್ತನಾಗಿರುವಿ. ನಿನ್ನನ್ನು ನೋಡಿದ ಕಾರಣ ನನ್ನ ದೃಷ್ಟಿಯು ಪವಿತ್ರವಾಯಿತು. ನಿನ್ನೊಡನೆ ಮಾತಾಡಿದ ನನ್ನ ನಾಲಿಗೆಯು ಸಫಲವಾಯಿತು. ವಿಷ್ಣುಭಕ್ತನನ್ನು ನೋಡಿದರೆ ತೀರ್ಥಸ್ನಾನ ಮಾಡಿದ ಪುಣ್ಯವು ಬರುವುದು. ರಾಜನೇ! ವಿಷ್ಣುಭಕ್ತನಾದ ನಿನ್ನನ್ನು ನೋಡಿದೆನು. ನಿನಗೆ ಮಂಗಳವಾಗಲಿ ಹೋಗಿ ಬರುವೆನು' ಎಂದು ಹೇಳಿದರು. ಆಗ ರಾಣಿಯಾದ ಕಾಂತಿಮತಿಯು ಬಂದು ಭರದ್ವಾಜರಿಗೆ ನಮಸ್ಕರಿಸಿ ದಳು. ಭರದ್ವಾಜರು ಅವಳಿಗೆ 'ಸುವಾಸಿನಿಯಾಗಿಯೇ ಇರು. ಗಂಡನಲ್ಲಿಯೂ ಪರಮಾತ್ಮನಲ್ಲಿಯೂ ದೃಢವಾದ ಭಕ್ತಿಯುಳ್ಳವಳಾಗು' ಎಂದು ಆಶೀರ್ವದಿಸಿದರು.

ತರುವಾಯ ರಾಜನು ಭರದ್ವಾಜರೊಡನೆ ತನಗೆ ಇಷ್ಟು ಶತ್ರುಹೀನವಾದ ರಾಜ್ಯವೂ ಬಹಳ ಸಂಪತ್ತೂ, ಗುಣವಂತನಾದ ಮಗನೂ, ಮನೋಹರಳಾದ ಪತ್ನಿಯೂ ಬರಲಿಕ್ಕೆ ಕಾರಣವೇನು? ತಾನು ಪೂರ್ವದಲ್ಲಿ ಯಾರಾಗಿದ್ದೆನು ಎಂದು ಪ್ರಶ್ನೆ ಮಾಡಿದನು. ಆಗ ಭರದ್ವಾಜರು ಸ್ವಲ್ಪ ಹೊತ್ತು ಧ್ಯಾನ ಮಾಡಿದವರಾಗಿ ಸಮಸ್ತವನ್ನು ತಿಳಿದವರಾಗಿ ರಾಜನೊಡನೆ ಹೇಳಿದರು—

'ರಾಜನೇ! ನೀನು ಪೂರ್ವದಲ್ಲಿ ಒಬ್ಬ ಶೂದ್ರನಾಗಿದ್ದಿ. ಪ್ರಾಣಿಗಳ ಹಿಂಸೆಯನ್ನು ಮಾಡುತ್ತಾ ಇದ್ದಿ. ನಾಸ್ತಿಕನಾಗಿದ್ದಿ. ಪರಸ್ತ್ರೀಯರನ್ನು ಬಲಾತ್ಕಾರ ಮಾಡುತ್ತಿದ್ದಿ. ಸದಾಚಾರಹೀನನಾಗಿದ್ದಿ. ಈಗ ಇರುವ ಹೆಂಡತಿಯೇ ಆಗಲೂ ನಿನಗೆ ಹೆಂಡತಿ ಯಾಗಿದ್ದಳು. ಅವಳು ಪರಮಪತಿವ್ರತೆಯಾಗಿದ್ದಳು. ಅವಳು ಯಾವಾಗಲೂ ನಿನ್ನಲ್ಲಿ ದುಷ್ಟ ಅಭಿಪ್ರಾಯವನ್ನು ಮಾಡಿದ್ದೇ ಇಲ್ಲ. ಬಂಧುಗಳೆಲ್ಲರೂ ಶೂದ್ರನನ್ನು ಕೈಬಿಟ್ಟು ಬಿಟ್ಟರು. ಪೂರ್ವಿಕರು ಸಂಪಾದಿಸಿಟ್ಟಿದ್ದ ಹಣವೆಲ್ಲವೂ ವೆಚ್ಚವಾಯಿತು. ಆಮೇಲೆ ಅವನು ಕೃಷಿಯನ್ನು ಮಾಡಿದನು. ಅದರಲ್ಲಿಯೂ ಹಣವು ಬರಲಿಲ್ಲ. ಹಣವೆಲ್ಲವೂ ಹೋಗಿ ದಾರಿದ್ರ್ಯವು ಬಂದು ಎಲ್ಲಾ ಬಂಧುಗಳೂ ಕೈಬಿಟ್ಟರೂ ನಿನ್ನ ಪತ್ನಿಯು ಮಾತ್ರ ಕೈಬಿಡಲಿಲ್ಲ. ತರುವಾಯ ಶೂದ್ರನು ಹೆಂಡತಿಯನ್ನು ಕರೆದುಕೊಂಡು ವನಕ್ಕೆ ಹೋದನು. ಅಲ್ಲಿ ಪ್ರಾಣಿಗಳನ್ನು ಕೊಂದು ಜೀವನ ಮಾಡುತ್ತಿದ್ದನು. ಹೀಗೆಯೇ ಅಲ್ಲಿ ಬಹಳ ವರ್ಷಗಳು ಕಳೆದುಹೋದವು.

ಒಂದು ದಿವಸದಲ್ಲಿ ದೇವಶರ್ಮ ಎಂಬ ಬ್ರಾಹ್ಮಣರು ದಾರಿತಪ್ಪಿ ಬಂದು ಹಸಿವೆದಾಹಗಳಿಂದ ಪೀಡಿತನಾಗಿ ಮಧ್ಯಾಹ್ನ ಸಮಯದಲ್ಲಿ ದಿಕ್ಕು ತಿಳಿಯದೆ

ವನಮಧ್ಯದಲ್ಲಿ ಬಿದ್ದುಬಿಟ್ಟರು. ಶೂದ್ರನಿಗೆ ಅವರನ್ನು ನೋಡಿ ದಯೆಯುಂಟಾಯಿತು. ವೃದ್ಧರಾದ ಆ ಬ್ರಾಹ್ಮಣರನ್ನು ಎಬ್ಬಿಸಿ 'ನನ್ನ ಆಶ್ರಮಕ್ಕೆ ಬನ್ನಿರಿ. ಸರೋವರವಿದೆ. ಆ ಸರೋವರದಲ್ಲಿ ಸ್ನಾನಮಾಡಿ ನಿತ್ಯಕರ್ಮವನ್ನು ಮುಗಿಸಿಕೊಂಡು ಫಲಾಹಾರವನ್ನು ಮಾಡಿ. ತಣ್ಣಗಿರುವ ನೀರನ್ನು ಕುಡಿಯಿರಿ. ಶ್ರಮಪರಿಹಾರವಾಗುವವರೆಗೆ ಅಲ್ಲಿಯೇ ಇದ್ದು ಆಮೇಲೆ ಎಲ್ಲಿಗೆ ಬೇಕಾದರೂ ಹೋಗಿರಿ, ಏಳಿರಿ. ಅನುಗ್ರಹ ಮಾಡಬೇಕು' ಎಂದು ಹೇಳಿದನು. ಜ್ಞಾನವನ್ನು ಹೊಂದಿದ ಆ ಬ್ರಾಹ್ಮಣನು ಹಾಗೆಯೇ ಆಗಲಿ, ಎಂದು ಒಪ್ಪಿಕೊಂಡು ಸರೋವರದ ಬಳಿಗೆ ಹೋಗಿ ಮರದ ನೆರಳಿನಲ್ಲಿ ಸ್ವಲ್ಪ ಹೊತ್ತು ಕೂತುಕೊಂಡನು.

ಆಮೇಲೆ ವಿಧಿಪ್ರಕಾರವಾಗಿ ಸ್ನಾನಮಾಡಿ ದೇವರಪೂಜೆಯನ್ನು ಮಾಡಿದನು. ದೇವರ್ಷಿ ಪಿತೃತರ್ಪಣಗಳನ್ನು [1]ಬಿಟ್ಟು ತಣ್ಣಗಿರುವ ನೀರನ್ನು ಕುಡಿದನು. ಆಗ ಶೂದ್ರನು ತನ್ನನ್ನು ಉದ್ಧಾರ ಮಾಡಬೇಕೆಂದು ಹೇಳಿ ರಸಭರಿತಗಳಾದ ಒಳ್ಳೊಳ್ಳೇ ಹಣ್ಣುಗಳನ್ನು ತಂದು ಅವನ ಬಳಿಯಲ್ಲಿ ಇಟ್ಟನು. ಆಗ ದೇವಶರ್ಮನು ನೀನು ಯಾರು? ಎಂದು ಕೇಳಿದನು. ಅದಕ್ಕೆ ಶೂದ್ರನು 'ನಾನು ಒಬ್ಬ ಶೂದ್ರನು. ನನ್ನ ಬಂಧುಗಳು ನನ್ನನ್ನು ಬಿಟ್ಟುಬಿಟ್ಟರು ಎಂದು ಹೇಳಿದನು. ಅವರಿಬ್ಬರು ಮಾತಾಡುತ್ತಿರಲು ಶೂದ್ರನ ಹೆಂಡತಿಯು ಹಣ್ಣುಗಳನ್ನು ತಂದು ಕೊಟ್ಟಳು. ದೇವಶರ್ಮನು ಆ ಹಣ್ಣುಗಳನ್ನು ತಿಂದು ನೀರನ್ನು ಕುಡಿದು ಸುಖವುಳ್ಳವನಾದನು. ತರುವಾಯ ಶೂದ್ರನು ಅವನೊಡನೆ 'ನೀವು ಯಾರು? ಎಲ್ಲಿಗೆ ಹೋಗುವವರು? ಇಲ್ಲಿಗೆ ಏಕೆ ಬಂದಿರಿ?' ಇತ್ಯಾದಿ ರೀತಿಯಾಗಿ ಪ್ರಶ್ನೆ ಮಾಡಿದನು. ಅದಕ್ಕೆ ಬ್ರಾಹ್ಮಣನು 'ಮಹಾನುಭಾವನೇ! ನಾನೊಬ್ಬ ಬ್ರಾಹ್ಮಣನು. ಪ್ರಯಾಗಕ್ಕೆ ಹೋಗುತ್ತಿರುವೆನು. ದಾರಿತಪ್ಪಿ ಈ ಭಯಂಕರವಾದ ವನಕ್ಕೆ ಬಂದೆನು. ನನ್ನ ಪುಣ್ಯದ ಪ್ರಭಾವದಿಂದ ನೀನು ಬಂಧುವಾಗಿ ಸಿಕ್ಕಿದಿ. ನನಗೆ ನೀನು ಪ್ರಾಣವನ್ನು ಕೊಟ್ಟಿರುವಿ. ನಿನಗೆ ನಾನು ಏನು ಉಪಕಾರವನ್ನು ಮಾಡಲಿ. ನೀನು ಯಾರು? ಮನುಷ್ಯ ಸಂಚಾರ ರಹಿತವಾಗಿರುವ ಈ ವನದಲ್ಲಿ ಯಾಕೆ ಇರುವಿ?' ಎಂದು ಕೇಳಿದನು.

ಅದಕ್ಕೆ ಶೂದ್ರನು 'ಮಹಾರಾಷ್ಟ್ರದಲ್ಲಿ ವಿದರ್ಭನಗರಿಯು ನಾನು ವಾಸ ಮಾಡುತ್ತಿದ್ದ ಸ್ಥಳವು. ನಾನು ಪಾಪಿಯಾದ ಒಬ್ಬ ಶೂದ್ರನು. ನನ್ನ ಬಂಧುಗಳೆಲ್ಲರೂ ನನ್ನನ್ನು ಬಿಟ್ಟುಬಿಟ್ಟರು. ಇದರಿಂದ ವನಕ್ಕೆ ಬಂದು ಇಲ್ಲಿ ಪ್ರಾಣಿಗಳನ್ನು ಸಂಹರಿಸಿ

---

1. ಕೊಟ್ಟು

ಹೆಂಡತಿಯಿಂದ ಕೂಡಿ ಕೊಂಡು ಜೀವನವನ್ನು ಮಾಡುತ್ತಿರುವೆನು. ನಾನೀಗ ತುಂಬಾ ವೈರಾಗ್ಯವುಳ್ಳವನಾಗಿರುವೆನು. ನನ್ನ ಪುಣ್ಯಪ್ರಭಾವದಿಂದ ನೀನು ಇಲ್ಲಿಗೆ ಬಂದಿರಿ. ನನಗೆ ಸ್ವಲ್ಪ ಅನುಗ್ರಹ ಮಾಡಬೇಕು' ಎಂದು ಕೇಳಿಕೊಂಡನು. ಆಗ ಬ್ರಾಹ್ಮಣನು 'ನೀನು ನನಗೆ ಆತಿಥ್ಯೋಪಚಾರವನ್ನು ಮಾಡಿದಿಯಾದ ಕಾರಣ ನಿನ್ನ ನೂರು ಜನ್ಮಗಳಲ್ಲಿ ಮಾಡಿರುವ ಪಾಪವೂ ಪರಿಹೃತವಾಯಿತು. ಅದರಿಂದಲೇ ನಿನಗೀಗ ಪರಮಾತ್ಮನಲ್ಲಿ ಭಕ್ತಿಯುಂಟಾಗಿರುವುದು. ನೀನು ಪೂರ್ವಜನ್ಮದಲ್ಲಿ ಅವಂತೀ ದೇಶದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದಿ. ಯಾವಾಗಲೂ ಪಾಠಹೇಳುತ್ತಾ ಒಳ್ಳೇ ವ್ರತವುಳ್ಳವನಾಗಿದಿ. ಒಂದು ದಶಮೀ ವೇಧವುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಿದಿ. ಅದರಿಂದ ಉಂಟಾದ ಪಾಪದಿಂದ ನೀನು ಮಾಡಿದ ಪುಣ್ಯಗಳೆಲ್ಲವೂ ನಾಶವನ್ನು ಹೊಂದಿದವು. ಮೃತನಾಗಿ ಬಹು ಸಾವಿರ ವರ್ಷ ನರಕಗಳನ್ನು ಅನುಭವಿಸಿದಿ. ಆಮೇಲೆ ಈ ಜನ್ಮದಲ್ಲಿ ಹುಟ್ಟಿ ಅನೇಕ ದುಷ್ಟಕಾರ್ಯಗಳನ್ನು ಮಾಡಿದಿ. **ದಶಮೀವೇಧವುಳ್ಳ ಏಕಾದಶೀದಿನದಲ್ಲಿ ಉಪವಾಸಮಾಡಿದ ಕಾರಣವೇ ಶೂದ್ರನಾಗಿ ಹುಟ್ಟಿರುವಿ.** ನಿನ್ನ ಮನಸ್ಸು ಪಾಪಕಾರ್ಯದಲ್ಲಿಯೇ ಆಸಕ್ತವಾಗಿರುವುದು. ಧರ್ಮಕಾರ್ಯದಲ್ಲಿ ಹೋಗುವುದಿಲ್ಲ. ಈಗ ವಿದರ್ಭನಗರದಲ್ಲಿ ನಿನ್ನ ಮಗಳು ಇರುವಳು. ಅವಳು ಅಖಂಡ ಏಕಾದಶೀ ಉಪವಾಸವನ್ನು ಮಾಡಿ ಅದರ ಪುಣ್ಯವನ್ನು ನಿನಗೆ ಕೊಟ್ಟಿರುವಳು. ಅದರಿಂದ ನಿನ್ನ ಪಾಪವು ಪರಿಹೃತವಾಯಿತು. ಈಗ ನಿನ್ನ ಮನಸ್ಸು ಧರ್ಮದ ಮೇಲೆ ಹೋಗುತ್ತಾ ಇದೆ. ಆ ಪುಣ್ಯಪ್ರಭಾವದಿಂದಲೇ ದಶಮೀವೇಧ ವುಳ್ಳ ಏಕಾದಶೀ ಉಪವಾಸ ಮಾಡಿ ನಿನಗೆ ಬಂದ ಪಾಪವೂ ಆಮೇಲೆ ಈಜನ್ಮದಲ್ಲಿ ಮಾಡಿದ ಪಾಪವೂ ಪರಿಹೃತವಾಯಿತು' ಎಂದು ಹೇಳಿದನು.

ಈರೀತಿಯಾಗಿ ಅವರಿಬ್ಬರು ಮಾತಾಡುತ್ತಿರುವಾಗಲೇ ವಿಷ್ವಕ್ಸೇನನು ಬಂದು 'ಶೂದ್ರನೇ! ಭಗವಂತನು ನಿನ್ನ ಮೇಲೆ ಸಂತೋಷವನ್ನು ಹೊಂದಿರುವನು. ನಿನ್ನ ಪಾಪವೆಲ್ಲವೂ ಪರಿಹೃತವಾಗಿರುವುದು. ನೀನು ಪತ್ನೀಸಹಿತನಾಗಿ ಸ್ವರ್ಗಕ್ಕೆ ಹೋಗು' ಎಂದು ಹೇಳಿ ಹೋದನು. ಹಾಗೆಯೇ ಶೂದ್ರನು ಸ್ವರ್ಗಕ್ಕೆ ಹೋದನು. ದೇವಶರ್ಮನು ತೀರ್ಥಯಾತ್ರೆಗಾಗಿ ಹೋದನು. ಈರೀತಿಯಾಗಿ ನಿನಗೆ ಆ ಜನ್ಮದಲ್ಲಿ ಮಗಳು ಕೊಟ್ಟ ಅಖಂಡ ಏಕಾದಶಿಯ ಪುಣ್ಯದ ಪ್ರಭಾವದಿಂದ ಮತ್ತು ಬ್ರಾಹ್ಮಣರಿಗೆ ಆತಿಥ್ಯೋಪಾಚರವನ್ನು ಮಾಡಿದ ಪ್ರಭಾವದಿಂದ ನೀನೀಗ ರಾಜನಾಗಿ ಹುಟ್ಟಿರುವಿ. ಪತಿವ್ರತೆಯಾದ ಹೆಂಡತಿಯು ಸಿಕ್ಕಿರುವಳು. ಶತ್ರುರಹಿತವಾದ ರಾಜ್ಯವು ಸಿಕ್ಕಿರುವುದು' ಎಂದು ಹೇಳಿದರು.

ತರುವಾಯ ರಾಜನು ಅಖಂಡ ಏಕಾದಶೀವ್ರತದ ವಿಧಾನವನ್ನು ತಿಳಿಸಬೇಕೆಂದು ಕೇಳಿಕೊಂಡನು. ಆಗ ಭರದ್ವಾಜರು 'ರಾಜನೇ! ಈ ವ್ರತವು ಅತಿಪುಣ್ಯ ಪ್ರದವಾದದ್ದು. ದಶಮೀದಿನ ಸಾಯಂಕಾಲ ಭೋಜನಮಾಡಿ ಏಕಾದಶೀದಿನದಲ್ಲಿ ಉಪವಾಸ ಮಾಡಿ ದ್ವಾದಶೀದಿನಲ್ಲಿಯೂ ಒಂದೇ ಭೋಜನ ಮಾಡಿದರೆ ಇದಕ್ಕೆ **ಅಖಂಡ ಏಕಾದಶೀವ್ರತ**ವೆಂದು ಹೆಸರು. ದಶಮೀಯಲ್ಲಿ ಹಗಲಿನ ಎಂಟನೇ ಭಾಗದಲ್ಲಿ ಅಂದರೆ ನಾಲ್ಕುವರೆ ಗಂಟೆಗೆ ಭೋಜನ ಮಾಡಬೇಕು. ದಶಮೀದಿನದಲ್ಲಿ ಕಂಚಿನಪಾತ್ರೆಯನ್ನು ಉಪಯೋಗಿಸಬಾರದು. ಮಾಂಸವನ್ನೂ, ಮಸೂರ ಎಂಬ ಧಾನ್ಯವನ್ನು, ಕಡಲೆಯನ್ನು, ಕೋದ್ರವ ಎಂಬ ಧಾನ್ಯವನ್ನು, ಕಾಯಿಪಲ್ಯವನ್ನು, ಜೇನು ತುಪ್ಪವನ್ನು, ಪರಾನ್ನವನ್ನು, ಎರಡನೇಬಾರಿ ಭೋಜನವನ್ನು, ಸ್ತ್ರೀಸಂಬಂಧವನ್ನು, ಈರೀತಿಯಾಗಿ ಹತ್ತನ್ನು ದಶಮೀದಿನದಲ್ಲಿ ಬಿಡಬೇಕು. ಏಕಾದಶಿಯಲ್ಲಿ ಅನೇಕಬಾರಿ ಜಲಪಾನವನ್ನು, ಹಿಂಸೆಯನ್ನು, ಅಶುಚಿಯನ್ನು, ಸುಳ್ಳುಹೇಳುವುದನ್ನು, ತಾಂಬೂಲ ವನ್ನು, ಹಲ್ಲುಕಡ್ಡಿಯನ್ನು, ಹಗಲು ಮಲಗುವುದನ್ನು, ಸ್ತ್ರೀಸಂಬಂಧವನ್ನು, ಪಗಡೆ ಆಟವನ್ನು, ರಾತ್ರಿಯಲ್ಲಿ ನಿದ್ರೆಯನ್ನು, ಭ್ರಷ್ಟರೊಡನೆ ಮಾತಾಡುವುದನ್ನು, ಬಿಡಬೇಕು. 'ಶ್ರೀಭಘವಂತನೇ! ನಾನು ಈ ದಿನದಲ್ಲಿ ನಿನ್ನ ಪ್ರೀತಿಯಾಗಿ ಭೋಜನ ಮಾಡುವು ದಿಲ್ಲ. ಸ್ತ್ರೀಸೌಖ್ಯವನ್ನು ಅನುಭವಿಸುವುದಿಲ್ಲ. ರಾತ್ರಿಯೂ ಹಗಲೂ ನಿಯಮದಿಂದ ಇರುತ್ತೇನೆ. ಅಬುದ್ಧಿಪೂರ್ವಕವಾಗಿ ಸ್ವಪ್ನದಲ್ಲಿ ಭೋಜನ ಮಾಡಿದಂತೆಯೂ ಸ್ತ್ರೀಸಂಬಂಧವನ್ನು ಮಾಡಿದಂತೆಯೂ ಕಂಡರೆ ಅದನ್ನು ಕ್ಷಮಿಸು' ಎಂದು ಏಕಾದಶೀದಿನದಲ್ಲಿ ಪ್ರಾರ್ಥಿಸಿಕೊಳ್ಳಬೇಕು. ಉಪವಾಸವೆಂದು ಹೇಳಿದರೆ ಪಾಪಕಾರ್ಯಗಳನ್ನು ಬಿಟ್ಟು ಉತ್ತಮ ಗುಣಗಳೊಡನೆ ವಾಸಮಾಡುವುದು ಎಂದರ್ಥವು.

ಉಪಾವೃತ್ತಸ್ಯ ಪಾಪೇಭ್ಯೋ ಯಸ್ತು ವಾಸೋ ಗುಣೈಃ ಸಹ ।
ಉಪವಾಸಃ ಸ ವಿಜ್ಞೇಯೋ ನ ಶರೀರಸ್ಯ ಶೋಷಣಮ್ ॥

ದ್ವಾದಶೀದಿನದಲ್ಲಿಯೂ ಏಕಾದಶಿಯಲ್ಲಿ ಬಿಡಬೇಕೆಂದು ಹೇಳಿದ್ದ ಹನ್ನೊಂದ ರಲ್ಲಿ ಜಲಪಾನವೊಂದನ್ನು ಬಿಟ್ಟು ಮತ್ತೆ ಉಳಿದ ಹತ್ತನ್ನು ಪರಿತ್ಯಾಗಮಾಡಬೇಕು. ಮಾತ್ರವಲ್ಲದೆ ಜೇನುತುಪ್ಪವನ್ನೂ ಪರಾನ್ನವನ್ನೂ ಪರಿತ್ಯಾಗ ಮಾಡಬೇಕು. 'ಶ್ರೀಭಗವಂತನೇ! ಈ ದಿನವು ಪವಿತ್ರವಾದ ದ್ವಾದಶಿಯು. ಪಾಪಪರಿಹಾರಕ ವಾದದ್ದು. ಈದಿನ ನಾನು ಪಾರಣೆಯನ್ನೂ ಮಾಡುವೆನು. ಅನುಗ್ರಹ ಮಾಡು' ಎಂದು ಪ್ರಾರ್ಥಿಸಬೇಕು. ಹೀಗೆಯೇ ಒಂದು ವರ್ಷಕಾಲ ಅಖಂಡ ಏಕಾದಶೀವ್ರತ

ವನ್ನು ಮಾಡಬೇಕು. ಆಮೇಲೆ ಉದ್ಯಾಪನೆಯನ್ನು ಮಾಡಬೇಕು. ಮೊದಲೋ ಮಧ್ಯದಲ್ಲಿಯೋ ಕೊನೆಯಲ್ಲಿಯೋ ಉದ್ಯಾಪನೆಯನ್ನು ಮಾಡಬೇಕು. ಉದ್ಯಾಪನೆ ಯನ್ನು ಮಾಡದೆ ಇದ್ದರೆ ಕುಷ್ಠರೋಗವುಳ್ಳವನಾಗಿಯೂ ಕುರುಡನಾಗಿಯೂ ಆಗುತ್ತಾನೆ. ಉದ್ಯಾಪನವನ್ನು ಮಾಡುವಾಗ ಹನ್ನೆರಡು ಬ್ರಾಹ್ಮಣರನ್ನು ಕೂಗಬೇಕು. ಹದಿಮೂರನೆಯದಾಗಿ ವಿಧಿಯನ್ನು ತಿಳಿದ ಪತ್ನೀಸಹಿತರಾದ ಆಚಾರ್ಯರನ್ನು ಕೂಗಬೇಕು. ವಿಧಿಪ್ರಕಾರವಾಗಿ ಹೋಮವನ್ನು ಮುಗಿಸಿದಮೇಲೆ ಹದಿಮೂರು ಪದದಾನಗಳನ್ನು ಮಾಡಬೇಕು. ಒಳ್ಳೇ ಹಾಲು ಕೊಡುವ ಗೋವನ್ನು ವೃಷಭವನ್ನೂ ದಾನಮಾಡಬೇಕು. ಪತ್ನೀಸಹಿತರಾದ ಆಚಾರ್ಯರಿಗೆ ವಸ್ತ್ರದಿಂದಲೂ ಸಂತೋಷ ಪಡಿಸಬೇಕು. ಇಪ್ಪತ್ತೈದು ಕಲಶಗಳನ್ನು ವಸ್ತ್ರಸಹಿತವಾಗಿ ದಾನ ಮಾಡಬೇಕು. ಭೂಮಿದಾನವನ್ನು ಮಾಡಬೇಕು. ಬಂಧುಗಳಿಗೂ ಇಷ್ಟಮಿತ್ರರಿಗೂ ಸಹ ಭೋಜನ ಮಾಡಿಸಬೇಕು. ಆಮೇಲೆ ಆಚಾರ್ಯರಿಗೆ ದಕ್ಷಿಣೆ ಸಹಿತವಾಗಿ ಪೂರ್ಣಪಾತ್ರವನ್ನು ದಾನ ಮಾಡಬೇಕು. ಪೂರ್ಣಪಾತ್ರವನ್ನು ದಾನಮಾಡಿದ ಮೇಲೆ ಆ ಕಾರ್ಯವು ಸಂಪೂರ್ಣವಾಗಿ ಆಗುವುದು.

ಉಪವಾಸಾದಿ ವ್ರತಗಳು ಬ್ರಾಹ್ಮಣರ ಆಶೀರ್ವಾದದಿಂದಲೇ ಸಂಪೂರ್ಣ ಫಲಪ್ರದವಾಗುವುವು. ಈ ಅಖಂಡ ಏಕಾದಶೀವ್ರತವನ್ನು ಮಾರ್ಗಶೀರ್ಷಮಾಸದಲ್ಲಿ ಆರಂಭಿಸಿ ಮತ್ತೊಂದು ಮಾರ್ಗಶೀರ್ಷಮಾಸದಲ್ಲಿ ಮುಗಿಸಬೇಕು. ಏಕಾದಶೀ ಉಪವಾಸವನ್ನು ಯಾವಾಗಲೂ ಮಾಡಲೇಬೇಕು. ಅಖಂಡ ಏಕಾದಶೀವ್ರತವನ್ನು ಒಂದು ವರ್ಷ ಮಾಡಿ ಉದ್ಯಾಪನೆ ಮಾಡಿದರೂ ಸಾಕು.



## ಏಕಾದಶೀ ಜಾಗರವು [1]

ಏಕಾದಶೀದಿನದಲ್ಲಿ ರಾತ್ರಿಯಲ್ಲಿ ಜಾಗರವನ್ನು ಮಾಡಬೇಕು. ಗಾಯನ, ವಾದ್ಯ, ಪುರಾಣಪಠನ, ಧೂಪ, ದೀಪ, ನೈವೇದ್ಯ, ಗಂಧ, ಪುಷ್ಪ, ಫಲಸಮರ್ಪಣ, ಶ್ರದ್ಧಾ, ದಾನ, ಇಂದ್ರಿಯನಿಗ್ರಹ, ಸತ್ಯವಚನ, ನಿದ್ರೆಯಿಲ್ಲದೆ ಇರುವುದು, ಸಂತೋಷದಿಂದ ದೇವರನ್ನು ಪೂಜಿಸುವುದು, ಉತ್ಸಾಹ, ಪಾಪಾಲಸ್ಯಾದಿ ಇಲ್ಲದೆ ಇರುವುದು. ಪ್ರದಕ್ಷಿಣೆ, ನಮಸ್ಕಾರ, ಒಂದೊಂದು ಯಾಮಕ್ಕೂ ಸಂತೋಷದಿಂದ ದೇವರಿಗೆ

1. ಪ.ಪು.ಉ.ಖಂ.

ಮಂಗಳಾರತಿಯನ್ನು ಮಾಡುವುದು ಇತ್ಯಾದಿಗುಣಗಳಿಂದ ಕೂಡಿದ ಜಾಗರವನ್ನು ಯಾರು ಏಕಾದಶಿಯಲ್ಲಿ ರಾತ್ರಿಯಲ್ಲಿ ಮಾಡುವನೋ ಅವನು ಪುನಃ ಹುಟ್ಟಲಾರನು. ಇದ್ದ ಹಣದಲ್ಲಿ ವಂಚನೆಯಿಲ್ಲದೆ ಭಕ್ತಿಯಿಂದ ಜಾಗರವನ್ನು ಮಾಡುವವನು ಸಾಧನೆಯನ್ನು ಮಾಡಿ ಪರಮಾತ್ಮನನ್ನು ಹೊಂದುವನು. ಯಾರು ಏಕಾದಶೀದಿನ ರಾತ್ರಿಯಲ್ಲಿ ಜಾಗರವನ್ನು ಮಾಡುವುದಿಲ್ಲವೋ ಅವರು ನಷ್ಟರಾದರು ಎಂದು ತಿಳಿಯಬೇಕು. ಯಾವ ಪಾಪಿಗಳು ಜಾಗರವನ್ನು ನೋಡುವುದಿಲ್ಲವೋ ಅವರಿಗೆ ಯಮದೂತರು ಎದೆಯ ಮೇಲೆ ಕಾಲಿಟ್ಟು ಅವರ ಕಣ್ಣನ್ನು ಕಿತ್ತಿ ತೆಗೆಯುವರು. ಪುರಾಣವನ್ನು ಹೇಳುವವರು ಇಲ್ಲದ್ದಿದರೆ ಗಾಯನವನ್ನು ನರ್ತನವನ್ನು ಮಾಡಿಸಬೇಕು. ಪುರಾಣ ಹೇಳುವವರು ಇದ್ದರೆ ಪುರಾಣವನ್ನು ಹೇಳಿಸಬೇಕು.

ಏಕಾದಶೀದಿನ ಜಾಗರವನ್ನು ಮಾಡಿದರೆ ಹತ್ತು ಸಾವಿರ ಅಶ್ವಮೇಧ ಯಾಗವನ್ನು ನೂರು ವಾಜಪೇಯಯಾಗವನ್ನು ಮಾಡಿದ ಪುಣ್ಯವು ಬರುವುದು. ಕೋಟಿಪಾಲು ಪುಣ್ಯವು ಬರುವುದು. ಜಾಗರವನ್ನು ಮಾಡಿದವನು ತಾಯಿಯ ವಂಶದವರನ್ನು ತಂದೆಯ ವಂಶದವರನ್ನು ಹೆಂಡತಿಯ ವಂಶದವರನ್ನು ಉದ್ಧರಿಸುವನು. ದಶಮೀ ವೇಧವುಳ್ಳ ಏಕಾದಶೀದಿನದಲ್ಲಿ ಜಾಗರವನ್ನು ಮಾಡಬಾರದು. ಮಾಡಿದರೆ ಪರಮಾತ್ಮನು ಶಾಪವನ್ನು ಕೊಟ್ಟು ಅಲ್ಲಿಂದ ಹೊರಟುಹೋಗುವನು. ದಶಮೀ ವೇಧವಿಲ್ಲದೆ ಇರುವ ಉಪವಾಸದಿನದಲ್ಲಿ ಜಾಗರಣೆಯನ್ನು ಮಾಡಿದರೆ ಪರಮಾತ್ಮನು ಅವರ ಮಧ್ಯದಲ್ಲಿ ನರ್ತನವನ್ನು ಮಾಡುವನು. ಪರಮಾತ್ಮನ ಸಮೀಪದಲ್ಲಿ ಎಷ್ಟು ದಿನ ಜಾಗರವನ್ನು ಮಾಡುವನೋ ಅಷ್ಟು ಯುಗ ಅವನು ಪರಮಾತ್ಮನ ಮಂದಿರದಲ್ಲಿ ಸಂತೋಷದಿಂದ ಇರುತ್ತಾನೆ.

ಏಕಾದಶೀದಿನದಲ್ಲಿ ಜಾಗರವನ್ನು ಮಾಡದೆ ಇದ್ದರೆ ಗಯೆಗೆ ಹೋಗಿ ಪಿಂಡಪ್ರದಾನವನ್ನು ಮಾಡಿದರೂ ಬಹುತೀರ್ಥಯಾತ್ರೆಯನ್ನು ಮಾಡಿದರೂ ಪೂರ್ವಿಕರು ಮುಕ್ತಿಯನ್ನು ಹೊಂದಲಾರರು. ಯಾರು ಜಾಗರದಲ್ಲಿ ಪರಮಾತ್ಮನಿಗೆ ಹೂವಿನಿಂದ ಅರ್ಚನೆಯನ್ನು ಮಾಡುವನೋ ಅವನು ಒಂದೊಂದು ಹೂವಿಗೂ ಅಶ್ವಮೇಧಯಾಗವನ್ನು ಮಾಡಿದ ಫಲವನ್ನು ಹೊಂದುವನು. ಯಾರು ರಾತ್ರಿಯಲ್ಲಿ ಜಾಗರಸಮಯದಲ್ಲಿ ದೀಪದಾನವನ್ನು ಮಾಡುವನೋ ಅವನು ಒಂದೊಂದು ನಿಮಿಷಕ್ಕೂ ಹತ್ತು ಸಾಪಿರ ಗೋದಾನ ಮಾಡಿದ ಫಲವನ್ನು ಹೊಂದುವನು. ಯಾರು ಜಾಗರದಲ್ಲಿ ದೇವರಿಗೆ ನೈವೇದ್ಯ ಮಾಡುವರೋ ಅವರು ಬೆಟ್ಟದಷ್ಟು ಪುಣ್ಯವನ್ನು ಹೊಂದುವರು. ಯಾರು ನಾನಾ ವಿಧ ಫಲಗಳನ್ನು ಕೊಡುವರೋ ಅವರು ನೂರು

ಗೋದಾನ ಮಾಡಿದ ಫಲವನ್ನು ಹೊಂದುವರು. ಯಾರು ಪಚ್ಚಕರ್ಪೂರ ಸಹಿತವಾದ ತಾಂಬೂಲವನ್ನು ದೇವರಿಗೆ ಸಮರ್ಪಿಸುವನೋ ಅವನು ಪರಮಾತ್ಮನ ಅನುಗ್ರಹ ದಿಂದ ಸಪ್ತದ್ವೀಪಗಳಿಗೂ ಅಧಿಪತಿಯಾಗುವನು. ಯಾರು ಜಾಗರಕಾಲದಲ್ಲಿ ದೇವರಿಗೆ ಹೂವಿನಿಂದ ಮಂಟಪವನ್ನು ಮಾಡುವನೋ ಅವನು ಪುಷ್ಪಕವಿಮಾನದಲ್ಲಿ ಕೂತುಕೊಂಡು ಪರಮಾತ್ಮನ ಲೋಕವನ್ನು ಹೊಂದಿ ಸಂತೋಷದಿಂದ ಇರುವನು.

ಯಾರು ಜಾಗರದಲ್ಲಿ ಗುಗ್ಗುಲವನ್ನು ಹಾಕಿ ಧೂಪವನ್ನು ಸಮರ್ಪಿಸುವನೋ ಅವನು ಲಕ್ಷಜನ್ಮದ ಪಾಪವನ್ನು ಕಳಕೊಳ್ಳುವನು. ಯಾರು ಜಾಗರದಲ್ಲಿ ಪರಮಾತ್ಮನಿಗೆ ಮೊಸರು ಹಾಲು ತುಪ್ಪ ನೀರುಗಳಿಂದ ಅಭಿಷೇಕ ಮಾಡುವನೋ ಅವನು ಈ ಲೋಕದಲ್ಲಿ ಬೇಕಾದ ಭೋಗಗಳನ್ನು ಅನುಭವಿಸಿ ಕೊನೆಗೆ ಪರಮಾತ್ಮನ ಲೋಕವನ್ನು ಹೊಂದುವನು. ಯಾರು ನಾನಾವಿಧಗಳಾದ ದಿವ್ಯವಸ್ತ್ರಗಳನ್ನು ದೇವರಿಗೆ ಸಮರ್ಪಿಸುವನೋ ಅವರು ಸ್ವರ್ಗದಲ್ಲಿ ಬಹುಕಾಲವಾಸಮಾಡುವನು. ಯಾರು ಭಗವಂತನಿಗೆ ರತ್ನಖಚಿತವಾದ ಬಂಗಾರದ ಆಭರಣವನ್ನು ಸಮರ್ಪಿಸು ವನೋ ಅವನು ಏಳು ಕಲ್ಪ ಪರಮಾತ್ಮನ ಲೋಕದಲ್ಲಿ ವಾಸಮಾಡುವನು. ಯಾರು ಜಾಗರದಲ್ಲಿ ಆಕಳ ತುಪ್ಪದಿಂದ ದೀಪವನ್ನು ಇಡುವನೋ ಅವನು ನಿಮಿಷಕ್ಕೆ ಹತ್ತು ಸಾವಿರ ಗೋದಾನವನ್ನು ಮಾಡಿದ ಪುಣ್ಯವನ್ನು ಹೊಂದುವನು. ಯಾರು ಕರ್ಪೂರದಿಂದ ಮಂಗಳಾರತಿಯನ್ನು ಮಾಡುವನೋ ಅವನು ಕಪಿಲಾದಾನವನ್ನು ಮಾಡಿದ ಫಲವನ್ನು ಹೊಂದುವನು.

ಯಾರು ಜಾಗರದಲ್ಲಿ ದೀಪ ಗೀತ ನರ್ತನ ಪೂಜೆಗಳನ್ನು ಮಾಡುವನೋ ಅವನು ನೂರು ಯಾಗಗಳನ್ನು ಮಾಡಿದ ಪುಣ್ಯವನ್ನು ಹೊಂದುವನು. ಯಾರು ಜಾಗರದಲ್ಲಿ ಗೀತವನ್ನು ನರ್ತನವನ್ನು ನಿಲ್ಲಿಸುತ್ತಾನೋ ಅವನು ಅರವತ್ತು ಸಾವಿರ ಯುಗಗಳಲ್ಲಿ ರೌರವಾದಿ ನರಕಗಳಲ್ಲಿ ಬಿದ್ದಿರುತ್ತಾನೆ. ಜಾಗರದಲ್ಲಿ ನರ್ತನ ಮಾಡುವವನ ಬಳಿಯಲ್ಲಿ ಇದ್ದವರೂ ಕೂಡ ಯಮದೇವರಿಂದ ಬಿಡಲ್ಪಟ್ಟವರಾಗಿ ಉತ್ತಮಲೋಕಕ್ಕೆ ಹೋಗುವರು. ಜಾಗರದಲ್ಲಿ ನರ್ತನ ಮಾಡುವವನನ್ನು ನೋಡಿ ಯಾರು ಉಪಹಾಸ ಮಾಡುವನೋ ಅವನು ಬಹುಕಾಲ ನರಕದಲ್ಲಿ ವಾಸಮಾಡು ವನು. ಯಾರು ಜಾಗರದಲ್ಲಿ ಪುರಾಣವನ್ನು ಹೇಳುತ್ತಾನೋ ಅವನು ಎಷ್ಟು ಶ್ಲೋಕ ಹೇಳಿರುತ್ತಾನೋ ಅಷ್ಟು ಹತ್ತು ಸಾವಿರ ವರ್ಷ ಪರಮಾತ್ಮನ ಲೋಕದಲ್ಲಿ ಇರುತ್ತಾನೆ. ಜಾಗರದಲ್ಲಿ ದೇವರಿಗೆ ಪ್ರದಕ್ಷಿಣೆ ಬರುವುದರಿಂದ ಬರುವ ಪುಣ್ಯವು ಕೋಟಿಯಾಗ ಮಾಡಿದರೂ ಬರಲಾರದು. ಜಾಗರದಲ್ಲಿ ದೇವರ ಮುಂಭಾಗದಲ್ಲಿ ದೀಪಗಳ

ಮಾಲೆಯನ್ನು ಇಟ್ಟರೆ ಸ್ವರ್ಗದಲ್ಲಿ ವಾಸಮಾಡುವನು. ಜಾಗರದಲ್ಲಿ ವಿಷ್ಣುಸಹಸ್ರನಾಮಗಳನ್ನು ಪಠನ ಮಾಡಿದರೆ ಸಾವಿರ ಕೋಟಿಯುಗ ಶ್ವೇತದ್ವೀಪದಲ್ಲಿ ವಾಸಮಾಡುವನು. ಜಾಗರದಲ್ಲಿ ಗೋದಾನವನ್ನು ಮಾಡಿದವನು ಸಪ್ತದ್ವೀಪಗಳಿಂದ ಕೂಡಿರುವ ಭೂಮಿಯನ್ನು ದಾನಮಾಡಿದ ಪುಣ್ಯವನ್ನು ಹೊಂದುವನು. ಎಲ್ಲಾ ಪುಣ್ಯಗಳಿಂದಲೂ ಏಕಾದಶೀ ಜಾಗರದಿಂದ ಉಂಟಾಗುವ ಪುಣ್ಯವು ಶ್ರೇಷ್ಠ ವಾಗಿರುವುದು. ಜಾಗರವನ್ನು ಮಾಡುವವರು ಸಾಧನ ಮಾಡಿಕೊಂಡು ಪರಮಾತ್ಮನ ಲೋಕವನ್ನು ಹೊಂದಿ ಆಮೇಲೆ ಸಂಸಾರಕ್ಕೆ ಬರುವುದೇ ಇಲ್ಲ.

ಯಾರು ಇನ್ನೊಬ್ಬರಿಗೆ ಪ್ರೋತ್ಸಾಹಪಡಿಸಿ ಜಾಗರ ಮಾಡಿಸುವನೋ ಅವನು ಚಕ್ರವರ್ತಿಯಾಗಿ ಹುಟ್ಟುವನು. ಕಕುಸ್ಥರಾಜನು ರಾತ್ರಿಯಲ್ಲಿ ಜಾಗರವನ್ನು ಮಾಡಿ ತನ್ನ ಶಕ್ತಿಯನ್ನು ಅನುಸರಿಸಿ ದಾನವನ್ನು ಮಾಡಿ ದುರ್ಲಭವಾದ ರಾಜ್ಯವನ್ನು ಹೊಂದಿರುವನು. ಜಾಗರದಲ್ಲಿ ಗಾಯನ ಮಾಡಿದವರೂ ವಾದ್ಯ ಬಾರಿಸಿದವರೂ ನರ್ತನ ಮಾಡಿದವರೂ ಆದ ಬ್ರಾಹ್ಮಣರು ಪರಮಾತ್ಮನ ಲೋಕವನ್ನು ಹೊಂದುವರು. ಎಲ್ಲಾ ವರ್ಣದವರು ಏಕಾದಶೀ ರಾತ್ರಿಯಲ್ಲಿ ಜಾಗರವನ್ನು ಮಾಡಬೇಕು. ಕಲಿಯುಗದಲ್ಲಿ ಜಾಗರವೇ ಪರಮಪವಿತ್ರವಾದದ್ದು. ಜಾಗರವನ್ನು ಮಾಡುವವರೇ ಪರಮ ಧನ್ಯರು. ಏಕಾದಶೀ ಜಾಗರವನ್ನು ಮಾಡುವವನು ಪೂರ್ವಿಕರೆಲ್ಲರನ್ನೂ ಉದ್ಧಾರ ಮಾಡುವನು. ಜಾಗರದಲ್ಲಿ ಭಕ್ತಿಯಿಂದ ಭಗವಂತನ ಮಹಿಮೆಯನ್ನು ಹೇಳಿದವನು ನೂರು ಕುಲಗಳನ್ನು ಉದ್ಧರಿಸುವನು.

ಅಗಮ್ಯಾಗಮನದಿಂದ ಉಂಟಾದ ಪಾಪವು ನಿಷಿದ್ಧವನ್ನು ತಿನ್ನುವುದರಿಂದ ಉಂಟಾಗುವ ಪಾಪವೂ, ಅಜ್ಞಾನದಿಂದ ಮಾಡಿದ ಪಾಪವೂ, ತಿಳಿದು ಮಾಡಿದ ಪಾಪವೂ, ಪೂರ್ವಜನ್ಮದಲ್ಲಿ ಮಾಡಿದ ಪಾಪವೂ, ಆ ಜನ್ಮದಲ್ಲಿ ಮಾಡಿದ ಪಾಪವೂ, ಎಲ್ಲವೂ ಏಕಾದಶೀ ಜಾಗರದಿಂದ ಪರಿಹಾರವಾಗುವುದು. ಮನಸ್ಸಿನಲ್ಲಿ ಯೋಚಿಸಿದ ಕಾರ್ಯವೆಲ್ಲವೂ ಸಿದ್ಧಿಯನ್ನು ಹೊಂದುವುದು. ಜಾಗರದ ಪುಣ್ಯವು ಎಲ್ಲಾ ಪುಣ್ಯ ಗಳಿದಲೂ ಶ್ರೇಷ್ಠವಾದದ್ದು. ಏಕಾದಶೀ ಜಾಗರದಿಂದ ಶುದ್ಧವಾದ ಮನಸ್ಸುಳ್ಳವ ನಾಗುವನು. ಅವನಿಗೆ ಎಲ್ಲಾ ಗ್ರಹಗಳೂ ಅನುಕೂಲವಾಗಿ ಇರುವುವು. ಅವನಿಗೆ ಸಂತಾನ ವಿಚ್ಛೇದವಾಗಲಾರದು. ಅವನಿಗೆ ಪರಮಾತ್ಮನ ಮಹಿಮೆಯನ್ನು ಕೇಳುವುದರಲ್ಲಿಯೇ ಮನಸ್ಸು ಆಸಕ್ತವಾಗಿರುವುದು. ಅವನಿಗೆ ಆಪತ್ತು ಬರಲಾರದು. ಎಲ್ಲಿ ಹೋದರು ವಿಜಯವು ಉಂಟಾಗುವುದು. ಮಹಾಪುಣ್ಯವು ಬರುವುದು. ಪರಮಾತ್ಮನಲ್ಲಿ ಭಕ್ತಿಯು ಹೆಚ್ಚುವುದು. ಪಾಪಲೇಪವಾಗಲಾರದು. ಪ್ರೇತಜನ್ಮವು

ಬರಲಾರದು. ಏಕಾದಶೀ ಉಪವಾಸಮಾಡಿ ರಾತ್ರಿಯಲ್ಲಿ ಜಾಗರವನ್ನು ಮಾಡದೆ ಇರುವವನಿಗೆ ಪರಲೋಕದಲ್ಲಿ ಗತಿಯೇ ಇರುವುದಿಲ್ಲ, ಆದುದರಿಂದ ಅವಶ್ಯವಾಗಿ ಏಕಾದಶೀವ್ರತವನ್ನು ಮಾಡಲೇಬೇಕು.



## ಏಕಾದಶೀ ಮಹಿಮೆ [1]

ಪೂರ್ವದಲ್ಲಿ ರುಕ್ಮಾಂಗದನೆಂಬ ರಾಜನಿದ್ದನು. ಅವನಿಗೆ ಸಂಧ್ಯಾವಳೀ ಎಂದು ಹೆಸರುಳ್ಳ ಪತಿವ್ರತೆಯಾದ ಹೆಂಡತಿಯಿದ್ದಳು. ಧರ್ಮಾಂಗದನೆಂದು ಪ್ರಸಿದ್ಧನಾದ ಮಗನಿದ್ದನು. ರಾಜನು ಏಕಾದಶೀವ್ರತವನ್ನು ಮಾಡುವುದರಲ್ಲಿ ತುಂಬಾ ಶ್ರದ್ಧೆಯುಳ್ಳವನಾಗಿದ್ದನು. ತನ್ನ ದೇಶದ ಜನರಿಂದ ಎಲ್ಲರಿಂದಲೂ ಏಕಾದಶೀ ಉಪವಾಸವನ್ನು ಮಾಡಿಸುತ್ತಾ ಇದ್ದನು. ಎಂಟು ವರ್ಷದ ಮೇಲೆ ಎಂಭತ್ತು ವರ್ಷದವರೆಗೆ ಇರುವ ಯಾರಾದರೂ ಉಪವಾಸ ಮಾಡದಿದ್ದರೆ ಕಳ್ಳರನ್ನು ಶಿಕ್ಷಿಸುವಂತೆ ಶಿಕ್ಷಿಸುತ್ತಿದ್ದನು. ಈ ರೀತಿಯಾದ ರಾಜನ ಅಪ್ಪಣೆಯಿಂದ ಆ ಊರಿನ ಜನರೆಲ್ಲರೂ ಏಕಾದಶೀ ವ್ರತವನ್ನು ಮಾಡುತ್ತಿದ್ದರು. ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಎಲ್ಲರೂ ಏಕಾದಶೀ ಉಪವಾಸನ್ನು ಮಾಡುತ್ತಿದ್ದರು. ಈ ಪುಣ್ಯಪ್ರಭಾವದಿಂದ ಊರ ಜನರೆಲ್ಲರೂ ಮೃತರಾಗಿ ಯಮಲೋಕಕ್ಕೆ ಹೋಗದೆ ವಿಷ್ಣುಲೋಕಕ್ಕೇ ಹೋಗುತ್ತಿದ್ದರು. ಯಮಲೋಕವು ಶೂನ್ಯವಾಯಿತು. ಯಮ ದೂತರಿಗೆ ಕೆಲಸವೇ ಇಲ್ಲದಾಯಿತು. ಚಿತ್ರಗುಪ್ತನು ಮುನಿಯಂತೆ ಧ್ಯಾನಮಾಡುತ್ತಾ ಕೂತನು. ಯಮದೇವರೂ ದುಃಖದಿಂದ ಸುಮ್ಮನೇ ಕೂತರು.

ಈ ಸಮಯದಲ್ಲಿ ಅಲ್ಲಿಗೆ ನಾರದರು ಬಂದರು. ಯಮದೇವರು ದುಃಖದಿಂದ ಇರುವುದನ್ನು ನೋಡಿ ನಾರದರು ಕಾರಣವನ್ನು ಕೇಳಿದರು. ಅದಕ್ಕೆ ಯಮದೇವರು 'ನಾರದರೇ! ಈಗ ಭೂಮಿಯಲ್ಲಿ ರುಕ್ಮಾಂಗದನೆಂಬ ರಾಜನಿರುವನು. ಅವನು ಸರ್ವಪಾಪಪರಿಹಾರಕವಾದ ಏಕಾದಶೀವ್ರತವನ್ನು ಮಾಡುತ್ತಿರುವನು. ತಾನು ಮಾತ್ರ ಮಾಡುವುದಲ್ಲದೆ ತನ್ನ ಊರ ಜನರಿಂದಲೂ ಮಾಡಿಸುತ್ತಿರುವನು. ಆ ಪುಣ್ಯದ ಪ್ರಭಾವದಿಂದ ಎಲ್ಲಾ ಜನರೂ ನನ್ನ ಲೋಕಕ್ಕೆ ಬರದೆ ವಿಷ್ಣುಲೋಕಕ್ಕೇ ಹೋಗುತ್ತಿರುವರು. ಒಬ್ಬರೂ ನರಕಕ್ಕೆ ಬರುವುದಿಲ್ಲ. ಅದರಿಂದಲೇ ದುಃಖಿತನಾಗಿ

1. ಸ್ಕ.ಪು.ಕಾ.ಮಾ.ಮ. ಅ.21

ನಾನು ಸುಮ್ಮನೆ ಕೂತಿರುವನು' ಎಂದು ಹೇಳಿದರು. ಈ ಮಾತನ್ನು ಕೇಳಿ ನಾರದರು ಲೋಕವನ್ನು ಸಂಚರಿಸುತ್ತಾ ಹೋದರು. ತರುವಾಯ ಯಮದೇವರು ದುಃಖಯುಕ್ತ ಮನಸ್ಸುಳ್ಳವರಾಗಿ ದಂಡವನ್ನು ಹಿಡಿದುಕೊಂಡು ಚಿತ್ರಗುಪ್ತಾದಿಗಳಿಂದ ಕೂಡಿ ಕೊಂಡು ರುಕ್ಮಾಂಗದನ ದೇಶಕ್ಕೆ ಯುದ್ಧಕ್ಕೆ ಹೋದರು. ಭಗವಂತನ ವಿಶೇಷಾನು ಗ್ರಹಯುಕ್ತನಾದ ರುಕ್ಮಾಂಗದರಾಜನಿಂದ ಸೋತುಹೋದವರಾಗಿ ರುಕ್ಮಾಂಗದನನ್ನು ಬಿಟ್ಟು ತನ್ನ ಸೈನ್ಯದಿಂದ ಸಹ ಸರ್ವದೇವತೆಗಳಿಂದ ನಮಸ್ಕೃತವಾದ ಸತ್ಯಲೋಕಕ್ಕೆ ಹೋದರು. ಅಲ್ಲಿ ವಾಯುದೇವರೇ ಮೊದಲಾದವರಿಂದ ಕೂಡಿಕೊಂಡಿರುವ ಬ್ರಹ್ಮದೇವರನ್ನು ನೋಡಿ ಮೂರ್ಛೆಯಿಂದ ಬಿದ್ದರು. ವಾಯುದೇವರು ಯಮ ದೇವರನ್ನು ಎಬ್ಬಿಸಿ ಬ್ರಹ್ಮದೇವರ ಬಳಿಗೆ ಕರಕೊಂಡು ಹೋದರು. ಬ್ರಹ್ಮದೇವರು 'ನಿನ್ನ ದುಃಖಕ್ಕೆ ಕಾರಣವೇನೆಂದು ಕೇಳಿದರು. ಆಗ ಯಮದೇವರು ಕಣ್ಣೀರು ಸುರಿಸುತ್ತಾ 'ಪೂಜ್ಯರೇ! ನನ್ನ ಮಾತನ್ನು ಕೇಳಬೇಕು. ಭೂಮಿಯಲ್ಲಿ ರುಕ್ಮಾಂಗದನೆಂಬ ರಾಜನು ಏಕಾದಶೀವ್ರತವನ್ನು ಮಾಡಿ ನನ್ನ ಲೋಕಕ್ಕೆ ಬರುವ ಮಾರ್ಗವನ್ನೇ ಹಾಳುಮಾಡಿದನು. ಅಂದರೆ ಒಬ್ಬರೂ ನನ್ನ ಲೋಕಕ್ಕೆ ಬಾರದಂತೆ ಮಾಡಿರುವನು. ಆ ದುಃಖದಿಂದ ನಾನು ಅವನ ದೇಶಕ್ಕೆ ಯುದ್ಧಕ್ಕೆ ಹೋಗಿ ಸೋತುಹೋಗಿರುವೆನು. ಆದರಿಂದ ನಾನು ನಿಮ್ಮ ಬಳಿಗೆ ಬಂದಿರುವೆನು. ನಾನೇನು ಮಾಡಬೇಕೆಂದು ನೀವೇ ಹೇಳಬೇಕು' ಎಂದರು.

ಯಮದೇವರ ಮಾತನ್ನು ಕೇಳಿ ಬ್ರಹ್ಮದೇವರು 'ವತ್ಸ! ಸಾಹಸ ಕಾರ್ಯವನ್ನು ಮಾಡದಿರು. ದುಃಖವನ್ನು ಬಿಡು. ಪರಮಾತ್ಮನ ಭಕ್ತರಲ್ಲಿ ದ್ವೇಷಮಾಡುವವನು ನರಕವನ್ನು ಹೊಂದುವನು. ರುಕ್ಮಾಂಗದನು ಸರ್ವಕಾಲದಲ್ಲಿಯೂ ಪರಮಾತ್ಮನ ಭಕ್ತನಾಗಿರುವನು. ಅವನಲ್ಲಿ ದ್ವೇಷಮಾಡಿದರೆ ಭಗವಂತನಲ್ಲಿಯೇ ದ್ವೇಷ ಮಾಡಿ ದಂತೆ ಆಗುವುದು. ಆದುದರಿಂದ ದುಃಖವನ್ನು ಬಿಟ್ಟು ಸುಖದಿಂದಲೇ ವಾಸ ಮಾಡುತ್ತಿರು' ಎಂದು ಹೇಳಿದರು. ಆಗ ಯಮದೇವರು ಅಳುತ್ತಾ 'ಆ ರಾಜನನ್ನು ವ್ರತದಿಂದ ಬಿಡಿಸದಿದ್ದರೆ ನಾನು ನಿಮ್ಮ ಮುಂಭಾಗದಲ್ಲೇ ದೇಹವನ್ನು ಪರಿತ್ಯಜಿಸು ವೆನು' ಎಂದು ಹೇಳಿದರು.

ಬ್ರಹ್ಮದೇವರು ಸ್ವಲ್ಪ ಹೊತ್ತು ಸುಮ್ಮನಿದ್ದು ತನ್ನ ಮನಸ್ಸಿನಿಂದಲೇ ಪರಮಸುಂದರಿಯಾದ ಸ್ತ್ರೀಯನ್ನು ನಿರ್ಮಿಸಿದರು. ಅವಳು ಎಲ್ಲರನ್ನೂ ಮೋಹ ಗೊಳಿಸುವ ರೂಪವುಳ್ಳವಳಾದ ಮೋಹಿನಿಯೊಡನೆ 'ಮೋಹಿನಿ! ನೀನು ರುಕ್ಮಾಂಗದ ರಾಜನಿದ್ದಲ್ಲಿಗೆ ಹೋಗು. ಅವನನ್ನು ಮೋಹಗೊಳಿಸು' ಎಂದರು.

ಮೋಹಿನಿಯು 'ಪವಿತ್ರಕೀರ್ತಿಯುಳ್ಳ ರಾಜನನ್ನು ಹೇಗೆ ಮೋಹಗೊಳಿಸಲಿ? ಎಲ್ಲಿ ನನಗೆ ಆ ರಾಜನು ಸಿಗುವನು?' ಎಂದು ಕೇಳಿದಳು.

ಬ್ರಹ್ಮದೇವರು ''ಆ ರಾಜನು ಊರಿನ ಹತ್ತಿರವೇ ಕ್ರೀಡೆ ಮಾಡುವ ಚಿಕ್ಕಬೆಟ್ಟ ವಿರುವುದು. ಅಲ್ಲಿಗೆ ನೀನು ಹೋಗಿ ಹಾಡು ಹೇಳುತ್ತಿರು. ಆಗಲೇ ಅಲ್ಲಿಗೆ ರಾಜನು ಕುದುರೆಯ ಮೇಲೆ ಕೂತುಕೊಂಡು ಬರುವನು. ನಿನ್ನ ಸಮೀಪಕ್ಕೇನೇ ಬರುವನು. ನಿನ್ನನ್ನು ಮದುವೆ ಮಾಡಿಕೊಳ್ಳಲು ಅಪೇಕ್ಷಿಸುವನು. ಆಗ ನೀನು ನಾನು ಹೇಳಿದಂತೆ ನೀನು ಕೇಳುವ ಪಕ್ಷದಲ್ಲಿ ನಿನ್ನನ್ನು ಮದುವೆಯಾಗುವೆನು ಎಂದು ಹೇಳು. ಅದಕ್ಕೆ ರಾಜನು ಮೋಹಿತನಾಗಿ ಹಾಗೇ ಆಗಲಿ ಎನ್ನುವನು. ಆಗ ನೀನು ಅವನೊಡನೆ 'ನನ್ನ ಮನಸ್ಸು ತೃಪ್ತಿ ಹೊಂದುವವರೆಗೆ ನನ್ನೊಡನೆ ವಿಹಾರಮಾಡುತ್ತಾ ಇರಬೇಕು. ಮಧ್ಯದಲ್ಲಿ ನನ್ನನ್ನು ಬಿಟ್ಟು ಹೋಗಬೇಕಾದ ಅವಶ್ಯ ಏರ್ಪಟ್ಟ ಪಕ್ಷದಲ್ಲಿ ನಿನ್ನ ಕೈಯಲ್ಲಿ ಕತ್ತಿ ಹಿಡಿದು ಮಗನ ತಲೆಯನ್ನು ಕತ್ತರಿಸಿ ಕೊಡಬೇಕು. ಹೀಗೆ ನೀನು ಪ್ರತಿಜ್ಞೆ ಮಾಡುವ ಪಕ್ಷದಲ್ಲಿ ನಾನು ನಿನ್ನನ್ನು ಮದುವೆಯಾಗುವೆನು' ಎಂದು ಹೇಳು. ರಾಜನು ಮೋಹಿತನಾಗಿ ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ನಿನ್ನನ್ನು ಮದುವೆ ಮಾಡಿಕೊಂಡು ನಿನ್ನೊಡನೆ ವಿಹಾರಮಾಡುತ್ತಾ ಇರುವನು. ನಿನ್ನೊಡನೆ ಬಹು ಸಮಯ ವಿಹಾರ ಮಾಡುತ್ತಾ ಇರುವೆನು. ನಿನ್ನಲ್ಲೇ ಆಸಕ್ತನಾಗಿ ಏಕಾದಶಿಯನ್ನು ಮರೆತು ಬಿಡುವನು. ಇದರಿಂದ ಶಿಕ್ಷಾ ಮಾಡುವವರು. ಇಲ್ಲದ ಕಾರಣ ಜನರೆಲ್ಲರೂ ಏಕಾದಶೀಯನ್ನು ಬಿಟ್ಟುಬಿಡುವರು. ಆಗ ಜನರು ಯಮಲೋಕಕ್ಕೆ ಬರುವರು'' ಎಂದು ಹೇಳಿದರು. ಮೋಹಿನಿಯು ಹಾಗೆಯೇ ಆಗಲಿ ಎಂದು ಹೇಳಿ ಬ್ರಹ್ಮದೇವರು ಹೇಳಿ ಪರ್ವತಕ್ಕೆ ಹೋದಳು.

ಆ ದಿವಸವೇ ಏಕಾದಶಿಯಾಗಿತ್ತು. ರುಕ್ಮಾಂಗದನು ಶಾಸ್ತ್ರದಲ್ಲಿ ಹೇಳಿದ ರೀತಿಯಾಗಿ ಮಾಡುವ ಕಾರ್ಯಗಳನ್ನು ಮುಗಿಸಿ ದೇವರ ಪೂಜೆಯನ್ನು ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟನು. ಮಗನಾದ ಧರ್ಮಾಂಗದನನ್ನು ಕರೆದು 'ಧರ್ಮಾಂಗದ! ಏಕಾದಶೀವ್ರತವನ್ನು ಮಾಡು. ಏಕಾದಶೀವ್ರತಕ್ಕೆ ಸಮಾನವಾದ ವ್ರತವು ಬೇರೆ ಒಂದು ಇರುವುದಿಲ್ಲ' ಎಂದು ಮಗನಿಗೆ ಉಪದೇಶಿಸಿ ಕ್ರೀಡಾ ಮಾಡುವ ಬೆಟ್ಟಕ್ಕೆ ಹೋದನು. ಅಲ್ಲಿ ಮನೋಹರವಾದ ಹಾಡನ್ನು ಕೇಳಿದನು. ಆ ಹಾಡನ್ನು ಕೇಳಿ ರಾಜನು ಪರ್ವತವನ್ನು ಏರಿ ಹೋದನು. ಪರಮಸುಂದರಿಯಾದ ಮೋಹಿನಿಯನ್ನು ನೋಡಿ ಹತ್ತಿರ ಹೋದನು. ಅವಳ ವಿಲಾಸವನ್ನು ನೋಡಿ ಮೂರ್ಛಿತನಾಗಿಬಿದ್ದನು. ಮೋಹಿನಿಯು ರಾಜನನ್ನು ಎಬ್ಬಿಸಿ 'ರಾಜನೇ! ನಾನು

ಅವಿವಾಹಿತಳು. ಸಂದೇಹಪಡಬೇಡ. ಶಾಸ್ತ್ರದಲ್ಲಿ ಹೇಳಿದ ರೀತಿಯಿಂದಲೇ ನನನ್ನು ಮದುವೆ ಮಾಡಿಕೊ. ನಿನ್ನನ್ನು ಮದುವೆಯಾಗುವುದಕ್ಕಾಗಿಯೇ ನಾನು ಇಲ್ಲಿ ವಾಸಮಾಡುತ್ತಿರುವೆನು. ಆದರೆ ನನ್ನ ಮನಸ್ಸು ತೃಪ್ತಿಯನ್ನು ಹೊಂದುವವರೆಗೆ ನನ್ನೊಡನೆ ವಿಹಾರ ಮಾಡಬೇಕು. ನೀನು ಮಧ್ಯದಲ್ಲಿ ನನ್ನನ್ನು ಬಿಟ್ಟು ಹೋಗಬೇಕಾದರೆ ನಿನ್ನ ಮಗನ ತಲೆಯನ್ನು ಕಡಿದು ನನ್ನ ಕೈಯಲ್ಲಿ ಕೊಡಬೇಕು. ಹೀಗೆ ಪ್ರತಿಜ್ಞಾ ಮಾಡುವ ಪಕ್ಷದಲ್ಲಿ ನಿನ್ನನ್ನು ನಾನು ಮದುವೆಯಾಗುವೆನು' ಎಂದು ಹೇಳಿದಳು. ತರುವಾಯ ಅವಳನ್ನು ಕುದುರೆಯ ಮೇಲೆ ಕೂತುಕೊಳ್ಳಿಸಿಕೊಂಡು ಪಟ್ಟಣಕ್ಕೆ ಹೋದನು. ಅವಳನ್ನು ಮದುವೆಯಾಗಿ ಅವಳೊಡನೆ ಯಾವಾಗಲೂ ವಿಹರಿಸುತ್ತಿದ್ದನು. ಬಹುಸಮಯ ಅವಳೊಡನೆ ವಿಹರಿಸುತ್ತಾ ಕಾಲವನ್ನೇ ತಿಳಿಯಲಿಲ್ಲ. ಕೊನೆಗೆ ಕಾರ್ತಿಕಮಾಸದಲ್ಲಿ ಏಕಾದಶಿಯಲ್ಲಿ ಸ್ಮರಣೆಗೆ ಬಂದಿತು. ಆದರಿಂದ ಬಹಳ ಪಶ್ಚಾತ್ತಾಪವುಳ್ಳವನಾಗಿ ಮೋಹಿನಿಯೊಡನೆ 'ದೇವಿ! ಪಾಪಪರಿಹಾರಕವಾದ ಏಕಾದಶಿಯು ಬಂದಿದೆ. ನಾನು ಈ ದಿನ ನಿಯಮದಿಂದ ಇರುವೆನು. ನನ್ನನ್ನು ಕ್ಷಮಿಸಬೇಕು. ನಿನ್ನ ಆಜ್ಞೆಯಿಂದ ಶುಕ್ಲಪಕ್ಷದ ಏಕಾದಶಿಯನ್ನು ಮಾಡಲಿಲ್ಲ. ಈಗ ಕೊನೆಯ ಏಕಾದಶಿಯು ಬಂದಿರುತ್ತದೆ. ಮೂರುಲೋಕದಲ್ಲೂ ಸಂತೋಷಕ್ಕೆ ಕಾರಣವಾದದ್ದು. ನನಗೆ ಅನುಜ್ಞೆಯನ್ನು ಕೊಡು. ನನ್ನೊಡನೆ ನೀನೂ ಕೂಡ ಭಗವಂತನನ್ನು ಆರಾಧಿಸು. ಅದರಿಂದ ಮೋಕ್ಷವನ್ನು ಹೊಂದುವಿ' ಎಂದನು.

ಅದಕ್ಕೆ ಮೋಹಿನಿಯು 'ರಾಜನೇ! ಪರಮಾತ್ಮನ ಪೂಜೆಯು ಜನ್ಮ ಮರಣಾದಿ ಗಳನ್ನು ಪರಿಹರಿಸುವುದು ಎಂದು ಹೇಳಿದ ಮಾತು ಸತ್ಯವು. ಆದರೆ ನಾನೊಂದು ಮಾತನ್ನು ಹೇಳುತ್ತೇನೆ. ಕೇಳಬೇಕು. ಆ ಪರ್ವತದಲ್ಲಿ ನನ್ನನ್ನು ಕರೆದುಕೊಂಡು ಬರುವ ಸಮಯದಲ್ಲಿ ಮಾಡಿರುವ ಪ್ರತಿಜ್ಞೆಯನ್ನು ಸ್ಮರಿಸು. ಆಗ ನನ್ನೊಡನೆ ಮಾಡಿದ ಪ್ರತಿಜ್ಞೆಯಂತೆ ಈಗ ಮಾಡು' ಎಂದಳು.

ರಾಜನು 'ಸುಂದರಾಂಗಿ! ನಿನ್ನ ಮನಸ್ಸಿನಲ್ಲಿ ಏನಿದೆ? ತಿಳಿಸು. ನಿನಗೆ ನಾನು ಕೊಡಲಾಗದ ವಸ್ತುವೇ ಇಲ್ಲ. ಏನನ್ನು ಬೇಕಾದರೂ ಕೊಡಲು ಸಿದ್ಧನಾಗಿರುವೆನು. ನನ್ನ ಪ್ರಾಣವನ್ನೇ ಕೊಡಲಿಕ್ಕೆ ಸಿದ್ಧನಾಗಿರುವೆನು. ಹೀಗಿರುವಾಗ ರಾಜ್ಯ ಹಣ ಇತ್ಯಾದಿಗಳನ್ನು ಕೊಡಲು ಹಿಂದೆ ತೆಗೆಯುವೆನೇ?' ಎಂದನು.

ಮೋಹಿನಿಯು 'ಪ್ರಾಣೇಶ! ನೀನು ಈ ದಿನ ಉಪವಾಸವನ್ನು ಮಾಡಬಾರದು. ನಾನು ನಿನಗೆ ಪ್ರಿಯಳಾಗಿದ್ದಾರೆ ಈ ದಿನ ಊಟವನ್ನು ಮಾಡಬೇಕು. ಊಟವನ್ನು ಮಾಡದೆ ನಾನು ಒಂದು ಕ್ಷಣವೂ ಇರಲಾರೆನು. ನಿನ್ನೊಡನೆ ವಿಹರಿಸಿ ಇನ್ನೂ ನನಗೆ

ತೃಪ್ತಿಯುಂಟಾಗಿಲ್ಲ. ಪೂರ್ವದಲ್ಲಿ ಪ್ರತಿಜ್ಞೆಯನ್ನು ಮಾಡಿಯೂ ಈಗ ಹಾಗೆ ನಡೆಯದೆ ಇದ್ದರೆ ಸುಳ್ಳು ಹೇಳುವವನಾಗಿ ನರಕವನ್ನು ಹೊಂದುವಿ' ಎಂದಳು.

ರಾಜನು 'ಕಲ್ಯಾಣಿ! ಹೀಗೆ ಹೇಳದಿರು. ಇದು ನಿನಗೆ ಯುಕ್ತವಲ್ಲ. ನೀನು ಬ್ರಹ್ಮದೇವರ ಮಗಳಾಗಿದ್ದುಕೊಂಡು ಧರ್ಮಕಾರ್ಯಕ್ಕೆ ವಿಘ್ನಮಾಡುವಿಯಾ? ಪ್ರಾಣಹೋದರೂ ನಾನು ಈ ದಿನ ಭೋಜನ ಮಾಡಲಾರೆನು. ನೀನು ಬೇರೆ ಯಾವ ಸೇವೆಯನ್ನು ಮಾಡಲಿಕ್ಕೆ ಹೇಳಿದರೂ ಮಾಡುವೆನು. ಈ ಕಾರ್ತಿಕಮಾಸದಲ್ಲಿ ಏಕಾದಶೀವ್ರತವನ್ನು ಮಾತ್ರ ಎಷ್ಟು ಮಾತ್ರಕ್ಕೂ ಬಿಡಲಾರೆನು' ಎಂದನು.

ಮೋಹಿನಿಯು 'ಮುತ್ತೈದೆಯರಿಗೂ ರಾಜರಿಗೂ ಉಪವಾಸವು ಮಾಡಬೇಕಾಗಿಲ್ಲ. ವಿಧವೆಯರೂ ಯತಿಗಳೂ ಮಾಡಬೇಕಾದದ್ದು. ಈರೀತಿಯಾಗಿ ನಾನು ಪೂರ್ವದಲ್ಲಿ ಋಷಿಗಳ ಮುಖದಿಂದ ಕೇಳಿರುವೆನು. ಆದುದರಿಂದ ನೀನು ಏಕಾದಶೀ ಉಪವಾಸ ಮಾಡುವುದು ಬೇಡ' ಎಂದಳು. ಈ ಮಾತನ್ನು ಕೇಳಿ ರಾಜನು ಮೂರ್ಛಿತನಾಗಿ ಬಿದ್ದನು. ಆಗ ಪತಿವ್ರತೆಯಾದ ಸಂಧ್ಯಾವಳಿಯು ಬಂದು ಮೋಹಿನಿಯೊಡನೆ ಮಧುರವಾದ ಸ್ವರದಿಂದ 'ಮಹಾನುಭಾವಳಾದ ರಾಜಪತ್ನಿಯೇ! ನೀನು ಹೀಗೆ ಹೇಳಬಾರದು. ಮೂರುಲೋಕದಲ್ಲಿಯೂ ಏಕಾದಶಿ ಸಮಾನವಾದ ವ್ರತವಿರುವುದಿಲ್ಲ. ರಾಜರು ಆ ವ್ರತವನ್ನು ಮಾಡುತ್ತಿರುವರು. ಅವರನ್ನು ನಿರ್ಬಂಧ ಮಾಡಬೇಡ. ನೀನೇ ಎಲ್ಲಾ ಧರ್ಮಗಳನ್ನೂ ತಿಳಿದವಳಾಗಿರುವಿಯಲ್ಲಾ. ಆದುದರಿಂದ ಹೀಗೇ ಹೇಳಬಾರದು' ಎಂದಳು.

ಆಗ ಮೋಹಿನಿಯು ಕೋಪಿಸಿಕೊಂಡು 'ಹಾಗೆ ರಾಜರು ಏಕಾದಶೀ ಉಪವಾಸ ಮಾಡಬೇಕಾದರೆ ನಿನ್ನ ಮಗನ ತಲೆಯನ್ನು ಕಡಿದು ನನ್ನ ತೊಡೆಯ ಮೇಲೆ ಹಾಕು. ಆಮೇಲೆ ಬೇಕಾದರೆ ಉಪವಾಸಮಾಡಲಿ. ನಿನ್ನ ಗಂಡನು ಪೂರ್ವದಲ್ಲಿ ಹಾಗೆಯೇ ಪ್ರತಿಜ್ಞಾ ಮಾಡಿರುವನು' ಎಂದಳು.

ಸಂಧ್ಯಾವಳಿಯು ಹಾಗೆಯೇ ಆಗಲಿ ಎಂದು ಹೇಳಿ ಮಗನ ಮನೆಗೆ ಬಂದಳು. ಮಗನ ಸಮೀಪಕ್ಕೆ ಬಂದು ಮಗನ ಮುಂದೆ ಈ ಮಾತನ್ನು ಹೇಳಲು ಬಾಯಿಯು ಬಾರದೆ ಸುಮ್ಮನೆ ನಿಂತಿದ್ದಳು. ದುಃಖದಿಂದ ನಿಂತಿರುವ ತಾಯಿಯನ್ನು ನೋಡಿ ಧರ್ಮವನ್ನು ತಿಳಿದವನಾದ ಮಗನು 'ಅಮ್ಮ! ನಿನ್ನ ಮುಖವೇಕೆ ಬಾಡಿರುವುದು? ಹೇಳಿದರೆ ಆ ಕಾರ್ಯವನ್ನು ಅವಶ್ಯವಾಗಿ ಮಾಡುವೆನು' ಎಂದು ಹೇಳಿದನು. ಅದಕ್ಕೆ ಸಂಧ್ಯಾವಳಿಯು ಮೋಹದಿಂದ ಕಣ್ಣೀರು ಸುರಿಸುತ್ತಾ 'ರಾಜರು ಮೋಹಿನಿಯಿಂದ ಮೋಹಿತರಾಗಿ ಮೂರ್ಛಿತರಾಗಿ ಬಿದ್ದಿರುವರು. ಅವರನ್ನು ನೋಡಿ ನಾನು ನೋಡಿ

ಮೋಹಿನಿಯೊಡನೆ ರಾಜರು ಮಾಡುವ ಏಕಾದಶೀವ್ರತಕ್ಕೆ ವಿರೋಧವನ್ನು ಮಾಡಬಾರದು ಎಂದು ಕೇಳಿಕೊಂಡೆನು. ಅದಕ್ಕೆ ಮೋಹಿನಿಯು ಏಕಾದಶೀವ್ರತದಲ್ಲಿ ಅಷ್ಟು ಭಕ್ತಿಯಿರುವ ಪಕ್ಷದಲ್ಲಿ ನಿನ್ನ ಮಗನ ತಲೆಯನ್ನು ಕತ್ತರಿಸಿಕೊಡು ಎಂದು ಹೇಳಿದಳು. ಅದನ್ನು ಕೇಳಿ ನಾನು ಇಲ್ಲಿಗೆ ಬಂದಿರುವೆನು' ಎಂದು ಹೇಳಿದಳು.

ಈರೀತಿಯಾಗಿ ತಾಯಿಯ ಮಾತನ್ನು ಕೇಳಿ ತಂದೆತಾಯಿಗಳು ಹಿತದಲ್ಲಿ ಆಸಕ್ತನಾದ ಮಗನು ಬೇಗನೆ ಎದ್ದು ತಾಯಿಯೊಡನೆ ಬಂದನು. ಮೂರ್ಛಿತನಾದ ತಂದೆಯನ್ನು ಎಬ್ಬಿಸಿ 'ತಂದೆಯೇ! ಮೋಹಿನಿಯ ಸಂತೋಷಕ್ಕಾಗಿ ನನ್ನ ತಲೆಯನ್ನು ಕಡಿದುಕೊಡಿರಿ. ಏಕಾದಶೀವ್ರತವನ್ನು ಮಾಡಿರಿ' ಎಂದನು. ಅದನ್ನು ಕೇಳಿ ರಾಜನು ಎದ್ದು ಮಗನ ತಲೆಯನ್ನು ಕಡಿಯಲು ಕತ್ತಿಯನ್ನು ಎತ್ತಿದನು. ತಂದೆ ತಾಯಿ ಮಗ ಈ ಮೂರು ಜನರ ಏಕಾದಶೀವ್ರತದಲ್ಲಿ ಐಕಮತ್ಯವನ್ನು ನೋಡಿ ಇಂದ್ರಾದಿ ದೇವತೆಗಳೆಲ್ಲರೂ ಸಂತೋಷದಿಂದ ಬಂದು ರುಕ್ಮಾಂಗದ ರಾಜನೊಡನೆ 'ರಾಜನೇ! ನಮ್ಮ ಮಾತನ್ನು ಕೇಳು. ಮಗನನ್ನು ಕೊಲ್ಲಬೇಡ. ನಿನ್ನ ಭಕ್ತಿಯಿಂದ ನಾವೆಲ್ಲರೂ ಸಂತುಷ್ಟರಾಗಿರುವೆವು. ಪೂರ್ವದಂತೆಯೇ ಏಕಾದಶೀ ವ್ರತವನ್ನು ಮಾಡು. ನೀನೇ ಲೋಕದಲ್ಲಿ ಸತ್ಪುತ್ರನುಳ್ಳವನು. ನೀನೇ ಲೋಕದಲ್ಲಿ ಐಶ್ವರ್ಯವಂತನು. ಇಂತಹ ಮಗನು ನಿನ್ನ ಹೊಟ್ಟೆಯಿಂದ ಬಂದಿರುವನು. ಮಕ್ಕಳಿಗೆ ತಂದೆತಾಯಿಗಳ ಸೇವೆಯೇ ಮುಖ್ಯಧರ್ಮವು. ಇಂತಹ ಮಗನಿಂದ ನೀನು ಮೋಕ್ಷಮಾರ್ಗವನ್ನು ಹೊಂದಿರುವಿ ಎಂದು ಹೇಳಿದರು. ತರುವಾಯ ರಾಜನು ಕತ್ತಿಯನ್ನು ಕೆಳಗೆ ಹಾಕಿದನು.

ಆಗ ಮೋಹಿನಿಯು ದೇವತೆಗಳೊಡನೆ ನನಗೆ ಇಹಲೋಕ ಪರಲೋಕ ಎರಡೂ ಇಲ್ಲದಂತಾಯಿತು. ದೇವತೆಗಳೇ! ನನಗೇನಾದರೊಂದು ಉಪಾಯವನ್ನು ಹೇಳಿರಿ ಎಂದಳು. ಅದಕ್ಕೆ ಅವರು ಚಾತುರ್ಮಾಸ್ಯಕಾಲದಲ್ಲಿ ಏಕಾದಶೀ ಉಪವಾಸ ಮಾಡಿ ಈ ಕೊನೆಯ ಏಕಾದಶಿಯಲ್ಲಿ ಯಾರು ಉಪವಾಸ ಮಾಡುವುದಿಲ್ಲವೇ ಅವರು ಮಾಡಿದ ಎಲ್ಲಾ ಏಕಾದಶೀ ಫಲವೂ ನಿನಗೆ ಆಗುವುದು. ಇದರಿಂದ ಜನರು ಯಮಲೋಕವನ್ನು ಹೊಂದುವರು. ನಿನ್ನ ಕಾರ್ಯವೂ ಯಮದೇವರ ಕಾರ್ಯವು ಆಗುವುದು. ಇನ್ನು ಬೇಗನೇ ರಾಜನನ್ನು ಬಿಟ್ಟು ಹೋಗು' ಎಂದರು.

ಮೋಹಿನಿಯು ದೇವತೆಗಳಿಗೆ ನಮಸ್ಕರಿಸಿ ಪತ್ನೀಪುತ್ರರಿಂದ ಸಹಿತನಾದ ರಾಜನಿಗೆ ಬಹುಮಾನಿಸಿ ಸಂತೋಷದಿಂದ ತನ್ನ ಲೋಕಕ್ಕೆ ಹೊರಟುಹೋದಳು. ದೇವತೆಗಳು ಸತ್ಕೃತರಾಗಿ ತಮ್ಮ ಲೋಕಕ್ಕೆ ಹೋದರು. ಪತ್ನೀಪುತ್ರರಿಂದ ಕೂಡಿಕೊಂಡು ರಾಜನು ಪೂರ್ವದಂತೆ ಏಕಾದಶೀ ವ್ರತವನ್ನು ಮಾಡಿದನು. ಜನರಿಗೆ

ಉಪದೇಶಿಸುತ್ತಾ ಕೆಲವು ಸಮಯವಿದ್ದು ಆಮೇಲೆ ಮಗನಾದ ಧರ್ಮಾಂಗದನಿಗೆ ರಾಜ್ಯವನ್ನು ಒಪ್ಪಿಸಿ ವನಕ್ಕೆ ಹೋದನು. ಅಲ್ಲಿ ತಪಸ್ಸು ಮಾಡಿ ಪರಮಾತ್ಮನನ್ನು ಆರಾಧಿಸಿ ಪತ್ನೀಸಹಿತನಾಗಿ ದೇಹವನ್ನು ಪರಿತ್ಯಜಿಸಿ ಮೋಕ್ಷವನ್ನು ಹೊಂದಿದನು.

ಮಗನಾದ ಧರ್ಮಾಂಗದನೂ ತಂದೆಯಂತೆಯೇ ಧರ್ಮವನ್ನು ಉಪದೇಶಿಸುತ್ತಾ ರಾಜ್ಯಭಾರ ಮಾಡಿದನು. ಅವನೂ ಸ್ವಲ್ಪ ಸಮಯ ರಾಜ್ಯಭಾರವನ್ನು ಮಾಡಿ ಈಲೋಕದಲ್ಲಿ ಬೇಕಾದ ಭೋಗಗಳನ್ನು ಅನುಭವಿಸಿ ಮೋಕ್ಷವನ್ನು ಹೊಂದಿದನು. ಆದುದರಿಂದ ಏಕಾದಶೀವ್ರತಕ್ಕೆ ಸಮಾನವಾದ ವ್ರತವು ಬೇರೊಂದು ಇರುವುದಿಲ್ಲ.



## ದ್ವಾದಶೀಮಹಿಮೆಯು [1]

ಪಾರ್ವತೀದೇವಿಯರು ರುದ್ರದೇವರೊಡನೆ 'ದ್ವಾದಶೀವಿಧಾನವನ್ನೂ ಪರಮಾತ್ಮನ ಪೂಜಾವಿಧಾನವನ್ನು ಸರ್ವಪಾಪಪರಿಹಾಕವಾದ ಏಕಾದಶಿಯ ಮಹಿಮೆಯನ್ನು ಹೇಳಬೇಕು' ಎಂದು ಕೇಳಿದರು.

ರುದ್ರದೇವರು 'ದೇವಿ! ದ್ವಾದಶಿಯ ವಿಧಾನವನ್ನು ಹೇಳುತ್ತೇನೆ. ಅದರ ಸ್ಮರಣೆ ಮಾತ್ರದಿಂದಲೇ ಪರಮಾತ್ಮನು ಸಂತುಷ್ಟನಾಗುವನು. ಏಕಾದಶಿಯಲ್ಲಿ ಉಪವಾಸ ಮಾಡಿ ಸರ್ವಪಾಪರಹಿತರಾಗಿ ಪರಮಾತ್ಮನ ಲೋಕವನ್ನು ಹೊಂದುವರು. ದ್ವಾದಶಿಯಲ್ಲಿ ಪೂಜೆಯನ್ನು ಮಾಡುವುದರಿಂದ ಏಳು ಜನ್ಮಗಳಲ್ಲಿ ತಿಳಿದೋ ತಿಳಿಯದೆಯೋ ಮಾಡಿದ ಪಾಪವು ಪರಿಹೃತವಾಗುವುದು. ಸಾವಿರ ಅಶ್ವಮೇಧಗಳೂ ನೂರು ವಾಜಪೇಯಯಾಗಗಳೂ ಒಂದು ಏಕಾದಶೀ ಉಪವಾಸದ ಫಲದ ಹದಿನಾರನೇ ಒಂದಂಶ ಫಲವನ್ನು ಉಂಟುಮಾಡಲಾರವು. ದ್ವಾದಶಿಯು ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುವುದು. ಸರ್ವಾಭೀಷ್ಟವನ್ನು ಕೊಡುವುದು. ಏಕಾದಶಿಗೆ ಸಮಾನವಾದದ್ದು ಪಾಪಪರಿಹಾರಕವಾದದ್ದು ಮತ್ತೊಂದು ಇರುವುದಿಲ್ಲ. ಏಕಾದಶಿಗೆ ಸಮಾನವಾದ ಯಾವ ವ್ರತವೂ ಇರುವುದಿಲ್ಲ. ಏಕಾದಶಿಯನ್ನು ಬಿಟ್ಟು ಭಿಕ್ಷಾನ್ನವನ್ನು ಬೇಡುವವನಿಗೆ ಸಮಾನನಾಗುವನು. ಮನಸ್ಸಿನಿಂದ ಸಹಿತವಾದ ಹನ್ನೊಂದು ಇಂದ್ರಿಯಗಳಿಂದ ಮಾಡಿದ ಪಾಪವು ಎಲ್ಲವೂ ಏಕಾದಶೀ ಉಪವಾಸದಿಂದ ನಾಶವನ್ನು ಹೊಂದುವುದು. ಏಕಾದಶಿಯು ಬರುತ್ತಿರಲು ಭೋಜನವನ್ನು

ಮಾಡಬಾರದು. ಭೋಜನವನ್ನು ಮಾಡಬಾರದು ಎಂದು ಪುರಾಣಗಳು ಕೂಗು ತ್ತಿರುವುವು. ಏಕಾದಶಿಯಲ್ಲಿ ಒಬ್ಬರನ್ನು ಊಟ ಮಾಡು ಎಂದೂ ಹೇಳಬಾರದು. **ಎಲ್ಲಾ ಜಾತಿಯವರೂ ಎಲ್ಲಾ ಆಶ್ರಮದವರೂ ಹೆಂಗಸರೂ ಏಕಾದಶಿ ಉಪವಾಸವನ್ನು ಮಾಡಲೇಬೇಕು. ಏಕಾದಶಿಯಲ್ಲಿ ತಂದೆತಾಯಿಗಳು ಮೃತರಾದರೆ ಅವರ ಶ್ರಾದ್ಧವನ್ನು ದ್ವಾದಶೀದಿನದಲ್ಲಿಯೇ ಮಾಡಬೇಕು.** ಏಕಾದಶೀದಿನದಲ್ಲಿ ಮಾಡಬಾರದು. ಏಕಾದಶಿ ಯಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳೂ ದೇವತೆಗಳೂ ಸ್ವೀಕರಿಸಲಾರರು. ಏಕಾದಶೀ ಯಲ್ಲಿ ಭೋಜನ ಮಾಡುವುದೂ ಮದ್ಯಪಾನವನ್ನು ಮಾಡುವುದು ಬ್ರಾಹ್ಮಣನನ್ನು ಕೊಲ್ಲುವುದೂ ಮೂರು ಸಮಾನವಾದದ್ದು. ಆದುದರಿಂದ ಏಕಾದಶಿಯಲ್ಲಿ ಉಪವಾಸ ಮಾಡಬೇಕು.

ಆದರೆ ದಶಮೀ ಸಂಬಂಧವುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಬಾರದು. ಏಕಾದಶೀ ಅರುಣೋದಯ ಕಾಲದಲ್ಲಿ ದಶಮೀಯು ಇದ್ದರೆ ಆ ಏಕಾದಶಿಯಲ್ಲಿ ಉಪವಾಸ ಮಾಡಬಾರದು. ತ್ರಯೋದಶೀಯಲ್ಲಿ ಸೂರ್ಯೋದಯ ಸಮಯದಲ್ಲಿ ಕಲಾಮಾತ್ರ ದ್ವಾದಶಿಯಿದ್ದರೂ ಪೂರ್ವದ್ವಾದಶಿಯಲ್ಲಿಯೂ ಉಪವಾಸ ಮಾಡ ಬೇಕು. ಕಲಾಮಾತ್ರ ದ್ವಾದಶಿಯಿದ್ದರೆ ಅರುಣೋದಯ ಸಮಯದಲ್ಲಿ ಸರ್ವ ಕಾರ್ಯವನ್ನು ಮುಗಿಸಿ ಆ ಅಲ್ಪ ದ್ವಾದಶಿಯಲ್ಲಿಯೇ ಪಾರಣೆಯನ್ನು ಮಾಡಬೇಕು. ಪೂರ್ವದಿನದಲ್ಲಿ ಸಂಪೂರ್ಣ ಏಕಾದಶಿಯಿದ್ದು ಮರುದಿವಸ ಕಲಾಮಾತ್ರ ಏಕಾದಶಿಯಿದ್ದರೂ ಪೂರ್ವದಿವಸದಲ್ಲಿ ಉಪವಾಸ ಮಾಡದೆ ಮರುದಿವಸವೇ ಉಪವಾಸ ಮಾಡಬೇಕು. ದಶಮೀ ದ್ವಾದಶಿಗಳಲ್ಲಿ ಸಾಯಂಕಾಲದ ಭೋಜನವನ್ನು ಏಕಾದಶಿಯಲ್ಲಿ ಎರಡು ಹೊತ್ತಿನ ಭೋಜನವನ್ನು ಈರೀತಿಯಾಗಿ ನಾಲ್ಕು ಭೋಜನವನ್ನು ಬಿಟ್ಟು ಈ ವ್ರತವನ್ನು ಮಾಡಬೇಕು. ಸ್ತ್ರೀ ಸಂಬಂಧರಹಿತನಾಗಿ ನೆಲದಲ್ಲಿ ಮಲಗುವವನಾಗಬೇಕು. ಏಕಾದಶಿಯಲ್ಲಿ ಸಂಧ್ಯಾವಂದನೆ ದೇವರಪೂಜೆ ಗಳನ್ನು ಮಾಡಿ ಉಪವಾಸ ಮಾಡಿ ರಾತ್ರಿಯೂ ದೇವರ ಪೂಜೆಯನ್ನು ಮಾಡಬೇಕು.

ಏಕಾದಶಿಯಲ್ಲಿ ಪಾಷಂಡಿಯೊಡನೆಯೂ ವಿಕರ್ಮಸ್ಥನೊಡನೆಯೂ ಪತಿತ ನೊಡನೆಯೂ ಚಂಡಾಲನೊಡನೆಯೂ ಮಾತಾಡಬಾರದು. ಅವರನ್ನು ನೋಡ ಬಾರದು. ಅವರನ್ನು ಮುಟ್ಟಬಾರದು. ಅವೈಷ್ಣವನಾದ ಬ್ರಾಹ್ಮಣನು ಪಾಷಂಡಿ ಯೆನ್ನಿಸುವನು. ತಲೆಕೂದಲೂ ಯಜ್ಞೋಪವೀತಗಳಿಂದ ರಹಿತನಾದವನು ವಿಕರ್ಮಸ್ಥನೆನ್ನಿಸುವನು. ಮಹಾಪಾಪ ಉಪಪಾತಕಗಳಿಂದ ಕೂಡಿದವನು ಪತಿತ ನೆಂದು ಹೇಳಲ್ಪಡುವನು. ರಾತ್ರಿಯಲ್ಲಿ ದೇವರನ್ನು ಪೂಜಿಸಿ ಜಾಗರವನ್ನು

ಮಾಡಬೇಕು. ರಾತ್ರಿಯಲ್ಲಿ ಗಂಧಪುಷ್ಪ ದೀಪ ವಸ್ತ್ರ ಆಭರಣ ಜಪಸ್ತೋತ್ರ ನಮಸ್ಕಾರ ಇವುಗಳಿಂದ ಪರಮಾತ್ಮನನ್ನು ಪೂಜಿಸಬೇಕು.

ತರುವಾಯ ಬೆಳಗಾಗಲು ತುಲಸೀ ಮಿಶ್ರಿತವಾದ ನೀರಿನಿಂದ ಸ್ನಾನಮಾಡಿ ರಮಾದೇವಿಯರಿಂದ ಸಹಿತನಾದ ಪರಮಾತ್ಮನನ್ನು ಪೂಜಿಸಬೇಕು. ಕೋಮಲ ತುಲಸೀದಳಗಳಿಂದಲೂ ವಾಸನೆಯುಳ್ಳ ಪುಷ್ಪಗಳಿಂದಲೂ ಪೂಜೆಯನ್ನು ಮಾಡಬೇಕು. ಅನೇಕ ದೀಪಗಳನ್ನು ಇಡಬೇಕು. ತಾವರೆಹೂವಿನ ಮಾಲೆಯನ್ನು ದೇವರಿಗೆ ಹಾಕಬೇಕು. ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸಬೇಕು. ಸಕ್ಕರೆ ಹಾಕಿದ ಪಾಯಸವನ್ನು ಸಮರ್ಪಿಸಬೇಕು. ಪಚ್ಚಕರ್ಪೂರ ಸಹಿತವಾದ ತಾಂಬೂಲ ವನ್ನು ಸಮರ್ಪಿಸಬೇಕು. ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಪುರುಷಸೂಕ್ತ ಮಂತ್ರದಿಂದ ನೂರೆಂಟು ತುಪ್ಪದ ಆಹುತಿಗಳನ್ನು ಹೋಮಮಾಡ ಬೇಕು. ಹಾಗೆಯೇ ಶ್ರೀಸೂಕ್ತದಿಂದ ಪಾಯಸದಿಂದ ಹೋಮಮಾಡಬೇಕು. ಆಮೇಲೆ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ತಾನೂ ಮೌನದಿಂದ ಭೋಜನ ಮಾಡಬೇಕು. ಪುರಾಣಾದಿಗಳನ್ನು ಪಠಿಸುತ್ತಾ ಆ ದಿನವನ್ನು ಕಳೆಯಬೇಕು. ರಾತ್ರಿಯಲ್ಲಿ ಬ್ರಹ್ಮಚಾರಿಯಾಗಿ ನೆಲದಲ್ಲಿ ಮಲಗಬೇಕು. ಈರೀತಿಯಾಗಿ ದ್ವಾದಶಿ ಯಲ್ಲಿ ಪರಮಾತ್ಮನನ್ನು ಪೂಜಿಸಿದರೆ ಪರಮಾತ್ಮನು ಪ್ರಸನ್ನನಾಗಿ ಸರ್ವಾಭೀಷ್ಟವನ್ನೂ ಕೊಡುವನು' ಎಂದು ಹೇಳಿದರು.



# ಶ್ರವಣದ್ವಾದಶೀವ್ರತದ ಮಹಿಮೆ [1]

ರುದ್ರದೇವರು ನಾರದರಿಗೆ ಹೇಳಿದರು—ಭಾದ್ರಪದ ಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಶ್ರವಣನಕ್ಷತ್ರವು ಬಂದರೆ ಅದು ಉಪವಾಸಕ್ಕೆ ಅರ್ಹವಾದದ್ದು. ಆ ದಿವಸದಲ್ಲಿ ನದೀಸಂಗಮದಲ್ಲಿ ಸ್ನಾನಮಾಡಿ ಉಪವಾಸ ಮಾಡಿದರೆ ಹನ್ನೆರಡು ಏಕಾದಶೀ ಉಪವಾಸ ಮಾಡಿ ದ್ವಾದಶೀಪಾರಣ ಮಾಡಿದ ಫಲವು ಬರುವುದು. ಅದೂ ಬುಧವಾರದಲ್ಲಿ ಬಂದರೆ ಅತಿ ಪ್ರಶಸ್ತವಾದದ್ದು. ಆ ದಿನದಲ್ಲಿ ಮಾಡಿದ ಎಲ್ಲಾ ಪುಣ್ಯಕಾರ್ಯವೂ ಅಕ್ಷಯಫಲವುಳ್ಳದ್ದಾಗುವುದು. ಈ ದಿವಸದಲ್ಲಿ ನದೀಸಂಗಮ

1. ಬ್ರಹ್ಮಾಂಡಪುರಾಣ–ಭಾದ್ರಪದಮಾಸ ಮಹಾತ್ಮೆಯಲ್ಲಿ ಇಂತಹುದೇ ಕಥೆ ಇದೆ. ಪ.ಪು.ದಲ್ಲೂ ಇದೆ.

ದಲ್ಲಿ ಸ್ನಾನಮಾಡಿ ಗೋದಾನ ಮಾಡಿದ ಫಲವು ಬರುವುದು. ಆ ದಿವಸದಲ್ಲಿ ಜಲಪೂರ್ಣವಾದ ಕಲಶವನ್ನು ಸ್ಥಾಪಿಸಬೇಕು. ಅದರ ಮೇಲೆ ಒಂದು ಪಾತ್ರೆಯನ್ನು ಇಟ್ಟು ಅದರಲ್ಲಿ ಪರಮಾತ್ಮನ ಪ್ರತಿಮೆಯನ್ನು ಇಟ್ಟು ಪೂಜಿಸಬೇಕು. ಶಕ್ತಿಯಿದ್ದರೆ ಒಂಭತ್ತು ಉದಕುಂಭಗಳನ್ನು ದಾನಮಾಡಬೇಕು. ಪರಮಾತ್ಮನನ್ನು ಪೂಜಿಸಿ ರಾತ್ರಿಯಲ್ಲಿ ಜಾಗರವನ್ನು ಮಾಡಬೇಕು. ಮರುದಿನ ಬೆಳಿಗ್ಗೆ ಸ್ನಾನ ಮಾಡಿ ಪರಮಾತ್ಮನಿಗೆ ಪೂಜಿಸಿ ಭಗವಂತನನ್ನು ಪ್ರಾರ್ಥಿಸಿ ವೇದವೇದಾಂಗ ಶಾಸ್ತ್ರಪಾರಂಗತ ನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಈರೀತಿಯಾಗಿ ನದೀತೀರದಲ್ಲಿ ಮಾಡಬೇಕು.

ಈ ವ್ರತದ ಮಹಿಮೆಯ ವಿಷಯದಲ್ಲಿ ಒಂದು ಇತಿಹಾಸವಿರುವುದು—ಪಶ್ಚಿಮ ಭಾಗದಲ್ಲಿ ದಾಶೇರಕವೆಂಬ ದೇಶವಿರುವುದು. ಅಲ್ಲಿ ಎಲ್ಲಾ ಪ್ರಾಣಿಗಳಿಗೂ ಭಯಂಕರವಾದ ಮರುದೇಶವಿರುವುದು. ಅಲ್ಲಿ ಉಸುಬು ಬಿಸಿಲಿಗೆ ಕಾದು ಹೋಗಿರುವುದು. ಅಲ್ಲಿ ದುಷ್ಟಹಾವುಗಳು ಇರುವುವು. ಅಲ್ಲಿ ಮರದ ನೆರಳೇ ಹೆಚ್ಚಿಗೆ ಇರಲಾರದು. ಪ್ರಾಣಿಗಳೆಲ್ಲವೂ ಸತ್ತು ಬಿದ್ದಿರುವುವು. ಅಲ್ಲಿ ಮುಳ್ಳಿನ ಮರಗಳಿರು ವುವು. ಅನೇಕ ಪ್ರಾಣಿಗಳು ಸುಟ್ಟು ಹೋಗಿರುವುವು. ಆದರೂ ಕರ್ಮಾನುಸಾರವಾಗಿ ಪ್ರಾಣಿಗಳು ಅಲ್ಲಿ ಜೀವಿಸುತ್ತಿದ್ದವು. ಅಲ್ಲಿ ನೀರು ಸಿಗಲಾರದು. ನೀರುಳ್ಳ ಮೇಘಗಳೂ ಬರುತ್ತಿದ್ದಿಲ್ಲ. ಪಕ್ಷಿಗಳು ನೀರಡಿಕೆಯುಳ್ಳ ತಮ್ಮ ಶಿಶುಗಳನ್ನು ರೆಕ್ಕೆಯ ಸಂದುಗಳಲ್ಲಿ ಇಟ್ಟುಕೊಂಡು ನೀರಿಲ್ಲದೆ ತಮ್ಮ ಶಿಶುಗಳಿಂದ ಸಹಿತವಾಗಿ ಪ್ರಾಣಬಿಡುತ್ತಿದ್ದವು.

ಅಂತಹ ಮರುದೇಶದಲ್ಲಿ ಒಬ್ಬ ವೈಶ್ಯನು ತಮ್ಮವರ ಗುಂಪಿನಿಂದ ತಪ್ಪಿಹೋದವನಾಗಿ ಬಂದು ಸೇರಿದನು. ಹಸಿವೆ ದಾಹದಿಂದ ಕೂಡಿದವನಾಗಿ ಸುತ್ತಿದನು. 'ಎಲ್ಲಿ ಗ್ರಾಮವಿದೆ? ಎಲ್ಲಿ ನೀರು ಇದೆ? ಎಲ್ಲಿಗೆ ಹೋಗಲಿ?' ಎಂದು ತಿಳಿಯಲಿಲ್ಲ. ತರುವಾಯ ಹಸಿವೆ ದಾಹದಿಂದ ಕೂಡಿದ ಪ್ರೇತಗಳನ್ನು ನೋಡಿದನು. ಎಲ್ಲಾ ಕಪ್ಪಾಗಿದ್ದವು. ಭಯಂಕರವಾಗಿದ್ದವು. ಅವುಗಳ ಮೈಯಲ್ಲಿ ಮಾಂಸವೇ ಇರಲಿಲ್ಲ. ಆಪ್ರೇತಗಳ ಮಧ್ಯದಲ್ಲಿ ಒಂದು ಪ್ರೇತದ ಮೇಲೆ ಮತ್ತೊಂದು ದೊಡ್ಡ ಪ್ರೇತವು ಕೂತುಕೊಂಡಿತ್ತು. ಚಿಕ್ಕಪ್ರೇತವು ದೊಡ್ಡ ಪ್ರೇತವನ್ನು ಹೊತ್ತುಕೊಂಡು ಬರುತ್ತಿದ್ದಿತು. ಸುತ್ತಲೂ ಪ್ರೇತಗಳು ಬರುತ್ತಿದ್ದವು. ಆ ಭಯಂಕರವಾದ ದೊಡ್ಡ ಪ್ರೇತವು ಘೋರವಾದ ಅರಣ್ಯಕ್ಕೆ ಬಂದಿದ್ದ ಆ ವೈಶ್ಯನನ್ನು ನೋಡಿ ಪ್ರೇತದ ಹೆಗಲಿನಿಂದ ಕೆಳಗೆ ಇಳಿದು ಆ ವೈಶ್ಯನ ಬಳಿಗೆ ಬಂದು ನಮಸ್ಕರಿಸಿ 'ಈ ಘೋರದೇಶದಲ್ಲಿ ನಿನ್ನ ಪ್ರವೇಶವು ಹೇಗೆ ಆಯಿತು?' ಎಂದು ಕೇಳಿತು. ಅದಕ್ಕೆ

ವೈಶ್ಯನು ನಮ್ಮವರ ಗುಂಪನ್ನು ತಪ್ಪಿ ಬಂದುಬಿಟ್ಟೆನು. ದೈವೇಚ್ಛೆಯಿಂದ ಪೂರ್ವ ಪಾಪದಿಂದ ಇಲ್ಲಿಗೆ ಬಂದು ಸೇರಿದೆನು. ನನಗೆ ತುಂಬಾ ಹಸಿವೆದಾಹಗಳು ಪೀಡಿಸುತ್ತಿರುವುವು. ಪ್ರಾಣವು ಹೋಗುವಂತೆ ಆಗುತ್ತಿದೆ. ದೇಹವು ಸುತ್ತುವಂತೆ ಆಗುತ್ತದೆ. ಹೇಗೆ ಬದುಕುವೆನೆಂದು ತಿಳಿಯಲಿಲ್ಲ' ಎಂದು ಹೇಳಿದನು.

ಅದನ್ನು ಕೇಳಿ ಪ್ರೇತವು 'ಇಲ್ಲಿರುವ ಶಮೀಮರದ ಬುಡದಲ್ಲಿ ಒಂದು ಮುಹೂರ್ತಕಾಲ ನೋಡುತ್ತಿರು. ನನ್ನ ಆತಿಥ್ಯವನ್ನು ಸ್ವೀಕರಿಸಿ ಮುಂದೆ ಹೋಗುವಿ' ಎಂದು ಹೇಳಿತು. ವೈಶ್ಯನು ಹಾಗೆಯೇ ಆಗಲಿ ಎಂದು ಹೇಳಿ ಹಾಗೆಯೇ ಅಲ್ಲಿಯೇ ಇದ್ದನು. ಮಧ್ಯಾಹ್ನವಾಗಲು ಆ ಪ್ರೇತವು ಅಲ್ಲಿಗೆ ಬಂದಿತು. ಆ ಶಮೀಮರದಿಂದ ಮನೋಹರವಾದ ತಣ್ಣಗಿರುವ ನೀರಿನ ಧಾರೆಯನ್ನೂ ಮೊಸರನ್ನೂ ಕೆಳಗೆ ಇಳಿಸಿ ಸಂತೋಷದಿಂದ ಆ ಅತಿಥಿಗೆ ಕೊಟ್ಟಿತು. ವೈಶ್ಯನು ಅದನ್ನು ಭೋಜನ ಮಾಡುವ ಮಾತ್ರದಿಂದ ತೃಪ್ತಿಯನ್ನು ಹೊಂದಿದನು. ಅವನ ನೀರಡಿಕೆಯೂ ಹಸಿವೆಯೂ ಅಡಗಿತು. ತರುವಾಯ ಎಲ್ಲಾ ಪ್ರೇತಗಳೂ ಅಲ್ಲಿಗೆ ಬಂದವು. ಮೊಸರನ್ನವನ್ನೂ ನೀರನ್ನೂ ಸ್ವೀಕರಿಸಿ ಅತ್ಯಂತ ತೃಪ್ತಿಯನ್ನು ಹೊಂದಿದವು. ಅತಿಥಿಯನ್ನು ಭೋಜನ ಮಾಡಿಸಿ ಎಲ್ಲಾ ಪ್ರೇತಗಳಿಗೂ ಭೋಜನ ಮಾಡಿಸಿ ಆ ದೊಡ್ಡ ಪ್ರೇತವೂ ಭೋಜನ ಮಾಡಿತು. ಅದು ಭೋಜನ ಮಾಡಿ ಮುಗಿಸಲು ಆ ಮರದಿಂದ ಮೊಸರನ್ನವೂ ಹಾಲೂ ಸುರಿಯುವುದು ನಿಂತುಹೋಯಿತು. ತರುವಾಯ ಆ ದೊಡ್ಡ ಪ್ರೇತದೊಡನೆ ವೈಶ್ಯನು 'ಈ ವನದಲ್ಲಿ ತುಂಬಾ ಆಶ್ಚರ್ಯವಾಗಿ ಕಾಣಿಸುತ್ತದಲ್ಲಾ! ಇಲ್ಲಿ ಅನ್ನವೂ ನೀರು ನಿನಗೆ ಹೇಗೆ ಬಂದಿತು? ಬಂದ ಸ್ವಲ್ಪ ಅನ್ನದಿಂದಲೇ ಬಹುಜನರನ್ನು ಹೇಗೆ ತೃಪ್ತಿಪಡಿಸಿದಿ? ಈ ಭಯಂಕರವಾದ ಕಾಡಿನಲ್ಲಿ ಹೇಗೆ ವಾಸಮಾಡುತ್ತಿರುವಿರಿ?' ಎಂದು ಕೇಳಿದನು.

ಅದಕ್ಕೆ ದೊಡ್ಡ ಪ್ರೇತವು 'ಪೂರ್ವದಲ್ಲಿ ವ್ಯಾಪಾರಮಾಡುತ್ತಲೇ ನನ್ನ ಜನ್ಮವು ಕಳೆದುಹೋಯಿತು. ಸಕಲನಗರದಲ್ಲಿ ನನಗಿಂತ ಬೇರೆ ದುರಾತ್ಮನಿರುವುದಿಲ್ಲ. ನಾನು ಹಣದ ಲೋಭದಿಂದ ಒಬ್ಬರಿಗೂ ಭಿಕ್ಷೆಯನ್ನು ಕೊಡಲಿಲ್ಲ. ಒಬ್ಬ ಗುಣವಂತನಾದ ಬ್ರಾಹ್ಮಣನಿದ್ದನು. ಅವನು ಒಂದು ಶ್ರವಣನಕ್ಷತ್ರದಿಂದ ಕೂಡಿದ ಭಾದ್ರಪದಮಾಸದ ದ್ವಾದಶಿಯಲ್ಲಿ ನನ್ನೊಡನೆ ತಾಪೀಯೆಂಬ ನದಿಗೆ ಹೋದನು. ತಾಪೀನದಿಗೂ ಚಂದ್ರಭಾಗಾನದಿಗೂ ಸಂಗಮವಾದ ಸ್ಥಳಕ್ಕೆ ಹೋದನು. ಚಂದ್ರಭಾಗೆಯು ಚಂದ್ರನು ಪುತ್ರಿಯು. ತಾಪಿಯು ಸೂರ್ಯನ ಪುತ್ರಿಯು. ಆ ನದಿಗಳ ಶೀತೋಷ್ಣ ಜಲದಲ್ಲಿ ಶ್ರವಣದ್ವಾದಶಿಯಲ್ಲಿ ಸ್ನಾನಮಾಡಿದನು. ಜನರನ್ನು ಸಂತೋಷಪಡಿಸಿದನು.

ಬ್ರಾಹ್ಮಣರಿಗೆ ಚಂದ್ರಭಾಗಾನದಿಯ ನೀರಿನಿಂದ ಜಲದಾನ ವನ್ನು ಮಾಡಿದನು. ಮೊಸರನ್ನವನ್ನು ಛತ್ರವನ್ನೂ ಪಾದರಕ್ಷೆಯನ್ನೂ ವಸ್ತ್ರವನ್ನೂ ಪರಮಾತ್ಮನ ಪ್ರತಿಮೆಯನ್ನು ಬ್ರಾಹ್ಮಣ ಶ್ರೇಷ್ಠನಿಗೆ ದಾನ ಮಾಡಿದನು. ಹಣವನ್ನು ರಕ್ಷಿಸುವುದಕ್ಕಾಗಿ ನಾನು ಆ ನದಿಯ ತೀರದಲ್ಲಿ ವ್ರತವನ್ನು ಮಾಡಿದೆನು. ಉಪವಾಸ ಮಾಡಿ ಜಲದಾನವನ್ನು ಮಾಡಿದೆನು. ಆಮೇಲೆ ಮನೆಗೆ ಬಂದವನಾಗಿ ಕಾಲಾಂತರ ದಲ್ಲಿ ಮರಣವನ್ನು ಹೊಂದಿದೆನು. ತರುವಾಯ ನಾನು ನಾಸ್ತಿಕ್ಯಬುದ್ಧಿಯುಳ್ಳವನಾಗಿದ್ದ ಕಾರಣ ಪ್ರೇತನಾದೆನು. ಈ ಘೋರವಾದ ಅರಣ್ಯದಲ್ಲಿ ನಾನು ನೀರನ್ನು ದಾನಮಾಡಿದ್ದೆನು. ಆದುದರಿಂದ ಪ್ರತಿಮಧ್ಯಾಹ್ನವೂ ನನಗೆ ಅದು ಸಿಗುತ್ತದೆ. ಬ್ರಾಹ್ಮಣರ ಸೊತ್ತನ್ನು ಅಪಹರಿಸಿದವರೆಲ್ಲರೂ ಈ ಪ್ರೇತಗಳಾಗಿರುವರು. ಇವರಲ್ಲಿ ಕೆಲವರು ಪರಸ್ತ್ರೀಯರನ್ನು ಅಪಹರಿಸಿದವರು. ಕೆಲವರು ಸ್ವಾಮಿದ್ರೋಹವನ್ನು ಮಾಡಿದವರು. ಈರೀತಿ ಪ್ರೇತಗಳಾಗಿ ಹುಟ್ಟಿರುವರು. ಈ ಮರುದೇಶದಲ್ಲಿ ನನಗೆ ಮಿತ್ರರಾಗಿರುವರು. ಶ್ರೀಭಗವಂತನಿಗೆ ಸಮರ್ಪಿಸಿದ ಅನ್ನವು ಅಕ್ಷಯವಾಗುವುದು. ಆದುದರಿಂದ ಈ ಪ್ರೇತಗಳು ನಾನು ಪೂರ್ವಜನ್ಮದಲ್ಲಿ ಭಗವಂತನಿಗೆ ಸಮರ್ಪಿಸಿದ ಕಾರಣ ಅಕ್ಷಯವಾದ ಅನ್ನದಿಂದ ಈ ಪ್ರೇತಗಳೆಲ್ಲರೂ ಪುನಃಪುನಃ ತೃಪ್ತಿಯನ್ನು ಹೊಂದುತ್ತಿರುವರು. ಪ್ರೇತಗಳಾದ ಕಾರಣ ದೇಹದಲ್ಲಿ ದೌರ್ಬಲ್ಯವು ಮಾತ್ರ ಬಿಟ್ಟುಹೋಗುವುದಿಲ್ಲ. ಈಗ ಅತಿಥಿಯಾಗಿ ಬಂದಿರುವ ನಿನ್ನನ್ನು ಅನ್ನದಿಂದ ಪೂಜಿಸಿ ಪ್ರೇತತ್ವದಿಂದ ರಹಿತನಾಗಿ ಉತ್ತಮವಾದ ಗತಿಯನ್ನು ಹೊಂದುವೆನು. ನನ್ನಿಂದ ರಹಿತರಾಗಿ ಇನ್ನು ಮುಂದೆ ಈ ಅರಣ್ಯದಲ್ಲಿ ಘೋರವಾದ ಪೀಡೆಯನ್ನು ಅನುಭವಿಸುವವರು. ಮಹಾನುಭಾವನೇ! ನನ್ನ ಮೇಲೆ ಅನುಗ್ರಹ ಮಾಡುವುದಕ್ಕಾಗಿ ಪ್ರತ್ಯೇಕ ಇವರ ನಾಮಗೋತ್ರಗಳನ್ನು ತಿಳಿದುಕೊಂಡು ಹೋಗು. ಹಿಮವತ್ಪರ್ವತಕ್ಕೆ ಹೋಗು. ಅಲ್ಲಿ ನಿನಗೆ ನಿಧಿಯು ಸಿಕ್ಕುವುದು. ಅದರಿಂದ ನೀನು ಗಯೆಗೆ ಹೋಗಿ ಇವರೆಲ್ಲರಿಗೂ ಶ್ರಾದ್ಧವನ್ನು ಮಾಡು' ಎಂದು ಹೇಳಿ ಆ ವೈಶ್ಯನನ್ನು ಕೊಟ್ಟು ಕಳುಹಿಸಿದನು. ಆ ವೈಶ್ಯನು ಮನೆಗೆ ಬಂದು ಆಮೇಲೆ ಹಿಮವತ್ಪರ್ವತಕ್ಕೆ ಹೋದನು. ಅಲ್ಲಿ ಪ್ರೇತನು ಹೇಳಿದ ನಿಧಿಯನ್ನು ತೆಗೆದುಕೊಂಡು ಅದರಲ್ಲಿ ಆರನೇ ಒಂದು ಭಾಗವನ್ನು ಹಿಡಿದುಕೊಂಡು ಗಯೆಗೆ ಹೋಗಿ ಅಲ್ಲಿ ಶ್ರದ್ಧೆಯಿಂದ ಒಬ್ಬೊಬ್ಬರು ನಾಮಗೋತ್ರವನ್ನು ಹೇಳಿ ಪ್ರತ್ಯೇಕ ಪ್ರತ್ಯೇಕವಾಗಿ ಶ್ರಾದ್ಧವನ್ನು ಮಾಡಿದನು. ಯಾವದಿವಸದಲ್ಲಿ ಯಾವಾತನ ಶ್ರಾದ್ಧವನ್ನು ಮಾಡಿದನೋ ಆ ದಿವಸ ರಾತ್ರಿಯಲ್ಲಿ ಸ್ವಪ್ನದಲ್ಲಿ ಆ ಪ್ರೇತವು ಕಾಣಿಸಿಕೊಂಡು 'ಮಹಾನುಭಾವನೇ! ನಿನ್ನ

ಅನುಗ್ರಹದಿಂದ ನನ್ನ ಪ್ರೇತತ್ವವು ಹೋಯಿತು. ನಾನು ಉತ್ತಮಗತಿಯನ್ನು ಹೊಂದಿದೆನು' ಎಂದು ಹೇಳುತ್ತಿತ್ತು. ಈರೀತಿಯಾಗಿ ಗಯೆಯಲ್ಲಿ ಎಲ್ಲರಿಗೂ ಶ್ರಾದ್ಧವನ್ನು ಮಾಡಿ ಪರಮಾತ್ಮನನ್ನು ಧ್ಯಾನ ಮಾಡುತ್ತಾ ಮನೆಗೆ ಹೋದನು. ಭಾದ್ರಪದ ಮಾಸದ ಶುಕ್ಲಪಕ್ಷದ ದ್ವಾದಶೀದಿನದಲ್ಲಿ ಶ್ರವಣ ನಕ್ಷತ್ರವು ಬಂದಾಗ ನದೀಸಂಗಮಸ್ಥಳಕ್ಕೆ ಹೋಗಿ ಉಪವಾಸ ಮಾಡಿದನು. ಅಲ್ಲಿ ಸ್ನಾನಮಾಡಿ ಪರಮಾತ್ಮನಿಗೆ ಪೂಜೆಯನ್ನು ಮಾಡಿ ಬ್ರಾಹ್ಮಣನಿಗೆ ದಾನವನ್ನು ಮಾಡಿದನು.

ಆಮೇಲೆ ಯಾವಾಗಲೂ ಭಾದ್ರಪದ ಮಾಸದಲ್ಲಿ ಶ್ರವಣ ದ್ವಾದಶಿಯು ಬರುವಾಗ ಹೀಗೆಯೇ ಮಾಡುತ್ತಿದ್ದು ಬಹುಕಾಲ ಬದುಕಿದ್ದು ಆಮೇಲೆ ಮೃತ ನಾದನು. ಉತ್ತಮವಾದ ಲೋಕವನ್ನು ಹೊಂದಿದನು. ಆದುದರಿಂದ ಈ ಶ್ರವಣ ದ್ವಾದಶೀ ವ್ರತವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸೌಭಾಗ್ಯಪ್ರದ ವಾದದ್ದು. ಉತ್ತಮಬುದ್ಧಿಯನ್ನು ಉಂಟುಮಾಡತಕ್ಕದ್ದು. ಸರ್ವಪಾಪಪರಿಹಾರಕ ವಾದದ್ದು. ಈ ವ್ರತವನ್ನು ಮಾಡುವುದರಿಂದ ವಿಷ್ಣುಲೋಕಪ್ರಾಪ್ತಿಯಾಗುವುದು. (ಭಾದ್ರಪದ ಮಾಸದ ಶುಕ್ಲದ್ವಾದಶಿಯ ದಿನದಲ್ಲಿ ದ್ವಾದಶಿಯೂ ಹದಿನೈದು ಘಳಿಗೆ ಇದ್ದು ಶ್ರವಣನಕ್ಷತ್ರವೂ ಹದಿನೈದು ಘಳಿಗೆಯ ಮೇಲೆ ಇದ್ದರೆ ಮಾತ್ರ ಆ ದಿವಸದಲ್ಲಿ ಉಪವಾಸ ಮಾಡಬೇಕು. ನಕ್ಷತ್ರವೋ ದ್ವಾದಶಿಯೋ ಯಾವುದಾದರೂ ಒಂದಾ ದರೂ ಹದಿನೈದು ಘಳಿಗೆಗೆ ಕಡಿಮೆಯಾಗಿದ್ದರೆ ಉಪವಾಸ ಮಾಡಬಾರದು.)



## ಚೈತ್ರ ಶುಕ್ಲಪಕ್ಷದ ಏಕಾದಶೀ [1]

ಶ್ರೀಕೃಷ್ಣಪರಮಾತ್ಮನು ಧರ್ಮರಾಜನಿಗೆ ಏಕಾದಶಿಗಳ ಮಹಿಮೆಯನ್ನು ಹೇಳಿದ ನೆಂದು ನಾರದರಿಗೆ ರುದ್ರದೇವರು ಈ ಪ್ರಕಾರವಾಗಿ ನಿರೂಪಣ ಮಾಡಿದರು.

ಚೈತ್ರಮಾಸದ ಶುಕ್ಲಪಕ್ಷದ ಏಕಾದಶಿಗೆ **ಕಾಮದಾ** ಎಂದು ಹೆಸರು. ಇದು ಪರಮಪವಿತ್ರವಾದದ್ದು. ಪಾಪಪರಿಹಾರಕವಾದದ್ದು. ಅದರ ಮಹಿಮೆಯ ವಿಷಯದಲ್ಲಿ ಹೀಗೆ ಕಥೆಯಿರುವುದು—

ಪೂರ್ವದಲ್ಲಿ ಸರ್ಪಗಳ ನಗರದಲ್ಲಿ ಅನೇಕ ಸರ್ಪಗಳು ವಾಸಮಾಡುತ್ತಿದ್ದವು. ಅಲ್ಲಿ ಪುಂಡರೀಕ ಎಂಬ ಸರ್ಪನು ರಾಜನಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು. ಆ

1. ಪ.ಪು.ಉ.ಖಂ. ಅ.49

ಪುರದಲ್ಲಿ ಗಂಧರ್ವರೂ ಕಿನ್ನರರೂ ಅಪ್ಸರಸ್ತ್ರೀಯರೂ ವಾಸಮಾಡುತ್ತಿದ್ದರು. ಅಲ್ಲಿ ಲಲಿತಾ ಎಂಬ ಒಬ್ಬ ಅಪ್ಸರಸ್ತ್ರೀಯೂ ಲಲಿತ ಎಂಬ ಗಂಧರ್ವನೂ ಪರಸ್ಪರ ಅನುರಾಗದಿಂದ ದಂಪತಿಗಳಾಗಿ ಇದ್ದರು. ಧನಧಾನ್ಯಗಳಿಂದ ತುಂಬಿದ ಮನೋಹರವಾದ ತಮ್ಮ ಮನೆಯಲ್ಲಿ ಸುಖದಿಂದ ಇದ್ದರು. ಲತೆಯ ಮನಸ್ಸಿನಲ್ಲಿ ಯಾವಾಗಲೂ ಲಲಿತನು ಇರುವನು. ಲಲಿತನ ಮನಸ್ಸಿನಲ್ಲಿ ಲಲಿತೆಯು ಇರುವಳು. ಒಂದು ದಿನದಲ್ಲಿ ಲಲಿತೆಯಿಲ್ಲದೆ ಲಲಿತನೊಬ್ಬನೇ ಸಭೆಯಲ್ಲಿ ಗಾಯನವನ್ನು ಮಾಡುತ್ತಿದ್ದನು. ಆಗ ಅವನಿಗೆ ಲಲಿತೆಯ ಸ್ಮರಣೆಯು ಬಂದು ಹಾಡು ತಪ್ಪಿಹೋಯಿತು. ಇದನ್ನು ತಿಳಿದು ಕರ್ಕೋಟಕ ಎಂಬ ನಾಗನು ಪುಂಡರೀಕನೊಡನೆ ತಿಳಿಸಿದನು. ಅದನ್ನು ಕೇಳಿ ಪುಂಡರೀಕನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು 'ಪಾಪಿಯೇ! ನನ್ನ ಎದುರಲ್ಲಿ ಗಾಯನಮಾಡುವಾಗ ಹೆಂಡತಿಯನ್ನು ಸ್ಮರಿಸಿಕೊಂಡಿಯಾದ ಕಾರಣ ನೀನು ರಾಕ್ಷಸನಾಗು' ಎಂದು ಶಾಪವನ್ನು ಕೊಟ್ಟನು.

ಅದರಿಂದ ಲಲಿತನು ರಾಕ್ಷಸರೂಪವುಳ್ಳವನಾದನು. ಭಯಂಕರವಾದ ಮುಖ. ಭಯಂಕರವಾದ ಕಣ್ಣು. ನೋಡುವಾಗಲೇ ಭಯವಾಗುತ್ತಿತ್ತು. ಅವನ ಬಾಯಿಯು ಬಹುಯೋಜನ ವಿಸ್ತೀರ್ಣವಾಗಿ ದೊಡ್ಡ ಪರ್ವತದ ಗುಹೆಯಂತೆ ಇದ್ದಿತು. ಎರಡು ಕಣ್ಣುಗಳು ಸೂರ್ಯಚಂದ್ರರಂತೆ ಕಾಣಿಸುತ್ತಿದ್ದವು. ಮೂಗಿನ ದ್ವಾರಗಳು ಒಂದೊಂದು ಐದು ಮೈಲು ವಿಸ್ತಾರವಾಗಿದ್ದವು. ಅವನ ದೇಹವು ಎಂಬತ್ತು ಮೈಲು ಎತ್ತರವಾಗಿತ್ತು. ಈರೀತಿಯಾಗಿ ರಾಕ್ಷಸ ರೂಪವುಳ್ಳವನಾದನು. ಲಲಿತೆಯು ತನ್ನ ಗಂಡನ ಅವಸ್ಥೆಯನ್ನು ನೋಡಿ ತುಂಬಾ ದುಃಖಪಟ್ಟಳು. 'ನಾನು ಏನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಗಂಡನಿಗೆ ಇಂತಹ ಅವಸ್ಥೆಯು ಬಂದಿತಲ್ಲಾ!' ಎಂದು ಸ್ಮರಿಸಿ ಸ್ಮರಿಸಿ ಸುಖವನ್ನು ಹೊಂದಲಿಲ್ಲ. ಗಂಡನೊಟ್ಟಿಗೆ ಭಯಂಕರವಾದ ವನದಲ್ಲಿ ಸಂಚರಿಸಿದಳು. ಆ ರಾಕ್ಷಸನು ದಯಾಹೀನವಾಗಿ ಪಾಪದಲ್ಲಿ ಆಸಕ್ತನಾಗಿ ಮನುಷ್ಯ ರನ್ನು ತಿನ್ನುತ್ತಾ ಕಾಡಿನಲ್ಲಿ ಸುತ್ತಿದನು. ರಾತ್ರಿ ಹಗಲೂ ಅವನಿಗೆ ಸುಖವಾಗುವುದಿಲ್ಲ. ದುಃಖಪಡುವ ಗಂಡನನ್ನು ನೋಡಿ ಲಲಿತೆಯೂ ದುಃಖಪಡುತ್ತಿದ್ದಳು. ಅವನೊಡನೇ ಅಳುತ್ತಾ ವನದಲ್ಲಿ ಸಂಚರಿಸುತ್ತಿದ್ದಳು.

ಒಂದು ವನದಲ್ಲಿ ಮನೋಹರವಾದ ಆಶ್ರಮವನ್ನೂ ಅಲ್ಲಿ ಕೂತಿದ್ದ ಮುನಿಗಳನ್ನು ನೋಡಿ ಅವರ ಬಳಿಗೆ ಓಡಿದಳು. ಅವರಿಗೆ ನಮಸ್ಕಾರಮಾಡಿ ಅವರ ದುಃಖದಿಂದ ನಿಂತಳು. ದುಃಖಿತಳಾದ ಅವಳನ್ನು ನೋಡಿ ಮುನಿಗಳು ದಯಾವುಳ್ಳವ ರಾಗಿ 'ನೀನು ಯಾರು? ಯಾಕೆ ಇಲ್ಲಿಗೆ ಬಂದಿರುವಿ? ನನ್ನ ಮುಂಭಾಗದಲ್ಲಿ ಸತ್ಯವನ್ನು

ಹೇಳು' ಎಂದು ಕೇಳಿದರು. ಅದಕ್ಕೆ ಅವಳು 'ನಾನು ವೀರಧನ್ವ' ಎಂಬ ಗಂಧರ್ವನ ಮಗಳು. ನನ್ನ ಹೆಸರು ಲಲಿತೆಯೆಂದು. ನಾನು ಪತಿಯ ನಿಮಿತ್ತವಾಗಿ ಇಲ್ಲಿಗೆ ಬಂದಿರುವೆನು. ನನ್ನ ಪತಿಯು ಪಾಪದೋಷದಿಂದ ಭಯಂಕರನಾದ ದುರಾಚಾರಿಯಾದ ರಾಕ್ಷಸನಾಗಿರುವರು. ಅದರಿಂದ ನನಗೆ ಸುಖವಿಲ್ಲ. ಅದಕ್ಕಾಗಿ ನಾನು ಏನು ಮಾಡಬೇಕು? ಯಾವ ಪುಣ್ಯದಿಂದ ಅವರ ರಾಕ್ಷಸತ್ವವು ಹೋಗುವುದು ಎಂಬುದನ್ನು ತಾವು ದಯೆಯಿಂದ ಹೇಳಬೇಕು' ಎಂದು ಹೇಳಿಕೊಂಡಳು.

ಅದಕ್ಕೆ ಮುನಿಗಳು 'ಸುಂದರಿ! ಚೈತ್ರಮಾಸದ ಶುಕ್ಲಪಕ್ಷದ ಏಕಾದಶಿಗೆ ಕಾಮದಾ ಎಂದು ಹೆಸರು. ಅದು ಸಮಸ್ತ ಪಾಪವನ್ನು ಪರಿಹರಿಸುವುದು. ನೀನು ವಿಧಿಪೂರ್ವಕವಾಗಿ ಆ ಏಕಾದಶೀವ್ರತವನ್ನು ಮಾಡು. ಅದರ ಪುಣ್ಯವನ್ನು ನಿನ್ನ ಗಂಡನಿಗೆ ಕೊಡು. ಆ ಕ್ಷಣವೇ ಆ ಶಾಪದೋಷವು ಹೋಗುವುದು' ಎಂದು ಹೇಳಿದರು.

ಆ ಮಾತನ್ನು ಕೇಳಿ ಲಲಿತೆಯು ಪರಮ ಸಂತೋಷಪಟ್ಟಳು. ಅವರ ಸಮೀಪದಲ್ಲೇ ಏಕಾದಶೀ ಉಪವಾಸವನ್ನು ಮಾಡಿ ದ್ವಾದಶೀದಿನದಲ್ಲಿ ದೇವರ ಮುಂಭಾಗದಲ್ಲಿ 'ನಾನು ಕಾಮದಾ ಎಂಬ ಏಕಾದಶಿಯಲ್ಲಿ ಉಪವಾಸವ್ರತವನ್ನು ಮಾಡಿರುವೆನು. ಅದರ ಪುಣ್ಯದ ಪ್ರಭಾವದಿಂದ ನನ್ನ ಪತಿಯ ರಾಕ್ಷಸತ್ವವು ಹೋಗಲಿ' ಎಂದು ಹೇಳಿದಳು.

ಆಗಲೇ ಲಲಿತನು ರಾಕ್ಷಸದೇಹವು ಹೋಗಿ ಸುಂದರವಾದ ದೇಹವುಳ್ಳವನಾದನು. ರಾಕ್ಷಸತ್ವವು ಹೋಗಿ ಗಂಧರ್ವತ್ವವು ಬಂದಿತು. ಲಲಿತೆಯಿಂದ ಕೂಡಿಕೊಂಡು ಸಂತೋಷಪಟ್ಟನು. ಕಾಮದಾ ಎಂಬ ಏಕಾದಶಿಯ ಪ್ರಭಾವದಿಂದ ಆ ದಂಪತಿಗಳು ವಿಮಾನದಲ್ಲಿ ಕೂತುಕೊಂಡು ಅತ್ಯಂತಶೋಭಿಸಿದರು. ಈರೀತಿಯಾಗಿ ಕಾಮದಾ ಎಂಬ ಈ ಏಕಾದಶಿಯು ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸುವುದು. ಪಿಶಾಚತ್ವಾದಿಗಳನ್ನು ಪರಿಹರಿಸುವುದು. ಈ ಮಹಿಮೆಯನ್ನು ಹೇಳಿದರೂ ಕೇಳಿದರೂ ವಾಜಪೇಯಯಾಗವನ್ನು ಮಾಡಿದ ಫಲವು ಬರುವುದು.



# ಚೈತ್ರ ಕೃಷ್ಣಪಕ್ಷದ ಏಕಾದಶಿಯ ಮಹಿಮೆ [1]

ಇದರ ಮಹಿಮೆಯನ್ನು ಲೋಮಶರು ಮಾಂಧಾತರಾಜನಿಗೆ ಹೇಳಿರುವರು. ಅದನ್ನೇ ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿರುವನು. ಅದನ್ನು ರುದ್ರದೇವರು ನಾರದರಿಗೆ ಹೇಳಿರುವರು—

ಚೈತ್ರಕೃಷ್ಣಪಕ್ಷದ ಏಕಾದಶಿಗೆ **ಪಾಪಮೋಚನಿಕಾ** ಎಂದು ಹೆಸರು.

ಪೂರ್ವದಲ್ಲಿ ಚೈತ್ರರಥವನದಲ್ಲಿ ವಸಂತಋತುವಿನಲ್ಲಿ ಗಂಧರ್ವಕನ್ಯೆಯರು ವಾದ್ಯಗಳನ್ನು ಬಾರಿಸುತ್ತಾ ಕ್ರೀಡಿಸುತ್ತಿದ್ದರು. ಇಂದ್ರಾದಿದೇವತೆಗಳೂ ವಿಹರಿಸುತ್ತಿದ್ದರು. ಆ ವನದಲ್ಲಿ ಅನೇಕ ಮುನಿಗಳು ತಪಸ್ಸು ಮಾಡುತ್ತಲೂ ಇದ್ದರು. ಅಲ್ಲಿ ತಪಸ್ಸು ಮಾಡುತ್ತಿದ್ದ ಮೇಧಾವಿಯೆಂಬ ಬ್ರಹ್ಮಚಾರಿಯನ್ನು ಮಂಜುಘೋಷ ಎಂದು ಹೆಸರುಳ್ಳ ಅಪ್ಸರಸ್ತ್ರೀಯು ಮೋಹಗೊಳಿಸಲಿಕ್ಕೆ ಆರಂಭಿಸಿದಳು. ವೀಣಾಬಾರಿಸುತ್ತಾ ಹಾಡುಹೇಳುತ್ತಾ ನಾನಾ ವಿಧಗಳಾದ ಶೃಂಗಾರ ಚೇಷ್ಟೆಗಳನ್ನು ತೋರಿಸುತ್ತಾ ಆ ಮುನಿಗಳನ್ನು ವಶಪಡಿಸಿಕೊಂಡಳು. ಅವರ ಹತ್ತಿರ ಬಂದು ವೀಣೆಯನ್ನು ಕೆಳಗೆ ಇಟ್ಟು ಗಾಢಾಲಿಂಗನ ಮಾಡಿಕೊಂಡಳು. ತರುವಾಯ ಮೇಧಾವಿಮುನಿಗಳು ತಪಸ್ಸನ್ನು ಬಿಟ್ಟು ಕಾಮುಕರಾಗಿ ರಾತ್ರಿ-ಹಗಲು ಎಂದು ತಿಳಿಯದೆ ಅವಳೊಡನೆ ವಿಹಾರ ಮಾಡುತ್ತಾ ಇದ್ದರು. ಹೀಗೆ ಆ ಮುನಿಗಳಿಗೆ ತಪಸ್ಸಿಲ್ಲದೆ ಬಹುಕಾಲವು ಕಳೆದು ಹೋಯಿತು. ತರುವಾಯ ಮಂಜುಘೋಷೆಯು ದೇವಲೋಕಕ್ಕೆ ಹೋಗಬೇಕೆಂದು ಅಪೇಕ್ಷಿಸಿದಳು. 'ಪೂಜ್ಯರೇ! ನನಗೆ ನನ್ನ ದೇಶಕ್ಕೆ ಹೋಗಲಿಕ್ಕೆ ಆಜ್ಞೆಯನ್ನು ಕೊಡಬೇಕು' ಎಂದು ಹೇಳಿಕೊಂಡಳು.

ಅದಕ್ಕೆ ಮುನಿಗಳು 'ಬೆಳಗಾದ ಮೇಲೆ ಹೋಗುವಿಯಂತೆ. ಅಷ್ಟರವರೆಗೆ ಇಲ್ಲಿಯೇ ಇರು' ಎಂದರು. ಅದನ್ನು ಕೇಳಿ ಮಂಜುಘೋಷೆಯು ಅವರ ಮಾತನ್ನು ಮೀರಿಹೋದರೆ ಏನು ಮಾಡುವರೋ ಎಂಬ ಭಯದಿಂದ ಮತ್ತು ಬಹುಕಾಲ ಅಲ್ಲಿಯೇ ಇದ್ದಳು. ಅವಳು ಐವತ್ತೈದುವರ್ಷ ಒಂಭತ್ತು ತಿಂಗಳು ಮೂರು ದಿವಸಗಳನ್ನು ಕಳೆದಳು. ಅಷ್ಟು ಕಾಲವೂ ಅವಳು ಮುನಿಗಳೊಡನೆ ವಿಹರಿಸಿದಳು. ಆ ಸಮಯವು ಅವರಿಗೆ ಅರ್ಧರಾತ್ರಿಯಂತೆ ಕಳೆದು ಹೋಯಿತು. ಆಮೇಲೆ ಅವಳು ಪುನಃ 'ಪೂಜ್ಯರೇ! ನನ್ನ ಮನೆಗೆ ಹೋಗಬೇಕಾಗಿದೆ. ನನಗೆ ಆಜ್ಞೆಯನ್ನು ಕೊಡಿರಿ' ಎಂದು ಹೇಳಿದಳು.

---

1. ಪ.ಪು.ಉ.ಖಂ. ಅ.48

ಅದಕ್ಕೆ ಮುನಿಗಳು 'ಈಗ ತಾನೇ ಬೆಳಗಾಗಿದೆ. ಏನು ಅವಸರ? ನಾನು ಸಂಧ್ಯಾವಂದನವನ್ನು ಮಾಡಿಬಿಡುವೆನು. ಅಷ್ಟರವರೆಗೆ ಸುಮ್ಮನೆ ಇರು' ಎಂದು ಹೇಳಿದರು. ಮುನಿಗಳ ಆ ಮಾತನ್ನು ಕೇಳಿ ಅವಳು ಆನಂದವುಳ್ಳವಳಾಗಿ ಸ್ವಲ್ಪ ನಗುತ್ತಾ 'ನನ್ನಲ್ಲಿ ಅನುಗ್ರಹಮಾಡಿ ತಮಗೆ ಎಷ್ಟು ಸಂಖ್ಯೆಯು ಕಳೆದುಹೋಯಿತು? ಹೋದ ಕಾಲವನ್ನು ವಿಚಾರಮಾಡಿರಿ' ಎಂದಳು.

ಮುನಿಗಳು ಅವಳ ಮಾತನ್ನು ಕೇಳಿ ಆಶ್ಚರ್ಯವುಳ್ಳವರಾಗಿ ಕಳೆದುಹೋದ ಸಮಯವನ್ನು ಎಣಿಸಿದರು. ಆಗ ಐವತ್ತ ಏಳು ವರ್ಷಗಳು ಕಳೆದಿದ್ದವು. ಅದನ್ನು ತಿಳಿದು ಮುನಿಗಳು ಕೋಪಿಸಿಕೊಂಡರು. ಕಣ್ಣುಗಳಿಂದ ಬೆಂಕಿಯು ಕಿಡಿಯನ್ನು ಸುರಿಸುತ್ತಾ, ಶ್ರಮಪಟ್ಟು ಮಾಡಿದ ತಪಸ್ಸೆಲ್ಲವೂ ಅವಳಿಂದ ನಷ್ಟವಾಯಿತೆಂದು ಕೋಪದಿಂದ ತುಟಿಯನ್ನು ನಡುಗಿಸುತ್ತಾ 'ಪಾಪಿಯೇ! ದುರಾಚಾರಳೇ! ನಿನಗೆ ಧಿ ಕ್ಕಾರವಿರಲಿ. ನೀನು ಪಿಶಾಚಿಯಾಗಿ ಹೋಗು' ಎಂದು ಶಾಪವನ್ನು ಕೊಟ್ಟರು. ಅದರಿಂದ ಅವಳು ದುಃಖವುಳ್ಳವಳಾಗಿ ವಿನಯದಿಂದ ಬಗ್ಗಿಕೊಂಡು 'ಬ್ರಾಹ್ಮಣ ಶ್ರೇಷ್ಠರೇ! ಪ್ರಸನ್ನರಾಗಿರಿ. ಶಾಪಕ್ಕೆ ಅನುಗ್ರಹ ಮಾಡಿರಿ. ಏಳು ಹೆಜ್ಜೆ ನಡೆಯುತ್ತಾ ಮಾತಾಡಿಕೊಂಡು ಹೋದರೆ ಸಜ್ಜನರಿಗೆ ಮೈತ್ರಿಯು ಏರ್ಪಡುವುದೆಂದು ದೊಡ್ಡವರು ಹೇಳುವರು. ತಮ್ಮೊಡನೆ ನಾನು ಬಹುಕಾಲ ವಾಸಮಾಡಿದೆನು. ಆದುದರಿಂದ ನೀವು ನನಗೆ ಅನುಗ್ರಹಮಾಡಬೇಕು ಎಂದು ಹೇಳಿದಳು.

ಮುನಿಗಳು 'ಸುಂದರಿ! ಶಾಪಾನುಗ್ರಾಹಕವಾದ ಮಾತನ್ನು ಹೇಳುತ್ತೇನೆ ಕೇಳು. ಪಾಪಿಯೇ! ನಾನೇನು ಮಾಡಲಿ? ನಿನ್ನಿಂದಾಗಿ ನನ್ನ ಮಹಾತಪಸ್ಸು ವ್ಯರ್ಥವಾಯಿತು. ಚೈತ್ರಮಾಸದ ಕೃಷ್ಣಪಕ್ಷದ ಏಕಾದಶಿಯು ಸರ್ವಪಾಪವನ್ನೂ ಪರಿಹರಿಸುವುದು. ಅದಕ್ಕೆ ಪಾಪಮೋಚನಿಕಾ ಎಂದು ಹೆಸರು. ಸುಂದರಿ! ಆ ಏಕಾದಶೀ ಉಪವಾಸವನ್ನು ಮಾಡಿದರೆ ನಿನ್ನ ಪಿಶಾಚ ಜನ್ಮವು ಹೋಗುವುದು' ಎಂದು ಹೇಳಿ ಮೇಧಾವಿ ಮುನಿಗಳು ತಂದೆಯ ಆಶ್ರಮಕ್ಕೆ ಹೋದರು. ಅವರನ್ನು ನೋಡಿ ತಂದೆಯಾದ ಚ್ಯವನರು 'ಮಗ! ಏನು ಮಾಡಿದಿ? ಪುಣ್ಯವನ್ನು ನಾಶ ಮಾಡಿಕೊಂಡಿಯಾ?' ಎಂದರು.

ಮೇಧಾವಿ ಮುನಿಗಳು 'ತಂದೆಯೇ! ಬಹುಪಾಪವನ್ನು ಮಾಡಿದೆನು. ಅಪ್ಸರ ಸ್ತ್ರೀಯ ಸಂಗವನ್ನು ಮಾಡಿದೆನು. ನನ್ನ ಪಾಪವು ಹೋಗಲಿಕ್ಕೆ ಉಪಾಯವನ್ನು ಹೇಳಿರಿ' ಎಂದು ಹೇಳಿದರು.

ಅದಕ್ಕೆ ಚ್ಯವನಋಷಿಗಳು 'ಚೈತ್ರಮಾಸದ ಕೃಷ್ಣಪಕ್ಷದ ಪಾಪಮೋಚನಿಕಾ'

ಎಂಬ ಏಕಾಂಗಿ ಉಪವಾಸ ಮಾಡಿದರೆ ಎಲ್ಲಾ ಪಾಪವೂ ನಾಶವನ್ನು ಹೊಂದುವುದು' ಎಂದು ಹೇಳಿದರು.

ತಂದೆಯ ಮಾತಿನಂತೆ ಮೇಧಾವಿ ಮುನಿಗಳು ಆ ಏಕಾದಶೀವ್ರತವನ್ನು ಮಾಡಿ ಪಾಪವನ್ನು ಪರಿಹರಿಸಿಕೊಂಡರು. ತಪೋಯುಕ್ತರಾದರು. ಮಂಜುಘೋಷೆಯೂ ಆ ಏಕಾದಶೀವ್ರತವನ್ನು ಮಾಡಿ ಪಿಶಾಚಜನ್ಮದಿಂದ ರಹಿತಳಾದಳು. ದಿವ್ಯರೂಪವುಳ್ಳ ಅಪ್ಸರಸ್ತ್ರೀಯಾಗಿ ಸ್ವರ್ಗಕ್ಕೆ ಹೋದಳು.

ಈ ಏಕಾದಶೀವ್ರತವನ್ನು ಮಾಡುವವರಿಗೆ ಎಲ್ಲಾ ಪಾಪವೂ ಪರಿಹೃತ ವಾಗುವುದು. ಬ್ರಹ್ಮಹತ್ಯೆಯನ್ನು ಮಾಡಿದವನೂ, ಬಂಗಾರವನ್ನು ಕದ್ದವನೂ, ಮದ್ಯಪಾನ ಮಾಡಿದವನೂ, ಗುರುಸ್ತ್ರೀಗಮನ ಮಾಡಿದವನೂ, ಈ ವ್ರತವನ್ನು ಮಾಡುವುದರಿಂದ ಪಾಪರಹಿತರಾಗುವರು. ಈ ಮಹಿಮೆಯನ್ನು ಹೇಳುವವರಿಗೂ ಕೇಳುವವರಿಗೂ ಸಾವಿರ ಗೋದಾನ ಮಾಡಿದ ಫಲವು ಬರುವುದು.



## ವೈಶಾಖಮಾಸದ ಶುಕ್ಲಪಕ್ಷದ ಏಕಾದಶೀ [1]

ವೈಶಾಖಶುಕ್ಲಪಕ್ಷದ ಏಕಾದಶಿಗೆ **ಮೋಹಿನಿಯೆಂದು** ಹೆಸರು. ಇದರ ಮಹಿಮೆ ಯನ್ನು ಲೋಕದ ಶಿಕ್ಷೆಗಾಗಿ ಕೇಳುತ್ತಿದ್ದ ಸರ್ವಜ್ಞರಾದ ಶ್ರೀರಾಮಚಂದ್ರ ದೇವರಿಗೆ ವಸಿಷ್ಠರು ಹೇಳಿದರು. ಅದೇ ವಿಷಯದಲ್ಲಿ ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದ್ದನ್ನು ರುದ್ರದೇವರು ನಾರದರಿಗೆ ಹೇಳಿರುವರು.

ಮನೋಹರವಾದ ಸರಸ್ವತೀನದಿಯ ತೀರದಲ್ಲಿ ಧೃತಿಮಾನ್ ಎಂಬ ರಾಜನು ರಾಜ್ಯಭಾರವನ್ನು ಮಾಡುತ್ತಿದ್ದನು. ಅವನು ಚಂದ್ರವಂಶದವನು. ಧೈರ್ಯಶಾಲಿಯು. ಪರಾಕ್ರಮಿಯು. ಅದೇ ಊರಲ್ಲಿ ಧನಪಾಲ ಎಂದು ಹೆಸರುಳ್ಳ ವೈಶ್ಯನಿದ್ದನು. ಅವನು ಹಣವಂತನಾಗಿದ್ದನು. ಪುಣ್ಯಕರ್ಮವನ್ನು ಮಾಡುತ್ತಿದ್ದನು. ಧರ್ಮಕ್ಕಾಗಿ ಭಾವಿ ಮಠ ತೋಟ ಸರೋವರ ಛತ್ರ ಇತ್ಯಾದಿಗಳನ್ನು ಮಾಡಿಸಿದ್ದನು. ವಿಷ್ಣುಭಕ್ತನಾಗಿದ್ದನು. ಶಾಂತನಾಗಿದ್ದನು. ಅವನಿಗೆ ಸುಮನ, ದ್ಯುತಿಮಾನ್, ಮೇಧಾವೀ, ಸುಕೃತ, ದೃಷ್ಟಬುದ್ಧಿ ಎಂಬ ಐದು ಜನ ಮಕ್ಕಳು ಇದ್ದರು. ಅವರಲ್ಲಿ ಧೃಷ್ಟಬುದ್ಧಿಯು ಮಹಾಪಾಪಿಯಾಗಿದ್ದನು. ಪರಸ್ತ್ರೀಯರಲ್ಲಿ ಆಸಕ್ತನಾಗಿದ್ದನು. ಪಗಡೆ ಆಟ

---

1. ಪ.ಪು.ಉ.ಖಂ. ಅ.51

ಇತ್ಯಾದಿಗಳಲ್ಲಿಯೂ ಆಸಕ್ತನಾಗಿದ್ದನು. ವೇಶ್ಯಾಸ್ತ್ರೀಯರಲ್ಲಿ ಅತಿಲೋಲನಾಗಿದ್ದನು. ಅವನಿಗೆ ದೇವರ ಪೂಜೆ ಪಿತೃಗಳ ಪೂಜೆ ಬ್ರಾಹ್ಮಣರಪೂಜೆ ಇವುಗಳಲ್ಲಿ ಆಸಕ್ತಿಯೇ ಇರಲಿಲ್ಲ. ಅನ್ಯಾಯ ದಿಂದ ತಂದೆಯ ಹಣವನ್ನು ಹಾಳು ಮಾಡುತ್ತಿದ್ದನು. ನಿಷಿದ್ಧ ಪದಾರ್ಥವನ್ನು ತಿನ್ನುತ್ತಿದ್ದನು. ಯಾವಾಗಲೂ ಕಳ್ಳು ಕುಡಿಯುತ್ತಿದ್ದನು. ರಸ್ತೆಯಲ್ಲಿ ಹೋಗುವಾಗಲೂ ವೇಶ್ಯಾಸ್ತ್ರೀಯ ಹೆಗಲಲ್ಲಿ ಕೈಹಾಕಿಕೊಂಡೇ ಸಂಚರಿಸುತ್ತಿದ್ದನು. ತಂದೆಯು ಅವನನ್ನು ಮನೆಯಿಂದ ಹೊರಗೆ ಮಾಡಿದನು. ಬಂಧುಗಳೂ ಅವನನ್ನು ಬಿಟ್ಟುಬಿಟ್ಟರು.

ಆಮೇಲೆ ಅವನು ತನ್ನ ಮೈಯಲ್ಲಿ ಇದ್ದ ಕಡುಕು ಮೊದಲಾದ ಆಭರಣಗಳನ್ನು ಮಾರಿ ಜೀವನ ಮಾಡಿದನು. ಹಣವಿಲ್ಲದ ಕಾರಣ ವೇಶ್ಯೆಯರು ಅವನನ್ನು ಬಿಟು ಬಿಟ್ಟರು. ನಿಂದಿಸಿದರು. ಅವನಿಗೆ ವಸ್ತ್ರವಿರಲಿಲ್ಲ, ಹಣವಿರಲಿಲ್ಲ. ಹಸಿವೆಯಾಗುತ್ತಿತ್ತು. ಯೋಚನೆ ಮಾಡಿದನು. ಏನು ಮಾಡಲಿ? ಎಲ್ಲಿಗೆ ಹೋಗಲಿ? ಹೇಗೆ ಜೀವಿಸಲಿ?' ಎಂದು ಯೋಚಿಸಿದನು. ತರುವಾಯ ಅದೇ ಊರಲ್ಲಿಯೇ ಕಳ್ಳತನವನ್ನು ಮಾಡಿದರು. ರಾಜಪುರುಷರು ಅವನನ್ನು ಹಿಡಿದರು. ಆದರೂ ಅವನ ತಂದೆಯ ಮೇಲಿನ ಗೌರವದಿಂದ ಬಿಟ್ಟುಬಿಟ್ಟರು. ಆಮೇಲೂ ಅವನು ಕಳವು ಮಾಡಲು ಅವನನ್ನು ರಾಜಪುರುಷರು ಅನೇಕ ಬಾರಿ ಹಿಡಿದರು. ಬಿಟ್ಟರು. ಒಡೆದರು. ಬಂಧನದಲ್ಲಿ ಇಟ್ಟರು. ಚಾಟುವಾರಿಯಿಂದ ಚೆನ್ನಾಗಿ ಬಡೆದರು. ಅಲ್ಲಿ ಇಲ್ಲಿ ಓಡುತ್ತಿದ್ದನು. ಕೊನೆಗೆ ಕಾಡಿಗೆ ಹೋಗಿ ಸಿಂಹದಂತೆ ಮೃಗಗಳನ್ನು ಕೊಲ್ಲುತ್ತಾ ಮಾಂಸಾಹಾರದಲ್ಲಿ ಆಸಕ್ತನಾಗಿದ್ದನು. ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡು ಬೆನ್ನಿನಲ್ಲಿ ಬಾಣದ ಚೀಲವನ್ನು ಧರಿಸಿಕೊಂಡು ಕಾಡಿನಲ್ಲಿ ಬರುವವರನ್ನು ಕೊಲ್ಲುತ್ತಿದ್ದನು. ಪಕ್ಷಿಗಳನ್ನು ಕೊಲ್ಲುತ್ತಿದ್ದನು. ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದ ಆಗಲೂ ಪಾಪದಲ್ಲಿಯೇ ಮುಳುಗಿದ್ದನು. ರಾತ್ರಿಹಗಲು ದುಃಖಪಡುತ್ತಲೇ ಇದ್ದನು.

ಒಂದು ದಿನದಲ್ಲಿ ಪೂರ್ವಪುಣ್ಯದಿಂದ ಕೌಂಡಿಲ್ಯರ ಆಶ್ರಮಕ್ಕೆ ಬಂದನು. ವೈಶಾಖದಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಶೋಕದಿಂದ ಪೀಡಿತನಾಗಿ ಧೃಷ್ಟಬುದ್ಧಿಯು ಕೌಂಡಿನ್ಯರ ಬಳಿಗೆ ಬಂದನು. ಕೌಂಡಿನ್ಯರ ವಸ್ತ್ರದ ನೀರು ಅವನ ಮೇಲೆ ಬಿದ್ದು ಪಾಪರಹಿತನಾಗಿ ಅವರ ಮುಂದೆ ನಿಂತುಕೊಂಡು ಕೈಮುಗಿದು ನನ್ನ ಮೇಲೆ ದಯೆಯನ್ನು ಮಾಡಿ ಪಾಪವು ಪರಿಹಾರವನ್ನು ಹೊಂದುವ ಉಪಾಯವನ್ನು ಹೇಳಬೇಕೆಂದು ಕೇಳಿಕೊಂಡನು. ಅದಕ್ಕೆ ಕೌಂಡಿನ್ಯರು 'ವೈಶಾಖದ ಶುಕ್ಲಪಕ್ಷದ ಏಕಾದಶಿಗೆ ಮೋಹಿನೀ ಎಂದು ಹೆಸರು. ನೀನು ನನ್ನ ಮಾತಿನಿಂದ ಆ ಏಕಾದಶೀ

ಉಪವಾಸ ಮಾಡು. ಆ ದಿವಸದಲ್ಲಿ ಉಪವಾಸ ಮಾಡುವುದರಿಂದ ಬಹು ಜನ್ಮಗಳಲ್ಲಿ ಮಾಡಿರುವ ಮೇರು ಮಂದರಗಳಂತೆ ಇರುವ ಪಾಪಗಳೆಲ್ಲವೂ ನಾಶವನ್ನು ಹೊಂದುವುವು' ಎಂದು ಹೇಳಿದರು. ತರುವಾಯ ಅವನು ಹಾಗೆಯೇ ಆ ವ್ರತವನ್ನು ಮಾಡಿದನು. ಅದರಿಂದ ಅವನ ಪಾಪವು ನಷ್ಟವಾಯಿತು. ಅವನು ದಿವ್ಯದೇಹವುಳ್ಳವನಾಗಿ ವಿಷ್ಣುಲೋಕಕ್ಕೆ ಹೋದನು. ಇದರ ಮಹಿಮೆಯನ್ನು ಹೇಳಿದರೂ ಕೇಳಿದರೂ ಸಾವಿರ ಗೋದಾನ ಮಾಡಿದ ಫಲವು ಬರುವುದು.



## ವೈಶಾಖ ಕೃಷ್ಣಪಕ್ಷದ ಏಕಾದಶೀ

ವೈಶಾಖಕೃಷ್ಣಪಕ್ಷದ ಏಕಾದಶಿಗೆ **ವರೂಥಿನೀ** ಎಂದು ಹೆಸರು. ಇದರ ಮಹಿಮೆಯನ್ನು ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದ್ದನ್ನು ರುದ್ರದೇವರು ನಾರದರಿಗೆ ಹೇಳಿದರು.

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಈ ಪ್ರಕಾರವಾಗಿ ಹೇಳಿದನು— ವೈಶಾಖಕೃಷ್ಣಪಕ್ಷದ ಏಕಾದಶಿಯು ವರೂಥಿನೀ ಎಂದು ಹೆಸರುಳ್ಳದ್ದು. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸೌಭಾಗ್ಯದಾಯಕವಾದದ್ದು. ಈ ಏಕಾದಶೀ ವ್ರತವನ್ನು ಮಾಡುವುದರಿಂದ ಪಾಪಪರಿಹಾರವಾಗುತ್ತದೆ. ದೌರ್ಭಾಗ್ಯವುಳ್ಳ ಹೆಂಗಸು ಈ ವ್ರತವನ್ನು ಮಾಡುವುದರಿಂದ ಸೌಭಾಗ್ಯವುಳ್ಳವಳಾಗುತ್ತಾಳೆ. ಈ ವ್ರತದಲ್ಲಿ ಈ ಲೋಕದಲ್ಲಿ ಭೋಗವೂ ಪರಲೋಕದಲ್ಲಿ ಕ್ರಮದಿಂದ ಮೋಕ್ಷವೂ ಉಂಟಾಗುವುದು. ಗರ್ಭವಾಸದುಃಖವು ಪರಿಹೃತವಾಗುವುದು. ಮಾಂಧಾತ ರಾಜನು ಈ ಏಕಾದಶೀ ವ್ರತದಿಂದಲೇ ಸ್ವರ್ಗವನ್ನು ಹೊಂದಿರುವನು. ಧುಂಧುಮಾರ ಮೊದಲಾದ ಬಹುರಾಜರು ಈ ವ್ರತವನ್ನು ಮಾಡಿರುವರು. ಇದರಿಂದಲೇ ರುದ್ರದೇವರು ಬ್ರಹ್ಮ ಕಪಾಲದಿಂದ ಬಿಡುಗಡೆಯನ್ನು ಹೊಂದಿದರು. ಇದರಿಂದ ಹತ್ತುಸಾವಿರ ವರ್ಷ ತಪಸ್ಸು ಮಾಡಿದ ಫಲವು ಬರುವುದು. ಶ್ರದ್ಧೆಯಿಂದ ಈ ವ್ರತವನ್ನು ಮಾಡಿದ್ದಾದರೆ ಸರ್ವಾಭೀಷ್ಟವೂ ಸಿಗುವುದು. ಕುದುರೆಯನ್ನು ದಾನಮಾಡುವುದಕ್ಕಿಂತ ಆನೆಯ ದಾನವು ಶ್ರೇಷ್ಠವು. ಆನೆಯ ದಾನಕ್ಕಿಂತ ಭೂಮಿದಾನವು ಶ್ರೇಷ್ಠವು. ಭೂಮಿದಾನಕ್ಕಿಂತ ಎಳ್ಳಿನ ದಾನವು ಶ್ರೇಷ್ಠವು. ಎಳ್ಳಿನ

---

1. ಪ.ಪು.ಉ.ಖಂ. ಅ.50

ದಾನಕ್ಕಿಂತ ಬಂಗಾರದ ದಾನವು ಶ್ರೇಷ್ಠವು. ಬಂಗಾರ ದಾನಕ್ಕಿಂತ ಅನ್ನದಾನವು ಶ್ರೇಷ್ಠವು. ಅನ್ನದಾನಕ್ಕಿಂತ ಶ್ರೇಷ್ಠವಾದದ್ದು ಪ್ರಾಯಃ ಇಲ್ಲವೇ ಇಲ್ಲ. ಪಿತೃಗಳಿಗೂ ದೇವತೆಗಳಿಗೂ ಮನುಷ್ಯರಿಗೂ ಅನ್ನದಿಂದ ತೃಪ್ತಿಯುಂಟಾಗುತ್ತದೆ. ಅಂತಹ ಅನ್ನದಾನಕ್ಕೆ ಸಮಾನವಾದದ್ದು ಕನ್ಯಾದಾನವು. ಕನ್ಯಾದಾನಕ್ಕೆ ಸಮಾನವಾದದ್ದು ಗೋದಾನವೆನ್ನುವರು. ಈ ಎಲ್ಲಾ ದಾನಗಳಿಗಿಂತ ವಿದ್ಯಾದಾನವು ಶ್ರೇಷ್ಠವು. ಈ ವರೂಥಿನೀವ್ರತವು (ಏಕಾದಶೀ ಉಪವಾಸವು) ವಿದ್ಯಾದಾನದ ಫಲವನ್ನು ಉಂಟು ಮಾಡುವುದು. ಕನ್ಯಾನಿಮಿತ್ತವಾದ ಹಣದಿಂದ ಯಾರು ಜೀವಿಸುತ್ತಾರೋ ಅವರು ಪುಣ್ಯಕ್ಷಯವನ್ನು ಹೊಂದಿ ನರಕವನ್ನು ಅನುಭವಿಸುತ್ತಾರೆ. ಆದುದರಿಂದ ಕನ್ಯಾ ನಿಮಿತ್ತವಾದ ಹಣವನ್ನು ಸ್ವೀಕರಿಸಬಾರದು. ಕನ್ಯೆಯನ್ನು ಯಥಾಶಕ್ತಿ ಅಲಂಕರಿಸಿ ದಾನ ಮಾಡಿದರೆ ಎಷ್ಟು ಪುಣ್ಯ ಬರುವುದು ಎಂಬುದನ್ನು ಚಿತ್ರಗುಪ್ತನೇ ತಿಳಿಯ ಲಾರನಂತೆ. ಅಷ್ಟು ಪುಣ್ಯವು ವರೂಥಿನೀ ಎಂಬ ಈ ಏಕಾದಶೀ ಉಪವಾಸವನ್ನು ಮಾಡುವುದರಿಂದ ಬರುವುದು.

ಈ ವ್ರತವನ್ನು ಮಾಡುವವನು ದಶಮೀ ದಿನದಲ್ಲಿ ಕಂಚಿನಪಾತ್ರೆ, ಮಾಂಸ, ಮಸೂರಾ ಎಂಬ ಧಾನ್ಯ, ಕಡಲೆ, ಕೋದ್ರವ ಎಂಬ ಧಾನ್ಯ, ಕಾಯಿಪಲ್ಯ, ಜೇನು, ಪರಾನ್ನ, ಎರಡನೇ ಭೋಜನ, ಸ್ತ್ರೀಸಂಬಂಧ ಎಂಬ ಈ ಹತ್ತನ್ನು ಬಿಡಬೇಕು. ಏಕಾದಶಿಯಲ್ಲಿ ಪಗಡೆಆಟ, ನಿದ್ದೆ, ತಾಂಬೂಲ, ಹಲ್ಲು ಉಜ್ಜಿಕೊಳ್ಳೋಣ, ಇನ್ನೊಬ್ಬರ ನಿಂದೆ, ಚಾಡಿ ಹೇಳೋಣ, ಕದ್ದು ಕೇಳೋಣ, ಹಿಂಸೆ, ಕ್ರೀಡೆ, ಕೋಪ, ಸುಳ್ಳು ಹೇಳೋಣ ಇವುಗಳನ್ನೆಲ್ಲಾ ಬಿಡಬೇಕು. ದ್ವಾದಶಿಯಲ್ಲಿ ಕಂಚಿನ ಪಾತ್ರೆ, ಮಾಂಸ, ಮದ್ಯ, ಜೇನು, ಎಣ್ಣೆ, ಪತಿತರೊಡನೆ ಮಾತಾಡೋಣ, ವ್ಯಾಯಾಮ, ಪ್ರಯಾಮ, ಎರಡನೇ ಭೋಜನ, ಸ್ತ್ರೀಸಂಗ, ಮಸೂರವೆಂಬ ಧಾನ್ಯ ಇವುಗಳನ್ನು ಬಿಡಬೇಕು. ಈರೀತಿಯಾಗಿ ವರೂಥಿನೀ ಏಕಾದಶೀ ದಿನದಲ್ಲಿ ಉಪವಾಸ ಮಾಡ ಬೇಕು. ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಪರಮಾತ್ಮನಿಗೆ ಪೂಜಿಸಬೇಕು. ಹೀಗೆ ಮಾಡಿದವರು ಸರ್ವ ಪಾಪರಹಿತರಾಗಿ ಉತ್ತಮವಾದ ಗತಿಯನ್ನು ಹೊಂದು ವರು. ಆದುದರಿಂದ ಸರ್ವಪ್ರಯತ್ನದಿಂದ ಪಾಪದ ಭಯವುಳ್ಳವರು ಈ ಏಕಾದಶೀ ಉಪವಾಸ ಮಾಡಬೇಕು. ಇದರ ಮಹಿಮೆಯನ್ನು ಹೇಳುವುದರಿಂದಲೂ ಕೇಳುವುದರಿಂದಲೂ ಸಾವಿರಗೋದಾನದ ಫಲವು ಉಂಟಾಗುವುದು.



# ಜ್ಯೇಷ್ಠ ಶುಕ್ಲಪಕ್ಷದ ಏಕಾದಶೀ (ನಿರ್ಜಲಾ)

ಪೂರ್ವದಲ್ಲಿ ಧರ್ಮರಾಜನು ಕೃಷ್ಣಪರಮಾತ್ಮನೊಡನೆ ಜ್ಯೇಷ್ಠ ಶುಕ್ಲಪಕ್ಷದ ಏಕಾದಶಿಯ ಮಹಿಮೆಯನ್ನು ತಿಳಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಕೃಷ್ಣಪರಮಾತ್ಮನು ಈ ವಿಷಯವನ್ನು ವೇದವ್ಯಾಸದೇವರು ಹೇಳುವರು ಎಂದು ಹೇಳಿದನು. ಧರ್ಮರಾಜನು ವೇದವ್ಯಾಸದೇವರೊಡನೆ 'ನಾನು ಮಾನವ ಧರ್ಮಗಳನ್ನು ವಾಸಿಷ್ಠ ಧರ್ಮಗಳನ್ನೂ ಕೇಳಿಯಾಯಿತು. ಇನ್ನು ವೈಷ್ಣವ ಧರ್ಮಗಳನ್ನು ಹೇಳಬೇಕು' ಎಂದು ಕೇಳಿಕೊಂಡನು. ಆಗ ವೇದವ್ಯಾಸದೇವರು— 'ನೀನು ಯಾವ ಮಾನವ ಧರ್ಮಗಳನ್ನೋ ವೈದಿಕಧರ್ಮಗಳನ್ನೋ ಕೇಳಿರುವಿಯೋ ಅವುಗಳನ್ನು ಕಲಿಯುಗದಲ್ಲಿ ಮಾಡಲಿಕ್ಕೆ ಶಕ್ಯವಾಗಲಾರದು. ಅಲ್ಪಹಣದಿಂದ ಅಲ್ಪಕ್ಲೇಶದಿಂದ ಸಾಧ್ಯವಾಗುವ ಅನಾಯಾಸಕರವಾದ ಪುರಾಣಗಳಿಗೆಲ್ಲಾ ಸಾರಭೂತ ವಾದ ವಿಷಯವನ್ನು ಹೇಳುವೆನು. **ಎರಡು ಪಕ್ಷಗಳಲ್ಲಿಯೂ ಏಕಾದಶಿಯಲ್ಲಿ ಭೋಜನ ಮಾಡಬಾರದು.** ದ್ವಾದಶಿಯಲ್ಲಿ ಶುದ್ಧನಾಗಿ ಭಗವಂತನನ್ನು ಪೂಜಿಸಿ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಭೋಜನ ಮಾಡಬೇಕು. ಜಾತಾಶೌಚವೋ ಮೃತಾಶೌಚವೋ ಬಂದರೂ ಏಕಾದಶೀ ಉಪವಾಸವನ್ನು ಬಿಡಬಾರದು. **ಬದುಕಿರು ವವರೆಗೆ ಈ ವ್ರತವನ್ನು ಮಾಡಬೇಕು.** ಸ್ವರ್ಗವನ್ನು ಹೊಂದಬೇಕೆಂದು ಇಚ್ಛೆ ಯುಳ್ಳವರು ಅವಶ್ಯವಾಗಿಯೂ ಈ ವ್ರತವನ್ನು ಮಾಡಬೇಕು. ಏನು ಪಾಪವನ್ನು ಮಾಡಿದ್ದರೂ ಎಷ್ಟು ದುರಾಚಾರಿಗಳಾಗಿದ್ದರೂ, ಎಲ್ಲಾ ಧರ್ಮಗಳನ್ನು ಬಿಟ್ಟವ ರಾಗಿದ್ದರೂ ಏಕಾದಶೀ ಉಪವಾಸವನ್ನು ಮಾಡಿದ್ದರೆ ಅವರು ಯಮದೇವರು ಬಳಿಗೆ ಹೋಗುವುದಿಲ್ಲ' ಎಂದು ಹೇಳಿದರು.

ಅದನ್ನು ಕೇಳಿ ಭೀಮಸೇನದೇವರು ಅಶ್ವತ್ಥದ ಎಲೆಯಂತೆ ನಡುಗುತ್ತಾ ಹೇಳಿದರು 'ಮಹಾಜ್ಞಾನಿಗಳಾದ ಪಿತಾಮಹರೇ! ನನ್ನ ಮಾತನ್ನು ಕೇಳಿರಿ. ಧರ್ಮರಾಜನೂ ಕುಂತೀದೇವಿಯೂ ಹಾಗೆಯೇ ದ್ರೌಪದಿಯೂ ಅರ್ಜುನನೂ, ನಕುಲನೂ ಸಹದೇವನೂ ಯಾವಾಗಲೂ ಏಕಾದಶೀ ದಿನದಲ್ಲಿ ಭೋಜನ ಮಾಡುವುದಿಲ್ಲ. ಅವರು ಯಾವಾಗಲೂ ನನ್ನೊಡನೆಯೂ ಭೋಜನ ಮಾಡಬೇಡ ಎನ್ನುವರು. ನಾನು ಅವರೊಡನೆ ನನಗೆ ಹಸಿವೆಯನ್ನು ಸಹಿಸಲಿಕ್ಕೆ ಸಾಧ್ಯವಾಗುವು ದಿಲ್ಲ. ನನಗೆ ಬಹಳ ಹಸಿವೆಯು. ನಾನು ವಿಧಿಪ್ರಕಾರವಾದ ಪರಮಾತ್ಮನ

1. ಪ.ಪು.ಉ.ಖಂ. ಅ.53

ಪೂಜೆಯನ್ನು ಮಾಡಿ ದಾನ ಕೊಡುವೆನು ಎಂದು ಹೇಳಿರುವೆನು ಎಂದರು. ಆದಕ್ಕೆ ವೇದವ್ಯಾಸದೇವರು 'ನಿನಗೆ ಸ್ವರ್ಗವು ಬೇಕಾಗಿದ್ದರೆ ನರಕವು ಬೇಡವಾಗಿದ್ದರೆ ಎರಡು ಪಕ್ಷಗಳಲ್ಲಿಯೂ ಏಕಾದಶಿಯಲ್ಲಿ ಉಪವಾಸಮಾಡಬೇಕು' ಎಂದು ಹೇಳಿದರು. ಅದಕ್ಕೆ ಭೀಮಸೇನದೇವರು 'ಪಿತಾಮಹರೇ! ತಮ್ಮ ಮುಂಭಾಗದಲ್ಲಿ ಹೇಳಿಕೊಳ್ಳುತ್ತೇನೆ. ನನಗೆ ಒಂದು ಹೊತ್ತು ಅನ್ನವನ್ನು ಬಿಡಲಿಕ್ಕೇ ಸಾಧ್ಯವಾಗುವುದಿಲ್ಲ. ಉಪವಾಸವನ್ನು ಹೇಗೆ ಮಾಡಲಿ? ವೃಕ ಎಂದು ಹೆಸರುಳ್ಳ ಜಠರಾಗ್ನಿಯು ನನ್ನ ಉದರದಲ್ಲಿ ಯಾವಾಗಲೂ ಇರುವುದು. ನಾನು ಬಹಳವಾಗಿ ಭೋಜನ ಮಾಡುವೆನು. ಆದರೂ ಅದು ಶಾಂತವಾಗುವುದಿಲ್ಲ. ಒಂದು ಉಪವಾಸವನ್ನು ಮಾತ್ರ ಮಾಡಲು ನನಗೆ ಸಾಧ್ಯವಾಗಬಹುದು. ಆದರಿಂದ ಸ್ವರ್ಗವು ಸಿಗಬೇಕು. ನನಗೆ ಶ್ರೇಯಸ್ಸಾಗುವಂತೆ ಅಂತಹ ದಿವಸವನ್ನು ನಿಶ್ಚಯಮಾಡಿ ಹೇಳಿರಿ' ಎಂದು ಹೇಳಿದರು.

ಅದಕ್ಕೆ ವೇದವ್ಯಾಸದೇವರು 'ಸೂರ್ಯನು ವೃಷಭರಾಶಿಯಲ್ಲೋ ಮಿಥುನ ರಾಶಿಯಲ್ಲಿಯೋ ಇರುವಾಗ ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಯಾವ ಏಕಾದಶಿಯು ಬರುವುದೋ ಆ ದಿವಸದಲ್ಲಿ ಅವಶ್ಯವಾಗಿ ನೀರನ್ನು ಕೂಡ ಕುಡಿಯದೆ ಉಪವಾಸ ಮಾಡಬೇಕು. ಬಾಯಿ ಮುಕ್ಕಳಿಸುವುದು ಹೊರತು ಬೇರೆ ನೀರನ್ನೂ ಸಹ ಉಪಯೋಗಿಸಬಾರದು. ನೀರನ್ನು ಕುಡಿದರೂ ವ್ರತಭಂಗವಾಗುವುದು. ಒಂದು ಉದಯದಿಂದ ಮತ್ತೊಂದು ಉದಯದವರೆಗೆ ಉಪವಾಸವನ್ನು ಮಾಡಿದರೆ ಅನಾಯಾಸದಿಂದ ಹನ್ನೆರಡು ದ್ವಾದಶಿಗಳ ಫಲವನ್ನು ಹೊಂದುವನು. ತರುವಾಯ ದ್ವಾದಶಿಯಲ್ಲಿ ಬೆಳಿಗ್ಗೆ ಸ್ನಾನಮಾಡಿ ಬ್ರಾಹ್ಮಣರಿಗೆ ನೀರನ್ನೂ ಬಂಗಾರವನ್ನೂ ದಾನಮಾಡಬೇಕು. ಆಮೇಲೆ ಕೃತಕೃತ್ಯನಾಗಿ ಬ್ರಾಹ್ಮಣರಿಂದ ಕೂಡಿಕೊಂಡು ಭೋಜನ ಮಾಡಬೇಕು. ಈರೀತಿಯಾಗಿ ಮಾಡಿದರೆ ಒಂದು ವರ್ಷದಲ್ಲಿ ಇರುವ ಎಲ್ಲಾ ಏಕಾದಶಿಗಳಲ್ಲಿಯೂ ಉಪವಾಸ ಮಾಡಿದ ಫಲವು ಬರುವುದು. ಈರೀತಿಯಾಗಿ ಶಂಖಚಕ್ರಗದಾಧಾರಿಯಾದ ಪರಮಾತ್ಮನು ಹೇಳಿರುವನು.

ಪುರುಷನು ಎಲ್ಲವನ್ನು ಬಿಟ್ಟು ಏಕಾದಶಿಯೊಂದನ್ನು ಮರೆಹೊಂದಬೇಕು. ಏಕಾದಶಿಯಲ್ಲಿ ಉಪವಾಸ ಮಾಡಿದ್ದುದಾದರೆ ಸರ್ವಪಾಪವು ಪರಿಹೃತವಾಗುವುದು. ಕಲಿಯುಗದಲ್ಲಿ ದ್ರವ್ಯಶುದ್ಧಿಯು ಇರುವುದಿಲ್ಲ. ಸ್ಮೃತಿಯಲ್ಲಿ ಹೇಳಿದ ಸಂಸ್ಕಾರವೂ ವೇದದಲ್ಲಿ ಹೇಳಿದ ಸಂಸ್ಕಾರವೂ ಸರಿಯಾಗಿ ನಡೆಯುವುದಿಲ್ಲ. ಹೆಚ್ಚಿಗೆ ಯಾಕೆ ಹೇಳಬೇಕು' ಎರಡು ಪಕ್ಷಗಳಲ್ಲಿಯೂ ಏಕಾದಶಿಯಲ್ಲಿ ಭೋಜನ ಮಾಡಬಾರದು.

ಜ್ಯೇಷ್ಠಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ನೀರನ್ನು ಸಹ ತೆಗೆದುಕೊಳ್ಳದೆ ಉಪವಾಸ ಮಾಡಿದರೆ ಒಂದು ವರ್ಷದಲ್ಲಿ ಇರುವ ಶುಕ್ಲಪಕ್ಷದ ಮತ್ತು ಕೃಷ್ಣಪಕ್ಷದ ಎಲ್ಲಾ ಏಕಾದಶಿಗಳಲ್ಲಿಯೂ ಉಪವಾಸ ಮಾಡಿದ ಫಲ ಬರುವುದು. ಈ ಏಕಾದಶಿಯಲ್ಲಿ ಉಪವಾಸ ಮಾಡಿದರೆ ಧನಧಾನ್ಯಗಳು ಉಂಟಾಗುವುವು. ಮಕ್ಕಳೂ ಆರೋಗ್ಯವೂ ಇತರ ಶುಭವೂ ಉಂಟಾಗುವುದು. ದೊಡ್ಡ ಶರೀರವುಳ್ಳ ಭಯಂಕರರಾದ ಕಪ್ಪಾದ ರೂಪವುಳ್ಳ ದಂಡಪಾಶಗಳನ್ನು ಧರಿಸಿರುವ ಭಯಂಕರರಾದ ಯಮದೂತರು ಮನೋವೇಗವುಳ್ಳ ವಿಷ್ಣುಭಕ್ತರು ಕೊನೆಗೆ ಬಂದು ಅವನನ್ನು ವಿಷ್ಣುಲೋಕಕ್ಕೆ ಕರೆದುಕೊಂಡು ಹೋಗುವರು. ಆದುದರಿಂದ ಸರ್ವಪ್ರಯತ್ನದಿಂದ ಆ ಏಕಾದಶಿಯಲ್ಲಿ ನೀರನ್ನೂ ಸಹ ತೆಗೆದುಕೊಳ್ಳದೆ ಉಪವಾಸ ಮಾಡಬೇಕು. ನೀರನ್ನು ಗೋವನ್ನೂ ದಾನಮಾಡಿದರೆ ಸರ್ವಪಾಪ ಪರಿಹಾರವಾಗುವುದು. ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿ ದಿನದಲ್ಲಿ ಭೋಜನ ಮಾಡುವೆನೆಂದು ಸಂಕಲ್ಪಿಸಿ ಉಪವಾಸ ಮಾಡಬೇಕು. ಸರ್ವಪಾಪಪರಿಹಾರಕ್ಕಾಗಿ ಶ್ರದ್ಧೆಯಿಂದಲೂ ಇಂದ್ರಿಯ ನಿಗ್ರಹದಿಂದಲೂ ಯುಕ್ತನಾಗಿ ಉಪವಾಸವನ್ನು ಮಾಡಬೇಕು.

ಈ ಏಕಾದಶಿಯಲ್ಲಿ ಹೆಂಗಸಾಗಲೀ ಗಂಡಸಾಗಲೀ ಉಪವಾಸ ಮಾಡಿದರೆ ಅದರ ಪ್ರಭಾವದಿಂದ ಮೇರುಮಂದರಗಳಿಗೆ ಸಮಾನವಾದ ಪಾಪವು ಭಸ್ಮವಾಗಿ ಹೋಗುವುದು. ಯಾರು ಗೋವನ್ನು ಜಲವನ್ನೂ ದಾನಮಾಡಲಿಕ್ಕೆ ಶಕ್ತರಾಗುವು ದಿಲ್ಲವೋ ಅವರು ಬಂಗಾರವನ್ನು ವಸ್ತ್ರವನ್ನು ಕಲಶವನ್ನೂ ದಾನಮಾಡಬೇಕು. ಈ ಏಕಾದಶಿಯಲ್ಲಿ ನೀರನ್ನು ಸ್ವೀಕರಿಸದೆ ಇರುವುದರಿಂದ ಒಂದೊಂದು ಯಾಮದಲ್ಲಿಯೂ ಕೋಟಿಕೋಟಿ ಬಂಗಾರದ ನಾಣ್ಯಗಳನ್ನು ದಾನಮಾಡಿದ ಫಲವು ಬರುವುದು. ಆ ಏಕಾದಶಿಯಲ್ಲಿ ಸ್ನಾನ, ದಾನ, ಜಪ ಇತ್ಯಾದಿ ಯಾವುದನ್ನು ಮಾಡಿದರೂ ಅದು ಅಕ್ಷಯವಾಗುವುದೆಂದು ಕೃಷ್ಣಪರಮಾತ್ಮನು ಹೇಳಿರುವನು. ಆ ದಿನದಲ್ಲಿ ಬಂಗಾರ ವಸ್ತ್ರ ಇತ್ಯಾದಿ ದಾನವ ಮಾಡಿದ್ದೂ ಅಕ್ಷಯವಾಗುವುದು. ಆ ದಿನದಲ್ಲಿ ಯಾರು ಅನ್ನವನ್ನು ತಿನ್ನುವನೋ ಅವನು ಪಾಪವನ್ನು ತಿನ್ನುವನು. ಈ ಲೋಕದಲ್ಲಿಯೇ ಅವನು ಹೊಲೆಯನಾಗುವನು. ಪರಲೋಕದಲ್ಲಿ ದುರ್ಗತಿಯನ್ನು ಹೊಂದುವನು. ಯಾರು ಜ್ಯೇಷ್ಠ ಶುಕ್ಲ ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯಲ್ಲಿ ದಾನಗಳನ್ನು ಮಾಡುವವರೋ ಅವರು ಉತ್ತಮವಾದ ಸ್ಥಾನವನ್ನು ಹೊಂದುವರು. ಬ್ರಹ್ಮಹತ್ಯೆಯನ್ನು ಮಾಡಿದವನೂ ಮದ್ಯಪಾನ ಮಾಡಿದವನೂ ಕದ್ದುಕೊಂಡವನೂ ಗುರುದ್ವೇಷಿಯೂ ಯಾವಾಗಲೂ ಸುಳ್ಳು ಹೇಳುವವನೂ

ಏಕಾದಶಿ ಉಪವಾಸಮಾಡಿದರೆ ಪಾಪರಹಿತನಾಗುವರು. ಈ ಏಕಾದಶಿಗೆ ನಿರ್ಜಲೈಕಾದಶಿಯೆಂದು ಹೆಸರು. ಈ ದಿವಸದಲ್ಲಿ ಸ್ತ್ರೀಯರೂ ಪುರುಷರೂ ಶ್ರದ್ಧೆಯುಳ್ಳವರಾಗಿ ಜಲಶಾಯಿಯಾದ ಪರಮಾತ್ಮನನ್ನು ಪೂಜಿಸಬೇಕು. ಹಾಗೆಯೇ ಜಲಧೇನುವನ್ನು ದಾನ ಮಾಡಬೇಕು. ಅಥವಾ ಪ್ರತ್ಯಕ್ಷ ಗೋದಾನವನ್ನೋ ಮಾಡಬೇಕು. ಅಥವಾ ಘೃತಧೇನುವನ್ನು ದಾನ ಮಾಡಬೇಕು. ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಬೇಕಾದಷ್ಟು ದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸಬೇಕು. ಬ್ರಾಹ್ಮಣರು ಸಂತುಷ್ಟರಾದರೆ ಪರಮಾತ್ಮನೂ ಸಂತುಷ್ಟನಾಗುವನು. ಯಾರು ಈ ಏಕಾದಶಿಯಲ್ಲಿ ಉಪವಾಸ ಮಾಡುವುದಿಲ್ಲವೋ ಅವರು ಆತ್ಮದ್ರೋಹವನ್ನು ಮಾಡಿದವರಾಗುತ್ತಾರೆ. ಅವರು ಪಾಪಿಗಳು. ದುರಾಚಾರಿಗಳು. ಮೋಸ ಹೋದವರು. ಯಾರು ಶಾಂತರಾಗಿ ಇಂದ್ರಿಯನಿಗ್ರಹವುಳ್ಳವರಾಗಿ ದಾನವನ್ನು ಮಾಡುತ್ತಾ ಭಗವಂತನ ಪೂಜೆಯನ್ನು ಮಾಡುತ್ತಾ ರಾತ್ರಿಯಲ್ಲಿ ಜಾಗರವನ್ನು ಮಾಡುತ್ತಾ ಈ ಏಕಾದಶಿಯಲ್ಲಿ ಉಪವಾಸವನ್ನು ಮಾಡುವರೋ ಅವರು ಪೂರ್ವದ ನೂರುತಲೆಯ ಪಿತೃಗಳಿಂದಲೂ ಉತ್ತರತ್ರ ಬರುವ ನೂರು ತಲೆಯವರಿಂದಲೂ ಸಹಿತರಾಗಿ ಭಗವಂತನ ಲೋಕವನ್ನು ಹೊಂದುವನು.

ಈ ನಿರ್ಜಲಾಏಕಾದಶಿಯಲ್ಲಿ ವಸ್ತ್ರ ಅಕ್ಕಿ ಗೋವು ನೀರು ಹಾಸಿಗೆ ಆಸನ ಕಮಂಡಲು ಛತ್ರ ಇವುಗಳನ್ನು ದಾನ ಮಾಡಬೇಕು. ಪಾತ್ರಭೂತವಾದ ಬ್ರಾಹ್ಮಣನಿಗೆ ಪಾದರಕ್ಷೆಯನ್ನು ದಾನಮಾಡಿದರೆ ಬಂಗಾರದ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಗುತ್ತಾನೆ. ಇದರ ಮಹಿಮೆಯನ್ನು ಕೇಳುವವರಿಗೆ ಉಂಟಾಗುತ್ತದೆ. ಏಕಾದಶೀದಿನದಲ್ಲಿ ಮಾವಿನಎಲೆ ಇತ್ಯಾದಿ ಎಲೆಗಳಿಂದ ಹಲ್ಲು ಉಜ್ಜಿಕೊಂಡು 'ಏಕಾದಶೀದಿನದಲ್ಲಿ ಆಹಾರವನ್ನು ಆಚಮನ ಮಾಡುವ ನೀರನ್ನು ಹೊರತು ಬೇರೆ ನೀರನ್ನು ಪರಮಾತ್ಮನ ಪ್ರೀತಿಗಾಗಿ ಸ್ವೀಕರಿಸುವುದಿಲ್ಲ' ಎಂದು ಸಂಕಲ್ಪ ಮಾಡಬೇಕು. ದ್ವಾದಶೀದಿನದಲ್ಲಿ ತ್ರಿವಿಕ್ರಮ ರೂಪಿಯಾದ ಪರಮಾತ್ಮನನ್ನು ಪೂಜಿಸಬೇಕು. ಗಂಧ ಪುಷ್ಪಧೂಪದಿಂದ ವಸ್ತ್ರ ಇತ್ಯಾದಿಗಳಿಂದ ಪೂಜಿಸಿ 'ದೇವದೇವ, ಹೃಷಿಕೇಶ, ಸಂಸಾರ ಸಮುದ್ರದಿಂದ ಉದ್ಧರಿಸುವವನೇ! ಉದಕುಂಭದಾನ ದಿಂದ ನನಗೆ ಉತ್ತಮವಾದ ಗತಿಯನ್ನು ಕೊಡು' ಎಂದು ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

ಜ್ಯೇಷ್ಠಮಾಸದಲ್ಲಿ ಶುಕ್ಲಪಕ್ಷದ ಏಕಾದಶಿಯಲ್ಲಿ ನೀರನ್ನು ಸ್ವೀಕರಿಸಿದರೆ ಉಪವಾಸಮಾಡಿ ಸಕ್ಕರೆಯನ್ನು ಉದಕುಂಭವನ್ನೂ ಬ್ರಾಹ್ಮಣರಿಗೆ ದಾನಮಾಡಿದರೆ ಪರಮಾತ್ಮನ ಸಮೀಪದಲ್ಲಿ ಸುಖದಿಂದ ಇರುತ್ತಾರೆ. ಬ್ರಾಹ್ಮಣರಿಗೆ ಉದಕುಂಭದಾನ

ಮಾಡಿ ಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕು. ಈ ರೀತಿಯಾಗಿ ಏಕಾದಶೀ ವ್ರತವನ್ನು ಮಾಡುತ್ತಾರೋ ಅವರು ಸರ್ವಪಾಪರಹಿತರಾಗಿ ಉತ್ತಮ ಸ್ಥಾನವನ್ನು ಹೊಂದುವರು. ಈ ದ್ವಾದಶಿಯು ಪಾಂಡವ ದ್ವಾದಶಿಯೆಂದು ಪ್ರಸಿದ್ಧಿಯನ್ನು ಹೊಂದಿತು. ಪಾಂಡವರು ಈ ವ್ರತವನ್ನು ಮಾಡಿದ ಕಾರಣ ಪಾಂಡವ ದ್ವಾದಶಿಯೆಂದು ಪ್ರಸಿದ್ಧಿಯುಂಟಾಯಿತು. (ಈ ಕಥೆಯು ಜ್ಯೇಷ್ಠ ಶುಕ್ಲ ಏಕಾದಶಿಯು ಪ್ರಶಸ್ತ ಎಂದು ಇಷ್ಟೇ ಹೇಳಲಿಕ್ಕೆ ಹೊರಟದ್ದು. ಇದರಿಂದ ಬೇರೆ ಏಕಾದಶೀ ಉಪವಾಸಬೇಕಾಗಿಲ್ಲವೆಂದು ತಿಳಿಯಬಾರದು. ಎಲ್ಲಾ ಏಕಾದಶಿಗಳಲ್ಲಿಯೂ ಅವಶ್ಯವಾಗಿ ಉಪವಾಸ ಮಾಡಲೇಬೇಕು. ಇಲ್ಲದಿದ್ದರೆ ಪ್ರತ್ಯವಾಯ ಬರುವುದು. ಮತ್ತು ವೈಷ್ಣವಾಗ್ರೇಸರರಾದ ಭೀಮಸೇನದೇವರ ಏಕಾದಶಿ ಉಪವಾಸ ಮಾಡುತ್ತಿದ್ದಿಲ್ಲ ಎಂದೂ ತಿಳಿಯಬಾರದು. ಅದು ಕೇವಲ ಮೋಹಕ ಕಥೆಯು. ಶುದ್ಧಭಾಗವತ ಧರ್ಮದಲ್ಲಿ ಆಸಕ್ತರಾದ ಭೀಮಸೇನದೇವರು ಯಾವಾಗಲೂ ಏಕಾದಶೀ ಉಪವಾಸವನ್ನು ಮಾಡುತ್ತಲೇ ಇರುವರು. ಆದುದರಿಂದ ಆಪಾತತಃ ತೋರುವ ಅರ್ಥವನ್ನು ಇಟ್ಟುಕೊಳ್ಳದೆ ಜ್ಯೇಷ್ಠಮಾಸದ ಶುಕ್ಲಏಕಾದಶೀಯಲ್ಲಿಯೂ ಅವಶ್ಯವಾಗಿ ಉಪವಾಸ ಮಾಡಬೇಕು ಎಂದು ಇಷ್ಟು ಅರ್ಥವನ್ನು ತೋರಿಸುವುದರಲ್ಲಿ ಈ ಕಥೆಗೆ ತಾತ್ಪರ್ಯವನ್ನು ಭಾವನೆ ಮಾಡಬೇಕು.)



## ಜ್ಯೇಷ್ಠ ಕೃಷ್ಣಪಕ್ಷದ ಏಕಾದಶೀ [1]

(ಜ್ಯೇಷ್ಠ) ಕೃಷ್ಣಪಕ್ಷದ ಏಕಾದಶಿಗೆ **ಅಪರಾ** ಎಂದು ಹೆಸರು. ಅಪರಾ ಎಂಬ ಈ ಏಕಾದಶಿಯಲ್ಲಿ ಉಪವಾಸವನ್ನು ಮಾಡುವುದರಿಂದ ಬ್ರಹ್ಮಹತ್ಯಾ ಗೋತ್ರಹತ್ಯಾ ಭ್ರೂಣಹತ್ಯಾ ಎಂಬ ಪಾಪಗಳನ್ನು ಮಾಡಿದವನೂ, ಇನ್ನೊಬ್ಬರ ಮೇಲೆ ಅಪವಾದವನ್ನು ಹೇಳಿದವನೂ, ಪರಸ್ತ್ರೀಯರಲ್ಲಿ ಆಸಕ್ತನಾದವನೂ, ಸುಳ್ಳು ಸಾಕ್ಷಿ ಹೇಳುವವನೂ, ಕಪಟದಿಂದ ಧಾನ್ಯಾದಿಗಳನ್ನು ಅಳೆಯುವವನೂ ಇತ್ಯಾದಿ ಪಾಪ ಮಾಡಿದವರೆಲ್ಲರೂ ನರಕಕ್ಕೆ ಹೋಗಬೇಕಾದವರು ಅಪರಾ ಏಕಾದಶಿಯಲ್ಲಿ ಉಪವಾಸ ಮಾಡುವುದರಿಂದ ಸ್ವರ್ಗವನ್ನು ಹೊಂದುವರು. ಕ್ಷತ್ರಿಯನಾದವನು ಕ್ಷತ್ರಿಯಧರ್ಮವನ್ನು ಬಿಟ್ಟು ಯುದ್ಧದಿಂದ ಓಡಿಬಂದರೆ ಅವನು ಘೋರವಾದ

1. ಪ.ಪು.ಉ.ಖಂ. ಅ.52

ನರಕವನ್ನು ಹೊಂದುವನು. ಆದರೆ ಅವನು ಅಪರಾಏಕಾದಶಿಯಲ್ಲಿ ಉಪವಾಸ ಮಾಡಿದರೆ ನರಕವನ್ನು ಹೊಂದಲಾರನು. ಮಹಾಪಾಪವನ್ನು ಮಾಡಿ ನರಕಕ್ಕೆ ಹೋಗಬೇಕಾದವನು ಅಪರಾಏಕಾದಶಿಯಲ್ಲಿ ಉಪವಾಸಮಾಡಿ ಸದ್ಗತಿಯನ್ನು ಹೊಂದುವನು.

ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಾದಿ ಮಾಡಿದರೆ ಬರುವ ಪುಣ್ಯವೂ ಗಯೆಯಲ್ಲಿ ಪಿತೃಗಳಿಗೆ ಪಿಂಡದಾನ ಮಾಡಿ ತೃಪ್ತಿಪಡಿಸಿದ ಪುಣ್ಯವೂ ಸಿಂಹರಾಶಿಯಲ್ಲಿ ಗುರುವು ಇರುವಾಗ ಗೋದಾವರೀಸ್ನಾನದ ಫಲವೂ ಬದರಿಕಾ ಶ್ರಮಕ್ಕೆ ಯಾತ್ರೆ ಮಾಡಿ ಅಲ್ಲಿ ಇರುವ ತೀರ್ಥದಲ್ಲಿ ಸ್ನಾನಮಾಡಿದರೆ ಬರುವ ಫಲವು ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರದಲ್ಲಿ ಯಜ್ಞಮಾಡಿ ಆನೆ ಕುದುರೆ ಬಂಗಾರ ಗಳನ್ನು ದಾನಮಾಡಿ ದಕ್ಷಿಣೆಯನ್ನು ಕೊಟ್ಟರೆ ಏನು ಫಲವೋ ಆ ಫಲವು ಅಪರಾ ಉಪವಾಸದಿಂದ ಬರುತ್ತದೆ. ಈ ಏಕಾದಶಿಯು ಪಾಪವೆಂಬಮರಕ್ಕೆ ಕೊಡಲಿಯಂತೆ ಇರುವುದು. ಪಾಪವೆಂಬ ಕಟ್ಟಿಗೆಗೆ ಬೆಂಕಿಯಂತೆ ಇರುವುದು. ಪಾಪವೆಂಬ ಕತ್ತಲೆಗೆ ಸೂರ್ಯನಂತೆ ಇರುವುದು. ಪಾಪವೆಂಬ ಜಿಂಕೆಗೆ ಸಿಂಹದಂತೆ ಇರುವುದು. ಏಕಾದಶೀ ಉಪವಾಸ ಮಾಡದೆ ಇದ್ದವರು ನೀರಿನ ಗುಳ್ಳೆಗಳಂತೆ ಸಾಯಲಿಕ್ಕೇ ಹುಟ್ಟುವರು. ಅಪರಾಏಕಾದಶಿಯನ್ನು ಉಪವಾಸಮಾಡಿ ಪರಮಾತ್ಮನನ್ನು ಪೂಜೆ ಮಾಡುವುದರಿಂದ ಸರ್ವಪಾಪರಹಿತನಾಗಿ ಪರಮಾತ್ಮನಲೋಕದಲ್ಲಿ ಸತ್ಕೃತನಾಗಿರು ವನು. ಇದರ ಮಹಿಮೆಯನ್ನು ಓದುವುದರಿಂದಲೂ ಕೇಳುವುದರಿಂದಲೂ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಬರುವುದು.



# ಆಷಾಢಶುದ್ಧ ಏಕಾದಶೀ [1]

ಆಷಾಢ ಶುಕ್ಲ ಏಕಾದಶಿಗೆ **ಶಯನೀ** ಎಂದು ಹೆಸರು. ಸರ್ವಪಾಪಪರಿಹಾರಕ ವಾದದ್ದು. ಅದನ್ನು ಕೇಳುವ ಮಾತ್ರದಿಂದಲೇ ವಾಜಪೇಯಯಾಗವನ್ನು ಮಾಡಿದ ಫಲವು ಬರುವುದು. ಇದು ಪಾಪಿಗಳ ಪಾಪನಾಶಕ್ಕಾಗಿಯೇ ಭಗವಂತನಿಂದ ನಿರ್ಮಿತವಾಗಿರುವುದು. ಇದರ ಕಥೆಯನ್ನು ಕೇಳುವವರಿಗೂ ಉತ್ತಮವಾದ ಗತಿಯಾಗುವುದು. ಇದರ ಕಥೆಯನ್ನು ಕೇಳುವವರೇ ಪರಮಾತ್ಮನ ಭಕ್ತರಾಗುವರು.

---

1. ಪ.ಪು.ಉ.ಖಂ. ಅ.55

ಆಷಾಢಮಾಸದಲ್ಲಿ ವಾಮನದೇವರನ್ನು ಪೂಜಿಸಬೇಕು. ಆಷಾಢಮಾಸದ ಶುಕ್ಲ ಏಕಾದಶಿಯಲ್ಲಿ ವಾಮನರೂಪಿ ಪರಮಾತ್ಮನನ್ನು ಪೂಜಿಸಿದರೆ ಮೂರುಲೋಕವನ್ನು ಸಮಸ್ತದೇವತೆಗಳನ್ನೂ ಪೂಜಿಸಿದ ಫಲವು ಬರುವುದು. ಇದರ ಮಹಿಮೆಯು ಹೀಗೆ ಇರುವುದು—

ಪೂರ್ವದಲ್ಲಿ ತ್ರೇತಾಯುಗದಲ್ಲಿ ಬಲಿಯೆಂಬ ದಾನವನಿದ್ದನು. ಅವನು ನಿತ್ಯವೂ ಪರಮಾತ್ಮನನ್ನು ಪೂಜಿಸುತ್ತಿದ್ದನು. ಅನೇಕ ಯಜ್ಞಗಳಿಂದ ಪರಮಾತ್ಮನನ್ನು ಯಾವಾಗಲೂ ಆರಾಧಿಸುತ್ತಿದ್ದನು. ಇಂದ್ರದೇವರೂ ಬೃಹಸ್ಪತ್ಯಾ ಚಾರ್ಯರಿಂದ ದೇವತೆಗಳಿಂದ ಕೂಡಿಕೊಂಡು ಬಹುವಿಧವಾಗಿ ಪರಮಾತ್ಮನನ್ನು ಪೂಜಿಸಿದರು. ತರುವಾಯ ಪರಮಾತ್ಮನು ವಾಮನ ಅವತಾರವನ್ನು ಮಾಡಿ ಬಲಿಯೊಡನೆ ಮೂರುವರೆ ಹೆಜ್ಜೆ ಭೂಮಿಯನ್ನು ಯಾಚಿಸಿದನು. ಶುಕ್ರಾಚಾರ್ಯರು ಬಲಿಯೊಡನೆ ಕೊಡಬೇಡವೆಂದರು. ಬಲಿಯು ಸಂಕಲ್ಪಮಾಡಿ ಕೈಯಲ್ಲಿ ನೀರನ್ನು ಹಾಕಲು ವಾಮನದೇವರ ರೂಪವು ದೊಡ್ಡದಾಯಿತು. ಭೂಲೋಕದಲ್ಲಿ ಅವರ ಪಾದಗಳು ಇದ್ದವು. ಭುವಲೋಕದಲ್ಲಿ ಮೊಳಕಾಲುಗಳು ಇದ್ದವು. ಸ್ವರ್ಗಲೋಕದಲ್ಲಿ ಕಟಿಪ್ರದೇಶವೂ ಮಹಲೋಕದಲ್ಲಿ ಹೊಟ್ಟೆಯೂ ಜನಲೋಕದಲ್ಲಿ ಹೃದಯವು ತಪೋಲೋಕದಲ್ಲಿ ಕುತ್ತಿಗೆಯೂ ಸತ್ಯಲೋಕದಲ್ಲಿ ಮುಖವೂ ಆದರ ಮೇಲೆ ತಲೆಯೂ ಇದ್ದಿತು. ಚಂದ್ರಸೂರ್ಯಾದಿಗ್ರಹಗಳೂ ನಕ್ಷತ್ರಗಳೂ ಇಂದ್ರಾದಿದೇವತೆ ಗಳೂ ನಾಗಗಳೂ ಯಕ್ಷಗಂಧರ್ವಕಿನ್ನರರೂ ನಾನಾವಿಧ ವೇದಸೂಕ್ತಗಳಿಂದ ಸ್ತೋತ್ರ ಮಾಡಿದರು. ಬಲಿಯನ್ನು ಕೈಯಲ್ಲಿ ಹಿಡಿದುಕೊಂಡು ಭೂಮಿಯನ್ನೆಲ್ಲಾ ಮೂರು ಹೆಜ್ಜೆಯಿಂದ ಅಳೆಯುವವನಾದನು. ಅವನ ಬೆನ್ನಿನ ಮೇಲೆ ಅರ್ಧಪಾದವನ್ನು ಇಟ್ಟನು. ತರುವಾಯ ನನ್ನ ಪೂಜಕನಾದ ಬಲಿಯು ರಸಾತಲಕ್ಕೆ ಹೋದನು. ಅವನು ವಿನಯದಿಂದ ಪರಮಾತ್ಮನಿಗೆ ನಮಸ್ಕರಿಸಿದನು. ಪರಮಾತ್ಮನು ಸಂತುಷ್ಟನಾದನು. ಆಷಾಢಶುಕ್ಲಪಕ್ಷದಲ್ಲಿ ಒಂದು ಪರಮಾತ್ಮನ ರೂಪವು ಬಲಿಯ ಬಳಿಯಲ್ಲಿ ಇರುವುದು. ಇನ್ನೊಂದು ರೂಪವು ಕ್ಷೀರಸಮುದ್ರದಲ್ಲಿ ಶೇಷದೇವರ ಮೇಲೆ ಮಲಗಿರುವುದು. ಆ ರೂಪವು ಕಾರ್ತಿಕಮಾಸದ ಏಕಾದಶಿಯು ಬರುವ ವರೆಗೆ ಮಲಗಿರುವುದು.

ಈ ಏಕಾದಶೀವ್ರತವನ್ನು ಮಾಡುವವನು ಉತ್ತಮವಾದ ಗತಿಯನ್ನು ಹೊಂದುವನು. ಆದುದರಿಂದ ಅವಶ್ಯವಾಗಿ ಈ ಏಕಾದಶಿಯಲ್ಲಿ ಉಪವಾಸವನ್ನು ಮಾಡಬೇಕು. ಈ ಏಕಾದಶಿಯಲ್ಲಿ ಪರಮಾತ್ಮನು ಮಲಗುವನು. ಈ ದಿವಸದಲ್ಲಿ

ಶಂಖಚಕ್ರಗದಾಧಾರಿಯಾದ ಪರಮಾತ್ಮನನ್ನು ಪೂಜಿಸಬೇಕು. ಭಕ್ತಿಯಿಂದ ರಾತ್ರಿಯಲ್ಲಿ ಜಾಗರಣವನ್ನೂ ಮಾಡಬೇಕು. ಹೀಗೆ ಮಾಡಿದರೆ ಎಷ್ಟು ಪುಣ್ಯವು ಬರುವುದೆಂದು ಹೇಳಲಿಕ್ಕೇ ಆಗಲಾರದು. ಯಾರು ಈ ಪ್ರಕಾರವಾದ ಉತ್ತಮವಾದ ಏಕಾದಶೀವ್ರತವನ್ನು ಮಾಡುವರೋ ಅವನು ಚಂಡಾಲನಾಗಿದ್ದರೂ ಯಾವಾಗಲೂ ಪರಮಾತ್ಮನಿಗೆ ಪ್ರಿಯನಾಗಿರುವನು.

ಯಾರು ದೀಪದಾನವನ್ನು ಮಾಡುತ್ತಾ ಪಲಾಶಪತ್ರದಲ್ಲಿ ಭೋಜನಮಾಡುತ್ತಾ ಚಾತುರ್ಮಾಸ್ಯವನ್ನು ಕಳೆಯು ವರೋ ಅವರು ಪರಮಾತ್ಮನ ಪ್ರಿಯರಾಗುವರು. ಚಾತುರ್ಮಾಸ್ಯಕಾಲದಲ್ಲಿ ನೆಲದ ಮೇಲೆ ಮಲಗಬೇಕು. ಶ್ರಾವಣಮಾಸದಲ್ಲಿ ಕಾಯಿಪಲ್ಯಗಳನ್ನು ಭಾದ್ರಪದಮಾಸದಲ್ಲಿ ಮೊಸರನ್ನು ಆಶ್ವಿನಮಾಸದಲ್ಲಿ ಹಾಲನ್ನು ಕಾರ್ತಿಕಮಾಸದಲ್ಲಿ ಬೇಳೆಗಳನ್ನು ಪರಿತ್ಯಜಿಸ ಬೇಕು. ಬ್ರಹ್ಮಚಾರಿಯಾಗಿರಬೇಕು. ಏಕಾದಶಿವ್ರತದಿಂದಲೇ ಎಲ್ಲಾ ಪಾಪವೂ ಹೋಗುತ್ತದೆ. ಆದುದರಿಂದ ಅವಶ್ಯವಾಗಿ ಏಕಾದಶೀವ್ರತವನ್ನು ಮಾಡಬೇಕು. ಮರೆತು ಬಿಡಬಾರದು. ಈ ಕಥೆಯನ್ನು ಕೇಳಿದರೆ ಅಶ್ವಮೇಧಯಾಗ ಮಾಡಿದ ಫಲವು ಬರುವುದು.



# ಆಷಾಢ ಬಹುಳ ಏಕಾದಶೀ

ಆಷಾಢ ಕೃಷ್ಣ ಏಕಾದಶಿಗೆ **ಯೋಗಿನೀ** ಎಂದು ಹೆಸರು. ಇದು ಸಂಸಾರ ಸಮುದ್ರದಲ್ಲಿ ಮುಳುಗಿರುವವರಿಗೆ ದೋಣಿಯಂತೆ ಇರುವುದು. ಮೂರು ಜಗತ್ತಿನಲ್ಲಿ ಸಾರಭೂತವಾದದ್ದು. ಇದರ ವಿಷಯದಲ್ಲಿ ಪುರಾತನವಾದ ಕಥೆಯಿರುವುದು. ಅಲಕಾಪಟ್ಟಣದಲ್ಲಿ ರುದ್ರದೇವರ ಭಕ್ತನಾದ ಕುಬೇರನಿರುವನು. ಅವನಿಗೆ ಹೇಮಮಾಲೀ ಎನ್ನುವವನು ಯಾವಾಗಲೂ ಪೂಜೆಗೆ ಪುಷ್ಪವನ್ನು ತಂದು ಕೊಡುವವನಾಗಿದ್ದನು. ಅವನಿಗೆ ವಿಶಾಲಾಕ್ಷಿಯೆಂದು ಹೆಸರುಳ್ಳ ಸುಂದರಿಯಾದ ಹೆಂಡತಿಯಿದ್ದಳು. ಒಂದು ದಿವಸದಲ್ಲಿ ಅವನು ಮಾನಸಸರೋವರದಿಂದ ಪುಷ್ಪಗಳನ್ನು ತಂದು ಮನೆಯಲ್ಲಿಯೇ ಇಟ್ಟನು. ಪತ್ನಿಯ ಮೇಲಿನ ಪ್ರೇಮದಲ್ಲಿ [2]ಆಸಕ್ತನಾದ ಕುಬೇರನ ಮನೆಗೆ ಹೋಗಲಿಲ್ಲ. ಕುಬೇರನು ದೇವರ ಮನೆಯಲ್ಲಿ ರುದ್ರದೇವರಿಗೆ ಪೂಜೆಮಾಡಿದನು. ಮಧ್ಯಾಹ್ನ ಸಮಯದಲ್ಲಿ ಪುಷ್ಪಗಳನ್ನು ನಿರೀಕ್ಷಿಸಿ

1. ಪ.ಪು.ಉ.ಖಂ. ಅ.54    2. ಆಸಕ್ತನಾಗಿ

ದನು. ಹೇಮಮಾಲಿಯು ತನ್ನ ಮನೆಯಲ್ಲಿ ಹೆಂಡತಿಯೊಡನೆ ವಿಹರಿಸುತ್ತಿದ್ದನು. ಕುಬೇರನು ಹೊತ್ತಾಯಿತೆಂದು ಕೋಪಿಸಿಕೊಂಡು 'ಯಕ್ಷರೇ! ದುರಾತ್ಮನಾದ ಹೇಮಮಾಲಿಯು ಯಾಕೆ ಬರಲಿಲ್ಲ' ಎಂದು ಕೇಳಿದನು. ಅದಕ್ಕೆ ಯಕ್ಷರು ಅವನು ಹೆಂಡತಿಯಲ್ಲಿ ಕಾಮುಕನಾಗಿ ವಿಹಾರ ಮಾಡುತ್ತಿರುವನು' ಎಂದರು. ಅದನ್ನು ಕೇಳಿ ಕುಬೇರನು ಕೋಪವುಳ್ಳವನಾಗಿ ಹೇಮಮಾಲಿಯನ್ನು ಕರೆಸಿದನು. ಅವನು ಹೊತ್ತಾಯಿತೆಂದು ಭಯಪಡುವವನಾಗಿ ಸ್ನಾನ ಮಾಡದೆಯೇ ಕುಬೇರನ ಮುಂದೆ ಬಂದು ನಿಂದನು. ಅವನನ್ನು ನೋಡಿ ಕುಬೇರನು ಕೋಪವುಳ್ಳವನ್ನಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡವನಾಗಿ ರೋಷವುಳ್ಳವನಾಗಿ ಕೋಪದಿಂದ ತುಟಿಯನ್ನು ನಡುಗಿಸುವವನಾಗಿ 'ಎಲಾ ಪಾಪಿಯೇ! ದುಷ್ಟನೇ! ದುರಾಚಾರಿಯೇ! ದೇವರಿಗೆ ಅವಮಾನಮಾಡಿ ನೀನು ಹದಿನೆಂಟು ಕುಷ್ಠರೋಗವುಳ್ಳವನಾಗಿ ಹೆಂಡತಿಯ ವಿಯೋಗವುಳ್ಳವನಾಗಿ ಈ ಸ್ಥಾನದಿಂದ ಭ್ರಷ್ಟನಾಗಿ ಹೋಗು' ಎಂದು ಶಪಿಸಿದನು.

ಕೂಡಲೇ ಅವನು ಆ ಸ್ಥಾನದಿಂದ ಬಿದ್ದನು. ಕುಷ್ಠದಿಂದ ಪೀಡಿತನಾಗಿ ಮಹಾದುಃಖವುಳ್ಳವನಾದನು. ಅವನಿಗೆ ಹಗಲಲ್ಲಿ ಸುಖವಿರಲಿಲ್ಲ. ರಾತ್ರಿಯಲ್ಲಿ ನಿದ್ದೆಯಿರಲಿಲ್ಲ. ನೆರಳಿನಲ್ಲಿ ಹೋದರೂ ಬಿಸಿಲಿಗೆ ಹೋದರೂ ದುಃಖವಾಗುತ್ತಿತ್ತು. ರುದ್ರದೇವರ ಪೂಜೆಯ ಪ್ರಭಾವದಿಂದ ಸ್ಮರಣೆಗೆ ಲೋಪವಾಗಿಲ್ಲ. ಪಾಪದಿಂದ ಕೂಡಿದವನಾದರೂ ಪೂರ್ವಕರ್ಮವನ್ನು ಸ್ಮರಿಸಿಕೊಂಡು ಇದ್ದನು. ಅವನು ಸಂಚರಿಸುತ್ತಾ ಹೇಮಾದ್ರಿಯಲ್ಲಿ ಮಾರ್ಕಂಡೇಯರನ್ನು ನೋಡಿದನು. ಪಾಪಕರ್ಮವನ್ನು ಮಾಡಿದ ಅವನು ದೂರದಲ್ಲಿಯೇ ಅವರ ಪಾದಗಳಿಗೆ ನಮಸ್ಕರಿಸಿದನು. ಮಾರ್ಕಂಡೇಯರು ಪರೋಪಕಾರಸ್ವಭಾವವುಳ್ಳವರು ನಡುಗುತ್ತಾ ಇದ್ದ ಅವನನ್ನು ನೋಡಿ ಅವನನ್ನು ಕೂಗಿ 'ನಿನಗೆ ಹೇಗೆ ಕುಷ್ಠರೋಗವು ಬಂದಿತು' ಎಂದು ಕೇಳಿದರು. ಅವನು ನಡೆದ ವಿಷಯವೆಲ್ಲವನ್ನೂ ಹೇಳಿ 'ಈಗ ಪುಣ್ಯದಿಂದ ತಮ್ಮ ಸಮೀಪಕ್ಕೆ ಬಂದು ಸೇರಿದ್ದೇನೆ. ತಮ್ಮಂತಹ ಸಜ್ಜನರ ಮನಸ್ಸು ಪರೋಪಕಾರ ಮಾಡುವ ಸ್ವಭಾವವುಳ್ಳದ್ದು. ಅಪರಾಧಿಯಾದ ನನ್ನನ್ನು ಉದ್ಧಾರಮಾಡಬೇಕು' ಎಂದು ಕೇಳಿಕೊಂಡನು.

ಅದಕ್ಕೆ ಮಾರ್ಕಂಡೇಯರು 'ನೀನು ಸತ್ಯವನ್ನೇ ಹೇಳಿರುವಿ. ಸುಳ್ಳು ಹೇಳಲಿಲ್ಲ. ಆದುದರಿಂದ ನಿನಗೆ ಶುಭವನ್ನು ಉಂಟುಮಾಡುವ ಒಂದು ವ್ರತವನ್ನು ಹೇಳುವೆನು. ಆಷಾಢ ಕೃಷ್ಣಪಕ್ಷದ ಯೋಗಿನೀ ಎಂಬ ಏಕಾದಶೀವ್ರತವನ್ನು ಮಾಡು. ಆ ವ್ರತದ ಪ್ರಭಾವದಿಂದ ನಿನ್ನ ಕುಷ್ಠರೋಗವು ಪರಿಹೃತವಾಗುವುದು' ಎಂದು ಹೇಳಿದರು.

ಅದನ್ನು ಕೇಳಿ ಆಯಕ್ಷನು ಮಾರ್ಕಂಡೇಯರಿಗೆ ಉದ್ದಕ್ಕೆ ನಮಸ್ಕಾರ ಮಾಡಿದನು. ಮುನಿಗಳು ಎಬ್ಬಿಸಿದರು. ಅವನು ಬಹುಸಂತೋಷವನ್ನು ಹೊಂದಿದನು. ಮಾರ್ಕಂಡೇಯರ ಉಪದೇಶದಿಂದ ಆ ವ್ರತವನ್ನು ಮಾಡಿದನು. ಅವನ ಹದಿನೆಂಟು ಕುಷ್ಠಗಳೂ ನಷ್ಟವಾದವು. ಅವನು ಸುಖವನ್ನು ಹೊಂದಿದನು. ಈ ಯೋಗಿನೀ ಏಕಾದಶೀ ಉಪವಾಸ ಮಾಡುವವನು ಎಂಭತ್ತೆಂಟು ಸಾವಿರಬ್ರಾಹ್ಮಣರಿಗೆ ಭೋಜನ ಮಾಡಿಸಿದ ಪುಣ್ಯವನ್ನು ಹೊಂದುವನು. ಇದರ ಮಹಿಮೆಯನ್ನು ಹೇಳು ವುದರಿಂದಲೂ ಕೇಳುವುದರಿಂದಲೂ ಮಹಾಪಾಪಗಳ ಪರಿಹಾರವಾಗುವುದು.



## ಶ್ರಾವಣ ಶುಕ್ಲ ಏಕಾದಶೀ [1]

ದ್ವಾಪರಯುಗದ ಆದಿಯಲ್ಲಿ ಮಾಹಿಷ್ಮತೀನಗರದಲ್ಲಿ ಮಹೀಜಿತ್ ಎಂದು ಹೆಸರುಳ್ಳ ರಾಜನು ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಆದರಿಂದ ಅವನಿಗೆ ರಾಜ್ಯವು ಸುಖಪ್ರದವಾಗಿರಲಿಲ್ಲ. ಮಕ್ಕಳಿಲ್ಲದವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿರುವುದಿಲ್ಲ ಎಂದು ಯೋಚಿಸುತ್ತಾ ಇದ್ದನು. ಹೀಗೆಯೇ ಬಹುಸಮಯವು ಕಳೆಯಿತು. ಸರ್ವಸುಖಕ್ಕೆ ಕಾರಣನಾದ ಮಗನು ರಾಜನಿಗೆ ಹುಟ್ಟಲೇ ಇಲ್ಲ. ರಾಜನು ತಾನು ಮುದುಕನಾದದ್ದನ್ನು ನೋಡಿಕೊಂಡು ಬಹುಯೋಚನೆಯಲ್ಲಿ ಆಸಕ್ತನಾದನು. ಪ್ರಜೆಗಳ ಮಧ್ಯದಲ್ಲಿ 'ಜನರೇ! ನಾನು ಈ ಜನ್ಮದಲ್ಲಿ ಪಾಪವನ್ನು ಮಾಡಿಲ್ಲ. ಅನ್ಯಾಯದಿಂದ ಸಂಪಾದಿತ ವಾದ ಹಣವನ್ನು ಕೋಶಕ್ಕೆ ಸೇರಿಸಲಿಲ್ಲ. ನಾನು ಯಾವಾಗಲೂ ಬ್ರಾಹ್ಮಣಸೊತ್ತನ್ನು ದೇವರ ಸೊತ್ತನ್ನು ಅಪಹರಿಸಲಿಲ್ಲ. ಪ್ರಜೆಗಳನ್ನು ಮಕ್ಕಳನ್ನು ಸಾಕುವಂತೆ ಧರ್ಮದಿಂದ ರಕ್ಷಣೆ ಮಾಡುತ್ತಿದ್ದೇನೆ. ಬಂಧುಗಳೂ ತಪ್ಪುಮಾಡಿದರೆ ಅವರಿಗೆ ಶಿಕ್ಷೆಯನ್ನು ಮಾಡುತ್ತಲೇ ಇದ್ದೇನೆ. ದೊಡ್ಡವರನ್ನು ಪೂಜಿಸುತ್ತಾ ಇದ್ದೇನೆ. ದ್ವೇಷಿಸುವುದಿಲ್ಲ. ಹೀಗೆ ಧರ್ಮದಲ್ಲಿ ಇರುವ ನನಗೆ ಯಾಕೆ ಮಕ್ಕಳಾಗಿಲ್ಲವೆಂಬು ದನ್ನು ನೀವು ಸ್ವಲ್ಪ ವಿಚಾರಮಾಡಿರಿ' ಎಂದು ಹೇಳಿದನು.

ಈಪ್ರಕಾರವಾದ ರಾಜನ ಮಾತನ್ನು ಕೇಳಿ ಜನರು ಪುರೋಹಿತರಿಂದ ಸಹಿತರಾಗಿ ರಾಜನಿಗೆ ಹಿತವನ್ನು ಮಾಡ ಬೇಕೆಂದು ಯೋಚಿಸಿ ವನಕ್ಕೆ ಹೋದರು.

---

1. ಪ.ಪು.ಉ.ಖಂ. ಅ.57

ರಾಜನಿಗೆ ಹಿತವನ್ನು ಮಾಡಬೇಕೆಂದು ಇಚ್ಛೆಯುಳ್ಳವರಾಗಿ ಅಲ್ಲಲ್ಲಿ ಆಶ್ರಮಗಳನ್ನು ನೋಡುತ್ತಾ ಮಹಾತಪಸ್ವಿಯಾದ ಲೋಮಶಮುನಿಗಳನ್ನು ನೋಡಿದರು. ಒಂದು ಕಲ್ಪವಾಗಲು ಅವರ ಒಂದು ರೋಮವು ಉದುರುತ್ತದೆ. ಆದುದರಿಂದ ಅವರಿಗೆ ಲೋಮಶ ಎಂದು ಹೆಸರು. ತ್ರಿಕಾಲಜ್ಞಾನಿಗಳಾದ ಆ ಲೋಮಶರನ್ನು ನೋಡಿ ಸಂತೋಷವುಳ್ಳವರಾಗಿ ನಮ್ಮ ಭಾಗ್ಯದಿಂದಲೇ ಇವರು ನಮಗೆ ಸಿಕ್ಕಿದರು' ಎಂದು ಮಾತಾಡಿಕೊಂಡರು. ಲೋಮಶರು ಅವರನ್ನು ನೋಡಿ 'ನೀವು ಇಲ್ಲಿಗೆ ಯಾವ ಕಾರಣದಿಂದ ಬಂದಿರುವಿರಿ' ನನ್ನನ್ನು ನೋಡುತ್ತಾ ಸಂತೋಷಪಟ್ಟವರಾಗಿ ಸ್ತೋತ್ರ ಮಾಡುವಿರಿ. ನಿಮಗೆ ಹಿತವನ್ನು ನಿಶ್ಚಯವಾಗಿಯೂ ಮಾಡುವೆನು. ನನ್ನಂತವರ ಜನ್ಮವು ಪರೋಪಕಾರಕ್ಕಾಗಿಯೇ ಇರುವುದು' ಎಂದರು.

ಅದನ್ನು ಕೇಳಿ ಜನರು 'ತಾವು ದೊಡ್ಡವರು. ಒಂದು ಕಾರ್ಯಕ್ಕಾಗಿ ನಾವು ತಮ್ಮ ಬಳಿಗೆ ಬಂದಿರುವೆವು. ಮಹೀಜಿತ್ ಎಂಬ ಹೆಸರುಳ್ಳ ರಾಜನು ಈಗ ಪುತ್ರನಿಂದ ರಹಿತನಾಗಿರುವನು. ನಾವು ಅವನ ಪ್ರಜೆಗಳು. ನಮ್ಮನ್ನು ಅವನು ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸುತ್ತಿರುವನು. ಅಂತಹ ರಾಜನಿಗೆ ಮಕ್ಕಳಿಲ್ಲದಿರುವುದನ್ನು ನೋಡಿ ಅವನ ದುಃಖದಿಂದ ನಾವೂ ದುಃಖವುಳ್ಳವರಾಗಿ ತಪಸ್ಸನ್ನು ಮಾಡಬೇಕೆಂದು ಇಲ್ಲಿಗೆ ಬಂದಿರುವೆವು. ಆ ರಾಜನ ಭಾಗ್ಯದಿಂದ ತಾವು ನನ್ನ ಕಣ್ಣಿಗೆ ಬಿದ್ದಿರುವಿರಿ. ತಮ್ಮಂತಹ ದೊಡ್ಡವರನ್ನು ನೋಡುವುದರಿಂದಲೇ ಕಾರ್ಯಸಿದ್ಧಿಯಾಗುವುದು. ರಾಜನಿಗೆ ಮಕ್ಕಳಾಗುವ ಉಪಾಯವನ್ನು ತಾವು ಹೇಳಬೇಕು' ಎಂದು ಕೇಳಿಕೊಂಡರು.

ಅವರ ಮಾತನ್ನು ಕೇಳಿ ಲೋಮಶರು ಒಂದು ಮುಹೂರ್ತಕಾಲ ಧ್ಯಾನ ಮಾಡುವವರಾಗಿ ಆ ರಾಜನ ಪೂರ್ವಜನ್ಮದಲ್ಲಿ ಒಬ್ಬ ವೈಶ್ಯನಾಗಿದ್ದನು. ಅವನು ಹಣದಿಂದ ರಹಿತನಾಗಿದ್ದನು. ಜನರನ್ನು ಉಪದ್ರಪಡಿಸುತ್ತಿದ್ದನು. ವ್ಯಾಪಾರದಲ್ಲಿ ಆಸಕ್ತನಾಗಿ ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಿದ್ದನು. ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿದಿನದಲ್ಲಿ ಮಧ್ಯಾಹ್ನಕಾಲದಲ್ಲಿ ಒಂದು ಇಳಿಭಾವಿಯನ್ನು ನೋಡಿ ನೀರನ್ನು ಕುಡಿಯಬೇಕೆಂದು ಯೋಚಿಸಿದನು. ಆಗಲೇ ಒಂದು ದನವು ಕರುವಿನಿಂದ ಸಹಿತ ವಾಗಿ ನೀರಡಿಕೆಯಿಂದ ಪೀಡಿತವಾಗಿ ನೀರನ್ನು ಕುಡಿಯಲು ಅಲ್ಲಿಗೆ ಬಂದಿತು. ಆ ವೈಶ್ಯನು ಅದನ್ನು ತಡೆದು ತಾನು ನೀರನ್ನು ಕುಡಿದನು. ಆ ಪಾಪದಿಂದ ಈಗ ರಾಜನಿಗೆ ಮಕ್ಕಳಾಗಲಿಲ್ಲ, ಯಾವುದೋ ಒಂದು ಜನ್ಮದಲ್ಲಿ ಮಾಡಿದ ಪುಣ್ಯದಿಂದ ರಾಜ್ಯವು ಮಾತ್ರ ಸಿಕ್ಕಿತು' ಎಂದು ಹೇಳಿದರು. ಅದಕ್ಕೆ ಪ್ರಜೆಗಳು 'ಪುಣ್ಯದಿಂದ ಪಾಪವು ಕ್ಷಯವನ್ನು ಹೊಂದುವುದೆಂದು ಪುರಾಣದಲ್ಲಿ ಹೇಳುತ್ತದೆ. ಆದುದರಿಂದ ಆ

ಪಾಪವನ್ನು ಪರಿಹರಿಸುವ ಪುಣ್ಯವನ್ನು ಉಪದೇಶಿಸಿರಿ' ಎಂದು ಕೇಳಿದರು. ಆದಕ್ಕೆ ಲೋಮಶರು 'ಶ್ರಾವಣಮಾಸದ ಶುಕ್ಲಪಕ್ಷದ ಏಕಾದಶಿಗೆ '**ಪುತ್ರದಾ**' ಎಂದು ಹೆಸರು. ಅದು ಅಭೀಷ್ಟಪ್ರದವಾದದ್ದು. ಆದಿವಸದಲ್ಲಿ ಉಪವಾಸವನ್ನು ಮಾಡಿರಿ' ಎಂದು ಹೇಳಿದರು.

ಅದನ್ನು ಕೇಳಿ ಪ್ರಜೆಗಳು ಲೋಮಶರಿಗೆ ನಮಸ್ಕರಿಸಿ ತಮ್ಮ ಊರಿಗೆ ಬಂದು ಆ ಏಕಾದಶೀವ್ರತವನ್ನು ಮಾಡಿ ಅದರ ಪುಣ್ಯವನ್ನು ರಾಜನಿಗೆ ಧಾರೆಯೆರೆದು ಕೊಟ್ಟರು. ತರುವಾಯ ರಾಣಿಯು ಗರ್ಭಿಣಿಯಾದಳು. ಉತ್ತಮಕಾಲದಲ್ಲಿ ಉತ್ತಮ ಮಗನನ್ನು ಹಡೆದಳು. ಆದುದರಿಂದ ಈ ಏಕಾದಶಿಯು ಪ್ರಶಸ್ತವಾದದ್ದು.

**ಅದೇ ದ್ವಾದಶೀದಿವಸದಲ್ಲಿ ದೇವರಿಗೆ ಪವಿತ್ರಾರೋಪಣ** ಮಾಡಬೇಕು. ಪವಿತ್ರಾರೋಪಣ ಮಾಡದೆ ಇದ್ದರೆ ಅವನು ಮಾಡುವ ಒಂದು ವರ್ಷದ ಪೂಜೆಯೂ ವ್ಯರ್ಥವಾಗುತ್ತದೆ.



## ಶ್ರಾವಣ ಕೃಷ್ಣ ಏಕಾದಶೀ [1]

ಶ್ರಾವಣ ಕೃಷ್ಣಪಕ್ಷದ ಏಕಾದಶಿಗೆ **ಕಾಮಿಕಾ** ಎಂದು ಹೆಸರು. ಇದರ ಮಹಿಮೆಯನ್ನು ಬ್ರಹ್ಮದೇವರು ನಾರದರಿಗೆ ಹೇಳಿರುವರು. ಅದನ್ನೇ ಕೃಷ್ಣ ಪರಮಾತ್ಮನು ಧರ್ಮರಾಜನಿಗೆ ಹೇಳಿರುವನು–

ಈ ಕಾಮಿಕಾ ಎಂಬ ಏಕಾದಶಿಯನ್ನು ಶ್ರವಣ ಮಾಡುವುದರಿಂದಲೇ ವಾಜಪೇಯ ಯಾಗವನ್ನು ಮಾಡಿದ ಫಲವಾಗುವುದು. ಯಾರು ಆದಿನ ಶ್ರೀಧರ ನೆಂದು ಹೆಸರುಳ್ಳ ಪರಮಾತ್ಮನನ್ನು ಪೂಜಿಸುತ್ತಾನೋ ಧ್ಯಾನಮಾಡುತ್ತಾನೋ ಅವನು ಹೊಂದುವ ಫಲವು ಗಂಗೆಗೋ ಕಾಶಿಗೋ ಗೋದಾವರಿಗೋ ಪುಷ್ಕರಕ್ಕೋ ಹೋದರೂ ಸಿಗಲಾರದು. ಬೃಹಸ್ಪತ್ಯಾಚಾರ್ಯರು ಸಿಂಹರಾಶಿಯಲ್ಲಿ ಇರುವಾಗ ಗೋದಾವರೀಸ್ನಾನ ಮಾಡಿದ ಪುಣ್ಯವು ಬರುವುದು. ಸಮುದ್ರವನಗಳಿಂದ ಭೂಮಿಯನ್ನು ಯಾರು ದಾನಮಾಡುವರೋ ಯಾರು ಕಾಮಿಕಾ ಏಕಾದಶೀವ್ರತವನ್ನು ಮಾಡುವರೋ ಅವರಿಬ್ಬರಿಗೂ ಸಮಾನವಾದ ಫಲವೇ ಬರುವುದು. ಕರು ಹಾಕುತ್ತಿರುವ ಗೋವನ್ನು ಎಲ್ಲಾ ಸಾಮಗ್ರಿಯಿಂದ ಸಹಿತವಾಗಿ ದಾನ ಮಾಡಿದರೆ

1. ಪ.ಪು.ಉ.ಖಂ. ಅ.56

ಯಾವ ಫಲವು ಬರುವುದೋ ಆ ಫಲವು ಕಾಮಿಕಾ ಏಕಾದಶೀ ಉಪವಾಸ ಮಾಡಿದವನಿಗೆ ಬರುವುದು. ಶ್ರಾವಣಮಾಸದಲ್ಲಿ ಶ್ರೀಧರ ನಾಮಕ ಪರಮಾತ್ಮನನ್ನು ಪೂಜಿಸಿದವನು ಎಲ್ಲಾ ದೇವತೆಗಳನ್ನೂ ಪೂಜಿಸಿದ ಫಲವನ್ನು ಹೊಂದುವನು. ಗಂಧರ್ವರೂ ಉರಗರೂ ಇವರನ್ನು ಪೂಜಿಸಿದಂತೆ ಆಗುತ್ತದೆ. ಆದುದರಿಂದ ಕಾಮಿಕಾ ಏಕಾದಶಿಯಲ್ಲಿ ಪಾಪದಿಂದ ಭಯಪಡುವ ಜನರು ಅವಶ್ಯವಾಗಿ ಪರಮಾತ್ಮನನ್ನು ಪೂಜಿಸಬೇಕು. ಯಾರು ಪಾಪವೆಂಬ ಕೆಸರಿನಿಂದ ಕೂಡಿದ ಸಂಸಾರ ಸಮುದ್ರದಲ್ಲಿ ಮುಳುಗಿರುವರೋ ಅವರ ಉದ್ಧಾರಕ್ಕಾಗಿಯೇ ಈ ಕಾಮಿಕಾ ಏಕಾದಶಿ ಯಿರುವುದು. ಇದಕ್ಕಿಂತ ಇತರವಾದದ್ದು ಪವಿತ್ರವಾದದ್ದೂ ಪಾಪಪರಿಹಾರಕ ವಾದದ್ದೂ ಬೇರೊಂದು ಇರುವುದಿಲ್ಲ. ಈ ರೀತಿಯಾಗಿ ಭಗವಂತನೇ ಹೇಳಿರುವನು.

ಅಧ್ಯಾತ್ಮವಿದ್ಯೆಯಲ್ಲಿ ಆಸಕ್ತರಾದವರಿಗೆ ಸಿಗುವ ಫಲಕ್ಕಿಂತ ಹೆಚ್ಚಾದ ಫಲವು ಈ ಕಾಮಿಕಾ ಏಕಾದಶೀ ಉಪವಾಸ ಮಾಡುವವರಿಗೆ ಬರುತ್ತದೆ. ಆ ಏಕಾದಶಿಯಲ್ಲಿ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುವವನು ಭಯಂಕರವಾದ ರೂಪವುಳ್ಳ ಯಮದೇವರನ್ನು ನೋಡುವುದಿಲ್ಲ. ದುರ್ಗತಿಯನ್ನೂ ಹೊಂದುವುದಿಲ್ಲ. ಹೀನಯೋನಿಯಲ್ಲಿ ಹುಟ್ಟುವುದಿಲ್ಲ. ಆದುದರಿಂದ ಸರ್ವಪ್ರಯತ್ನ ದಿಂದ ಈ ಏಕಾದಶಿಯಲ್ಲಿ ಉಪವಾಸ ಮಾಡಬೇಕು. ತುಲಸೀದಲಗಳಿಂದ ಪರಮಾತ್ಮನನ್ನು ಪೂಜಿಸಿದರೆ ಪದ್ಮಪತ್ರವು ನೀರಿನಿಂದ ಅಂಟಿಕೊಳ್ಳದಿರುವಂತೆ ತಾನು ಆ ಪಾಪದಿಂದ ಅಂಟಿಕೊಳ್ಳುವುದಿಲ್ಲ. ತುಲಸೀದಲದಿಂದ ಪೂಜೆ ಮಾಡಿದರೆ ಒಂದು ಭಾರ ಎಂದರೆ ಇಪ್ಪತ್ತೈದು ತೊಲೆ ಬಂಗಾರವನ್ನು, ನೂರು ತೊಲೆ ಬೆಳ್ಳಿಯನ್ನು ದಾನ ಮಾಡಿದ ಫಲವು ಬರುವುದು. ಪರಮಾತ್ಮನು ತುಲಸೀದಲಗಳಿಂದ ಪೂಜಿಸಲ್ಪಡು ವಾಗ ಸಂತೋಷಪಟ್ಟಷ್ಟು ಮುತ್ತು ವೈಡೂರ್ಯ ಪದ್ಮರಾಗ ಹವಳ ಇತ್ಯಾದಿ ರತ್ನಗಳಿಂದ ಪೂಜಿಸಿದರೂ ಸಂತೋಷಪಡಲಾರನು. ಯಾರು ಒಂದು ಬಾರಿ ಪರಮಾತ್ಮನನ್ನು ತುಲಸೀದಳಗಳಿಂದ ಪೂಜಿಸುವನೋ ಅವನು ಹುಟ್ಟಿದಂದಿನಿಂದ ಮಾಡಿದ ಪಾಪವೆಲ್ಲವೂ ಪರಿಹೃತವಾಗುವುದು. ಯಾವ ತುಲಸಿಯನ್ನು ನೋಡಿದರೆ ನಿಖಿಲ ಪಾಪವನ್ನು ಪರಿಹರಿಸುವಳೋ ಮುಟ್ಟಿದರೆ ದೇಹವನ್ನು ಪವಿತ್ರವನ್ನಾಗಿ ಮಾಡುವಳೋ ನಮಸ್ಕಾರ ಮಾಡಲ್ಪಟ್ಟವಳಾಗಿ ರೋಗವನ್ನು ಪರಿಹರಿಸುವಳೋ ನೀರು ಹಾಕಿದವರಿಗೆ ಯಮದೇವರ ಭಯವನ್ನು ಪರಿಹರಿಸುವಳೋ, ತನ್ನ ಬೆಳೆಸಿದರೆ ಪರಮಾತ್ಮನ ಸಾಮೀಪ್ಯವನ್ನು ಉಂಟುಮಾಡುವಳೋ ಪರಮಾತ್ಮನಲ್ಲಿ ಇಡಲ್ಪಟ್ಟರೆ ಮೋಕ್ಷವೆಂಬ ಫಲವನ್ನು ಕೊಡುವಳೋ ತುಲಸೀದೇವಿಗೆ ನಮಸ್ಕಾರವು.

ಏಕಾದಶಿಯಲ್ಲಿ ಯಾವ ಮನುಷ್ಯನು ರಾತ್ರಿಹಗಲು ದೇವರ ಮುಂಭಾಗದಲ್ಲಿ ದೀಪವನ್ನು ಇಡುವವನೋ ಅವನಿಗೆ ಬಹುಪುಣ್ಯವು ಉಂಟಾಗುವುದು. ಪರಮಾತ್ಮನ ಮುಂಭಾಗದಲ್ಲಿ ಏಕಾದಶಿಯಲ್ಲಿ ದೀಪವನ್ನಿಟ್ಟರೆ ಅವನ ಪಿತೃಗಳು ಸ್ವರ್ಗದಿಂದ ಅಮೃತದಿಂದ ಸಂತೋಷಪಡುತ್ತಾರೆ. ತುಪ್ಪದಿಂದಲೋ ಎಣ್ಣೆ ಯಿಂದಲೋ ದೀಪವನ್ನು ಇಟ್ಟವನು ನೂರಾರು ದೀಪಗಳಿಂದ ಸತ್ಕೃತನಾಗಿ ಸೂರ್ಯಲೋಕವನ್ನು ಹೊಂದುವನು. ಈ ಕಾಮಿಕಾ ಏಕಾದಶಿಯು ಬ್ರಹ್ಮಹತ್ಯೆ ಯನ್ನು ಪರಿಹರಿಸುವುದು. ಭ್ರೂಣಹತ್ಯೆಯು ಇದರಿಂದ ಹೋಗುವುದು. ಸ್ವರ್ಗಸ್ಥಾನ ವುಂಟಾಗುವುದು. ಇದರ ಮಹಿಮೆಯನ್ನು ಕೇಳಿದ ಪುರುಷನು ಪಾಪರಹಿತನಾಗಿ ಪರಮಾತ್ಮನ ಲೋಕವನ್ನು ಹೊಂದುವನು.



## ಭಾದ್ರಪದ ಶುಕ್ಲಏಕಾದಶೀ [1]

ಭಾದ್ರಪದ ಶುಕ್ಲಪಕ್ಷದ ಏಕಾದಶಿಗೆ **ಪದ್ಮನಾಭ** ಎಂದು ಹೆಸರು. ಇದರ ಮಹಿಮೆಯನ್ನು ನಾರದರಿಗೆ ಬ್ರಹ್ಮದೇವರು ಹೇಳಿದರು. ಅದನ್ನು ಧರ್ಮರಾಜನಿಗೆ ಕೃಷ್ಣಪರಮಾತ್ಮನು ಹೇಳಿದನು.

ಈ ಏಕಾದಶಿಯು ಪರಮಪವಿತ್ರವಾದದ್ದು. ಈ ದಿವಸದಲ್ಲಿ ಹೃಷೀಕೇಶ ನಾಮಕ ಪರಮಾತ್ಮನನ್ನು ಪೂಜಿಸಬೇಕು. ಉಪವಾಸವನ್ನು ಮಾಡಬೇಕು. ಈ ವಿಷಯದಲ್ಲಿ ಒಂದು ಕಥೆಯಿರುವುದು. ಅದನ್ನು ಕೇಳುವ ಮಾತ್ರದಿಂದ ಮಹಾ ಪಾಪವು ನಷ್ಟ ವಾಗುವುದು. ಸೂರ್ಯವಂಶದಲ್ಲಿ ಉದ್ಭವಿಸಿದ ಸತ್ಯಸಂಧನಾದ ಪ್ರತಾಪಶಾಲಿ ಯಾದ ಮಾಂಧಾತಾ ಎಂಬ ರಾಜರ್ಷಿಯಿದ್ದನು. ಅವನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ರಕ್ಷಿಸುವಂತೆ ಪ್ರಜೆಗಳನ್ನು ಧರ್ಮದಿಂದ ರಕ್ಷಣೆ ಮಾಡಿದನು. ಅವನ ರಾಜ್ಯದಲ್ಲಿ ದುರ್ಭಿಕ್ಷೆಯಿರಲಿಲ್ಲ. ಜನರಿಗೆ ದೇಹದಲ್ಲಿ ರೋಗಬರುತ್ತಿದ್ದಿಲ್ಲ. ಮನಸ್ಸಿನಲ್ಲಿ ವ್ಯಥೆಯುಂಟಾಗುತ್ತಿದ್ದಿಲ್ಲ. ಜನರೆಲ್ಲರೂ ಧನಧಾನ್ಯ ಸಮೃದ್ಧಿಯುಳ್ಳವ ರಾಗಿ ಆತಂಕವಿಲ್ಲದೆ ಇದ್ದರು. ಅವನ ಕೋಶದಲ್ಲಿ ನ್ಯಾಯದಿಂದ ಸಂಪಾದಿಸಿದ ಹಣವೇ ಇದ್ದಿತು. ಎಲ್ಲಾ ವರ್ಣಾಶ್ರಮದವರೂ ತಮ್ಮ ತಮ್ಮ ಧರ್ಮದಲ್ಲಿಯೇ ಇದ್ದರು. ಅವನ ರಾಜ್ಯದಲ್ಲಿ ಭೂಮಿಯು ಕಾಮಧೇನುವಿಗೆ ಸಮಾನವಾಗಿ ಇದ್ದಿತು.

1. ಪ.ಪು.ಉ.ಖಂ. ಅ.59

ಹೀಗೆ ರಾಜನು ಬಹುಸುಖದಿಂದ ರಾಜ್ಯಭಾರವನ್ನು ಮಾಡುತ್ತಾ ಬಹುಸಮಯವು ಕಳೆಯಿತು.

ಒಂದು ಸಮಯದಲ್ಲಿ ಅವನ ರಾಜ್ಯದಲ್ಲಿ ಮೂರುವರ್ಷಗಳಲ್ಲಿ ಮಳೆಯು ಬರಲೇ ಇಲ್ಲ. ಇದರಿಂದ ಪ್ರಜೆಗಳೆಲ್ಲರೂ ಹಸಿವೆಯಿಂದ ಪೀಡಿತರಾಗಿ ಭಗ್ನರಾದರು. ರಾಜ್ಯದಲ್ಲಿ ಸ್ವಾಹಾ ಸ್ವಧಾ ಇತ್ಯಾದಿ ಶಬ್ದಗಳೇ ನಿಂತುಹೋದವು. ತರುವಾಯ ಪ್ರಜೆಗಳೆಲ್ಲರೂ ರಾಜನ ಸಮೀಪಕ್ಕೆ ಬಂದು 'ಅನ್ನವಿಲ್ಲದೆ ಜನರು ಕ್ಷಯವನ್ನು ಹೊಂದುತ್ತಿರುವರು. ಅವರ ಯೋಗಕ್ಷೇಮನ್ನು ನೋಡಿಕೊಳ್ಳಬೇಕು' ಎಂದು ಹೇಳಿದರು.

ಮಾಂಧಾತರಾಜನು 'ನೀವು ಹೇಳುವ ಮಾತು ಸತ್ಯವಾದದ್ದು. ಅನ್ನವು ಎಲ್ಲರಿಗೂ ಬೇಕಾದ ವಸ್ತುವು. ರಾಜರ ಅನ್ಯಾಯದಿಂದ ಪ್ರಜೆಗಳಿಗೆ ಪೀಡೆಯು ಉಂಟಾಗುವುದು. ನಾನು ಎಷ್ಟು ವಿಚಾರವನ್ನು ಮಾಡಿದರೂ ಬುದ್ಧಿಪೂರ್ವಕವಾಗಿ ಮಾಡಿರುವ ಅನ್ಯಾಯವು ಸ್ಮರಣೆಗೆ ಬರುವುದಿಲ್ಲ. ಆದರೂ ನಾನು ಪ್ರಜೆಗಳಿಗೆ ಹಿತವಾಗುವಂತೆ ಪ್ರಯತ್ನ ಮಾಡುವೆನು' ಎಂದನು.

ಈ ಪ್ರಕಾರವಾಗಿ ಹೇಳಿ ಮಾಂಧಾತರಾಜನು ಪರಮಾತ್ಮನಿಗೆ ನಮಸ್ಕಾರಮಾಡಿ ಮಿತವಾದ ಪರಿವಾರವುಳ್ಳವನಾಗಿ ಅರಣ್ಯಕ್ಕೆ ಹೋದನು. ಅನೇಕ ಋಷಿಗಳ ಆಶ್ರಮಗಳಲ್ಲಿ ಸಂಚರಿಸಿದನು. ತರುವಾಯ ತೇಜಸ್ವಿಯಾದ ಬ್ರಹ್ಮದೇವರ ಮಕ್ಕಳಾದ ಅಂಗಿರಾ ಎಂಬ ಋಷಿಗಳನ್ನು ನೋಡಿದನು. ಅವರನ್ನು ನೋಡಿ ರಾಜನು ಸಂತೋಷವುಳ್ಳವನಾಗಿ ರಥದಿಂದ ಕೆಳಗೆ ಇಳಿದು ಕೈಮುಗಿದು ನಮಸ್ಕರಿಸಿದನು. ಆ ಮುನಿಗಳು ಸಂತೋಷಪಟ್ಟು ಕುಶಲಪ್ರಶ್ನೆಯನ್ನು ಮಾಡಿದರು. ರಾಜನು ತನ್ನ ಕ್ಷೇಮಸಮಾಚಾರವನ್ನು ತಿಳಿಸಿ ಅವರ ಕ್ಷೇಮವನ್ನು ಕೇಳಿದನು. ಅವರು ಕೊಟ್ಟ ಆಸನದಲ್ಲಿ ಕೂತುಕೊಂಡು ಅವರು ಪ್ರಶ್ನೆ ಮಾಡಲು ತಾನು ಬಂದ ಕಾರಣವನ್ನು ಹೇಳಿದನು. 'ಪೂಜ್ಯರೇ! ನಾನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿರುವಾಗ ಮಳೆಯು ಬಾರದೆ ನಿಂತುಹೋಯಿತು. ಇದಕ್ಕೆ ಕಾರಣವೇನೆಂದು ತಿಳಿಯಲಿಲ್ಲ. ಸಂಶಯಪರಿಹಾರಕ್ಕಾಗಿ ಇಲ್ಲಿಗೆ ಬಂದಿರುವೆನು. ತಾವು ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಂಡು ಸುಖವನ್ನು ಉಂಟುಮಾಡಬೇಕು' ಎಂದನು.

ಅಂಗಿರಋಷಿಗಳು 'ರಾಜನೇ! ಇದು ಯುಗಗಳಲ್ಲಿ ಉತ್ತಮವಾದ ಕೃತಯುಗವು. ಈ ಸಮಯದಲ್ಲಿ ಜನರು ಪರಮಾತ್ಮನಲ್ಲಿ ಆಸಕ್ತರಾಗಿರುವರು. ಈಗ ನಾಲ್ಕು ಪಾದ ಧರ್ಮವಿರುವುದು. ಈ ಯಾಗದಲ್ಲಿ ಬ್ರಾಹ್ಮಣರೇ ತಪಸ್ಸನ್ನು ಮಾಡುವವರು. ಇನ್ನೊಬ್ಬರು ಮಾಡಬಾರದು. ನಿನ್ನ ದೇಶದಲ್ಲಿ ಶೂದ್ರನೊಬ್ಬನು

ತಪಸ್ಸನ್ನು ಮಾಡತ್ತಿರುವನು. ಆದಕಾರಣದಿಂದಲೇ ಮೇಘಗಳು ಮಳೆಯನ್ನು ಸುರಿಸುವುದಿಲ್ಲ. ಆ ಶೂದ್ರನನ್ನು ಕೊಲ್ಲುವ ಪ್ರಯತ್ನವನ್ನು ಮಾಡು. ಅದರಿಂದ ಆ ದೋಷವು ಪರಿಹೃತವಾಗುವುದು' ಎಂದರು.

ರಾಜನು 'ತಪಸ್ಸು ಮಾಡುತ್ತಿರುವ ಅವನನ್ನು ನಾನು ಕೊಲ್ಲಲಾರೆನು. ಉಪದ್ರವವನ್ನು ನಾಶಿಸುವ ಧರ್ಮವನ್ನು ಉಪದೇಶಿಸಿರಿ' ಎಂದನು.

ಅಂಗೀರಸಋಷಿಗಳು 'ಹಾಗಿದ್ದರೆ ರಾಜನೇ! ನೀನು ಭಾದ್ರಪದ ಶುಕ್ಲಪಕ್ಷದ ಏಕಾದಶಿಯಲ್ಲಿ ಉಪವ್ರತವನ್ನು ಮಾಡುವವನಾಗು. ಅದಕ್ಕೆ ಪದ್ಮನಾಭ ಏಕಾದಶಿಯೆಂದು ಹೆಸರು. ಆ ವ್ರತದ ಪ್ರಭಾವದಿಂದ ನಿಶ್ಚಯವಾಗಿ ಒಳ್ಳೆಯ ಮಳೆಯೂ ಬರುವುದು. ಆ ಏಕಾದಶಿಯು ಸರ್ವಸಿದ್ಧಿಗೆ ಕಾರಣವಾದದ್ದು. ಸರ್ವ ಉಪದ್ರವವನ್ನು ಪರಿಹರಿಸುವುದು. ರಾಜನೇ! ನೀನು ಪ್ರಜೆಗಳಿಂದ ಸಹಿತನಾಗಿ ಈ ಏಕಾದಶೀ ವ್ರತವನ್ನು ಮಾಡು' ಎಂದು ಹೇಳಿದರು.

ಅದನ್ನು ಕೇಳಿ ರಾಜನು ಮನೆಗೆ ಬಂದವನಾಗಿ ಆ ಏಕಾದಶೀ ವ್ರತವನ್ನು ಮಾಡಿದನು. ಎಲ್ಲಾ ಪ್ರಜೆಗಳೂ ಮಾಡಿದರು. ತರುವಾಯ ಮಳೆಯು ಬಂದಿತು. ಭೂಮಿಯಲ್ಲಿ ಸಸ್ಯಗಳು ಬೆಳೆದವು. ಋಷಿಗಳ ಪ್ರಭಾವದಿಂದ ಜನರೆಲ್ಲರೂ ಸುಖವನ್ನು ಹೊಂದಿದರು. ಆದುದರಿಂದ ಆ ವ್ರತವನ್ನು ಅವಶ್ಯವಾಗಿ ಮಾಡಬೇಕು. ದ್ವಾದಶೀದಿನದಲ್ಲಿ ಮೊಸರನ್ನವನ್ನು ಜಲಕುಂಭವನ್ನು ವಸ್ತ್ರದಿಂದ ಸುತ್ತಿ ದಾನಮಾಡಬೇಕು. ಹಾಗೆಯೇ ಛತ್ರವನ್ನೂ ಪಾದರಕ್ಷೆಗಳನ್ನೂ ದಾನಮಾಡಬೇಕು. ಪರಮಾತ್ಮನನ್ನು ಪ್ರಾರ್ಥಿಸಬೇಕು. ಈ ಕಥೆಯನ್ನು ಹೇಳುವವರಿಗೆ ಕೇಳುವವರಿಗೆ ಸರ್ವಪಾಪಪರಿಹಾರವಾಗುವುದು.



## ಭಾದ್ರಪದ ಕೃಷ್ಣ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದನು. ಭಾದ್ರಪದ ಕೃಷ್ಣಪಕ್ಷದ ಏಕಾದಶಿಗೆ **ಅಜಾ** ಎಂದು ಹೆಸರು. ಸರ್ವಪಾಪಪರಿಹಾರಕವು. ಹೃಷೀಕೇಶ ಎಂದು ಹೆಸರುಳ್ಳ ಪರಮಾತ್ಮನನ್ನು ಪೂಜಿಸಿ ಈ ವ್ರತವನ್ನು ಯಾರು ಮಾಡುವರೋ ಅವನ ಪಾಪಗಳೆಲ್ಲವೂ ನಾಶವನ್ನು ಹೊಂದುವುವು.

1. ಪ.ಪು.ಉ.ಖಂ. ಅ.58

ಪೂರ್ವದಲ್ಲಿ ಸತ್ಯಸಂಧನಾದ ಹರಿಶ್ಚಂದ್ರನೆಂಬ ಚಕ್ರವರ್ತಿಯು ಸಮಸ್ತವಾದ ಭೂಮಿಗೂ ಅಧಿಪತಿಯಾಗಿದ್ದನು. ಅವನು ಯಾವುದೋ ಒಂದು ಕರ್ಮದಿಂದ ರಾಜ್ಯಭ್ರಷ್ಟನಾದನು. ಅವನು ಹೆಂಡತಿಮಕ್ಕಳನ್ನು ಕ್ರಯಕ್ಕೆ ಮಾರಿ ತನ್ನನ್ನೇ ಮಾರಿಕೊಂಡನು. ಆ ಪುಣ್ಯವಂತನು ಒಬ್ಬ ಹೊಲೆಯನ ದಾಸನಾದನು. ಸತ್ಯವನ್ನು ಆಶ್ರಯಿಸಿ ಹೆಣಕ್ಕೆ ಹೊದಿಸಿದ ವಸ್ತ್ರವನ್ನು ಅಪಹರಿಸುತ್ತಿದ್ದನು. ಆದರೂ ಅವನು ಸತ್ಯವನ್ನು ಬಿಡಲೇ ಇಲ್ಲ. ಹೀಗೆಯೇ ಆ ರಾಜನಿಗೆ ಬಹುವರ್ಷಗಳು ಕಳೆದವು. ತರುವಾಯ ರಾಜನು ಯೋಚನೆಯನ್ನು ಮಾಡುತ್ತಾ ಬಹುದುಃಖವನ್ನು ಹೊಂದಿದನು. 'ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ನನಗೆ ಹೇಗೆ ಪ್ರಾಯಶ್ಚಿತ್ತವಾಗುವುದು?' ಹೀಗೆ ಯೋಚನೆಯಲ್ಲಿ ಮುಳುಗಿದ್ದನು. ಆಗ ರಾಜನು ದುಃಖಪಡುವುದನ್ನು ತಿಳಿದು ಒಬ್ಬ ಮುನಿಗಳು ಅವನ ಬಳಿಗೆ ಬಂದರು. ಪರೋಪಕಾರಕ್ಕಾಗಿಯೇ ಇದ್ದ ಆ ಬ್ರಾಹ್ಮಣರು ಬರಲು ರಾಜನು ನಮಸ್ಕರಿಸಿದನು. ಆ ಗೌತಮ ಎಂಬ ಬ್ರಾಹ್ಮಣರ ಮುಂದೆ ಕೈಮುಗಿದು ನಿಂತನು. ದುಃಖಯುಕ್ತವಾದ ತನ್ನ ವೃತ್ತಾಂತವೆಲ್ಲವನ್ನೂ ಹೇಳಿಕೊಂಡನು.

ರಾಜನ ಮಾತನ್ನು ಕೇಳಿ ಗೌತಮರು 'ರಾಜನೇ! ಭಾದ್ರಪದ ಮಾಸದ ಕೃಷ್ಣಪಕ್ಷದ ಅಜಾ ಎಂದು ಹೆಸರುಳ್ಳ ಏಕಾದಶಿಯು ಬರುವುದು. ನೀನು ಆ ಏಕಾದಶಿಯಲ್ಲಿ ಉಪವಾಸವನ್ನು ಮಾಡು. ನಿನ್ನ ಪಾಪವೆಲ್ಲವೂ ಪರಿಹೃತವಾಗುವುದು. ನಿನ್ನ ಪುಣ್ಯದಿಂದ ಈದಿನದಿಂದ ಏಳನೇ ದಿವಸದಲ್ಲಿಯೇ ಆ ಏಕಾದಶಿಯು ಬರುವುದು. ಆ ದಿನದಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣವನ್ನು ಮಾಡು. ಈರೀತಿಯಾಗಿ ಈ ವ್ರತವನ್ನು ಮಾಡಿದೆಯಾದರೆ ನಿನ್ನ ಪಾಪವು ಪರಿಹೃತ ವಾಗುವುದು. ನಿನ್ನ ಪುಣ್ಯದ ಪ್ರಭಾವದಿಂದ ನಾನು ಬಂದಿರುವೆನು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು.

ಮುನಿಗಳ ಮಾತನ್ನು ಕೇಳಿ ಹರಿಶ್ಚಂದ್ರರಾಜನು ಆ ವ್ರತವನ್ನು ಮಾಡಿದನು. ಆ ವ್ರತವನ್ನು ಮಾಡಲು ಅವನ ಪಾಪವು ಆ ಕ್ಷಣವೇ ಪರಿಹೃತವಾಯಿತು. ಅದರ ಪ್ರಭಾವವು ಹೀಗೆ ಇರುವುದು. ಬಹುವರ್ಷ ಅನುಭವಿಸಬೇಕಾದ ದುಃಖವು ಆಗಲೇ ನಾಶವನ್ನು ಹೊಂದುವುದು. ಹರಿಶ್ಚಂದ್ರ ರಾಜನು ಆ ವ್ರತದ ಪ್ರಭಾವದಿಂದ ದುಃಖರಹಿತನಾದನು. ಹೆಂಡತಿಯನ್ನು ಮಗನ ಜೀವನವನ್ನು ಹೊಂದಿದನು. ಆಕಾಶದಲ್ಲಿ ನಗಾರಿಯನ್ನು ಬಡಿದರು. ಆಕಾಶದಿಂದ ಹೂವಿನ ಮಳೆಯು ಸುರಿಯಿತು. ರಾಜನು ಏಕಾದಶಿಯ ಪ್ರಭಾವದಿಂದ ಶತ್ರುರಹಿತ ವಾದ ರಾಜ್ಯವನ್ನು

ಹೊಂದಿ ಪರಿವಾರಸಹಿತವಾಗಿ ಸ್ವರ್ಗವನ್ನು ಹೊಂದಿದನು. ಈಪ್ರಕಾರವಾದ ವ್ರತವನ್ನು ಯಾರು ಮಾಡುತ್ತಾರೋ ಅವರು ಸರ್ವಪಾಪರಹಿತ ರಾಗಿ ಸ್ವರ್ಗವನ್ನು ಹೊಂದುವರು. ಈ ವ್ರತದ ಮಹಿಮೆಯನ್ನು ಹೇಳುವುದ ರಿಂದಲೂ ಕೇಳುವುದರಿಂದಲೂ ಅಶ್ವಮೇಧಯಾಗವನ್ನು ಮಾಡಿದ ಫಲವು ಬರುವುದು.



## ಆಶ್ವಿನಮಾಸದ ಶುಕ್ಲ ಏಕಾದಶೀ [1]

ಈ ಏಕಾದಶಿಯ ಮಹಿಮೆಯನ್ನು ಧರ್ಮರಾಜನಿಗೆ ಕೃಷ್ಣಪರಮಾತ್ಮನು ಹೇಳಿದನು— 'ಧರ್ಮರಾಜ! ಆಶ್ವಿನಶುಕ್ಲಪಕ್ಷದ ಏಕಾದಶಿಗೆ **ಪಾಪಾಂಕುಶಾ** ಎಂದು ಹೆಸರು. ಸರ್ವಪಾಪಪರಿಹಾರಕವಾದದ್ದು. ಆ ದಿನದಲ್ಲಿ ಪದ್ಮನಾಭ ಎಂಬ ಹೆಸರುಳ್ಳ ನನ್ನನ್ನು ಪೂಜಿಸಬೇಕು. ಅದು ಸರ್ವಾಭೀಷ್ಟಪ್ರದವು. ಸ್ವರ್ಗಮೋಕ್ಷಪ್ರದವಾದದ್ದು. ಮೋಹದಿಂದ ಬಹಳ ಪಾಪಗಳನ್ನು ಮಾಡಿದವನಾದರೂ ಭಕ್ತಿಯಿಂದ ಪರಮಾತ್ಮನಿಗೆ ನಮಸ್ಕಾರ ಮಾಡಿದರೆ ನರಕವನ್ನು ಹೊಂದಲಾರನು. ಭಕ್ತಿಯಿಂದ ಪರಮಾತ್ಮನ ನಾಮದ ಕೀರ್ತನ ಮಾಡುವುದರಿಂದ ಭೂಮಿಯಲ್ಲಿರುವ ಸಮಸ್ತ ತೀರ್ಥಗಳಲ್ಲಿಯೂ ಸಂಚರಿಸಿದ ಫಲವನ್ನು ಹೊಂದುವನು. ಶಾಂರ್ಙಧಾರಿಯಾದ ಪರಮಾತ್ಮನನ್ನು ಯಾರು ಮರೆಹೊಂದುವರೋ ಅವರು ಯಾವಾಗಲೂ ಯಮ ಲೋಕದ ಯಾತನೆಯನ್ನು ಅನುಭವಿಸುವುದಿಲ್ಲ. ಹೇಗಾದರೂ ಒಂದು ಏಕಾದಶಿ ಯನ್ನು ಉಪವಾಸ ಮಾಡಿದವನು ಪಾಪಮಾಡಿದವನಾದರೂ ಯಮಲೋಕದಲ್ಲಿ ಯಾತನೆಯನ್ನು ಹೊಂದಲಾರನು. ವಿಷ್ಣುಭಕ್ತನಾಗಿದ್ದುಕೊಂಡು ಪರಮಾತ್ಮನ ಭಕ್ತರಾದ ರುದ್ರದೇವರನ್ನು ನಿಂದಿಸುವನೋ ಅವನು ವಿಷ್ಣುಲೋಕವನ್ನು ಹೊಂದ ಲಾರನು. ನರಕವನ್ನು ಹೊಂದುವನು. ಶಿವಭಕ್ತನೂ ಪರಮಾತ್ಮನನ್ನು ನಿಂದಿಸಿದರೆ ರೌರವ ನರಕವನ್ನು ಅನುಭವಿಸುವನು.

ಪರಮಾತ್ಮನ ದಿವಸವು ಪಾಪಪರಿಸುವಂತೆ ಪಾಪಪರಿಹರಿಸುವ ಪವಿತ್ರವಸ್ತುವು ಬೇರೆ ಯಾವುದೂ ಇರಲಾರದು. ಶುಭವಾದ ಭಗವಂತನ ದಿವಸವಾದ ಏಕಾದಶಿಯಲ್ಲಿ ಉಪವಾಸಮಾಡುವವರೆಗೆ ಮಾತ್ರ ದೇಹದಲ್ಲಿ ಪಾಪಗಳು ನಿಲ್ಲುವುವು. ಉಪವಾಸ ಮಾಡಿದರೆ ಎಲ್ಲಾ ಪಾಪಗಳೂ ನಷ್ಟವಾಗುವುವು. ಸಾವಿರ

---

1. ಪ.ಪು.ಉ.ಖಂ. ಅ.61

ಅಶ್ವಮೇಧಯಾಗಗಳೂ ನೂರು ವಾಜಪೇಯಗಳೂ ಒಂದು ಏಕಾದಶೀ ಉಪವಾಸಕ್ಕೆ ಸಮವಾಗಲಾರವು. ಏಕಾದಶೀ ಉಪವಾಸದ ಹದಿನಾರನೇ ಒಂದು ಅಂಶ ಪುಣ್ಯಕ್ಕೂ ಕಾರಣ ವಾಗಲಾರವು. ಏಕಾದಶಿಗೆ ಸಮವಾದ ಯಾವ ವ್ರತವೂ ಇರುವುದಿಲ್ಲ. ಯಾವುದಾದರೂ ನೆಪದಿಂದ ಏಕಾದಶಿ ಉಪವಾಸ ಮಾಡಿದರೂ ಯಮದೇವರ ದರ್ಶನವಾಗಲಾರದು. ಏಕಾದಶಿಯು ಸ್ವರ್ಗವನ್ನು ಮೋಕ್ಷವನ್ನು ಕೊಡುವುದು. ದೇಹಾರೋಗ್ಯವನ್ನು ಕೊಡುವುದು. ಒಳ್ಳೇ ಹೆಂಡತಿಯನ್ನು ಕೊಡು ವುದು. ಹಣವನ್ನು ಮಿತ್ರರನ್ನು ಕೊಡುವುದು. ಗಂಗೆಯಾಗಲೀ ಗಯೆಯಾಗಲೀ ಕಾಶಿಯಾಗಲೀ ಪುಷ್ಕರ ಕ್ಷೇತ್ರವಾಗಲೀ ಕುರುಕ್ಷೇತ್ರವಾಗಲೀ ಏಕಾದಶಿಯಿಂದ ಹೆಚ್ಚಾಗಿ ಪವಿತ್ರವಾಗಿಲ್ಲ. ಏಕಾದಶಿಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣ ಮಾಡಿದರೆ ಅನಾಯಾಸ ದಿಂದ ವಿಷ್ಣುಲೋಕವನ್ನು ಹೊಂದಬಹುದು.

ಏಕಾದಶೀ ಉಪವಾಸ ಮಾಡುವವನು ತಂದೆಯ ಕಡೆಯಲ್ಲಿ ಹತ್ತು ತಲೆಯವರನ್ನು ತಾಯಿಯ ಕಡೆ ಹತ್ತು ತಲೆಯವರನ್ನು ಹೆಂಡತಿಯ ಕಡೆ ಹತ್ತು ತಲೆಯವರನ್ನು ಉದ್ಧರಿಸುವನು. ಅವರು ನಾಲ್ಕು ಕೈಗಳುಳ್ಳವರಾಗಿ ದಿವ್ಯರೂಪ ವುಳ್ಳವರಾಗಿ ಹೂವಿನ ಮಾಲೆಯುಳ್ಳವರಾಗಿ ಪೀತಾಂಬರಧಾರಿಗಳಾಗಿ ಭಗವಂತನ ಲೋಕವನ್ನು ಹೊಂದುವರು. ಬಾಲ್ಯದಲ್ಲಿಯೂ ಯೌವನದಲ್ಲಿಯೂ ವಾರ್ಧಕ್ಯ ದಲ್ಲಿಯೂ ಏಕಾದಶೀ ಉಪವಾಸ ಮಾಡುವವನು ಪಾಪಿಯಾದರೂ ದುರ್ಗತಿಯನ್ನು ಹೊಂದಲಾರನು. ಆಶ್ವಿನ ಕೃಷ್ಣಪಕ್ಷದ ಪಾಪಾಂಕುಶಾ ಎಂದು ಹೆಸರುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಿ ಸರ್ವಪಾಪರಹಿತನಾಗಿ ಪರಮಾತ್ಮನ ಲೋಕವನ್ನು ಹೊಂದು ವನು. ಆ ದಿವಸದಲ್ಲಿ ಬಂಗಾರ ಎಳ್ಳು ಭೂಮಿ ಗೋವು ಅಕ್ಕಿ ನೀರು ಪಾದರಕ್ಷೆ ಕೊಡೆ ವಸ್ತ್ರ ಇವುಗಳನ್ನು ದಾನಮಾಡಿದರೆ ಯಮದೇವರನ್ನು ನೋಡುವುದೇ ಇಲ್ಲ. ಯಾವಾತನಿಗೆ ಒಂದು ಪುಣ್ಯವನ್ನು ಮಾಡದೆ ರಾತ್ರಿ ಹಗಲುಗಳು ಬರುತ್ತಾ ಹೋಗುತ್ತಾ ಇರುವುವೋ ಅವನು . ಲೋಹಕಾರನು ತಿದಿಯಂತೆ (ತುರುತಿ) ಶ್ವಾಸಬಿಟ್ಟರೂ ಬದುಕಿದವನಲ್ಲ.

ದರಿದ್ರನಾಗಿದ್ದರೂ ತನ್ನ ಶಕ್ತಿಯನ್ನು ಅನುಸರಿಸಿ ಸ್ನಾನದಾನಾದಿ ಗಳನ್ನು ಮಾಡುತ್ತಾ ದಿವಸವನ್ನು ವ್ಯರ್ಥಮಾಡಬಾರದು. ಹೋಮ ಸ್ನಾನ ಜಪಧ್ಯಾನ ಸತ್ರ ಮೊದಲಾದ ಪುಣ್ಯಕಾರ್ಯಗಳನ್ನು ಮಾಡುವವರು ಘೋರವಾದ ಯುಮಯಾತನೆ ಯನ್ನು ಅನುಭವಿಸುವುದಿಲ್ಲ. ಇಂತಹ ಪುಣ್ಯಕಾರ್ಯವನ್ನು ಮಾಡುವವರು ದೀರ್ಘಾಯುಷ್ಯ ವಂತರಾಗಿಯೂ ಹಣವಂತರಾಗಿಯೂ ಒಳ್ಳೇ ವಂಶದಲ್ಲಿ

ಹುಟ್ಟಿದವರಾಗಿಯೂ ರೋಗರಹಿತರಾಗಿಯೂ ಕಾಣಿಸುತ್ತಾರೆ. ಹೆಚ್ಚಿಗೆ ಯಾಕೆ ಹೇಳಬೇಕು? ಅಧರ್ಮದಿಂದ ದುರ್ಗತಿಯನ್ನು ಹೊಂದುವರು. ಧರ್ಮದಿಂದ ಸ್ವರ್ಗವನ್ನು ಹೊಂದುವರು. ಇದಕ್ಕೆ ವಿಚಾರ ಮಾಡುವುದೇ ಬೇಡ. ಈ ರೀತಿಯಾಗಿ ಪಾಪಾಂಕುಶ ಎಂಬ ಏಕಾದಶಿಯ ಮಹಿಮೆಯನ್ನು ಹೇಳಿರುವೆನು.''



# ಆಶ್ವಿನ ಕೃಷ್ಣ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳುವವನಾದನು— ಭಾದ್ರಪದ ಆಶ್ವಿನ ಕೃಷ್ಣಪಕ್ಷದ ಏಕಾದಶಿಗೆ **ಇಂದಿರಾಏಕಾದಶಿ**ಯೆಂದು ಹೆಸರು. ಈ ವ್ರತದ ಪ್ರಭಾವದಿಂದ ಮಹಾಪಾಪವು ಪರಿಹೃತವಾಗುವುದು. ಅಧೋ ಯೋನಿಯನ್ನು ಹೊಂದಿರುವ ಪಿತೃಗಳಿಗೆ ಗತಿಪ್ರದವಾಗುತ್ತದೆ ಮನಸ್ಸಿಟ್ಟು ಪಾಪಪರಿಹಾರಕವಾದ ಕಥೆಯನ್ನು ಕೇಳುವವನಾಗು. ಈ ಕಥೆಯನ್ನು ಕೇಳುವುದರಿಂದ ವಾಜಪೇಯ ಯಾಗವನ್ನು ಮಾಡಿದ ಫಲವು ಬರುವುದು.

ಪೂರ್ವದಲ್ಲಿ ಮಾಹಿಷ್ಮತೀನಗರದಲ್ಲಿ ಇಂದ್ರಸೇನ ಎಂದು ಪ್ರಸಿದ್ಧನಾದ ರಾಜನು ಕೀರ್ತಿವಂತನಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅವನಿಗೆ ಬೇಕಾದ ಮಕ್ಕಳು ಮೊಮ್ಮಕ್ಕಳು ಇದ್ದರು. ಧನಧಾನ್ಯಗಳಿದ್ದವು. ಅವನು ವಿಷ್ಣುಭಕ್ತನಾಗಿದ್ದನು. ಮೋಕ್ಷಪದಗಳಾದ ಭಗವಂತನ ನಾಮಗಳನ್ನು ಜಪಿಸುತ್ತಾ ಭಗವಂತನ ಧ್ಯಾನವನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಹೀಗಿರಲು ಒಂದು ದಿವಸದಲ್ಲಿ ರಾಜನು ಸಭೆಯಲ್ಲಿ ಸುಖವಾಗಿ ಕುಳಿತಿರಲು ನಾರದರು ಆಕಾಶದಿಂದ ಕೆಳಗೆ ಇಳಿದು ಅಲ್ಲಿಗೆ ಬಂದರು. ಬಂದಿದ್ದ ನಾರದರನ್ನು ನೋಡಿ ರಾಜನು ಎದ್ದು ಕೈಮುಗಿದು ಶಾಸ್ತ್ರದಲ್ಲಿ ಹೇಳಿದಂತೆಯೇ ಅವರನ್ನು ಪೂಜಿಸಿ ಆಸನದಲ್ಲಿ ಕೂತುಕೊಳ್ಳಿಸಿದನು. ಸುಖದಿಂದ ಕೂತಿದ್ದ ನಾರದರೊಡನೆ 'ಪೂಜ್ಯರೇ! ತಮ್ಮ ಅನುಗ್ರಹದಿಂದ ನನಗೆ ಸರ್ವವಿಷಯದಲ್ಲಿಯೂ ಕ್ಷೇಮವಿದೆ. ತಮ್ಮ ದರ್ಶನದಿಂದ ಇಲ್ಲಿ ಮಾಡಿದ ಯಾಗಗಳೆಲ್ಲವೂ ಸಫಲವಾದವು. ತಾವು ಇಲ್ಲಿಗೆ ಬಂದ ಕಾರಣವನ್ನು ಹೇಳಿ ಅನುಗ್ರಹಮಾಡಬೇಕು' ಎಂದು ಹೇಳಿಕೊಂಡನು.

ನಾರದರು— 'ರಾಜನೇ! ಆಶ್ಚರ್ಯಪ್ರದವಾದ ನನ್ನ ಮಾತನ್ನು ಕೇಳು– ನಾನು

1. ಪ.ಪು.ಉ.ಖಂ. ಅ.60

ಬ್ರಹ್ಮಲೋಕದಿಂದ ಯಮಲೋಕಕ್ಕೆ ಹೋದೆನು. ಯಮದೇವರಿಂದ ಭಕ್ತಿಯಿಂದ ಸತ್ಕೃತನಾಗಿ ಆಸನದಲ್ಲಿ ಕೂತುಕೊಂಡೆನು. ಅಲ್ಲಿ ಧರ್ಮಿಷ್ಠರಾದವರು ಸತ್ಯವಂತರು ಯಮದೇವರು ಸೇವಿಸುತ್ತಿದ್ದರು. ಬಹುಪುಣ್ಯ ಮಾಡಿದವರು ವ್ರತದ ನ್ಯೂನತೆಯಿಂದ ಯಮದೇವರ ಸಭೆಯಲ್ಲಿ ಇದ್ದರು. ನಿನ್ನ ತಂದೆಯನ್ನು ಯಮಸಭೆಯಲ್ಲಿ ನೋಡಿದೆನು. ಅವನು ನನ್ನೊಡನೆ 'ಮಾಹಿಷ್ಮತೀನಗರದಲ್ಲಿ ಇಂದ್ರಸೇನ ಎಂದು ಪ್ರಸಿದ್ಧನಾದ ರಾಜನು ಇರುವನು. ಅವನ ಮುಂದೆ ತಾವು ನಾನು ಯಮದೇವರ ಸನ್ನಿಧಾನದಲ್ಲಿ ಇರುವುದನ್ನು ತಿಳಿಸಬೇಕು. ಪೂರ್ವಜನ್ಮದಲ್ಲಿ ಮಾಡಿದ ಏನೋ ಒಂದು ವಿಘ್ನದಿಂದ ಯಮಲೋಕದಲ್ಲಿಯೇ ಇರುವನು. ಇಂದಿರಾವ್ರತದ ಪುಣ್ಯವನ್ನು ದಾನವನ್ನು ಮಾಡಿ ಆ ನನ್ನ ಮಗನು ನನ್ನನ್ನು ಸ್ವರ್ಗಕ್ಕೆ ಕಳುಹಿಸುವಂತೆ ಹೇಳಿರಿ' ಎಂದು ಹೇಳಿದನು. ಆದಕ್ಕಾಗಿ ನಾನು ನಿನ್ನ ಸಮೀಪಕ್ಕೆ ಬಂದಿರವೆನು. ನಿನ್ನ ತಂದೆಗೆ ಸ್ವರ್ಗವಾಗುವುದಕ್ಕಾಗಿ ಇಂದಿರಾವ್ರತವನ್ನು ಮಾಡು' ಎಂದು ಹೇಳಿದರು.

ಅದಕ್ಕೆ ರಾಜನು 'ಪೂಜ್ಯರೇ! ಅನುಗ್ರಹ ಮಾಡಿ ಇಂದಿರಾವ್ರತವನ್ನು ಹೇಳಬೇಕು. ಯಾವ ರೀತಿಯಾಗಿ ಮಾಡಬೇಕು? ಯಾವ ದಿವಸದಲ್ಲಿ ಮಾಡಬೇಕು' ಎಂದು ಕೇಳಿದನು.

ನಾರದರು 'ರಾಜನೇ! ಕೇಳು. ಆ ವ್ರತದ ಶುಭವಾದ ವಿಧಾನವನ್ನು ಹೇಳುವೆನು. ಅಶ್ವಿನಮಾಸದ ಕೃಷ್ಣಪಕ್ಷದ ದಶಮೀದಿನದಲ್ಲಿ ಶ್ರದ್ಧಾಯುಕ್ತವಾದ ಮನಸ್ಸಿನಿಂದ ಪ್ರಾತಃಸ್ನಾನ ಮಾಡಬೇಕು. ಆಮೇಲೆ ಮಧ್ಯಾಹ್ನ ಸಮಯದಲ್ಲಿ ಸ್ನಾನ ಮಾಡಬೇಕು. ಒಂದೇ ಹೊತ್ತು ಭೋಜನ ಮಾಡಬೇಕು. ರಾತ್ರಿಯಲ್ಲಿ ನೆಲದ ಮೇಲೆ ಮಲಗಬೇಕು. ಏಕಾದಶೀದಿನದಲ್ಲಿ ಬೆಳಿಗ್ಗೆ ಹಲ್ಲು ಉಜ್ಜಿಕೊಂಡು ಮುಖವನ್ನು ತೊಳೆದುಕೊಳ್ಳಬೇಕು. (ಈ ದಿನದಲ್ಲಿ ಹಲ್ಲು ಕಡ್ಡಿಯಿಂದ ಹಲ್ಲು ಉಜ್ಜಿಕೊಳ್ಳುವುದು ನಿಷಿದ್ಧವಾಗಿರುವುದು. ಆದುದರಿಂದ ಮಾವಿನ ಎಳೆಯಿಂದ ಹಲ್ಲು ಉಜ್ಜಿಕೊಳ್ಳಬಹುದು) ಭಕ್ತಿಯಿಂದ ಉಪವಾಸದ ನಿಯಮವನ್ನು ಸ್ವೀಕರಿಸಬೇಕು.

'ಈದಿವಸದಲ್ಲಿ ನಾನು ಆಹಾರ ರಹಿತನಾಗಿ ಸರ್ವಭೋಗರಹಿತನಾಗಿ ಇದ್ದುಕೊಂಡು ನಾಳೆದಿನದಲ್ಲಿ ಭೋಜನ ಮಾಡುವೆನು. ಭಗವಂತನೇ! ನೀನೇ ನನಗೆ ರಕ್ಷಕನಾಗು' ಎಂದು ಪರಮಾತ್ಮನಲ್ಲಿ ಪ್ರಾರ್ಥಿಸಬೇಕು. ಪರಮಾತ್ಮನಿಗೆ ಪೂಜೆಯನ್ನು ಮಾಡಬೇಕು. ರಾತ್ರಿಯಲ್ಲಿ ಪರಮಾತ್ಮನ ಸಮೀಪದಲ್ಲಿ ಜಾಗರವನ್ನು ಮಾಡಬೇಕು. ದ್ವಾದಶೀದಿನದಲ್ಲಿ ಬೆಳಿಗ್ಗೆ ಭಕ್ತಿಯಿಂದ ಪರಮಾತ್ಮನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಬಂಧುಗಳಿಂದಲೂ ಮಕ್ಕಳು ಮೊಮ್ಮಕ್ಕಳಿಂದಲೂ ಸಹಿತನಾಗಿ

ಮೌನದಿಂದ ಭೋಜನ ಮಾಡಬೇಕು. ಈ ಪ್ರಕಾರವಾದ ವಿಧಾನದಿಂದ ಈ ವ್ರತವನ್ನು ಮಾಡು. ನಿನ್ನ ಪಿತೃಗಳು ವಿಷ್ಣುಲೋಕವನ್ನು ಹೊಂದುತ್ತಾರೆ' ಎಂದು ಹೇಳಿದರು.

ಈರೀತಿಯಾಗಿ ಹೇಳಿ ನಾರದರು ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು. ರಾಜನು ಅವರು ಹೇಳಿದ ರೀತಿಯಿಂದಲೇ ಆ ವ್ರತವನ್ನು ಮಾಡಿದನು. ಅಂತಃಪುರದವರಿಂದ ಕೂಡಿಕೊಂಡು ಪುತ್ರಭೃತ್ಯರಿಂದ ಕೂಡಿಕೊಂಡು ಈ ವ್ರತವನ್ನು ಮಾಡಿದನು. ಆಗ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ರಾಜನ ತಂದೆಯು ವಿಷ್ಣುಲೋಕಕ್ಕೆ ಹೋದನು. ಇಂದ್ರಸೇನ ರಾಜನು ಸರಿಯಾಗಿ ರಾಜ್ಯಭಾರ ಮಾಡಿ ರಾಜ್ಯದಲ್ಲಿ ಮಗನನ್ನು ಇಟ್ಟು ಸ್ವರ್ಗಕ್ಕೆ ಹೋದನು. ಇಂದಿರಾವ್ರತದ ಮಹಿಮೆಯನ್ನು ನಿನ್ನ ಮುಂಭಾಗದಲ್ಲಿ ಹೇಳಿರುವೆನು. ಇದನ್ನು ಹೇಳುವುದರಿಂದಲೂ ಕೇಳುವುದರಿಂದಲೂ ಸರ್ವಪಾಪ ಪರಿಹಾರವಾಗುವುದು.



## ಕಾರ್ತಿಕ ಶುಕ್ಲಪಕ್ಷದ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು. 'ಧರ್ಮರಾಜ! ಕಾರ್ತಿಕ ಶುಕ್ಲಪಕ್ಷದ ಏಕಾದಶಿಗೆ **ಪ್ರಬೋಧಿನೀ** ಎಂದು ಹೆಸರು. ಇದರ ಮಹಿಮೆಯನ್ನು ಪೂರ್ವದಲ್ಲಿ ನಾರದರಿಗೆ ಬ್ರಹ್ಮದೇವರು ಈರೀತಿಯಾಗಿ ಹೇಳಿದರು. ಪಾಪಪರಿಹಾರಕವಾದ ಪುಣ್ಯವರ್ಧಕವಾದ ಜ್ಞಾನಿಗಳಿಗೆ ಮೋಕ್ಷಪ್ರದವಾದ ಪ್ರಬೋಧಿನಿಯ ಮಹಿಮೆಯನ್ನು ಹೇಳುವೆನು. ಪ್ರಬೋಧಿನೀ ಏಕಾದಶಿಯು ಬರುವವರೆಗೆ ಮಾತ್ರ ಗಂಗಾದಿತೀರ್ಥಗಳು ಗರ್ಜನೆ ಮಾಡುವುವು. ಅಂದರೆ ಪ್ರಬೋಧಿನೀಏಕಾದಶಿಯು ಗಂಗಾದಿತೀರ್ಥಗಳಿಂದಲೂ ಪ್ರಶಸ್ತವಾದದ್ದು.

ಪ್ರಬೋಧಿನೀ ಏಕಾದಶಿಯಲ್ಲಿ ಉಪವಾಸ ಮಾಡುವುದರಿಂದಲೇ ಸಾವಿರ ಅಶ್ವಮೇಧಯಾಗಗಳನ್ನು ಮಾಡಿದ ಪುಣ್ಯವನ್ನು ನೂರು ರಾಜಸೂಯಯಾಗ ಮಾಡಿದ ಪುಣ್ಯವನ್ನು ಹೊಂದುವನು. ದುರ್ಲಭವಾದದ್ದೂ ಮೂರುಲೋಕಗಳಲ್ಲಿಯೂ ಇಲ್ಲದೆ ಇದ್ದದ್ದೂ ಆದ ಅಭೀಷ್ಟವನ್ನು ಈ ಏಕಾದಶಿಯು ಕೊಡುವುದು. ಈ ಏಕಾದಶಿಯಲ್ಲಿ ಉಪವಾಸ ಮಾಡಿದರೆ ಐಶ್ವರ್ಯವೂ ಸಂಪತ್ತು ರಾಜ್ಯವೂ

1. ಪ.ಪು.ಉ.ಖಂ. ಅ.63

ಸುಖವೂ ಸಿಗುವುದು. ಮೇರುಮಂದರಗಳಿಗೆ ಸಮಾನಗಳಾದ ಪಾಪಗಳೂ ಒಂದೇ ಉಪವಾಸದಿಂದ ನಾಶವನ್ನು ಹೊಂದುವುವು. ಸಾವಿರ ಜನ್ಮಗಳಲ್ಲಿ ಮಾಡಿದ ಪಾಪವೂ ಆದಿನ ರಾತ್ರಿಯಲ್ಲಿ ಜಾಗರಣ ಮಾಡುವುದರಿಂದ ಪರಿಹೃತವಾಗುವುದು. ವಿಧಿ ಪ್ರಕಾರವಾಗಿ ಈ ವ್ರತವನ್ನು ಮಾಡಿದರೆ ಮೇರುವಿಗೆ ಸಮಾನವಾದ ಫಲವು ಸಿಗುವುದು. ಯಾರು ಉಪವಾಸ ಮಾಡುತ್ತಾರೋ ಪರಮಾತ್ಮನನ್ನು ಧ್ಯಾನಮಾಡುತ್ತಾರೋ ಅವರ ಪಿತೃಗಳು ಸಂತೋಷದಿಂದ ವಿಷ್ಣುಲೋಕದಲ್ಲಿ ವಾಸಿಸುವರು. ನರಕದುಃಖದಿಂದ ರಹಿತರಾಗಿ ವಿಷ್ಣುಲೋಕವನ್ನು ಹೊಂದುವರು.

ಬ್ರಹ್ಮಹತ್ಯಾದಿ ಘೋರಪಾಪವನ್ನು ಮಾಡಿದರೂ ಈ ದಿನದಲ್ಲಿ ರಾತ್ರಿಯಲ್ಲಿ ಜಾಗರಮಾಡುವುದ ರಿಂದ ಪಾಪರಹಿತನಾಗುವನು. ಅಶ್ವಮೇಧಾದಿಯಾಗಗಳಿಂದ ಸಿಗದಿರುವ ಫಲವು ಪ್ರಬೋಧಿನೀ ವ್ರತದಿಂದಲೇ ಬರುವುದು. ಸರ್ವತೀರ್ಥಗಳಲ್ಲಿ ಸ್ನಾನಮಾಡಿ ಬಂಗಾರದಾನವನ್ನು ಮಾಡಿ ಫಲವು ಬರುವುದು. ಅವನೇ ಪುಣ್ಯವಂತನು. ಅವನಿಂದಲೇ ಕುಲವು ಅಲಂಕೃತವಾಗುವುದು. ಯಾರು ಪ್ರಬೋಧಿನೀ ಉಪವಾಸವನ್ನು ಮಾಡುವನೋ ಅವನ ಮನೆಯಲ್ಲಿ ಮೂರುಲೋಕದಲ್ಲಿ ಇರುವ ತೀರ್ಥಗಳು ಬರುವುವು. ಈ ವ್ರತದಿಂದ ಮಕ್ಕಳಾಗುವುವು. ಈ ಏಕಾದಶೀವ್ರತವನ್ನು ಮಾಡಿದವನೇ ಜ್ಞಾನಿಯಾಗುವನು. ಯೋಗಿಯಾಗುವನು. ತಪಸ್ವಿಯಾಗುವನು. ಜಿತೇಂದ್ರಿಯನಾಗುವನು. ಅವನಿಗೆ ಭೋಗಮೋಕ್ಷ ಉಂಟಾಗುವುದು. ಈ ವ್ರತವು ಪರಮಾತ್ಮನಿಗೆ ಅತ್ಯಂತಪ್ರಿಯಕರವಾದದ್ದು. ಇದನ್ನು ಭಕ್ತಿಯಿಂದ ಮಾಡಿದರೆ ಮುಕ್ತಿಯಾಗುವುದು. ಪ್ರಬೋಧಿನೀದಿವಸದಲ್ಲಿ ಉಪವಾಸ ಮಾಡಿದವನು ಗರ್ಭವಾಸವನ್ನು ಮಾಡಲಾರನು. ಆದುದರಿಂದ ಅವಶ್ಯವಾಗಿ ಏಕಾದಶೀ ಉಪವಾಸವನ್ನು ಮಾಡಬೇಕು. ಪ್ರಬೋಧಿನೀದಿವಸದಲ್ಲಿ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಜಾಗರವನ್ನು ಮಾಡಿದರೆ ದೇಹದಿಂದಲೂ ಮನಸ್ಸಿನಿಂದಲೂ ವಾಗಿಂದ್ರಿಯದಿಂದಲೂ ಪಾಪಮಾಡಿದ್ದು ಪರಿಹೃತವಾಗುವುದು. ಈದಿನದಲ್ಲಿ ಮಾಡಿದ ಸ್ನಾನದಾನ ಇತ್ಯಾದಿಗಳೆಲ್ಲವೂ ಅಕ್ಷಯವಾಗುವುವು. ಯಾರು ಈ ದಿವಸದಲ್ಲಿ ಉಪವಾಸ ಮಾಡಿ ಭಗವಂತನನ್ನು ಪೂಜಿಸುತ್ತಾರೋ ಅವರು ನೂರುಜನ್ಮಗಳಲ್ಲಿ ಮಾಡಿದ ಪಾಪಗಳಿಂದ ರಹಿತನಾಗಿರುವನು. ಇದು ಮಹಾ ವ್ರತವು. ಮಹಾಪಾಪಪರಿಹಾರಕವಾದದ್ದು. ಈ ವ್ರತದಿಂದ ಪರಮಾತ್ಮನನ್ನು ಸಂತೋಷಪಡಿಸಿ ಪರಮಾತ್ಮನ ಲೋಕವನ್ನು ಹೊಂದುವನು.

ಕಾಂತಿಯನ್ನು ಹಣವನ್ನೂ ಅಪೇಕ್ಷಿಸುವವರು ಈ ವ್ರತವನ್ನು ಅವಶ್ಯವಾಗಿ

ಮಾಡಬೇಕು. ಈ ವ್ರತವನ್ನು ಮಾಡಿದ್ದಾದರೆ ಬಾಲ್ಯದಲ್ಲಿಯೇ ಯೌವನದಲ್ಲಿಯೋ ಮುದಿತನ ದಲ್ಲಿಯೋ ನೂರುಜನ್ಮಗಳಲ್ಲಿ ಮಾಡಿದ ಸ್ವಲ್ಪವಾಗಿರಲೀ ಮಹತ್ತಾಗಲೀ ಅದನ್ನು ಈ ವ್ರತದಿಂದ ಸಂತುಷ್ಟನಾದ ಪರಮಾತ್ಮನು ಪರಿಹರಿಸುವನು. ಇದು ಧನಧಾನ್ಯಗಳಿಗೆ ಕಾರಣವಾದದ್ದು. ಪರಮಾತ್ಮನಲ್ಲಿ ಭಕ್ತಿಯಿಂದ ಈದಿನ ಉಪವಾಸ ಮಾಡಿದರೆ ದುರ್ಲಭವಾದದ್ದೇ ಇರುವುದಿಲ್ಲ. ಚಂದ್ರ ಸೂರ್ಯಗ್ರಹಣದಲ್ಲಿ ಯಾವ ಫಲವನ್ನು ಹೇಳಿರುವರೋ ಅದಕ್ಕಿಂತ ಸಾವಿರ ಫಲವು ಈ ವ್ರತದಿಂದ ಆಗುವುದು. ಈ ಏಕಾದಶಿಯಲ್ಲಿ ಮಾಡಿದ ಸ್ನಾನ ದಾನ ಜಪ ವೇದಾಧ್ಯಯನ ಪರಮಾತ್ಮನ ಪೂಜೆ ಇವುಗಳೆಲ್ಲವೂ ಕೋಟಿ ಪಾಲು ಹೆಚ್ಚಾದ ಪುಣ್ಯಕ್ಕೆ ಸಾಧನವಾಗುವುದು. ಈ ಏಕಾದಶಿಯಲ್ಲಿ ಉಪವಾಸವನ್ನು ಮಾಡದೆ ಇದ್ದರೆ ಅವನು ಹುಟ್ಟಿದಂದಿನಿಂದ ಮಾಡಿದ ಪುಣ್ಯವೆಲ್ಲವೂ ವ್ಯರ್ಥವಾಗುವುದು. ಕಾರ್ತಿಕಮಾಸವನ್ನು ನಿಯಮವಿಲ್ಲದೆ ಕಳೆದರೆ ಅವನಿಗೆ ಹುಟ್ಟಿದಂದಿನಿಂದ ಮಾಡಿದ ಪುಣ್ಯದ ಫಲವಿಲ್ಲವೆಂದಾಗುವುದು. ಆದುರಿಂದ ಸರ್ವಪ್ರಕಾರದಿಂದ ಕಾರ್ತಿಕಮಾಸದಲ್ಲಿ ಪರಮಾತ್ಮನನ್ನು ಸೇವಿಸಬೇಕು– ಕಾರ್ತಿಕಮಾಸದಲ್ಲಿ ಪರಾನ್ನವನ್ನು ಪರಿತ್ಯಜಿಸುವುದರಿಂದ ಚಾಂದ್ರಾಯಣವ್ರತವನ್ನು ಮಾಡಿದ ಫಲವು ಬರುವುದು.

ಕಾರ್ತಿಕಮಾಸದಲ್ಲಿ ನಿತ್ಯವೂ ಶಾಸ್ತ್ರವಿಚಾರದಿಂದ ಕಳೆದರೆ ಹತ್ತು ಸಾವಿರಯಾಗ ಮಾಡಿದ ಫಲವು ಬರುವುದು. ಪಾಪಪರಿಹಾರ ವಾಗುವುದು. ಕಾರ್ತಿಕಮಾಸದಲ್ಲಿ ಶಾಸ್ತ್ರಾರ್ಥವಿಚಾರದಿಂದ ಸಂತೋಷಪಡುವಷ್ಟು ಯಜ್ಞದಾನ ತಪಸ್ಸು ಮೊದಲಾದವು ಗಳಿಂದ ಸಂತೋಷವನ್ನು ಹೊಂದುವುದಿಲ್ಲ. ಕಾರ್ತಿಕಮಾಸದಲ್ಲಿ ಅರ್ಧಶ್ಲೋಕ ವನ್ನೋ ಶ್ಲೋಕದ ಒಂದು ಪಾದವನ್ನೋ ಭಗವಂತನ ಮಹಿಮೆಯನ್ನು ಯಾರು ಕೇಳುತ್ತಾರೋ ಅವರಿಗೆ ನೂರು ಗೋದಾನವನ್ನು ಮಾಡಿದ ಫಲವು ಬರುವುದು. ಇತರ ಸರ್ವಧರ್ಮಗಳನ್ನು ಸಂಕೋಚಮಾಡಿ ಪರಮಾತ್ಮನ ಮುಂಭಾಗದಲ್ಲಿ ಶಾಸ್ತ್ರಾರ್ಥವಿಚಾರವನ್ನು ಮಾಡಬೇಕು. ಯಾರು ಶ್ರೇಯಸ್ಸಿನಲ್ಲಿ ಲೋಭದಿಂದ ಪರಮಾತ್ಮನ ಕಥೆಯನ್ನು ಕಾರ್ತಿಕಮಾಸದಲ್ಲಿ ಕೇಳುತ್ತಾನೋ ಅವನು ನೂರು ತಲೆಯವರನ್ನು ಉದ್ಧರಿಸುವನು. ನಿತ್ಯವೂ ಕಾರ್ತಿಕಮಾಸದಲ್ಲಿ ಯಾರು ದೇವರ ಕಥೆಯನ್ನು ಕೇಳುವನೋ ಅವನು ಸಾವಿರ ಗೋದಾನ ಮಾಡಿದ ಫಲವನ್ನು ಹೊಂದುವನು. ಪ್ರಬೋಧಿನೀಏಕಾದಶಿಯಲ್ಲಿ ಯಾರು ಭಗವತ್ಕಥೆಯನ್ನು ಕೇಳುತ್ತಾನೋ ಅವನು ಏಳು ದ್ವೀಪಗಳಿಂದ ಸಹಿತವಾದ ಭೂಮಿಯ ದಾನದಿಂದ ಉಂಟಾಗುವ ಫಲವನ್ನು ಹೊಂದುವನು. ಯಾರು ಪರಮಾತ್ಮನ ಕಥೆಯನ್ನು ಕೇಳಿ

ಕಥಾ ಹೇಳಿದವರನ್ನು ತಮ್ಮ ಶಕ್ತಿಯನ್ನು ಅನುಸರಿಸಿ ಪೂಜಿಸುತ್ತಾರೋ ಅವರಿಗೆ ಅಕ್ಷಯವಾದ ಲೋಕವು ಸಿಗುವುದು. ಗೀತಾಶಾಸ್ತ್ರ ವಿನೋದದಿಂದ ಯಾರು ಕಾರ್ತಿಕ ಮಾಸವನ್ನು ಕಳೆಯುವನೋ ಅವನು ಹಿಂದೆ ತಿರುಗಿ ಭೂಮಿಗೆ ಬರಲಾರನು. ಯಾರು ಗಾಯನ ನರ್ತನ ವಾದ್ಯ ಪರಮಾತ್ಮನ ಕಥೆಗಳನ್ನು ರಚಿಸುತ್ತಾನೋ ಅವನು ಮೂರುಲೋಕಗಳ ಮೇಲೆ ಇರುವರು.

ಅನೇಕ ಪುಷ್ಪಫಲಗಳಿಂದಲೂ ಪಚ್ಚೆಕರ್ಪೂರ ಕುಂಕುಮ ಕೇಸರಿಗಳಿಂದಲೂ ಕಾರ್ತಿಕಮಾಸ ದಲ್ಲಿ ದ್ವಾದಶಿಯಲ್ಲಿ ಪೂಜಿಸಬೇಕು. ಹಣದಲ್ಲಿ ವಂಚನೆ ಮಾಡ ಬಾರದು. ಇದರಿಂದ ಬಹು ಪುಣ್ಯವುಂಟಾಗುವುದು. ಏಕಾದಶಿಯಲ್ಲಿ ಜಾಗರ ಮಾಡಬೇಕು. ಮರುದಿವಸ ದ್ವಾದಶೀದಿನದಲ್ಲಿ ಶಂಖದ ನೀರಿನಿಂದ ದೇವರಿಗೆ ಅರ್ಘ್ಯವನ್ನು ಕೊಡಬೇಕು. ಇದರಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಸರ್ವದಾನಗಳನ್ನು ಮಾಡಿದ ಪುಣ್ಯಕ್ಕಿಂತ ಕೋಟಿ ಪಾಲು ಅಧಿಕವಾದ ಪುಣ್ಯವು ಬರುವುದು. ತರುವಾಯ ಗುರುಗಳಿಗೆ ಭೋಜನ ಮಾಡಿಸಬೇಕು. ವಸ್ತ್ರಾದಿಗಳಿಂದ ಪೂಜಿಸಬೇಕು. ದಕ್ಷಿಣೆಯನ್ನು ಕೊಡಬೇಕು. ಯಾರು ಪ್ರಬೋಧಿನೀ ಏಕಾದಶಿಯಲ್ಲಿ ಭಾಗವತ ಪುರಾಣವನ್ನು ಕೇಳುವನೋ ಅಥವಾ ಹೇಳುವನೋ ಅವನಿಗೆ ಒಂದೊಂದು ಅಕ್ಷರಕ್ಕೆ ಕಪಿಲಾಗೋವನ್ನು ದಾನಮಾಡಿದ ಫಲವು ಬರುವುದು.

ಕಾರ್ತಿಕಮಾಸದಲ್ಲಿ ತನ್ನ ಶಕ್ತಿಯನ್ನು ಅನುಸರಿಸಿ ಯಾರು ವಿಷ್ಣುಪ್ರಿಯವಾದ ವ್ರತವನ್ನು ಮಾಡುವನೋ ಅವನಿಗೆ ಶ್ರಮದಿಂದ ಮೋಕ್ಷವೇ ಉಂಟಾಗುವುದು. ಕಾರ್ತಿಕ ಮಾಸದಲ್ಲಿ ಒಂದು ತಾಳೇ ಹೂವಿನಿಂದ ಭಗವಂತನನ್ನು ಪೂಜಿಸಿದರೆ ಪರಮಾತ್ಮನು ಸಾವಿರವರ್ಷ ಪ್ರೀತಿಯುಳ್ಳವನಾಗುವನು. ಅಗಸಿಹೂವಿನಿಂದ ಯಾರು ಪರಮಾತ್ಮ ನನ್ನು ಪೂಜಿಸುವನೋ ಅವನನ್ನು ನೋಡುವುದರಿಂದಲೇ ನರಕವು ಪರಿಹಾರವನ್ನು ಹೊಂದುವುದು. ಯಾರು ಇತರ ಪುಷ್ಪಗಳನ್ನು ಬಿಟ್ಟು ಕಾರ್ತಿಕಮಾಸ ದಲ್ಲಿ ಅಗಸೀ ಪುಷ್ಪಗಳಿಂದ ಭಗವಂತನನ್ನು ಪೂಜಿಸುವನೋ ಅವನು ಅಶ್ವಮೇಧ ಯಾಗವನ್ನು ಮಾಡಿದ ಪುಣ್ಯವನ್ನು ಹೊಂದುವನು.

ಯಾರು ಕಾರ್ತಿಕಮಾಸದಲ್ಲಿ ಪರಮಾತ್ಮನಿಗೆ ತುಲಸೀದಳಗಳಿಂದ ಅರ್ಚನೆ ಮಾಡುವನೋ ಅವನಿಗೆ ಆಜನ್ಮದಲ್ಲಿ ಮಾಡಿದ ಪಾಪವೆಲ್ಲವೂ ನಾಶವನ್ನು ಹೊಂದುವುದು. ಯಾರು ನಿತ್ಯವೂ ತುಳಸಿಯನ್ನು ನೋಡುವುದು, ಮುಟ್ಟುವುದು, ಧ್ಯಾನ ಮಾಡುವುದು, ಕೀರ್ತನೆಮಾಡುವುದು, ಸ್ತೋತ್ರಮಾಡುವುದು, ತುಳಸಿಯನ್ನು ನೆಡುವುದು, ನೀರು ಹಾಕುವುದು, ಪೂಜಿಸು ವುದು ಎಂಬ ರೀತಿಯಾಗಿ ಒಂಭತ್ತು

ವಿಧದಿಂದ ತುಳಸಿಯಲ್ಲಿ ಭಕ್ತಿಯನ್ನು ಮಾಡುವರೋ ಅವರು ಕೋಟಿ ಸಾವಿರ ಯುಗಗಳಲ್ಲಿ ಮಾಡಿದ ಪುಣ್ಯವನ್ನು ಹೊಂದುವರು. ತುಳಸೀಗೀಡವನ್ನು ಮನೆಯಲ್ಲಿ ನೆಟ್ಟಾಗ ಅದು ಚಿಕ್ಕಕೊಂಬೆಗಳಿಂದ ಬೀಜಪುಷ್ಪ ದಳಗಳಿಂದ ವೃದ್ಧಿಯನ್ನು ಹೊಂದುವುದಾದರೆ ಅವನ ವಂಶದಲ್ಲಿ ಅಷ್ಟರವರೆಗೆ ಹುಟ್ಟಿದವರೂ ಆಮೇಲೆ ಹುಟ್ಟುವವರೂ ಒಂದು ಸಾವಿರ ಕಲ್ಪ ಪರಮಾತ್ಮನ ಮಂದಿರದಲ್ಲಿ ವಾಸಮಾಡುವರು. ಸರ್ವಪುಷ್ಪಗಳನ್ನು ಸರ್ವಪತ್ರ ಗಳನ್ನು ಭಗವಂತನಿಗೆ ಸಮರ್ಪಿಸಿದರೆ ಏನು ಫಲವುಂಟಾಗುವುದೋ ಆ ಫಲವು ಕಾರ್ತಿಕಮಾಸದಲ್ಲಿ ಭಗವಂತನಿಗೆ ಒಂದು ದಳ ತುಳಸಿಯನ್ನು ಸಮರ್ಪಿಸುವುದ ರಿಂದ ಉಂಟಾಗುತ್ತದೆ. ಕಾರ್ತಿಕಮಾಸವು ಬಂದದ್ದನ್ನು ನೋಡಿ ನಿಯಮದಿಂದ ಪರಮಾತ್ಮನನ್ನು ಕೋಮಲ ತುಲಸೀದಳ ಗಳಿಂದ ಪೂಜಿಸಬೇಕು. ದೇವತೆಗಳನ್ನು ನೂರಾರು ಯಾಗಗಳಿಂದ ಆರಾಧಿಸಿದರೆ ಯಾವ ಪುಣ್ಯವು ಬರುವುದೋ ಅನೇಕ ದಾನಗಳನ್ನು ಮಾಡಿದರೆ ಯಾವ ಫಲವು ಬರುವುದೋ ಆ ಪುಣ್ಯವು ಕಾರ್ತಿಕಮಾಸ ದಲ್ಲಿ ಪರಮಾತ್ಮನನ್ನು ಪೂಜಿಸಿದರೆ ಬರುವುದು.



# ಕಾರ್ತಿಕ ಕೃಷ್ಣ ಏಕಾದಶೀ [1]

ಶ್ರೀಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದನು— ಕಾರ್ತಿಕ ಕೃಷ್ಣಪಕ್ಷದ ಏಕಾದಶಿಗೆ **ರಮಾ** ಎಂದು ಹೆಸರು. ಅದು ಸರ್ವಪಾಪಪರಿಹಾರಕ ವಾದದ್ದು. ಅದರ ಮಹಿಮೆಯನ್ನು ನಿನಗೆ ಹೇಳುವೆನು. ಪೂರ್ವದಲ್ಲಿ ಮುಚುಕುಂದ ಎಂದು ಪ್ರಸಿದ್ಧವಾದ ರಾಜನೊಬ್ಬನಿದ್ದನು. ಅವನಿಗೆ ಇಂದ್ರದೇವರೊಡನೆಯೂ ಯಮದೇವರೊಡನೆಯೂ ವರುಣದೇವರೊಡನೆಯೂ ಕುಬೇರನೊಡನೆಯೂ ಸ್ನೇಹವಿದ್ದಿತು. ಹಾಗೆಯೇ ವಿಭೀಷಣನೊಡನೆಯೂ ಸಖ್ಯವಿದ್ದಿತು. ಅವನು ವಿಷ್ಣುಭಕ್ತನಾಗಿದ್ದನು. ಸತ್ಯವಂತನಾಗಿದ್ದನು. ಅವನು ಶತ್ರುರಹಿತವಾದ ರಾಜ್ಯವನ್ನು ಆಳುತ್ತಿರಲು ಅವನಿಗೆ ಚಂದ್ರಭಾಗಾ ಎಂಬ ಮಗಳು ಹುಟ್ಟಿದಳು. ಮುಚುಕುಂದನು ಸರಿಯಾದ ವಯಸ್ಸಿನಲ್ಲಿ ಅವಳನ್ನು ಚಂದ್ರಸೇನನ ಮಗನಾದ ಶೋಭನ ಎಂದು ಹೆಸರುಳ್ಳ ವರನಿಗೆ ಮದುವೆ ಮಾಡಿಕೊಟ್ಟನು. ಶೋಭನನು ಮದುವೆ

---

1. ಪ.ಪು.ಉ.ಖಂ. ಅ.62

ಮಾಡಿಕೊಂಡು ಹೋದಮೇಲೆ ಒಂದು ದಿನದಲ್ಲಿ ಮಾವನ ಮನೆಗೆ ಬಂದನು. ಏಕಾದಶಿವ್ರತವು ಬಂದಿತು. ಆಗ ಚಂದ್ರಭಾಗಳು 'ಏನಾಗುವುದೋ! ನನ್ನ ಪತಿಯು ತುಂಬಾ ದುರ್ಬಲರು. ಹಸಿವೆಯನ್ನು ಸಹಿಸಲಿಕ್ಕೆ ಸಮರ್ಥರಲ್ಲ. ನನ್ನ ತಂದೆಯು ಉಗ್ರಶಾಸನವುಳ್ಳವರಲ್ಲಾ!' ಎಂದು ಯೋಚನೆ ಮಾಡಿದಳು. ದಶಮೀದಿನದಲ್ಲಿಯೇ 'ನಾಳೆ ಏಕಾದಶಿಯು ಒಬ್ಬರೂ ಭೋಜನ ಮಾಡಬಾರದು' ಎಂದು ನಗಾರಿಯನ್ನು ಬಡಿಯುತ್ತಾ ರಾಜಭೃತ್ಯನು ಹೇಳುತ್ತಾ ಬಂದನು. ಅದನ್ನು ಶೋಭನನು ಹೆಂಡತಿಯೊಡನೆ 'ಕಾಂತೆ! ನಾನು ಏನು ಮಾಡಲಿ? ಹೇಳು' ಎಂದನು. ಅದಕ್ಕೆ ಅವಳು 'ಸ್ವಾಮಿ! ನನ್ನ ತಂದೆಯ ಮನೆಯಲ್ಲಿ ಏಕಾದಶೀದಿನ ಒಬ್ಬರೂ ಭೋಜನ ಮಾಡಬಾರದು. ಆನೆಗಳಿಗೂ ಕುದುರೆಗಳಿಗೂ ಇತರ ಪಶುಗಳಿಗೂ ಸಹ ಆಹಾರವನ್ನು ಹಾಕಬಾರದು. ನೀವು ಭೋಜನ ಮಾಡಿದರೆ ಎಲ್ಲರೂ ನಿಮ್ಮನ್ನು ನಿಂದಿಸುವರು. ಈ ರೀತಿಯಾಗಿ ಯೋಚಿಸಿ ಮನಸ್ಸನ್ನು ದೃಢಪಡಿಸಿಕೊಳ್ಳಿರಿ' ಎಂದಳು.

ಅದಕ್ಕೆ ಶೋಭನನು 'ಪ್ರಿಯೆ! ನೀನು ಹೇಳುವ ಮಾತು ಸತ್ಯವಾದದ್ದು. ನಾನೂ ಉಪವಾಸ ಮಾಡುತ್ತೇನೆ. ಆಮೇಲೆ ದೇವರು ಮಾಡಿದಂತೆ ಆಗುವುದು' ಎಂದು ಹೇಳಿ ಉಪವಾಸ ಮಾಡಿದನು. ಹಸಿವೆಯಿಂದ ತುಂಬಾ ಶ್ರಮಪಟ್ಟನು. ರಾತ್ರಿಯಾಯಿತು. ಭಗವಂತನನ್ನು ಪೂಜಿಸುವ ಜಾಗರದಲ್ಲಿ ಆಸಕ್ತರಾದ ವೈಷ್ಣವರಿಗೆ ಆ ರಾತ್ರಿಯು ಹರ್ಷದಾಯಕವಾಗಿದ್ದಿತು. ಶೋಭನನಿಗೆ ಮಾತ್ರ ಅತಿ ದುಃಖಪ್ರದವಾಯಿತು. ಸೂರ್ಯೋದಯವಾಗುವ ಸಮಯದಲ್ಲಿ ಶೋಭನನು ಹಸಿವೆಯ ಶ್ರಮವನ್ನು ತಡೆಯಲಾರದೆ ಮರಣವನ್ನು ಹೊಂದಿದನು. ರಾಜನು ರಾಜಯೋಗ್ಯವೈಭವದಿಂದ ಅವನ ದೇಹಕ್ಕೆ ಸಂಸ್ಕಾರವನ್ನು ಮಾಡಿಸಿದನು. ಚಂದ್ರಭಾಗೆಯು ಸಹಗಮನವನ್ನು ಮಾಡಲಿಲ್ಲ. ಗಂಡನಿಗೆ ಉತ್ತರಕ್ರಿಯೆಯನ್ನು ಮಾಡಿ ತಂದೆಯ ಮನೆಯಲ್ಲಿಯೇ ಇದ್ದಳು. ಶೋಭನನು ಆ ರಮಾ ಎಂಬ ಹೆಸರುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಿದ ಪ್ರಭಾವದಿಂದ ಮಂದರಪರ್ವತದ ಪ್ರದೇಶದಲ್ಲಿದ್ದ ದೇವಪುರವನ್ನು ಹೊಂದಿದನು. ಅತ್ಯಂತ ವೈಭವದಿಂದ ಕೂಡಿದ ಆ ಸ್ಥಳದಲ್ಲಿ ಆಭರಣಗಳಿಂದ ಅಲಂಕೃತನಾಗಿ ಸಿಂಹಾಸದಲ್ಲಿ ಕೂತುಕೊಂಡು ಗಂಧರ್ವರಿಂದ ಸ್ತೋತ್ರ ಮಾಡಲ್ಪಡುತ್ತಾ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಾ ಇದ್ದನು. ಮುಚುಕುಂದರಾಜನ ರಾಜ್ಯದಲ್ಲಿ ಇದ್ದ ಸೋಮಶರ್ಮನೆಂಬ ಬ್ರಾಹ್ಮಣನು ತೀರ್ಥಯಾತ್ರೆಯನ್ನು ಮಾಡುತ್ತಾ ಅಲ್ಲಿಗೆ ಹೋಗಿ ಅವನನ್ನು ನೋಡಿ ರಾಜನ

ಅಳಿಯನೆಂದು ತಿಳಿದುಕೊಂಡು ಅವನ ಹತ್ತಿರಕ್ಕೆ ಹೋದನು. ಶೋಭನನೂ ಸೋಮಶರ್ಮನು ಬಂದದ್ದನ್ನು ತಿಳಿದು ಆಸನದಿಂದ ಎದ್ದು ನಮಸ್ಕರಿಸಿದನು. ತನ್ನ ಮಾವನ ಮತ್ತು ತನ್ನ ಹೆಂಡತಿಯಾದ ಚಂದ್ರಭಾಗೆಯ ಇನ್ನೂ ಊರಜನರ ಕ್ಷೇಮವನ್ನು ವಿಚಾರಿಸಿದನು.

ಆಗ ಸೋಮಶರ್ಮನು 'ರಾಜರು ಸೌಖ್ಯದಿಂದ ಇರುವರು. ಈ ಪುರವು ಅತ್ಯದ್ಭುತವಾಗಿದೆ. ಇದನ್ನು ಇಷ್ಟರವರೆಗೆ ಒಬ್ಬರೂ ನೋಡಿದ್ದೇ ಇಲ್ಲ. ಇದು ನಿನಗೆ ಹೇಗೆ ಲಭಿಸಿತು? ಸತ್ಯವಾದ ವಿಷಯವನ್ನು ಹೇಳಬೇಕು' ಎಂದು ಕೇಳಿದನು. ಅದಕ್ಕೆ ಶೋಭನನು ಕಾರ್ತಿಕಮಾಸದ ಕೃಷ್ಣಪಕ್ಷದ ಏಕಾದಶಿಯಲ್ಲಿ ಉಪವಾಸಮಾಡಿ ನನಗೆ ಈ ಪುರವು ಲಭಿಸಿತು. ಆದರೆ ನಾನು ಶ್ರದ್ಧೆಯಿಲ್ಲದೆ ಉಪವಾಸ ಮಾಡಿದೆನು. ಅದರಿಂದ ನಶ್ವರವಾದ ಪುರವು ನನಗೆ ಲಭಿಸಿತು. ಮುಚುಕುಂದ ರಾಜನ ಮಗಳಾದ ಚಂದ್ರಭಾಗೆಯ ಬಳಿಯಲ್ಲಿ ಈ ವಿಷಯವನ್ನು ತಿಳಿಸಿರಿ' ಎಂದು ಹೇಳಿದನು. ಸೋಮಶರ್ಮನು ಹಾಗೆಯೇ ಊರಿಗೆ ಹೋಗಿ ರಾಜಪುತ್ರಿಯೊಡನೆ ಈ ವಿಷಯವನ್ನು ಹೇಳಿದನು. 'ಸುಂದರಿ! ನಿನ್ನ ಗಂಡನನ್ನು ನಾನು ಕಣ್ಣಾರೆ ನೋಡಿದೆನು. ಇಂದ್ರನಂತೆ ಕಾಣಿಸುತ್ತಿದ್ದನು. ಅವನ ಪಟ್ಟಣವನ್ನು ನೋಡಿದೆನು. ಅದು ನಶ್ವರವಂತೆ. ಅದು ಶಾಶ್ವತವಾಗುವಂತೆ ನೀನು ಮಾಡು' ಎಂದು ಹೇಳಿದನು. ಚಂದ್ರಭಾಗೆಯು 'ಗಂಡನನ್ನು ನೋಡಲು ನನ್ನನ್ನು ಕರೆದುಕೊಂಡು ಹೋಗಿರಿ. ಅಲ್ಲಿ ನನ್ನ ಪುಣ್ಯಪ್ರಭಾವದಿಂದ ಆ ಲೋಕವು ಶಾಶ್ವತವಾಗುವಂತೆ ಮಾಡುವೆನು' ಎಂದಳು. 'ನಮ್ಮಿಬ್ಬರನ್ನೂ ಒಟ್ಟಿಗೆ ಸೇರಿಸಿರಿ. ಇದರಿಂದ ನಿಮಗೆ ಬಹಳ ಪುಣ್ಯವು ಬರುವುದು' ಎಂದು ಹೇಳಿದಳು.

ಅದನ್ನು ಕೇಳಿ ಸೋಮಶರ್ಮನು ಅವಳನ್ನು ಕರೆದುಕೊಂಡು ಮಂದರ ಪರ್ವತದಲ್ಲಿ ಇದ್ದ ವಾಮದೇವ ಋಷಿಗಳ ಆಶ್ರಮಕ್ಕೆ ಹೋದನು. ಅಲ್ಲಿ ಋಷಿಗಳ ಮಂತ್ರಪ್ರಭಾವದಿಂದಲೂ ಏಕಾದಶಿ ಉಪವಾಸ ಮಾಡಿದ ಕಾರಣದಿಂದಲೂ ಆ ಚಂದ್ರಭಾಗೆಯು ದಿವ್ಯದೇಹವುಳ್ಳವಳಾದಳು. ದಿವ್ಯಗತಿಯುಳ್ಳವಳಾದಳು. ಸಂತೋಷದಿಂದ ಅರಳಿದ ಕಣ್ಣುಳ್ಳವಳಾಗಿ ಗಂಡನ ಸಮೀಪಕ್ಕೆ ಹೋದಳು. ಶೋಭನನು ಅವಳನ್ನು ಕರೆದು ತನ್ನ ಎಡಪಾರ್ಶ್ವದಲ್ಲಿ ಕೂತುಕೊಳ್ಳಿಸಿದನು. ತರುವಾಯ ಚಂದ್ರಭಾಗೆಯು ಗಂಡನೊಡನೆ 'ಕಾಂತ! ನಾನು ಹೇಳುವ ಹಿತಕರ ವಾದ ಮಾತನ್ನು ಕೇಳಿರಿ. 'ನಾನು ಎಂಟನೇ ವರ್ಷವನ್ನಾರಂಭಿಸಿ ತಂದೆಯ ಮನೆಯಲ್ಲಿ ಏಕಾದಶೀ ಉಪವಾಸವನ್ನು ಮಾಡುತ್ತಿರುವೆನು. ಆ ಪುಣ್ಯಪ್ರಭಾವದಿಂದ

ಮಾಡಿಕೊಂಡು ಹೋದಮೇಲೆ ಒಂದು ದಿನದಲ್ಲಿ ಮಾವನ ಮನೆಗೆ ಬಂದನು. ಏಕಾದಶಿವ್ರತವು ಬಂದಿತು. ಆಗ ಚಂದ್ರಭಾಗಳು 'ಏನಾಗುವುದೋ! ನನ್ನ ಪತಿಯು ತುಂಬಾ ದುರ್ಬಲರು. ಹಸಿವೆಯನ್ನು ಸಹಿಸಲಿಕ್ಕೆ ಸಮರ್ಥರಲ್ಲ. ನನ್ನ ತಂದೆಯು ಉಗ್ರಶಾಸನವುಳ್ಳವರಲ್ಲಾ!' ಎಂದು ಯೋಚನೆ ಮಾಡಿದಳು. ದಶಮೀದಿನದಲ್ಲಿಯೇ 'ನಾಳೆ ಏಕಾದಶಿಯು ಒಬ್ಬರೂ ಭೋಜನ ಮಾಡಬಾರದು' ಎಂದು ನಗಾರಿಯನ್ನು ಬಡಿಯುತ್ತಾ ರಾಜಭೃತ್ಯನು ಹೇಳುತ್ತಾ ಬಂದನು. ಅದನ್ನು ಶೋಭನನು ಹೆಂಡತಿಯೊಡನೆ 'ಕಾಂತೆ! ನಾನು ಏನು ಮಾಡಲಿ? ಹೇಳು' ಎಂದನು. ಅದಕ್ಕೆ ಅವಳು 'ಸ್ವಾಮಿ! ನನ್ನ ತಂದೆಯ ಮನೆಯಲ್ಲಿ ಏಕಾದಶೀದಿನ ಒಬ್ಬರೂ ಭೋಜನ ಮಾಡಬಾರದು. ಆನೆಗಳಿಗೂ ಕುದುರೆಗಳಿಗೂ ಇತರ ಪಶುಗಳಿಗೂ ಸಹ ಆಹಾರವನ್ನು ಹಾಕಬಾರದು. ನೀವು ಭೋಜನ ಮಾಡಿದರೆ ಎಲ್ಲರೂ ನಿಮ್ಮನ್ನು ನಿಂದಿಸುವರು. ಈ ರೀತಿಯಾಗಿ ಯೋಚಿಸಿ ಮನಸ್ಸನ್ನು ದೃಢಪಡಿಸಿಕೊಳ್ಳಿರಿ' ಎಂದಳು.

ಅದಕ್ಕೆ ಶೋಭನನು 'ಪ್ರಿಯೆ! ನೀನು ಹೇಳುವ ಮಾತು ಸತ್ಯವಾದದ್ದು. ನಾನೂ ಉಪವಾಸ ಮಾಡುತ್ತೇನೆ. ಆಮೇಲೆ ದೇವರು ಮಾಡಿದಂತೆ ಆಗುವುದು' ಎಂದು ಹೇಳಿ ಉಪವಾಸ ಮಾಡಿದನು. ಹಸಿವೆಯಿಂದ ತುಂಬಾ ಶ್ರಮಪಟ್ಟನು. ರಾತ್ರಿಯಾಯಿತು. ಭಗವಂತನನ್ನು ಪೂಜಿಸುವ ಜಾಗರದಲ್ಲಿ ಆಸಕ್ತರಾದ ವೈಷ್ಣವರಿಗೆ ಆ ರಾತ್ರಿಯು ಹರ್ಷದಾಯಕವಾಗಿದ್ದಿತು. ಶೋಭನನಿಗೆ ಮಾತ್ರ ಅತಿ ದುಃಖಪ್ರದವಾಯಿತು. ಸೂರ್ಯೋದಯವಾಗುವ ಸಮಯದಲ್ಲಿ ಶೋಭನನು ಹಸಿವೆಯ ಶ್ರಮವನ್ನು ತಡೆಯಲಾರದೆ ಮರಣವನ್ನು ಹೊಂದಿದನು. ರಾಜನು ರಾಜಯೋಗ್ಯವೈಭವದಿಂದ ಅವನ ದೇಹಕ್ಕೆ ಸಂಸ್ಕಾರವನ್ನು ಮಾಡಿಸಿದನು. ಚಂದ್ರಭಾಗೆಯು ಸಹಗಮನವನ್ನು ಮಾಡಲಿಲ್ಲ. ಗಂಡನಿಗೆ ಉತ್ತರಕ್ರಿಯೆಯನ್ನು ಮಾಡಿ ತಂದೆಯ ಮನೆಯಲ್ಲಿಯೇ ಇದ್ದಳು. ಶೋಭನನು ಆ ರಮಾ ಎಂಬ ಹೆಸರುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಿದ ಪ್ರಭಾವದಿಂದ ಮಂದರಪರ್ವತದ ಪ್ರದೇಶದಲ್ಲಿದ್ದ ದೇವಪುರವನ್ನು ಹೊಂದಿದನು. ಅತ್ಯಂತ ವೈಭವದಿಂದ ಕೂಡಿದ ಆ ಸ್ಥಳದಲ್ಲಿ ಆಭರಣಗಳಿಂದ ಅಲಂಕೃತನಾಗಿ ಸಿಂಹಾಸದಲ್ಲಿ ಕೂತುಕೊಂಡು ಗಂಧರ್ವರಿಂದ ಸ್ತೋತ್ರ ಮಾಡಲ್ಪಡುತ್ತಾ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಾ ಇದ್ದನು. ಮುಚುಕುಂದರಾಜನ ರಾಜ್ಯದಲ್ಲಿ ಇದ್ದ ಸೋಮಶರ್ಮನೆಂಬ ಬ್ರಾಹ್ಮಣನು ತೀರ್ಥಯಾತ್ರೆಯನ್ನು ಮಾಡುತ್ತಾ ಅಲ್ಲಿಗೆ ಹೋಗಿ ಅವನನ್ನು ನೋಡಿ ರಾಜನ

ಅಳಿಯನೆಂದು ತಿಳಿದುಕೊಂಡು ಅವನ ಹತ್ತಿರಕ್ಕೆ ಹೋದನು. ಶೋಭನನೂ ಸೋಮಶರ್ಮನು ಬಂದದ್ದನ್ನು ತಿಳಿದು ಆಸನದಿಂದ ಎದ್ದು ನಮಸ್ಕರಿಸಿದನು. ತನ್ನ ಮಾವನ ಮತ್ತು ತನ್ನ ಹೆಂಡತಿಯಾದ ಚಂದ್ರಭಾಗೆಯ ಇನ್ನೂ ಊರಜನರ ಕ್ಷೇಮವನ್ನು ವಿಚಾರಿಸಿದನು.

ಆಗ ಸೋಮಶರ್ಮನು 'ರಾಜರು ಸೌಖ್ಯದಿಂದ ಇರುವರು. ಈ ಪುರವು ಅತ್ಯದ್ಭುತವಾಗಿದೆ. ಇದನ್ನು ಇಷ್ಟರವರೆಗೆ ಒಬ್ಬರೂ ನೋಡಿದ್ದೇ ಇಲ್ಲ. ಇದು ನಿನಗೆ ಹೇಗೆ ಲಭಿಸಿತು? ಸತ್ಯವಾದ ವಿಷಯವನ್ನು ಹೇಳಬೇಕು' ಎಂದು ಕೇಳಿದನು. ಅದಕ್ಕೆ ಶೋಭನನು ಕಾರ್ತಿಕಮಾಸದ ಕೃಷ್ಣಪಕ್ಷದ ಏಕಾದಶಿಯಲ್ಲಿ ಉಪವಾಸಮಾಡಿ ನನಗೆ ಈ ಪುರವು ಲಭಿಸಿತು. ಆದರೆ ನಾನು ಶ್ರದ್ಧೆಯಿಲ್ಲದೆ ಉಪವಾಸ ಮಾಡಿದೆನು. ಅದರಿಂದ ನಶ್ವರವಾದ ಪುರವು ನನಗೆ ಲಭಿಸಿತು. ಮುಚುಕುಂದ ರಾಜನ ಮಗಳಾದ ಚಂದ್ರಭಾಗೆಯ ಬಳಿಯಲ್ಲಿ ಈ ವಿಷಯವನ್ನು ತಿಳಿಸಿರಿ' ಎಂದು ಹೇಳಿದನು. ಸೋಮಶರ್ಮನು ಹಾಗೆಯೇ ಊರಿಗೆ ಹೋಗಿ ರಾಜಪುತ್ರಿಯೊಡನೆ ಈ ವಿಷಯವನ್ನು ಹೇಳಿದನು. 'ಸುಂದರಿ! ನಿನ್ನ ಗಂಡನನ್ನು ನಾನು ಕಣ್ಣಾರೆ ನೋಡಿದೆನು. ಇಂದ್ರನಂತೆ ಕಾಣಿಸುತ್ತಿದ್ದನು. ಅವನ ಪಟ್ಟಣವನ್ನು ನೋಡಿದೆನು. ಅದು ನಶ್ವರವಂತೆ. ಅದು ಶಾಶ್ವತವಾಗುವಂತೆ ನೀನು ಮಾಡು' ಎಂದು ಹೇಳಿದನು. ಚಂದ್ರಭಾಗೆಯು 'ಗಂಡನನ್ನು ನೋಡಲು ನನ್ನನ್ನು ಕರೆದುಕೊಂಡು ಹೋಗಿರಿ. ಅಲ್ಲಿ ನನ್ನ ಪುಣ್ಯಪ್ರಭಾವದಿಂದ ಆ ಲೋಕವು ಶಾಶ್ವತವಾಗುವಂತೆ ಮಾಡುವೆನು' ಎಂದಳು. 'ನಮ್ಮಿಬ್ಬರನ್ನೂ ಒಟ್ಟಿಗೆ ಸೇರಿಸಿರಿ. ಇದರಿಂದ ನಿಮಗೆ ಬಹಳ ಪುಣ್ಯವು ಬರುವುದು' ಎಂದು ಹೇಳಿದಳು.

ಅದನ್ನು ಕೇಳಿ ಸೋಮಶರ್ಮನು ಅವಳನ್ನು ಕರೆದುಕೊಂಡು ಮಂದರ ಪರ್ವತದಲ್ಲಿ ಇದ್ದ ವಾಮದೇವ ಋಷಿಗಳ ಆಶ್ರಮಕ್ಕೆ ಹೋದನು. ಅಲ್ಲಿ ಋಷಿಗಳ ಮಂತ್ರಪ್ರಭಾವದಿಂದಲೂ ಏಕಾದಶಿ ಉಪವಾಸ ಮಾಡಿದ ಕಾರಣದಿಂದಲೂ ಆ ಚಂದ್ರಭಾಗೆಯು ದಿವ್ಯದೇಹವುಳ್ಳವಳಾದಳು. ದಿವ್ಯಗತಿಯುಳ್ಳವಳಾದಳು. ಸಂತೋಷದಿಂದ ಅರಳಿದ ಕಣ್ಣುಳ್ಳವಳಾಗಿ ಗಂಡನ ಸಮೀಪಕ್ಕೆ ಹೋದಳು. ಶೋಭನನು ಅವಳನ್ನು ಕರೆದು ತನ್ನ ಎಡಪಾರ್ಶ್ವದಲ್ಲಿ ಕೂತುಕೊಳ್ಳಿಸಿದನು. ತರುವಾಯ ಚಂದ್ರಭಾಗೆಯು ಗಂಡನೊಡನೆ 'ಕಾಂತ! ನಾನು ಹೇಳುವ ಹಿತಕರ ವಾದ ಮಾತನ್ನು ಕೇಳಿರಿ. 'ನಾನು ಎಂಟನೇ ವರ್ಷವನ್ನಾರಂಭಿಸಿ ತಂದೆಯ ಮನೆಯಲ್ಲಿ ಏಕಾದಶೀ ಉಪವಾಸವನ್ನು ಮಾಡುತ್ತಿರುವೆನು. ಆ ಪುಣ್ಯಪ್ರಭಾವದಿಂದ

ನಿನ್ನ ಪುರವು ಸರ್ವಪದಾರ್ಥಗಳಿಂದ ತುಂಬಿಕೊಂಡು ಶಾಶ್ವತವಾಗಿರಲಿ' ಎಂದು ಹೇಳಿದಳು. ತರುವಾಯ ಆ ದಂಪತಿಗಳು ರಮಾ ಎಂಬ ಹೆಸರುಳ್ಳ ಏಕಾದಶೀ ಉಪವಾಸ ಮಾಡಿದ ಪ್ರಭಾವದಿಂದ ಮಂದರಪರ್ವತದ ಪ್ರದೇಶದಲ್ಲಿ ಸರ್ವಭೋಗವುಳ್ಳವರಾಗಿ ಸಂತೋಷದಿಂದ ಇದ್ದರು. ಏಕಾದಶಿಗಳಲ್ಲಿ ಶುಕ್ಲಕೃಷ್ಣಪಕ್ಷ ವೆಂದು ವಿವೇಕವಿಲ್ಲದೆ ಎಲ್ಲಾ ಏಕಾದಶಿಗಳಲ್ಲಿಯೂ ಉಪವಾಸವನ್ನು ಮಾಡಿಯೇ ಮಾಡಬೇಕು. ಏಕಾದಶೀವ್ರತಗಳ ಮಹಿಮೆಯನ್ನು ಸರ್ವಪಾಪರಹಿತನಾಗಿ ವಿಷ್ಣು ಲೋಕದಲ್ಲಿ ಸತ್ಕೃತನಾಗಿರುವನು.



## ಮಾರ್ಗಶಿರ ಶುಕ್ಲಪಕ್ಷದ ಏಕಾದಶೀ[1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು—ಮಾರ್ಗಶಿರ ಮಾಸದ ಶುಕ್ಲಪಕ್ಷದ ಏಕಾದಶಿಗೆ **ಮೋಕ್ಷಾ** ಎಂದು ಹೆಸರು. ಆ ದಿನದಲ್ಲಿ ದಾಮೋದರನಾಮಕ ಪರಮಾತ್ಮನನ್ನು ಪೂಜಿಸಬೇಕು. ತುಲಸೀಧೂಪದೀಪ ಇತ್ಯಾದಿಗಳಿಂದ ಪೂಜೆಯನ್ನು ಮಾಡಬೇಕು. ಏಕಾದಶಿಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರವನ್ನು ಮಾಡ ಬೇಕು. ಇದರ ಮಹಿಮೆಯ ವಿಷಯದಲ್ಲಿ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತೇನೆ.

ವೈಷ್ಣವರಿಂದ ಅಲಂಕೃತವಾದ ಮನೋಹರವಾದ ಚಂಪಕನಗರದಲ್ಲಿ ವೈಖಾನಸ ಎಂಬ ರಾಜನಿದ್ದನು. ಅವನು ಪ್ರಜೆಗಳನ್ನು ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸು ತ್ತಿದ್ದನು. ಅವನ ರಾಜ್ಯದಲ್ಲಿ ಬಹುಜನ ವೇದವೇದಾಂಗ ಶಾಸ್ತ್ರಪಾರಂಗತರಾದ ಬ್ರಾಹ್ಮಣರು ವಾಸಮಾಡುತ್ತಿದ್ದರು. ಒಂದು ದಿನದಲ್ಲಿ ರಾಜನು ಸ್ವಪ್ನದಲ್ಲಿ ತನ್ನ ಪಿತೃಗಳು ನರಕದಲ್ಲಿ ದುಃಖಪಡುವಂತೆ ನೋಡಿದನು. ಅದನ್ನು ನೋಡಿ ರಾಜನು ಆಶ್ಚರ್ಯವುಳ್ಳವನಾಗಿ ಬ್ರಾಹ್ಮಣರೊಡನೆ ತನ್ನ ಸ್ವಪ್ನವೃತ್ತಾಂತವನ್ನು ಹೇಳಿಕೊಂಡನು. 'ಬ್ರಾಹ್ಮಣರೇ! ನಾನು ಸ್ವಪ್ನದಲ್ಲಿ ನರಕದಲ್ಲಿ ಪಿತೃಗಳನ್ನು ನೋಡಿದೆನು. ಅವರು ನನ್ನೊಡನೆ ಈ ನರಕದಿಂದ ನಮ್ಮನ್ನು ಬಿಡಿಸು ಎಂದು ಹೇಳುತ್ತಾ ಅಳುತ್ತಿದ್ದರು. ಅದನ್ನು ನೋಡಿದ ಮೇಲೆ ನನಗೆ ಮನಸ್ಸಿನಲ್ಲಿ ಸುಖವೇ ಆಗುವುದಿಲ್ಲ. ಈ ರಾಜ್ಯದಿಂದಲೂ ಸುಖವಿಲ್ಲ. ಆನೆ ಕುದುರೆ ಒಂದೂ ನನಗೆ ರುಚಿಸುವುದಿಲ್ಲ. ಹೆಂಡತಿ

1. ಪ.ಪು.ಉ.ಖಂ. ಅ.41

ಮಕ್ಕಳೂ ನನಗೆ ಬೇಡವಾಗಿದ್ದಾರೆ. ನಾನು ಏನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಪಿತೃಗಳು ನರಕದಿಂದ ಬಿಡುಗಡೆಯನ್ನು ಹೊಂದುವಂತೆ ಮಾಡುವ ತಪಸ್ಸನ್ನೋ ವ್ರತವನ್ನೋ ಹೇಳಿರಿ. ಪ್ರಬಲವಾದ ಮಗನಾದ ನಾನು ಬದುಕಿರುವಾಗ ಪಿತೃಗಳು ನರಕದಲ್ಲಿ ಬಳಲುವುದಾದರೆ ನಾನು ಬದುಕಿದ್ದು ಏನು ಫಲವಿದೆ?' ಎಂದು ಹೇಳಿದನು.

ಅದಕ್ಕೆ ಬ್ರಾಹ್ಮಣರು 'ಹತ್ತಿರದಲ್ಲಿಯೇ ಪರ್ವತಮುನಿಗಳ ಆಶ್ರಮವಿದೆ. ಅಲ್ಲಿಗೆ ಹೋಗು. ಅವರು ಎಲ್ಲವನ್ನೂ ಹೇಳುವರು' ಎಂದು ಹೇಳಿದರು.

ಅವರ ಮಾತನ್ನು ಕೇಳಿ ವೈಖಾನಸರಾಜನು ಬೇಗನೇ ವೈಖಾನಸಋಷಿಗಳ ಆಶ್ರಮಕ್ಕೆ ಹೋದನು. ಪ್ರಜೆಗಳನ್ನು ಕರಕೊಂಡೇ ಹೋದನು. ಮುನಿಗಳ ಪಾದವನ್ನು ಮುಟ್ಟಿ ನಮಸ್ಕರಿಸಿ ಎಲ್ಲಾ ವಿಷಯವನ್ನು ಕೇಳಿದನು. ಆಗ ಪರ್ವತಮುನಿಗಳು ಸ್ವಲ್ಪಹೊತ್ತು ಧ್ಯಾನಮಾಡುವವರಾಗಿ ಆಮೇಲೆ ರಾಜನೊಡನೆ 'ರಾಜಶ್ರೇಷ್ಠನೇ! ನಿನ್ನ ಪಿತೃಗಳ ಪೂರ್ವವ್ಯಾಪಾರವನ್ನು ತಿಳಿದೆನು. ಪೂರ್ವಜನ್ಮದಲ್ಲಿ ನಿನ್ನ ತಂದೆಯು ಒಬ್ಬ ಕ್ಷತ್ರಿಯನಾಗಿದ್ದನು. ಅವನು ರಾಜನೆಂಬ ಮದದಿಂದ ಪತ್ನಿಯ ಋತುಕಾಲದಲ್ಲಿ ರಾಜಧರ್ಮದಲ್ಲಿಯೇ ಆಸಕ್ತನಾಗಿದ್ದನು. ತನ್ನ ಪತ್ನಿಯನ್ನು ಅನ್ಯತ್ರ ಇಟ್ಟು ಅವಳ ಸಂಬಂಧವನ್ನು ಮಾಡಲೇ ಇಲ್ಲ. ಅದರಿಂದ ಅವನು ಪಿತೃಗಳಿಂದ ಕೂಡಿಕೊಂಡು ನರಕದಲ್ಲಿ ಬಿದ್ದಿರುವನು' ಎಂದರು.

ರಾಜನು 'ಯಾವ ವ್ರತದಿಂದ ನನ್ನ ಪಿತೃಗಳು ಈಗ ನರಕದಿಂದ ಬಿಡುಗಡೆಯನ್ನು ಹೊಂದುವರು?' ಎಂದು ಕೇಳಿದನು.

ಅದಕ್ಕೆ ಪರ್ವತಮುನಿಗಳು 'ಮಾರ್ಗಶಿರಮಾಸದ ಶುಕ್ಲಪಕ್ಷದ ಏಕಾದಶಿಗೆ ಮೋಕ್ಷಾ ಎಂದು ಹೆಸರು. ಎಲ್ಲರೂ ಆ ಏಕಾದಶೀ ಉಪವಾಸವನ್ನು ಮಾಡಿ ನಿನ್ನ ಪಿತೃಗಳಿಗೆ ಆ ಪುಣ್ಯವನ್ನು ಧಾರೆಯೆರೆದು ಕೊಟ್ಟರೆ ಪಿತೃಗಳಿಗೆ ನರಕದಿಂದ ಬಿಡುಗಡೆಯಾಗುವುದು' ಎಂದು ಹೇಳಿದರು. ಅದೇರೀತಿಯಾಗಿ ವೈಖಾನಸರಾಜನು ರಾಜ್ಯಕ್ಕೆ ಹೋಗಿ ಎಲ್ಲರಿಂದ ಕೂಡಿಕೊಂಡು ಆ ಏಕಾದಶೀ ಉಪವಾಸ ಮಾಡಿ ಆ ಪುಣ್ಯವನ್ನು ತಂದೆಗೆ ಧಾರೆಯೆರೆದುಕೊಟ್ಟನು. ಆಗಲೇ ಆಕಾಶದಿಂದ ವೈಖಾನಸನ ತಲೆಯ ಮೇಲೆ ಹೂವಿನ ಮಳೆಯು ಸುರಿಯಿತು. ಅವನ ಪಿತೃಗಳು ಸ್ವರ್ಗವನ್ನು ಹೊಂದಿದರು. ಆಕಾಶದಲ್ಲಿ 'ಮಗನೇ! ನಿನ್ನ ಮಂಗಳವಾಗಲಿ' ಎಂದು ಹೇಳಿದ ಮಾತು ಕೇಳಿಸಿತು. ಈರೀತಿಯಾಗಿ ಯಾರು ಈ ಏಕಾದಶಿಯಲ್ಲಿ ಉಪವಾಸ ಮಾಡುತ್ತಾರೋ ಅವರು ಉತ್ತಮ ಲೋಕವನ್ನು ಹೊಂದುವರು. ಇದರ ಮಹಿಮೆ

ಯನ್ನು ಹೇಳುವುದರಿಂದಲೂ ಕೇಳುವುದರಿಂದಲೂ ವಾಜಪೇಯಯಾಗವನ್ನು ಮಾಡಿದ ಫಲವನ್ನು ಹೊಂದುವರು.



# ಮಾರ್ಗಶಿರ ಕೃಷ್ಣಪಕ್ಷದ ಏಕಾದಶೀ [1]

ಧರ್ಮರಾಜನು ಕೃಷ್ಣಪರಮಾತ್ಮನೊಡನೆ 'ಪವಿತ್ರವಾದ ಏಕಾದಶಿಯು ಹೇಗೆ ಉಂಟಾಯಿತು? ಹೇಗೆ ಪರಮಾತ್ಮನಿಗೆ ಪ್ರಿಯವಾಯಿತು?' ಇತ್ಯಾದಿ ವಿಷಯವನ್ನು ತಿಳಿಸಬೇಕೆಂದು ಕೇಳಿಕೊಂಡನು.

ಆಗ ಕೃಷ್ಣಪರಮಾತ್ಮನು 'ಪೂರ್ವದಲ್ಲಿ ಕೃತಯುಗದಲ್ಲಿ ಅತ್ಯದ್ಭುತನಾದ ಅತಿಭಯಂಕರನಾದ ಮುರ ಎಂದು ಹೆಸರುಳ್ಳ ಅಸುರನಿದ್ದನು. ಅವನು ಇಂದ್ರದೇವರನ್ನೂ ಇತರ ಎಲ್ಲಾ ದೇವತೆಗಳನ್ನೂ ಜಯಿಸಿದ್ದನು. ದೇವತೆಗಳೆಲ್ಲರನ್ನೂ ಸ್ವರ್ಗದಿಂದ ಹೊರಡಿಸಿದ್ದನು. ದೇವತೆಗಳೆಲ್ಲರೂ ಭಯವುಳ್ಳವರಾಗಗಿ ಇಂದ್ರದೇವ ರಿಂದ ಸಹಿತರಾಗಿ ರುದ್ರದೇವರ ಬಳಿಗೆ ಹೋಗಿ ದೂರಿಕೊಂಡರು. ರುದ್ರದೇವರು ಪರಮಾತ್ಮನ ಬಳಿಗೆ ಕಳುಹಿಸಿದರು. ಇಂದ್ರದೇವರು ದೇವತೆಗಳಿಂದ ಸಹಿತರಾಗಿ ಕ್ಷೀರಸಮುದ್ರತೀರವನ್ನು ಹೊಂದಿ ಸಮುದ್ರದಲ್ಲಿ ಮಲಗಿದ್ದ ಪರಮಾತ್ಮನನ್ನು ನೋಡಿ ಭಕ್ತಿಯಿಂದ ಕೈಮುಗಿದುಕೊಂಡು ಸ್ತೋತ್ರಮಾಡಿದರು. 'ಭಗವಂತನೇ! ನಾವೆಲ್ಲರೂ ಭಯಪೀಡಿತರಾಗಿ ನಿಮ್ಮನ್ನು ಮರೆಹೊಂದಿರುವೆವು. ಅತ್ಯುಗ್ರನಾದ ಮುರನೆಂಬ ರಾಕ್ಷಸನಿಂದ ನಾವೆಲ್ಲರೂ ಸೋತವರಾಗಿ ಸ್ವರ್ಗದಿಂದ ಭ್ರಷ್ಟರಾಗಿರುವೆವು' ಎಂದು ಇಂದ್ರದೇವರು ಹೇಳಲು ಭಗವಂತನು ಎಲ್ಲವನ್ನೂ ತಿಳಿದವನಾಗಿದ್ದರೂ ಲೋಕದ ಜನರಂತೆ ನಟಿಸುತ್ತಾ 'ದೇವೇಂದ್ರ! ಆ ರಾಕ್ಷಸನು ಹೇಗೆ ಇರುವನು? ಅವನ ಬಲವೇನು? ರೂಪವೇನು? ಆ ದುಷ್ಟನ ಸ್ಥಾನವು ಯಾವುದು? ಅವನ ಪರಾಕ್ರಮವು ಹೇಗೆ ಇರುವುದು? ಅವನಿಗೆ ಏನು ವರವಿರುವುದು? ಎಲ್ಲವನ್ನೂ ನನಗೆ ತಿಳಿಸು' ಎಂದು ಕೇಳಿದನು.

ಆಗ ಇಂದ್ರದೇವರು 'ಪೂರ್ವದಲ್ಲಿ ಬ್ರಹ್ಮವಂಶದಲ್ಲಿ ಹುಟ್ಟಿದ ತಾಲ ಜಂಘ ಎಂದು ಹೆಸರುಳ್ಳ ಅತಿಭಯಂಕರವಾದ ರಾಕ್ಷಸನಿದ್ದನು. ಅವನ ಮಗನೇ ಮುರ ಎಂದು ಹೆಸರಿನಿಂದ ಪ್ರಸಿದ್ಧನಾದ ಅಸುರನು. ಅವನು ಚಂದ್ರಾವತೀ ಎಂದು

---

1. ಪ.ಪು.ಉ.ಖಂ. ಅ.36

ಪ್ರಸಿದ್ಧವಾದ ಪುರಿಯಲ್ಲಿ ವಾಸಮಾಡುತ್ತಿರುವನು. ಅವನು ದೇವತೆಗಳೆಲ್ಲರನ್ನೂ ಜಯಿಸಿ ಸ್ವರ್ಗದಿದಂದ ಹೊರಡಿಸಿರುವನು. ಬೇರೊಬ್ಬನನ್ನು ಇಂದ್ರನನ್ನಾಗಿ ಮಾಡಿರುವನು. ಅಗ್ನಿ ಚಂದ್ರ ಸೂರ್ಯ ವಾಯು ವರುಣ ಎಲ್ಲರನ್ನೂ ಬೇರೆಯಾದ ವರನು ನಿಯಮಿಸಿರುವನು. ದೇವಲೋಕದಲ್ಲಿ ದೇವತೆಗಳಿಗೆ ಸ್ಥಾನವಿಲ್ಲದಂತೆ ಮಾಡಿರುವನು' ಎಂದು ಹೇಳಿದರು.

ಶ್ರೀಭಗವಂತನು ಇಂದ್ರದೇವರ ಮಾತನ್ನು ಕೇಳಿ ಅಸುರನ ಮೇಲೆ ಕೋಪವುಳ್ಳವನಾಗಿ ದೇವತೆಗಳಿಗೆ ಭಯಂಕರನಾದ ಅವನನ್ನು ಸಂಹರಿಸುವೆನು ಎಂದು ಹೇಳಿ ದೇವತೆಗಳಿಂದ ಸಹಿತನಾಗಿ ಚಂದ್ರಾವತೀಪುರಿಗೆ ಹೋದನು. ಆ ದೈತ್ಯನು ದೇವತೆಗಳನ್ನು ನೋಡುವ ಮಾತ್ರವೇ ಗರ್ಜನೆ ಮಾಡುತ್ತಾ ಬಂದು ಅವರೆಲ್ಲರನ್ನು ಜಯಿಸಿದನು. ಅವರೆಲ್ಲರೂ ಹತ್ತು ದಿಕ್ಕುಗಳಿಗೆ ಓಡಿಹೋದರು. ಆಮೇಲೆ ಅವನು ಪರಮಾತ್ಮನನ್ನು ನೋಡಿ ನಿಲ್ಲು ನಿಲ್ಲು ಎಂದು ಹೇಳಿದನು. ಆಗ ಪರಮಾತ್ಮನು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು, 'ದುರಾಚಾರನಾದ ದಾನವನೇ ! ನನ್ನ ಬಾಹುಗಳನ್ನು ನೋಡು' ಎಂದು ಹೇಳಿ ದಿವ್ಯಬಾಣಗಳನ್ನು ಬಿಟ್ಟು ಅಸುರರನ್ನು ಭಯಪಡಿಸಿದನು. ಅಸುರರ ಮೇಲೆ ಚಕ್ರಾಯುಧವನ್ನೂ ಬಿಟ್ಟನು. ಅದರಿಂದ ಅನೇಕ ಅಸುರರು ಮೃತರಾದರು. ತರುವಾಯ ಮುರಾಸುರನೊಬ್ಬನೇ ಪರಮಾತ್ಮನೊಡನೆ ಭಯಂಕರವಾಗಿ ಯುದ್ಧವನ್ನು ಮಾಡಿದನು. ದಿವ್ಯಸಾವಿರವರ್ಷ ಬಾಹುಯುದ್ಧವು ನಡೆಯಿತು. ಕೊನೆಗೆ ಪರಮಾತ್ಮನು ಅಸುರಜನರ ಮೋಹಕ್ಕಾಗಿ ತಾನು ಸೋತವನಂತೆ ತೋರಿಸುವವನಾಗಿ ಬದರಿಕಾಶ್ರಮಕ್ಕೆ ಬಂದು ಸಿಂಹಾವತಿ ಯೆಂದು ಹೆಸರುಳ್ಳ ಒಂದು ಗುಹೆಯ ಒಳಗೆ ಹೋಗಿ ಮಲಗಿದನು. ದಾನವನೂ ಅವನ ಹಿಂದೆಯೇ ಅಲ್ಲಿಯವರೆಗೂ ಬಂದನು. ಮಲಗಿರುವ ಭಗವಂತ ನನ್ನು ನೋಡಿ ಸಂತೋಷವನ್ನು ಹೊಂದಿದನು. ದಾನವರಿಗೆ ಭಯಂಕರನಾದ ಇವನನ್ನು ನಿಶ್ಚಯವಾಗಿಯೂ ಸಂಹರಿಸುವೆನು ಎಂದು ಹೇಳುತ್ತಾ ಬಂದನು. ಅಷ್ಟರಲ್ಲಿ ಭಗವಂತನ ದೇಹದಿಂದ ಅವನ ತೇಜಸ್ಸಿನ ಅಂಶದಿಂದಲೇ ಉಂಟಾದ ರೂಪವತಿ ಯಾದ ದಿವ್ಯಆಯುಧಗಳನ್ನು ಧರಿಸಿದ್ದ ಮಹಾಬಲಪರಾಕ್ರಮವುಳ್ಳ ಕನ್ಯೆಯು ಹೊರಟುಬಂದಳು. ಅವಳು ಅಸುರನೊಡನೆ ಯುದ್ಧಮಾಡುವಂತೆ ಹೇಳಿದಳು.

ತರುವಾಯ ಅವಳು ಮಾಡಿದ ಹುಂಕಾರದಿಂದ ಮುರನೆಂಬ ಆ ಅಸುರನು ಭಸ್ಮವಾಗಿ ಹೋದನು. ಅಸುರನು ಮೃತನಾದ ಮೇಲೆ ಅಲ್ಲಿ ಮಲಗಿದ್ದ ಪರಮಾತ್ಮನು ತಾನು ಎಚ್ಚರಗೊಂಡಂತೆ ತೋರಿಸಿದನು. ಎಲ್ಲವನ್ನೂ ತಿಳಿದ ಸರ್ವಸಮರ್ಥನಾದ

ಪರಮಾತ್ಮನು ಮೃತನಾದ ದಾನವನನ್ನು ನೋಡಿ ಆಶ್ಚರ್ಯಪಟ್ಟಂತೆ ತೋರಿಸುತ್ತಾ 'ಅತ್ಯುಗ್ರನಾದ ಈ ನನ್ನ ಶತ್ರುವನ್ನು ನನ್ನ ಮೇಲಿನ ಕರುಣೆಯಿಂದ ಯಾರು ಸಂಹರಿಸಿದರು?' ಎಂದನು. ಆಗ ಕನ್ಯೆಯು ಈ ಅಸುರನಿಂದ ಎಲ್ಲಾ ದೇವತೆಗಳು ಸೋತದದ್ದನ್ನು ನೋಡಿ, ನೀವೂ ಮಲಗಿರುವುದನ್ನು ನೋಡಿ ನಾನು ಇವನನ್ನು ಸಂಹರಿಸಿದೆನು' ಎಂದಳು. ಭಗವಂತನು 'ನೀನು ಇವನನ್ನು ಹೇಗೆ ಜಯಿಸಿದಿ?' ಎಂದು ಕೇಳಿದನು. ಅದಕ್ಕೆ ಅವಳು 'ಭಗವಂತನೇ! ನಿನ್ನ ಅನುಗ್ರಹದಿಂದ ಆ ದೈತ್ಯನು ನನ್ನಿಂದ ಮೃತನಾದನು' ಎಂದಳು. ಆಗ ಪರಮಾತ್ಮನು ನಿನಗೆ ಬೇಕಾದ ವರವನ್ನು ಕೊಡುವೆನು' ಎಂದನು. ಆಗ ಏಕಾದಶಿಗೆ ಅಭಿಮಾನಿನಿಯಾದ ಆ ಕನ್ಯೆಯು 'ಪರಮಾತ್ಮನೇ! ನಿನ್ನ ಅನುಗ್ರಹವು ನನ್ನಲ್ಲಿ ಆಗಿರುವುದಾದರೆ ನನಗೆ ಮೂರು ವರಗಳನ್ನು ಕೊಡಬೇಕು' ಎಂದು ಹೇಳಿದಳು. ಪರಮಾತ್ಮನು ಅವಶ್ಯವಾಗಿಯೂ ಕೊಡುವೆನೆಂದನು. ಆಗ ಏಕಾದಶಿಯು 'ನಾನು ಅಂದರೆ ನನ್ನಿಂದ ಅಭಿಮನ್ಯವಾದ ಏಕಾದಶಿಯು ಮೂರುಲೋಕಗಳಲ್ಲಿ ನಾಲ್ಕು ಯುಗಗಳಲ್ಲಿಯೂ ಸಮಸ್ತ ತೀರ್ಥ ಗಳಿಂದ ಪ್ರಧಾನವಾಗಿಯೂ ಸರ್ವವಿಘ್ನಪರಿಹಾರಕವಾಗಿಯೂ ಸರ್ವಸಿದ್ಧಿ ಪ್ರದವಾಗಿಯೂ ನಿನ್ನ ಅನುಗ್ರಹದಿಂದ ಆಗಬೇಕು. ನಿನ್ನ ಮೇಲಿನ ಭಕ್ತಿಯಿಂದ ನನ್ನ ದಿವಸದಲ್ಲಿ (ಏಕಾದಶಿಯಲ್ಲಿ) ಯಾರು ಉಪವಾಸವನ್ನು ಮಾಡುವರೋ ಅವರಿಗೆ ಸರ್ವಸಿದ್ಧಿಯೂ ಏರ್ಪಡಬೇಕು. ದಶಮೀದ್ವಾದಶಿಗಳಲ್ಲಿ ಒಂದೇ ಭೋಜನವನ್ನು ಏಕಾದಶಿಯಲ್ಲಿ ಉಪವಾಸವನ್ನು ಮಾಡುವನೋ ಅವನಿಗೆ ಹಣವನ್ನು ಧರ್ಮವನ್ನೂ ಮೋಕ್ಷವನ್ನು ಕೊಡಬೇಕು' ಎಂದು ಹೇಳಿದಳು.

ಭಗವಂತನು 'ಹಾಗೆಯೇ ಆಗಲಿ' ಎಂದು ವರವನ್ನು ಕೊಟ್ಟನು. ಈರೀತಿಯಾಗಿ ಪರಮಾತ್ಮನಿಂದ ವರವನ್ನು ಪಡೆದು ಏಕಾದಶಿಯು ಸಂತೋಷಪಟ್ಟಳು. ಈರೀತಿ ಯಾಗಿ ಮಾರ್ಗಶಿರ ಕೃಷ್ಣಪಕ್ಷದಲ್ಲಿ ಏಕಾದಶಿಯು ಉದ್ಭವಿಸಿದಳು. ಆದುದರಿಂದ ಈ **ಏಕಾದಶಿಗೆ ಉತ್ಪತ್ತಿ** ಎಂದು ಹೆಸರು. ಏಕಾದಶಿಗಳಲ್ಲಿ ಶುಕ್ಲಪಕ್ಷ ಕೃಷ್ಣಪಕ್ಷ ಎಂದು ವ್ಯತ್ಯಾಸವಿಲ್ಲದೆ ಎಲ್ಲಾ ಏಕಾದಶಿಗಳಲ್ಲಿಯೂ ಅವಶ್ಯವಾಗಿ ಉಪವಾಸ ಮಾಡಲೇಬೇಕು. ಉದಯಕಾಲದಲ್ಲಿ ಸ್ವಲ್ಪ ಏಕಾದಶಿಯಿದ್ದು ಆಮೇಲೆ ದ್ವಾದಶಿಯೂ ಮುಗಿದು ಸ್ವಲ್ಪ ತ್ರಯೋದಶಿಯು ಆರಂಭಿಸುವುದಾದರೆ ಆ ದಿವಸಕ್ಕೆ **ತ್ರಿಸ್ಪೃಶಾ** ಎಂದು ಹೆಸರು. ಆ ಏಕಾದಶಿಯಲ್ಲಿ ಉಪವಾಸ ಮಾಡಿದರೆ ಸಾವಿರ **ಏಕಾದಶಿಗಳಲ್ಲಿ ಉಪವಾಸ ಮಾಡಿದ ಫಲವು ಬರುತ್ತದೆ**. ದಶಮೀ ವೇಧವು ಏಕಾದಶಿಗೆ ಬಂದಲ್ಲಿ ಆ ಏಕಾದಶಿಯಲ್ಲಿ ಉಪವಾಸ ಮಾಡದೆ ದ್ವಾದಶೀದಿನ ದಲ್ಲಿಯೇ ಉಪವಾಸವನ್ನು

ಮಾಡಬೇಕು. ಏಕಾದಶಿಯಲ್ಲಿ ಉಪವಾಸ ಮಾಡಿದವನು ಕ್ರಮದಿಂದ ವೈಕುಂಠವನ್ನೇ ಹೊಂದುವನು. ಏಕಾದಶಿಯ ಮಹಿಮೆಯನ್ನು ಯಾವಾಗಲೂ ಹೇಳಿದರೆ ಸಾವಿರ ಗೋದಾನ ಮಾಡಿದ ಫಲವು ಬರುವುದು. ಏಕಾದಶೀವ್ರತಕ್ಕೆ ಸಮಾನವಾದ ಪಾಪಪರಿಹಾರಕವಾದ ವ್ರತವು ಬೇರೊಂದು ಇಲ್ಲವೇ ಇಲ್ಲ.



## ಪುಷ್ಯ ಶುಕ್ಲ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದನು. ಪುಷ್ಯಮಾಸದ ಶುಕ್ಲಪಕ್ಷದ ಏಕಾದಶಿಗೆ **ಪುತ್ರದಾ** ಎಂದು ಹೆಸರು. ಇದು ಪರಮಶ್ರೇಷ್ಠವಾದದ್ದು. ಇದಕ್ಕೆ ನಾರಾಯಣನೇ ದೇವತೆಯು. ಈದಿವಸದಲ್ಲಿ ಉಪವಾಸ ಮಾಡಿದವನನ್ನು ಭಗವಂತನು ವಿದ್ಯಾವಂತನನ್ನಾಗಿಯೂ ಕೀರ್ತಿಯುಳ್ಳವನ್ನಾಗಿಯೂ ಮಾಡುವನು. ಇದರ ಮಹಿಮೆಯ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುವೆನು.

ಪೂರ್ವದಲ್ಲಿ ಭದ್ರಾವತಿಯಲ್ಲಿ ಸುಕೇತುಮಾನ್ ಎಂದು ಹೆಸರುಳ್ಳ ರಾಜನಿದ್ದನು. ಚಂಪಕಾ ಎಂದೂ ಹೆಸರುಳ್ಳ ರಾಣಿಯಿದ್ದಳು. ಬಹುಕಾಲವಾದರೂ ರಾಜನಿಗೆ ಮಕ್ಕಳಾಗಲಿಲ್ಲ. ದಂಪತಿಗಳಿಬ್ಬರೂ ಮಕ್ಕಳಾಗಲಿಲ್ಲವೆಂದು ಬಹುದುಃಖ ವನ್ನು ಹೊಂದಿದರು. ರಾಜನಿಗೆ ಮಕ್ಕಳಿಲ್ಲವೆಂದು ರಾಜ್ಯದ ಮೇಲೆ ವೈರಾಗ್ಯ ವುಂಟಾಯಿತು. ಒಂದು ಬಾರಿ ಆತ್ಮಹತ್ಯೆಯನ್ನೇ ಮಾಡಿಕೊಳ್ಳುವ ಎಂದು ಯೋಚಿಸು ತ್ತಿದ್ದನು. ಆಮೇಲೆ ಅದು ಮಹಾಪಾಪಕಾರಿಯೆಂದು ತಿಳಿದುಬಿಡುವನು. ಕೊನೆಗೆ ಏನು ಮಾಡಿದರೆ ಹಿತವಾಗುವುದು ಎಂದು ಯೋಚಿಸಿ ಒಬ್ಬರಿಗೂ ತಿಳಿಸದೆ ಕುದುರೆಯ ಮೇಲೆ ಕೂತುಕೊಂಡು ದೊಡ್ಡಕಾಡಿಗೆ ಹೋದನು. ಅಲ್ಲಿ ಅನೇಕ ಮರಗಿಡಗಳನ್ನು ಮೃಗಪಕ್ಷಿಗಳನ್ನು ನೋಡುತ್ತಾ ಸುತ್ತುತ್ತಾ ಇದ್ದನು. ಅಷ್ಟರಲ್ಲಿ ಮಧ್ಯಾಹ್ನವಾಯಿತು. ಹಸಿವೆ ನೀರಡಿಕೆಗಳಿಂದ ಬಹುಶ್ರಮಪಟ್ಟನು. ರಾಜನು ನೀರಡಿಕೆಯಿಂದ ಕುತ್ತಿಗೆಯು ಒಣಗಿಹೋಗಲು 'ನಾನು ಯಾವ ಪಾಪ ಮಾಡಿದ್ದಕ್ಕೆ ಫಲವಾಗಿ ಹೀಗೆ ದುಃಖವುಂಟಾಗುತ್ತಿರುವುದು? ನಾನು ದೇವತೆಗಳಿಗೆ ಯಜ್ಞಗಳನ್ನು ಮಾಡಿದ್ದೆನು. ಬ್ರಾಹ್ಮಣರಿಗೆ ದಾನಗಳನ್ನು ಮಾಡಿದ್ದೇನೆ. ಪ್ರಜೆಗಳನ್ನು ಧರ್ಮದಿಂದ

1. ಪ.ಪು.ಉ.ಖಂ. ಅ.43

ಪರಿಪಾಲಿಸುತ್ತಿರುವೆನು. ಹೀಗೆ ಇದ್ದರೂ ನನಗೆ ಹೀಗೆ ದುಃಖವು ಏಕೆ ಬರುವುದು' ಎಂದು ಯೋಚಿಸುತ್ತಾ ಮುಂದೆ ಹೋದವನಾಗಿ ಪೂರ್ವಪುಣ್ಯದಿಂದ ಅತಿಸುಂದರವಾದ ಒಂದು ಸರೋವರವನ್ನು ನೋಡಿದನು. ಅದರ ತೀರದಲ್ಲಿ ಜಪಮಾಡುತ್ತಿದ್ದ ಅನೇಕ ಮುನಿಗಳನ್ನು ನೋಡಿದನು.

ತರುವಾಯ ರಾಜನು ಬಹುಸಂತೋಷವುಳ್ಳವನಾಗಿ ಕುದುರೆಯಿಂದ ಕೆಳಗೆ ಇಳಿದವನಾಗಿ ಮುನಿಗಳ ಮುಂದೆ ಹೋಗಿ ಒಬ್ಬೊಬ್ಬರಿಗೂ ಕೈಮುಗಿದು ನಮಸ್ಕರಿಸಿದನು. ಆಗ ಮುನಿಗಳು 'ರಾಜನೇ! ನಿನ್ನಮೇಲೆ ನಾವೆಲ್ಲರೂ ಪ್ರಸನ್ನರಾಗಿರುವೆವು' ಎಂದರು. ಆಗ ರಾಜನು 'ನೀವು ಯಾರು? ನಿಮ್ಮ ಕಥೆಯೇ? ನೀವು ಇಲ್ಲಿ ಯಾಕೆ ಸೇರಿರುವಿರಿ?' ಎಂದು ಕೇಳಿದನು. ಅದಕ್ಕೆ ಅವರು 'ರಾಜನೇ! ನಾವು ವಿಶ್ವೇದೇವತೆಗಳು. ಸ್ನಾನಕ್ಕಾಗಿ ಇಲ್ಲಿಗೆ ಬಂದಿರುವೆವು. ಮಾಘಮಾಸವು ಹತ್ತಿರ ಬಂದಿತು. ಇಂದಿನಿಂದ ಐದನೇ ದಿವಸದಿಂದಲೇ ಮಾಘಮಾಸವು ಬರುವುದು. (ಸ್ನಾನಾದಿಗಳಿಗೆ ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ಮಾಸವೆಂದು ಇರುವುದರಿಂದ ಪುಷ್ಯ ಕೃಷ್ಣಪಕ್ಷವೇ ಮಾಘಮಾಸವೆಂದು ಹೇಳಲ್ಪಡುವುದು.) ಈದಿನದಲ್ಲಿ ಪುತ್ರದಾ ಎಂದು ಹೆಸರುಳ್ಳ ಏಕಾದಶಿಯು. ಈ ಏಕಾದಶಿಯಲ್ಲಿ ಉಪವಾಸ ಮಾಡಿದವರಿಗೆ ಮಕ್ಕಳಾಗುವುವು' ಎಂದು ಹೇಳಿದರು. ಅದಕ್ಕೆ ರಾಜನು 'ನಾನು ಮಕ್ಕಳಿಲ್ಲವೆಂದೇ ಶ್ರಮದಿಂದ ಬಂದಿರುವೆನು. ನನಗೆ ಮಕ್ಕಳಾಗುವಂತೆ ತಾವು ಅನುಗ್ರಹ ಮಾಡಬೇಕು' ಎಂದನು.

ಮುನಿಗಳು 'ರಾಜನೇ! ಈದಿನವೇ ಪುತ್ರದಾ ಎಂದು ಹೆಸರುಳ್ಳ ಏಕಾದಶಿಯು. ಈ ದಿವಸ ಉಪವಾಸ ಮಾಡು. ಸ್ನಾನಮಾಡು. ನಮ್ಮ ಅನುಗ್ರಹದಿಂದ ಪರಮಾತ್ಮನ ಪರಮಾನುಗ್ರಹದಿಂದ ನಿನಗೆ ನಿಶ್ಚಯ ವಾಗಿಯೂ ಸಂತಾನವಾಗು ವುದು' ಎಂದರು. ರಾಜನು ಅವರ ಉಪದೇಶದಿಂದ ಹಾಗೆಯೇ ಅಲ್ಲಿ ಆದಿನದಲ್ಲಿ ಉಪವಾಸ ಮಾಡಿದನು. ಮರುದಿವಸ ದ್ವಾದಶಿಯಲ್ಲಿ ಪಾರಣೆ ಮಾಡಿ ಮುನಿಗಳಿಗೆ ಪುನಃಪುನಃ ನಮಸ್ಕರಿಸಿ ಮನೆಗೆ ಬಂದನು. ಆಮೇಲೆ ಕಾಲಕ್ರಮದಿಂದ ರಾಣಿಯು ಗರ್ಭಿಣಿಯಾದಳು. ಸರಿಯಾದ ಕಾಲದಲ್ಲಿ ಉತ್ತಮ ಲಕ್ಷಣಗಳುಳ್ಳ ಮಗನು ಹುಟ್ಟಿದನು. ಮಗನು ದೊಡ್ಡವನಾಗಿ ತಂದೆಯನ್ನು ಸಂತೋಷಪಡಿಸಿದನು. ರಾಜ್ಯವನ್ನು ಪರಿಪಾಲಿಸಿದನು. ಯಾರು ಏಕಾಗ್ರಮನಸ್ಸುಳ್ಳವರಾಗಿ ಈ ಪುತ್ರದಾ ಏಕಾದಶೀ ವ್ರತವನ್ನು ಮಾಡುವರೋ ಅವರು ಈ ಲೋಕದಲ್ಲಿ ಯೋಗ್ಯಮಕ್ಕಳನ್ನು ಪಡೆದು ಮೃತರಾಗಿ ಸ್ವರ್ಗವನ್ನು ಹೊಂದುವರು. ಈ ಮಹಿಮೆಯನ್ನು ಹೇಳುವವರಿಗೂ

ಕೇಳುವವರಿಗೂ ಅಗ್ನಿಷ್ಟೋಮವೆಂದು ಹೆಸರುಳ್ಳ ಯಾಗವನ್ನು ಮಾಡಿದ ಫಲವು ಬರುವುದು.



## ಪುಷ್ಯ ಕೃಷ್ಣಪಕ್ಷದ ಏಕಾದಶೀ[1]

ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದನು— ಧರ್ಮರಾಜ! ಮಾರ್ಗಶಿರ ಪುಷ್ಯ ಕೃಷ್ಣಪಕ್ಷದ ಏಕಾದಶಿಗೆ **ಸಫಲಾ** ಎಂದು ಹೆಸರು. ನಾನು ಏಕಾದಶೀ ವ್ರತದಿಂದ ಸಂತೋಷಪಡುವಷ್ಟು ಬೇರೆ ಯಾವ ಯಜ್ಞಾದಿಗಳಿಂದಲೂ ಸಂತೋಷಪಡುವುದಿಲ್ಲ. ಆದುದರಿಂದ ಸರ್ವಪ್ರಯತ್ನದಿಂದ ಏಕಾದಶೀಯಲ್ಲಿ ಉಪವಾಸವನ್ನು ಮಾಡಬೇಕು. ಸಫಲಾ ಏಕಾದಶಿಯಲ್ಲಿ ನಾರಾಯಣನನ್ನು ಪೂಜಿಸಬೇಕು. ಉಪವಾಸ ಮಾಡಬೇಕು. ಏಕಾದಶಿ ಉಪವಾಸ ಮಾಡುವವರು ಪರಮಪೂಜ್ಯರೂ ಈ ಲೋಕದಲ್ಲಿ ಹಣವಂತರಾಗಿ ಮೃತರಾಗಿ ಕ್ರಮದಿಂದ ಮೋಕ್ಷವನ್ನು ಹೊಂದುವರು. ಸಫಲಾಏಕಾದಶಿಯಲ್ಲಿ ತೆಂಗಿನಕಾಯಿ ದಾಳಿಂಬ ನೆಲ್ಲಿ ಮೊದಲಾದ ನಾನಾ ಹಣ್ಣುಗಳನ್ನು ದೇವರಿಗೆ ಸಮರ್ಪಿಸಬೇಕು. ವಿಶೇಷವಾಗಿ ದೀಪಗಳನ್ನು ಇಡಬೇಕು. ರಾತ್ರಿಯಲ್ಲಿ ವಿಷ್ಣುಭಕ್ತರಿಂದ ಕೂಡಿಕೊಂಡು ಜಾಗರವನ್ನು ಮಾಡಬೇಕು. ರಾತ್ರಿಯಲ್ಲಿ ಒಂದು ನಿಮಿಷ ಏಕಾಗ್ರಮನಸ್ಸುಳ್ಳವನಾಗಿ ಜಾಗರವನ್ನು ಮಾಡಿದರೆ ಅವನಿಗೆ ಬಹುಪುಣ್ಯವು ಬರುವುದು. ಯಜ್ಞಗಳಿಂದಲೂ ತೀರ್ಥಸ್ನಾನ ದಿಂದಲೂ ಬರುವ ಪುಣ್ಯವು ಆ ಪುಣ್ಯದ ಹದಿನಾರನೇ ಒಂದು ಭಾಗವೂ ಆಗಲಾರದು. ಅನೇಕ ಸಾವಿರವರ್ಷ ತಪಸ್ಸು ಮಾಡಿದರೂ ಅಷ್ಟು ಪುಣ್ಯವು ಬರಲಾರದು. ಸಫಲಾ ಏಕಾದಶಿಯ ಮಹಿಮೆಯ ವಿಷಯದಲ್ಲಿ ಒಂದು ಕಥೆಯನ್ನು ಹೇಳುವೆನು ಕೇಳು.

ಚಂಪಾವತೀ ಎಂದು ಪ್ರಸಿದ್ಧವಾದ ನಗರಿಯಲ್ಲಿ ಮಾಹಿಷ್ಮತ ಎಂದು ಹೆಸರುಳ್ಳ ಒಬ್ಬ ರಾಜನಿದ್ದನು. ಅವನಿಗೆ ಐದು ಜನ ಮಕ್ಕಳಿದ್ದರು. ಅವರಲ್ಲಿ ದೊಡ್ಡ ಮಗನು ಮಹಾಪಾಪದಲ್ಲಿ ಆಸಕ್ತನಾಗಿದ್ದನು. ಪರಸ್ತ್ರೀ ಗಮನ ಮಾಡುವನು–ವೇಶ್ಯೆಯರಲ್ಲಿ ಆಸಕ್ತನಾಗಿದ್ದನು. ಮದ್ಯಪಾನ ಮಾಡುತ್ತಿದ್ದನು. ತಂದೆಯ ಬಹುದ್ರವ್ಯವನ್ನು ಪಾಪ ಕಾರ್ಯದಲ್ಲಿ ಉಪಯೋಗಿಸಿದನು. ಬ್ರಾಹ್ಮಣರನ್ನು ನಿಂದಿಸುತ್ತಿದ್ದನು. ಯಾವಾಗಲೂ

---

1. ಪ.ಪು.ಉ.ಖಂ. ಅ.42

ದೇವರನ್ನು ವೈಷ್ಣವರನ್ನು ನಿಂದಿಸುತ್ತಿದ್ದನು. ಅನಾಚಾರಿಯಾಗಿದ್ದನು. ಇಂತಹ ಮಗನನ್ನು ನೋಡಿ ರಾಜನು ಅವನನ್ನು ಲುಂಭಕ ಎಂದು ಕರೆದನು. ಅವನನ್ನು ರಾಜ್ಯದಿಂದ ಹೊರಗೆ ಮಾಡಿದನು. ಬಂಧುಗಳೆಲ್ಲರೂ ಅವನನ್ನು ಕೈಬಿಟ್ಟರು. ಲುಂಭಕನು ನನ್ನನ್ನು ತಂದೆಯು ಬಂಧುಗಳೂ ಕೈಬಿಟ್ಟರು ಎಂದು ಯೋಚಿಸಿ ಮತ್ತಷ್ಟು ಪಾಪಕರ್ಮದಲ್ಲಿ ಆಸಕ್ತನಾದನು. 'ನಾನಂತೂ ಕಾಡಿಗೆ ಹೋಗಬೇಕು. ಆದುದರಿಂದ ಮೊದಲೇ ತಂದೆಯ ರಾಜ್ಯವನ್ನೆಲ್ಲಾ ನಾಶಮಾಡು ವೆನು' ಎಂದು ಯೋಚಿಸಿದನು. ಕಾಡಿಗೆ ಹೋದನು. ಕಳವು ಮಾಡುವುದು. ಚೀಟಾಡುವುದು ಇತ್ಯಾದಿ ದುಷ್ಕರ್ಮ ಗಳನ್ನು ಮಾಡುತ್ತಿದ್ದನು. ಊರಲ್ಲಿ ಎಲ್ಲಾ ಸ್ಥಳದಲ್ಲಿಯೂ ಕಳವು ಮಾಡಿದನು. ಆಗ ರಾಜಭೃತ್ಯರು ಅವನನ್ನು ಹಿಡಿದರು. ನಾನು ಮಾಹಿಷ್ಮತರಾಜನ ಮಗನೆಂದು ಹೇಳಿ ಕೊಳ್ಳಲು ಅವನನ್ನು ಬಿಟ್ಟುಬಿಟ್ಟರು. ಕಾಡಿಗೆ ಹೋದನು. ಮಾಂಸವನ್ನು ಹಣ್ಣುಗಳನ್ನು ತಿನ್ನುತ್ತಿದ್ದನು. ಅವನಿದ್ದ ಕಾಡಿನಲ್ಲಿ ಪವಿತ್ರವಾದ ಬಹುದೊಡ್ಡದಾದ ಒಂದು ಅಶ್ವತ್ಥಮರವಿದ್ದಿತು. ಅದರ ಬುಡದಲ್ಲಿಯೇ ಲುಂಭಕನು ವಾಸಮಾಡುತ್ತಿದ್ದನು.

ಹೀಗೆಯೇ ಬಹುದಿವಸಗಳು ಹೋಗಲು ಪೂರ್ವಪುಣ್ಯಪರಿಪಾಕದಿಂದ ಪುಷ್ಯ ಕೃಷ್ಣಪಕ್ಷದ ದಶಮೀದಿವಸದಲ್ಲಿ ಹಣ್ಣುಗಳನ್ನು ತಿಂದು ರಾತ್ರಿಯಲ್ಲಿ ಮರದ ಬುಡದಲ್ಲಿ ಮಲಗಿದ್ದನು. ಅವನಿಗೆ ವಸ್ತ್ರವು ಇರಲಿಲ್ಲ. ಅಶ್ವತ್ಥಮರದ ಬುಡದಲ್ಲಿ ಬರೀಮೈಯಿಂದ ಮಲಗಿರುವಾಗ ರಾತ್ರಿಯಲ್ಲಿ ಬಹು ಛಳಿಯಾಯಿತು. ನಿದ್ರೆಯೇ ಬರಲಿಲ್ಲ. ಛಳಿಯಿಂದ ಪ್ರಾಣಹೋಗುವಂತೆ ಆಯಿತು. ಹಾಗೆಯೇ ಹಲ್ಲು ಕಚ್ಚಿಕೊಂಡು ಆ ರಾತ್ರಿಯನ್ನು ಕಳೆದನು. ಸೂರ್ಯೋದಯವಾದರೂ ಆ ಪಾಪಿಗೆ ಜ್ಞಾನವೇ ಬರಲಿಲ್ಲ, ಜ್ಞಾನತಪ್ಪಿ ಮಲಗಿಯೇ ಇದ್ದನು. ಮಧ್ಯಾಹ್ನಸಮಯದಲ್ಲಿ ಸ್ವಲ್ಪ ಜ್ಞಾನವು ಬಂದಿತು. ಆಚೆ ಈಚೆ ನೋಡಿ ಮೆಲ್ಲನೆ ಸ್ವಲ್ಪ ಎದ್ದನು. ಎಡವುತ್ತಾ ಸ್ವಲ್ಪ ದೂರ ಮೆಲ್ಲನೆ ನಡೆದನು. ಹಸಿವೆಯಿಂದ ಪೀಡಿತ ನಾದನು. ಅವನಿಗೆ ಆಗ ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲಲಿಕ್ಕೆ ಶಕ್ತಿಯಿರಲಿಲ್ಲ. ಹಣ್ಣುಗಳನ್ನು ಮಾತ್ರ ತಂದನು. ಅಷ್ಟರಲ್ಲಿಯೇ ರಾತ್ರಿಯೂ ಆಗಿಬಿಟ್ಟಿತು. 'ರಾತ್ರಿ ಬಂದಿತಲ್ಲಾ! ಇನ್ನು ಏನಾಗುವುದೋ?' ಎಂದು ವಿಲಾಪವನ್ನು ಮಾಡಿದನು. ತಂದಿರುವ ಹಣ್ಣುಗಳನ್ನು ಮರದಬುಡದಲ್ಲಿ ಹಾಕಿ 'ಈ ಹಣ್ಣುಗಳಿಂದ ಭಗವಂತನು ಪ್ರೀತನಾಗಲಿ' ಎಂದು ಹೇಳಿ ಮಲಗಿಬಿಟ್ಟನು. ಅವನಿಗೆ ರಾತ್ರಿಯಲ್ಲಿ ನಿದ್ದೆಯೇ ಬರಲಿಲ್ಲ. ಈರೀತಿಯಾಗಿ ಅವನು ಆ ಏಕಾದಶಿ ಉಪವಾಸ ಮಾಡಿ ರಾತ್ರಿ ಜಾಗರವನ್ನು ಮಾಡಿದಂತೆ ಆಯಿತು. ಇದರಿಂದ ಪರಮಾತ್ಮನು ಸಂತುಷ್ಟನಾದನು. ಮರುದಿವಸ ಸೂರ್ಯೋದಯ

ವಾಗಲು ಭಗವಂತನು ಅಶರೀರವಾಣಿಯಿಂದ 'ಪುತ್ರ ನೀನು ಸಫಲಾ ಏಕಾದಶೀ ವ್ರತವನ್ನು ಮಾಡಿದ ಕಾರಣ ರಾಜ್ಯವನ್ನು ಹೊಂದುವಿ' ಎಂದು ಹೇಳಿದನು. ಅಷ್ಟರಲ್ಲಿಯೇ ಲುಂಭಕನು ದಿವ್ಯರೂಪವುಳ್ಳವ ನಾದನು. ಅವನಿಗೆ ಪರಮಾತ್ಮನಲ್ಲಿ ಉತ್ತಮವಾದ ಭಕ್ತಿಯುಂಟಾಯಿತು. ದಿವ್ಯಾಭರಣಗಳಿಂದ ಅಲಂಕೃತನಾದನು. ಆಮೇಲೆ ಅವನೇ ಹದಿನೈದು ವರ್ಷ ರಾಜ್ಯಭಾರ ಮಾಡಿದನು. ಆಮೇಲೆ ಅವನಿಗೆ ಭಗವದನುಗ್ರಹದಿಂದ ಒಬ್ಬ ಸುಂದರನಾದ ಮಗನು ಹುಟ್ಟಿದನು. ತರುವಾಯ ಬೇಗನೇ ರಾಜ್ಯವನ್ನು ಮಗನಿಗೆ ಒಪ್ಪಿಸಿ ಸಾಧನೆಯನ್ನು ಮಾಡಿ ಪರಮಾತ್ಮನ ಸಾಮೀಪ್ಯವನ್ನು ಹೊಂದಿದನು. ಈರೀತಿಯಾಗಿ ಯಾರು ಸಫಲಾ ಏಕಾದಶೀ ವ್ರತವನ್ನು ಮಾಡುವರೋ ಅವರು ಈ ಲೋಕದಲ್ಲಿ ಸುಖವನ್ನು ಹೊಂದಿ ಮೃತರಾಗಿ ಉತ್ತಮಲೋಕವನ್ನು ಹೊಂದುವರು. ಅವರೇ ಪರಮಧ್ಯನ್ಯರು. ಈಪ್ರಕಾರವಾದ ಮಹಿಮೆಯನ್ನು ಓದುವವರಿಗೂ ಕೇಳುವವರಿಗೂ ರಾಜಸೂಯಯಾಗದ ಫಲವು ಬರುವುದು.



# ಮಾಘ ಶುಕ್ಲಪಕ್ಷದ ಏಕಾದಶೀ[1]

ಕೃಷ್ಣಪರಮಾತ್ಮನು ಧರ್ಮರಾಜನಿಗೆ ಹೇಳಿದರು— ಮಾಘಶುಕ್ಲ ಪಕ್ಷದ ಏಕಾದಶಿಗೆ **ಜಯಾ** ಎಂದು ಹೆಸರು. ಅದು ಸರ್ವಪಾಪಪರಿಹಾರಕವಾದದ್ದು. ಸರ್ವಾಭೀಷ್ಟಪ್ರದ ವಾದದ್ದು. ಬ್ರಹ್ಮಹತ್ಯೆಯನ್ನು ಪರಿಹರಿಸುವುದು. ಪಿಶಾಚತ್ವವನ್ನು ಪರಿಹರಿಸುವುದು. ಆದುದರಿಂದ ಈ ಏಕಾದಶೀ ವ್ರತವನ್ನು ಅವಶ್ಯವಾಗಿಯೂ ಮಾಡಬೇಕು. ಇದರ ಮಹಿಮೆಯ ವಿಷಯದಲ್ಲಿಯೂ ಒಂದು ಪುರಾತನವಾದ ಕಥೆಯಿರುವುದು.

ಒಂದು ಸಮಯದಲ್ಲಿ ಇಂದ್ರದೇವರು ಸಂತೋಷದಿಂದ ವಿಹರಿಸುತ್ತಾ ಎಲ್ಲಾ ಗಂಧರ್ವಾದಿ ಗಳೊಡನೆ ನರ್ತನ ಮಾಡಿಸಿದನು. ಗಂಧರ್ವರು ಗಾಯನ ಮಾಡುತ್ತಿದ್ದರು. ಪುಷ್ಪದಂತ ಎಂದ ಗಂಧರ್ವನೂ ಬಂದಿದ್ದನು. ಹಾಗೆಯೇ ಚಿತ್ರಸೇನನೂ ಅವನ ಮಗನೂ ಬಂದಿದ್ದನು. ಚಿತ್ರಸೇನನಿಗೆ ಮಾಲಿನೀ ಎಂಬ ಹೆಂಡತಿಯಲ್ಲಿ ಹುಟ್ಟಿದ್ದ ಪುಷ್ಪವಂತಿಯೆಂಬ ಮಗಳೂ ಬಂದಿದ್ದಳು. ಪುಷ್ಪದಂತನ ಮಗನಾದ ಮಾಲ್ಯವಾನ್ ಎಂಬವನೂ ಬಂದಿದ್ದನು. ಆ ಮಾಲ್ಯವಂತನು

1. ಪ.ಪು.ಉ.ಖಂ. ಅ.45

ಪುಷ್ಪವಂತಿಯ ಸೌಂದರ್ಯವನ್ನು ನೋಡಿ ಮೋಹಿತನಾದನು. ಪುಷ್ಪವಂತಿಯು ಅತಿಸುಂದರಿಯಾಗಿದ್ದಳು. ಇಂದ್ರದೇವರ ಅಪ್ಪಣೆಯಿಂದ ಅವರಿಬ್ಬರೂ ನರ್ತನಕ್ಕೆ ಬಂದಿದ್ದರು. ಇಬ್ಬರೂ ಗಾಯನ ಮಾಡಿದರು. ಆದರೆ ಇಬ್ಬರಿಗೂ ಪರಸ್ಪರ ಅನುರಾಗವುಂಟಾಗಿತ್ತು. ಒಬ್ಬರನ್ನೊಬ್ಬರು ನೋಡಿಕೊಂಡು ಮೋಹಿತರಾಗಿದ್ದರು. ಈರೀತಿಯಾಗಿ ಅನ್ಯತ್ರ ಮನಸ್ಸುಳ್ಳವರಾದ ಗಾಯನವನ್ನು ಮಾಡುವಾಗ ಅವರಿಗೆ ತಾಳವು ತಪ್ಪಿತು. ಇದನ್ನು ನೋಡಿ ಇಂದ್ರದೇವರು 'ಇವರು ಸರಿಯಾಗಿ ಗಾಯನ ಮಾಡದೆ ನನ್ನ ಆಜ್ಞೆಯನ್ನು ಮೀರಿ ನನಗೆ ಅವಮಾನವನ್ನು ಮಾಡಿದರು' ಎಂದು ತಿಳಿದುಕೊಂಡು 'ನೀವಿಬ್ಬರೂ ದಂಪತಿಗಳಾಗಿ ಪಿಶಾಚಿಗಳಾಗಿರಿ. ಮನುಷ್ಯಲೋಕಕ್ಕೆ ಹೋಗಿ ಕರ್ಮದ ಫಲವನ್ನು ಅನುಭವಿಸಿರಿ' ಎಂದು ಶಾಪವನ್ನು ಕೊಟ್ಟರು.

ಈರೀತಿಯಾಗಿ ಇಂದ್ರದೇವರಿಂದ ಶಾಪವನ್ನು ಹೊಂದಿದ ಅವರು ದುಃಖದಿಂದ ಕೂಡಿದ ಮನಸ್ಸುಳ್ಳವರಾಗಿ ಹಿಮವತ್ಪರ್ವತಕ್ಕೆ ಬಂದರು. ಇಬ್ಬರೂ ಪಿಶಾಚಿಗಳಾಗಿ ಬಹುದುಃಖವನ್ನು ಅನುಭವಿಸಿದರು. ಹಿಮದಿಂದಲೂ ತುಂಬಾ ಕಷ್ಟವನ್ನು ಹೊಂದಿದರು. ತಾವು ಗಂಧರ್ವ ಅಪ್ಸರಸ್ತ್ರೀಯೆಂಬ ಭಾವವು ಅವರಿಗೆ ಇರಲಿಲ್ಲ. ಬಿಸಿಲಿನಿಂದಲೂ ಶ್ರಮಪಡುತ್ತಿದ್ದರು. ರಾತ್ರಿಯಲ್ಲಿ ಅವರಿಗೆ ಶಾಂತಿ ಯಿರುತ್ತಿರಲಿಲ್ಲ. ಪರಸ್ಪರ ಮಾತಾಡುತ್ತಾ ಸಂಚರಿಸುತ್ತಿದ್ದರು. ಶಾಪದಿಂದಲೂ ಹಿಮದಿಂದಲೂ ಪೀಡಿತರಾಗಿ ಹಲ್ಲುಕಡಿಯುತ್ತಾ ರೋಮಾಂಚನವುಳ್ಳವರಾಗಿ ಸಂಚರಿಸುತ್ತಿದ್ದರು. ಆಗ ಪಿಶಾಚನು ತನ್ನ ಹೆಂಡತಿಯಾದ ಪಿಶಾಚಿನಿಯೊಡನೆ 'ನಾವು ಬಹು ಪಾಪ ಮಾಡಿರಬೇಕು. ಆದುದರಿಂದ ಇಂತಹ ದುಃಖಕರವಾದ ಪಿಶಾಚತ್ವವು ಬಂದಿರುವುದು. ನರಕವೂ ಪಿಶಾಚತ್ವವೂ ಬಹುದುಃಖಪ್ರದವಾದದ್ದು. ಆದುದರಿಂದ ಇದಕ್ಕೆ ಕಾರಣವಾದ ಪಾಪವನ್ನು ಸರ್ವಥಾ ಮಾಡಬಾರದು' ಎಂದು ಹೇಳಿದನು.

ಹೀಗೆ ಇರುವಾಗ ದೈವೇಚ್ಛೆಯಿಂದ ಮಾಘ ಶುಕ್ಲ ಏಕಾದಶಿಯು ಬಂದಿತು. ಅದಕ್ಕೆ ಜಯಾ ಎಂದು ಹೆಸರು. ಉತ್ತಮತಿಥಿಯು. ಆದಿವಸದಲ್ಲಿ ಆ ಪಿಶಾಚಿ ಗಳಿಬ್ಬರೂ ಆಹಾರ ರಹಿತರಾಗಿದ್ದರು. ನೀರನ್ನು ಕೂಡ ಕುಡಿಯಲಿಲ್ಲ. ಒಂದು ಪ್ರಾಣಿ ಯನ್ನು ಕೊಲ್ಲಲಿಲ್ಲ. ಹಣ್ಣುಗಳನ್ನು ತಿನ್ನಲಿಲ್ಲ. ಅಶ್ವತ್ಥಮರದ ಬಳಿಯಲ್ಲಿ ದುಃಖದಿಂದ ಕುಳಿತಿದ್ದರು. ಅಷ್ಟರಲ್ಲಿಯೇ ಸೂರ್ಯನು ಮುಳುಗಿದನು. ಒಬ್ಬರನ್ನೊಬ್ಬರು ಕಟ್ಟಿಕೊಂಡ ಬಿದ್ದುಕೊಂಡಿದ್ದರು. ಭಯಂಕರವಾದ ರಾತ್ರಿಯಾಗಿದ್ದಿತು. ನಡುಗುತ್ತಾ ನೆಲದ ಮೇಲೆ ಮಲಗಿದ್ದರು. ಅವರಿಗೆ ನಿದ್ರೆಯೇ ಬರಲಿಲ್ಲ. ಈರೀತಿಯಾಗಿ ಇಂದ್ರದೇವರ ಶಾಪದಿಂದ ಪೀಡಿತರಾದ ಅವರು ದುಃಖದಿಂದ ಆ ರಾತ್ರಿಯನ್ನು

ಕಳೆದರು. ಮರುದಿವಸ ದ್ವಾದಶಿಯಲ್ಲಿ ಸೂರ್ಯೋದಯವಾಯಿತು. ಇದರಿಂದ ಅವರಲ್ಲಿ ಭಗವಂತನ ಅನುಗ್ರಹವೇರ್ಪಟ್ಟಿತು. ಜಯಾ ಏಕಾದಶಿಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರವನ್ನು ಮಾಡಿದ ಕಾರಣ ಆ ವ್ರತದ ಪ್ರಭಾವದಿಂದ ದ್ವಾದಶೀದಿನ ಬೆಳಗಾಗಲು ಅವರ ಪಿಶಾಚತ್ವವು ಹೊರಟುಹೋಯಿತು. ಪುಷ್ಪವಂತೀ ಮಾಲ್ಯವಂತರು ಪೂರ್ವದಂತೆಯೇ ಆದರು. ಪೂರ್ವದಂತೆಯೇ ಪರಸ್ಪರ ಸ್ನೇಹವುಳ್ಳವರಾಗಿದ್ದರು. ಪೂರ್ವದಂತೆಯೇ ಆಭರಣಗಳನ್ನು ಧರಿಸಿದ್ದರು. ಅವರು ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು. ಇಂದ್ರದೇವರ ಮುಂದೆ ಹೋಗಿ ನಿಂತು ನಮಸ್ಕರಿಸಿದರು. ಆಗ ಇಂದ್ರದೇವರು ಅವರನ್ನು ನೋಡಿ ಆಶ್ಚರ್ಯವುಳ್ಳವರಾಗಿ 'ನಿಮಗೆ ಯಾವ ಪುಣ್ಯದಿಂದ ಪಿಶಾಚತ್ವವು ಹೋಯಿತು? ನನ್ನ ಶಾಪವನ್ನು ಹೊಂದಿದ ನಿಮ್ಮನ್ನು ಯಾವ ದೇವತೆಯು ಬಿಡಿಸಿದನು?' ಎಂದು ಕೇಳಿದರು. ಮಾಲ್ಯವಂತನು 'ಸ್ವಾಮಿಯೇ! ಪರಮಾತ್ಮನ ಅನುಗ್ರಹದಿಂದ ಜಯಾ ಎಂಬ ಏಕಾದಶಿವ್ರತದ ಪ್ರಭಾವದಿಂದ ಮತ್ತು ತಮ್ಮಲ್ಲಿ ಮಾಡಿದ ಭಕ್ತಿಯ ಪ್ರಭಾವದಿಂದ ಪಿಶಾಚತ್ವವು ಹೋಯಿತು' ಎಂದು ಹೇಳಿದನು.

ಅದನ್ನು ಕೇಳಿ ಇಂದ್ರದೇವರು 'ನೀವಿಬ್ಬರೂ ನಮ್ಮ ಮಾತಿನಿಂದ ಅಮೃತಪಾನಮಾಡಿರಿ. ಏಕಾದಶೀ ಉಪವಾಸ ಮಾಡಿದವರೂ ಪರಮಾತ್ಮನಲ್ಲಿ ಭಕ್ತಿಮಾಡಿದವರೂ ಮನುಷ್ಯರಾಗಿದ್ದರೂ ಪೂಜ್ಯರೇ ಆಗುವರು. ಮಾಲ್ಯವಂತನೇ! ನೀನು ಪುಷ್ಪವಂತಿಯೊಡನೆ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾ ಇರು' ಎಂದು ಹೇಳಿದರು.

ಆದುದರಿಂದ ಅವಶ್ಯವಾಗಿ ಜಯಾ ಏಕಾದಶಿಯಲ್ಲಿ ಉಪವಾಸ ಮಾಡಲೇಬೇಕು. ಈ ವ್ರತವನ್ನು ಮಾಡಿದರೆ ಎಲ್ಲಾ ದಾನಗಳನ್ನು ಎಲ್ಲಾ ಯಜ್ಞಗಳನ್ನು ಮಾಡಿದ ಫಲವು ಬರುವುದು. ಈ ವ್ರತವನ್ನು ಮಾಡಿದವನು ಕೋಟಿ ಕಲ್ಪಗಳಲ್ಲಿ ವೈಕುಂಠದಲ್ಲಿ ವಾಸಮಾಡುವನು. ಇದರ ಮಹಿಮೆಯನ್ನು ಓದುವುದರಿಂದಲೂ ಕೇಳುವುದರಿಂದಲೂ ಅಗ್ನಿಷ್ಟೋಮಯಾಗ ಮಾಡಿದ ಫಲವು ಬರುವುದು.



# ಮಾಘ ಕೃಷ್ಣ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು— ಧರ್ಮರಾಜ! ಮಾಘ ಮಾಸದ ಕೃಷ್ಣಪಕ್ಷದ ಏಕಾದಶಿಗೆ **ಷಟ್ತಿಲಾ** ಎಂದು ಹೆಸರು. ಇದರ ಮಹಿಮೆಯನ್ನು ಪುಲಸ್ತ್ಯರು ದಾಲ್ಭ್ಯರಿಗೆ ಹೇಳಿರುವರು.

ದಾಲ್ಭ್ಯರು 'ಮನುಷ್ಯಲೋಕದಲ್ಲಿ ಹುಟ್ಟಿದ ಜನರು ಬ್ರಹ್ಮಹತ್ಯಾಗೋಹತ್ಯಾ ಇತ್ಯಾದಿ ಪಾಪಗಳನ್ನು ಮಾಡುವರು. ಪರರ ಸೊತ್ತನ್ನು ಅಪಹರಿಸುವರು. ಅವರು ಯಾವುದನ್ನು ಮಾಡಿದರೆ ನರಕವನ್ನು ಹೊಂದಲಾರರು. ಅನಾಯಾಸದಿಂದ ಅಲ್ಪವಾದ ದಾನವನ್ನು ಮಾಡುವುದರಿಂದ ಹೇಗೆ ಪಾಪದ ಪರಿಹಾರವಾಗುವುದು?' ಎಂದು ಕೇಳಿದರು.

ಅದಕ್ಕೆ ಪುಲಸ್ತ್ಯರು 'ರಹಸ್ಯವಾದ ವಿಷಯವನ್ನು ಹೇಳುತ್ತೇನೆ. (ಮಾಘ) ಪುಷ್ಯಮಾಸವು ಕೃಷ್ಣಪಕ್ಷವು ಬರಲು ಶುದ್ಧನಾಗಿ ಜಿತೇಂದ್ರಿಯನಾಗಿ ಕಾಮಕ್ರೋಧಾದಿ ಗಳನ್ನು ಬಿಟ್ಟವನಾಗಿ ಭಗವಂತನನ್ನು ಸ್ಮರಿಸಿ ಭೂಮಿಯಲ್ಲಿ ಬೀಳದೆ ಸೆಗಣಿಯಲ್ಲಿ ಎಳ್ಳನ್ನು ಹಾಕಿ ಹತ್ತಿಯನ್ನು ಸೇರಿಸಿ ನೂರೆಂಟು ಪಿಂಡಗಳನ್ನು ಮಾಡಿಡಬೇಕು. ಏಕಾದಶೀ ದಿನದಲ್ಲಿ ಸ್ನಾನಮಾಡಿ ಭಗವಂತನನ್ನು ಪೂಜಿಸಿ ಉಪವಾಸ ಮಾಡಬೇಕು. ಯಾವಾಗಲೂ ಕೃಷ್ಣನಾಮವನ್ನು ಹೇಳುತ್ತಿರಬೇಕು. ರಾತ್ರಿಯಲ್ಲಿ ಜಾಗರ ಮಾಡ ಬೇಕು. ವೈಭವದಿಂದ ಪರಮಾತ್ಮನಿಗೆ ಪೂಜೆಯನ್ನು ಮಾಡಬೇಕು. ನಾನಾ ಫಲ ಗಳಿಂದ ಪೂಜಿಸಬೇಕು. ಒಂದೂ ಸಿಗದಿದ್ದರೆ ನೂರು ಅಡಿಕೆಗಳಿಂದ ಪೂಜಿಸಬೇಕು. ಅರ್ಘ್ಯವನ್ನು ಕೊಡಬೇಕು. ತರುವಾಯ (ದ್ವಾದಶೀದಿನದಲ್ಲಿ ಹೋಮವನ್ನು ಮಾಡ ಬೇಕು. ಬ್ರಾಹ್ಮಣರಿಗೆ ಉದಕುಂಭದಾನವನ್ನು ಕೊಡಬೇಕು. ಛತ್ರ ಪಾದರಕ್ಷೆ ವಸ್ತ್ರ ಇತ್ಯಾದಿಗಳನ್ನು ದಾನ ಮಾಡಬೇಕು. ಕೃಷ್ಣಪರಮಾತ್ಮನು ಪ್ರೀತನಾಗಲಿ ಎಂದು ಅನುಸಂಧಾನ ಮಾಡಬೇಕು. ಯಥಾಶಕ್ತಿ ಬ್ರಾಹ್ಮಣನಿಗೆ ಕಪ್ಪಾದ ದನವನ್ನು ದಾನ ಮಾಡಬೇಕು. ಎಳ್ಳಿನ ಗಿಡವನ್ನು ಬೆಳೆಸುವುದರಿಂದ ಅದರಲ್ಲಿ ಎಷ್ಟು ಕೊಂಬೆಗಳು ಆಗುತ್ತವೋ ಅಷ್ಟು ಸಾವಿರವರ್ಷ ಸ್ವರ್ಗಲೋಕದಲ್ಲಿ ಇರುತ್ತಾನೆ. ಎಳ್ಳನ್ನು ಧರಿಸಿ ಸ್ನಾನ ಮಾಡುವುದು, ಎಳ್ಳಿನಿಂದ ಮೈಯನ್ನು ಉಜ್ಜಿಕೊಳ್ಳುವುದು, ಎಳ್ಳಿನಿಂದ ಹೋಮ ಮಾಡುವುದು, ಎಳ್ಳಿನಿಂದ ಸಹಿತ ತರ್ಪಣ ಬಿಡುವುದು, ಎಳ್ಳನ್ನು ದಾನಮಾಡು

---

1. ಪ.ಪು.ಉ.ಖಂ. ಅ.44

ವುದು, ಎಳ್ಳನ್ನು ತಿನ್ನುವುದು ಈರೀತಿಯಾಗಿ ಆರು ಪ್ರಕಾರವಾಗಿ ಎಳ್ಳಿನಿಂದ ಪಾಪಪರಿಹಾರವಾಗುವುದು.

ಈ ಏಕಾದಶಿಯಲ್ಲಿ (ದ್ವಾದಶಿಯನ್ನು ಸೇರಿಸಿ) ಈ ಆರು ಕಾರ್ಯವನ್ನು ಮಾಡಬೇಕಾದ ಕಾರಣ ಈ ಏಕಾದಶಿಗೆ ಷಟ್ತಿಲ ಎಂದು ಹೆಸರು. ಇದರ ಮಹಿಮೆಯ ವಿಷಯದಲ್ಲಿಯೂ ಇತಿಹಾಸವನ್ನು ಹೇಳುವರು. ಮನುಷ್ಯ ಲೋಕದಲ್ಲಿ ಒಬ್ಬಳು ಬ್ರಾಹ್ಮಣಿಯು ಇದ್ದಳು. ಅವಳು ಬ್ರಹ್ಮಚರ್ಯವುಳ್ಳವಳಾಗಿ ದೇವರ ಪೂಜೆಯನ್ನು ಮಾಡುತ್ತಾ ಇದ್ದಳು. ಉಪವಾಸ ಮಾಡಿ ಅವಳ ದೇಹವು ಕೃಶವಾಗಿದ್ದಿತು. ದೇವಬ್ರಾಹ್ಮಣರಲ್ಲಿ ಭಕ್ತಿಉಳ್ಳವಳಾಗಿದ್ದಳು. ಆದರೆ ಅತಿಲೋಭ ವುಳ್ಳವಳಾಗಿದ್ದಳು. ಭಿಕ್ಷುಕರಿಗೆ ಭಿಕ್ಷೆಯನ್ನು ಹಾಕಲಾರಳು. ಬ್ರಾಹ್ಮಣರಿಗೆ ಭೋಜನ ಮಾಡಿಸಲಾರಳು. ಹೀಗೆ ಬಹುಕಾಲವು ಆಯಿತು. ವ್ರತಗಳಿಂದ ಅವಳ ದೇಹವು ಶುದ್ಧವಾಯಿತು. ಆದರೆ ಅವಳು ಅನ್ನವನ್ನು ದಾನ ಮಾಡಿಲ್ಲವೆಂದು ನಾನು ಒಂದು ಯತಿಯರೂಪವನ್ನು ಧರಿಸಿ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಹೋಗಿ ಭಿಕ್ಷೆಯನ್ನು ಬೇಡಿದೆನು. ಅವಳು 'ನೀನು ಎಲ್ಲಿಂದ ಬಂದಿರುವಿ? ಎಲ್ಲಿಗೆ ಹೋಗುವಿ?' ಎಂದು ಕೇಳಿದಳು. ಆಗ ನಾನು ಪುನಃ 'ಸುಂದರಿ! ನನಗೆ ಭಿಕ್ಷೆಯನ್ನು ಹಾಕು' ಎಂದೆನು. ಆಗ ಅವಳು ಕೋಪದಿಂದ ನನ್ನ ಪಾತ್ರೆಯಲ್ಲಿ ಮಣ್ಣನ್ನು ಹಾಕಿದಳು.

ತರುವಾಯ ಅಲ್ಲಿಂದ ಬಂದುಬಿಟ್ಟೆನು. ಕಾಲಕ್ರಮದಿಂದ ಅವಳು ದೇಹಸಹಿತ ಳಾಗಿ ಸ್ವರ್ಗಕ್ಕೆ ಬಂದಳು. ಅವಳು ಮಣ್ಣನ್ನು ದಾನ ಮಾಡಿದ್ದರಿಂದ ಸ್ವರ್ಗದಲ್ಲಿ ಅವಳು ಮನೋಹರವಾದ ಮನೆಯನ್ನು ಹೊಂದಿದಳು. ಆದರೆ ಮನೆಯು ಬರಿದಾಗಿತ್ತು. ಅಲ್ಲಿ ಧನ ಧಾನ್ಯಗಳೊಂದೂ ಇರಲಿಲ್ಲ. ಅವಳು ಮನೆಯೊಳಗೆ ಹೋಗಿ ಅಲ್ಲಿ ಒಂದನ್ನು ಕಾಣದೆ ಹೊರಗೆ ಬಂದು ನನ್ನ ಬಳಿಗೆ ಬಂದವಳಾಗಿ ಮಹಾಕೋಪವುಳ್ಳವಳಾಗಿ 'ನಾನು ಬಹಳ ವ್ರತಗಳನ್ನು ಮಾಡಿ ಪರಮಾತ್ಮನನ್ನು ಆರಾಧಿಸಿರುವೆನು. ನನಗೆ ಇಲ್ಲಿ ಮನೆಯಲ್ಲಿ ಒಂದೂ ಇಲ್ಲವೇಕೆ?' ಎಂದು ಕೇಳಿದಳು. ಅದಕ್ಕೆ ನಾನು 'ನೀನು ಮನೆಯೊಳಗೆ ಹೋಗಿ ಇರು. ನಿನ್ನನ್ನು ನೋಡಲಿಕ್ಕೆ ಕುತುಹೂಲದಿಂದ ದೇವತಾಸ್ತ್ರೀಯರು ಬರುವರು. ನೀನು ಬಾಗಿಲನ್ನು ಹಾಕಿ ಕೊಂಡಿರು. ಷಟ್ತಿಲದ ಪುಣ್ಯವನ್ನು ಕೊಟ್ಟರೆ ಬಾಗಿಲನ್ನು ತೆಗೆಯುವೆನೆಂದು ಹೇಳು' ಎಂದು ಹೇಳಿದೆನು. ಅದೇ ಪ್ರಕಾರ ಅವಳು ಮನೆಯ ಒಳಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಆ ಸಮಯದಲ್ಲಿ ದೇವತಾಸ್ತ್ರೀಯರು ಅಲ್ಲಿಗೆ ಬಂದು 'ನಿನ್ನನ್ನು ನೋಡಲಿಕ್ಕೆ ಬಂದಿರುವೆವು. ಬಾಗಿಲನ್ನು ತೆರೆಯು' ಎಂದರು.

ಬ್ರಾಹ್ಮಣಿಯು 'ನನಗೆ ಷಟ್ತಿಲಾವ್ರತದ ಪುಣ್ಯವನ್ನು ಕೊಡಿರಿ. ಆಗ ಬಾಗಿಲನ್ನು ತೆರೆಯುವೆನು' ಎಂದಳು. ಆದರೆ ಒಬ್ಬರೂ ಆ ವ್ರತದ ಪುಣ್ಯವನ್ನು ಕೊಡಲಿಕ್ಕೆ ಕೇಳಲಿಲ್ಲ. (ಆದುದರಿಂದ ಅದು ಅತಿಪ್ರಶಸ್ತವೆಂದು ತಾತ್ಪರ್ಯವು) ಕೊನೆಗೆ ಮತ್ತೊಬ್ಬಳು 'ಮನುಷ್ಯಳಾದ ನಿನ್ನನ್ನು ನೋಡಬೇಕು. ಬಾಗಿಲನ್ನು ತೆರೆ' ಎಂದಳು. ಕೊನೆಗೆ ಆ ಬ್ರಾಹ್ಮಣಿಯು ಬಾಗಿಲನ್ನು ತೆರೆದುಬಿಟ್ಟಳು. ತರುವಾಯ ದೇವತಾ ಸ್ತ್ರೀಯರು ಅವಳನ್ನು ನೋಡುವ ಮಾತ್ರದಿಂದಲೇ ಅವಳಿಗೆ ದಿವ್ಯದೇಹವು ಬಂದಿತು. ಆಮೇಲೆ ಸುಖವನ್ನು ಹೊಂದಿದಳು—

ಜನರು ಅತಿ ಆಸೆಯನ್ನು ಮಾಡಬಾರದು. ಹಣವಿದ್ದು ಶಕ್ತಿವಂಚನೆಯನ್ನು ಮಾಡಬಾರದು. ತನಗಿದ್ದ ಹಣವನ್ನು ಅನುಸರಿಸಿ ಎಳ್ಳು ವಸ್ತ್ರ ಇತ್ಯಾದಿಗಳ ದಾನವನ್ನು ಮಾಡಬೇಕು. ಷಟ್ತಿಲಾ ಏಕಾದಶಿಯು ಪರಮಪ್ರಶಸ್ತವಾದದ್ದು. ಆ ದಿವಸದಲ್ಲಿ ಉಪವಾಸ ಮಾಡುವುದರಿಂದ ಪ್ರತಿಯೊಂದು ಜನ್ಮದಲ್ಲಿಯೂ ಆರೋಗ್ಯವನ್ನು ಹೊಂದುವನು. ದಾರಿದ್ರ್ಯಾದಿಗಳನ್ನು ಹೊಂದಲಾರನು. ತಿಲದಾನ ಮಾಡುವುದ ರಿಂದಲೂ ಸಮಸ್ತ ಪಾಪಗಳ ಪರಿಹಾರವಾಗುವುದು.



## ಫಾಲ್ಗುನ ಶುಕ್ಲಪಕ್ಷದ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು— ಫಾಲ್ಗುನ ಶುಕ್ಲ ಏಕಾದಶಿಗೆ **ಆಮಲಕಿ**ಯೆಂದು ಹೆಸರು. ಈದಿನದಲ್ಲಿ ನೆಲ್ಲಿಯ ಮರದ ಬುಡದಲ್ಲಿ ಜಾಗರವನ್ನು ಮಾಡಬೇಕು. ಹಾಗೆ ಮಾಡಿದರೆ ಸಾವಿರ ಗೋದಾನಗಳನ್ನು ಮಾಡಿದ ಪುಣ್ಯವು ಬರುವುದು.

ಮಾಂಧಾತರಾಜನು ವಸಿಷ್ಠರೊಡನೆ 'ನೆಲ್ಲಿಯ ಮರವು ಯಾವಾಗ ಹುಟ್ಟಿತು? ಅದು ಯಾಕೆ ಪವಿತ್ರವಾಯಿತು?' ಇತ್ಯಾದಿ ವಿಷಯಗಳನ್ನು ತಿಳಿಸುವಂತೆ ಕೇಳಿ ಕೊಂಡನು. ಅದಕ್ಕೆ ವಸಿಷ್ಠರು 'ಪ್ರಲಯಕಾಲದಲ್ಲಿ ಜಗತ್ತೆಲ್ಲವೂ ನಾಶವನ್ನು ಹೊಂದಿತ್ತು. ತರುವಾಯ ಪರಮಾತ್ಮನು ಸೃಷ್ಟಿಮಾಡಬೇಕೆಂದು ತನ್ನ ಸ್ಥಾನಕ್ಕೆ ಹೋದನು. ಆಗ ಪರಮಾತ್ಮನು ತನ್ನ ಬಾಯಿಯಿಂದ ಉಗುಳಿದನು. ಚಂದ್ರನಂತೆ ಪ್ರಕಾಶಮಾನವಾದ ಆ ಉಗುಳಿನಿಂದ ನೆಲ್ಲಿಯ ಮರವಾಯಿತು. ಕೊಂಬೆಗಳಿಂದ

1. ಪ.ಪು.ಉ.ಖಂ. ಅ.47

ವ್ಯಾಪಿಸಿತು. ಫಲಗಳಿಂದ ತುಂಬಿಹೋಯಿತು. ಆಮೇಲೆ ಪರಮಾತ್ಮನು ಬ್ರಹ್ಮ ದೇವರನ್ನು ಸೃಷ್ಟಿಮಾಡಿದನು. ಬ್ರಹ್ಮದೇವರು ದೇವತೆಗಳೇ ಮೊದಲಾದ ಎಲ್ಲರನ್ನೂ ಸೃಷ್ಟಿಮಾಡಿದರು. ತರುವಾಯ ದೇವರು ನೆಲ್ಲಿಯಮರದ ಬುಡಕ್ಕೆ ಬಂದವರಾಗಿ ಇದು ಯಾವ ಮರವೆಂದು ಯೋಚಿಸುತ್ತಾ ನಿಂತರು. ಆಗ 'ಇದು ಭಗವಂತನಿಗೆ ಪ್ರಿಯವಾದ ನೆಲ್ಲಿಯಮರವು. ಇದನ್ನು ಸ್ಮರಿಸುವ ಮಾತ್ರದಿಂದಲೇ ಗೋದಾನ ಮಾಡಿದ ಫಲವು ಬರುವುದು. ಸ್ಪರ್ಶ ಭಕ್ಷಣ ಇವುಗಳಿಂದ ಅತ್ಯಧಿಕ ಫಲವುಂಟಾಗುವುದು. ಆದುದರಿಂದ ಸರ್ವಪ್ರಕಾರದಿಂದ ನೆಲ್ಲಿಯನ್ನು ಸೇವಿಸ ಬೇಕು. ಈ ಮರವು ಸರ್ವಪಾಪ ಪರಿಹಾರಕವಾದದ್ದು. ಇದರ ಬುಡದಲ್ಲಿ ವಿಷ್ಣುವು ಇರುವನು. ಆಮೇಲೆ ಬ್ರಹ್ಮನೂ ಆಮೇಲೆ ರುದ್ರನೂ ಇರುವನು. ಎಲ್ಲಾ ಕೊಂಬೆಗಳಲ್ಲಿ ದೇವತೆಗಳೂ ಎಲೆಗಳು ವಸುಗಳೂ ಪುಷ್ಪಗಳಲ್ಲಿ ಮರುತ್ತುಗಳೂ ಕಾಯಿಗಳಲ್ಲಿ ಪ್ರಜೇಶ್ವರರೂ ಇರುವರು. ಇದು ಸರ್ವದೇವತೆಗಳ ಸನ್ನಿಧಾನ ವುಳ್ಳದ್ದು. ಆದುದರಿಂದ ವಿಷ್ಣುಭಕ್ತರು ಅವಶ್ಯವಾಗಿ ಇದನ್ನು ಪೂಜಿಸಬೇಕು' ಎಂದು ಅಶರೀರವಾಣಿಯಾಯಿತು.

ಋಷಿಗಳು ಈ ಮಾತನ್ನು ಕೇಳಿ 'ಈರೀತಿಯಾಗಿ ಹೇಳುವ ನಿಮ್ಮನ್ನು ನಾವು ಯಾರೆಂದು ತಿಳಿದುಕೊಳ್ಳಲಿ? ದೇವತೆಯೋ? ಅಥವಾ ಬೇರೆಯಾದರೋ?' ಎಂದು ಕೇಳಿದರು.

ಅದಕ್ಕೆ 'ಆಶ್ಚರ್ಯಪಡುತ್ತಿರುವ ನಿಮ್ಮನ್ನು ನೋಡಿ ಸರ್ವರಿಗೂ ಸೃಷ್ಟಿಕರ್ತನಾದ ವಿಷ್ಣುವು ನಾನೇ ಹೇಳುತ್ತಿರುವೆನು' ಎಂಬ ಮಾತು ಕೇಳಿಸಿತು.

ಅದನ್ನು ಕೇಳಿ ಋಷಿಗಳೆಲ್ಲರೂ ಭಗವಂತನನ್ನು ನಾನಾ ವಿಧವಾಗಿ ಸ್ತುತಿಸಿದರು. ತರುವಾಯ ಪರಮಾತ್ಮನು ಸಂತುಷ್ಟನಾಗಿ ಬೇಕಾದ ವರವನ್ನು ಕೇಳಿಕೊಳ್ಳಿರಿ' ಎಂದನು. ಆಗ ಋಷಿಗಳು 'ಭಗವಂತನೇ! ನೀನು ಸಂತುಷ್ಟನಾಗಿರುವಿಯಾದರೆ ನಮ್ಮ ಹಿತಕ್ಕಾಗಿ ಸ್ವರ್ಗಮೋಕ್ಷಫಲವನ್ನು ಕೊಡುವ ಧನಧಾನ್ಯಗಳನ್ನು ಕೊಡುವ ಪವಿತ್ರವಾದ ಬಹುಶ್ರಮವಿಲ್ಲದ ಬಹುಫಲವುಳ್ಳ ಉತ್ತಮವಾದ ವ್ರತವನ್ನು ಹೇಳಬೇಕು' ಎಂದು ಕೇಳಿಕೊಂಡರು.

ಪರಮಾತ್ಮನು 'ಫಾಲ್ಗುನ ಮಾಸದ ಶುಕ್ಲಪಕ್ಷದ ಏಕಾದಶಿಯು ಮಹಾಪವಿತ್ರ ವಾದದ್ದು. ಆದಿನ ರಾತ್ರಿಯಲ್ಲಿ ನೆಲ್ಲಿಯ ಮರದ ಬುಡದಲ್ಲಿ ಜಾಗರವನ್ನು ಮಾಡಬೇಕು. ಇದರಿಂದ ಸರ್ವಪಾಪವು ಪರಿಹೃತವಾಗುವುದು. ಸಾವಿರ ಗೋದಾನಗಳನ್ನು ಮಾಡಿದ ಫಲವು ಬರುವುದು.

ಆಗ ಋಷಿಗಳು ಆ ವ್ರತದ ವಿಧಾನವನ್ನು ಹೇಳಬೇಕೆಂದು ಪ್ರಾರ್ಥಿಸಿಕೊಂಡರು.

ಆಗ ಪರಮಾತ್ಮನು 'ಏಕಾದಶಿಯಲ್ಲಿ ಆಹಾರರಹಿತನಾಗಿ ಇದ್ದು ದ್ವಾದಶೀ ದಿನದಲ್ಲಿ ಭೋಜನ ಮಾಡುವೆನು. ಭಗವಂತನೇ! ನೀನು ರಕ್ಷಕನಾಗು' ಎಂದು ಪ್ರಾರ್ಥಿಸಿ ಹಲ್ಲು ಉಜ್ಜಿಸಿಕೊಂಡು ಆಮೇಲೆ ಸ್ನಾನಮಾಡಬೇಕು. ಕಳ್ಳರೊಡನೆ ಪಾಷಂಡಿಗಳೊಡನೆ ದುರಾಚಾರಿಗಳೊಡನೆ ಗುರುಸ್ತ್ರೀಯರು ಬಲಾತ್ಕರಿಸುವವರೊಡನೆ ಮಾತಾಡಬಾರದು. ಮಧ್ಯಾಹ್ನದಲ್ಲಿ ನದೀಸರೋವರಾದಿಗಳಲ್ಲಿ ಸ್ನಾನ ಮಾಡಬೇಕು. ಮೃತ್ತಿಕಾಭಿಮಾನಿದೇವತೆಯನ್ನು ಪ್ರಾರ್ಥಿಸಿ ಮೃತ್ತಿಕೆಯನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಶಕ್ತಿಯನ್ನು ಅನುಸರಿಸಿ ಬಂಗಾರದಿಂದ ಪರಶುರಾಮ ದೇವರ ಪ್ರತಿಮೆಯನ್ನು ಮಾಡಿಸಬೇಕು. ಮನೆಗೆ ಬಂದು ಪೂಜೆಯನ್ನು ಮಾಡಬೇಕು. ನೆಲ್ಲಿಯ ಮರದ ಬುಡಕ್ಕೆ ಹೋಗಿ ಪಂಚರತ್ನಗಳಿಂದ ಕಲಶವನ್ನು ಸ್ಥಾಪಿಸಬೇಕು. ಛತ್ರವನ್ನು ಪಾದರಕ್ಷೆಯನ್ನು ವಸ್ತ್ರವನ್ನು ಇಡಬೇಕು. ಹೂವಿನಿಂದ ಕಲಶವನ್ನು ಅಲಂಕರಿಸಬೇಕು. ಸುತ್ತಲೂ ದೀಪವನ್ನು ಇಡಬೇಕು. ಅದರ ಮೇಲೆ ಪಾತ್ರೆಯಲ್ಲಿ ಅರಳನ್ನು ತುಂಬಿಸಿ ಅದರಲ್ಲಿ ಪರಶುರಾಮದೇವರ ಪ್ರತಿಮೆಯನ್ನು ಇಟ್ಟು ಪೂಜಿಸಬೇಕು. ಅಂಗಪೂಜೆಯನ್ನು ಮಾಡಬೇಕು. ಆಮೇಲೆ ಅರ್ಘ್ಯವನ್ನು ಬಿಡಬೇಕು. ಆಮೇಲೆ ರಾತ್ರಿಯಲ್ಲಿ ನರ್ತನ ಗಾಯನ ವಾದ್ಯಘೋಷ ಪುರಾಣಶ್ರವಣ ಇತ್ಯಾದಿಗಳಿಂದ ವೈಷ್ಣವರಿಂದ ಸಹಿತನಾಗಿ ಜಾಗರವನ್ನು ಮಾಡಬೇಕು. ನೆಲ್ಲಿಯ ಮರಕ್ಕೆ ನೂರೆಂಟು, ಅಥವಾ ಇಪ್ಪತ್ತೆಂಟು ಪ್ರದಕ್ಷಿಣೆಗಳನ್ನು ಬರಬೇಕು. ಬೆಳಗಾಗಲು ಭಗವಂತನಿಗೆ ಮಂಗಳಾರತಿಯನ್ನು ಮಾಡಬೇಕು. ಬ್ರಾಹ್ಮಣರಿಗೆ ಪೂಜೆಯನ್ನು ಮಾಡಿ ಪರಶುರಾಮದೇವರು ಪ್ರತಿಮೆಯನ್ನು ದಾನ ಮಾಡಬೇಕು. ಆಮೇಲೆ ನೆಲ್ಲಿಯಮರವನ್ನು ಮುಟ್ಟಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಸ್ನಾನ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಆಮೇಲೆ ಕುಟುಂಬ ಸಹಿತನಾಗಿ ತಾನು ಭೋಜನ ಮಾಡಬೇಕು. ಇದರಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಸರ್ವದಾನಗಳನ್ನು ಮಾಡಿದ ಸರ್ವಯಜ್ಞಗಳಿಂದಲೂ ಅಧಿಕವಾದ ಫಲವು ಬರುವುದು. ಇದು ಉತ್ತಮವಾದ ವ್ರತವು' ಎಂದು ಹೇಳಿದನು. ಅಷ್ಟು ಹೇಳಿ ಪರಮಾತ್ಮನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆಮೇಲೆ ಋಷಿಗಳೆಲ್ಲರೂ ಆ ವ್ರತವನ್ನು ಮಾಡಿದರು. ಆ ವ್ರತವು ಸರ್ವಪಾಪಪರಿಹಾರಕವಾದ ವ್ರತವು.

# ಫಾಲ್ಗುನ ಕೃಷ್ಣ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು— ಫಾಲ್ಗುನ ಮಾಸದ ಕೃಷ್ಣಪಕ್ಷದ ಏಕಾದಶಿಗೆ **ವಿಜಯಾ** ಎಂದು ಹೆಸರು. ಇದರ ಮಹಿಮೆಯನ್ನು ನಾರದರು ಬ್ರಹ್ಮದೇವರೊಡನೆ ಕೇಳಲು ಬ್ರಹ್ಮದೇವರು ಹೇಳಿದರು. ಈ ಫಾಲ್ಗುನಮಾಸದ ಕೃಷ್ಣಪಕ್ಷದ ಏಕಾದಶಿಯು ಜಯಪ್ರದವಾದ ಕಾರಣ ಅದಕ್ಕೆ ವಿಜಯಾ ಎಂದು ಹೆಸರು. ಪೂರ್ವದಲ್ಲಿ ರಾಮದೇವರು ವನಕ್ಕೆ ಹೋದವರಾಗಿ ಸೀತಾದೇವಿಯರಿಂದಲೂ ಲಕ್ಷ್ಮಣನಿಂದಲೂ ಸಹಿತರಾಗಿ ಪಂಚವಟಿಯಲ್ಲಿ ವಾಸಮಾಡಿದರು. ರಾವಣನು ಸೀತಾಕೃತಿಯನ್ನು ಅಪಹಾರ ಮಾಡಿಕೊಂಡು ಹೋದನು. ರಾಮದೇವರು ದುಃಖಪಟ್ಟವರಂತೆ ನಟಿಸುತ್ತಾ ಹೋಗಿ ಸುಗ್ರೀವನೊಡನೆ ಸಖ್ಯವನ್ನು ಹೊಂದಿ ಹನುಮಂತದೇವರು ಸೀತಾದೇವಿಯರನ್ನು ಲಂಕೆಯಲ್ಲಿ ನೋಡಿ ಬಂದಮೇಲೆ ಸೈನ್ಯಸಹಿತರಾಗಿ ಸುಗ್ರೀವನೊಡನೆ ಹೊರಟು ಸಮುದ್ರದವರೆಗೆ ಬಂದರು. ರಾಮದೇವರು ಮನುಷ್ಯರಂತೆ ನಟಿಸುತ್ತಾ ಲಕ್ಷ್ಮಣನೊಡನೆ ಸಮುದ್ರವನ್ನು ಹೇಗೆ ದಾಟಿ ಹೋಗಲಿ ಎಂದು ಕೇಳಿದರು. ಇಲ್ಲಿಯೇ ಅರ್ಧ ಯೋಜನ ದೂರದಲ್ಲಿ ದ್ವೀಪದ ಮಧ್ಯದಲ್ಲಿ ಬಕದಾಲ್ಭ್ಯರೆಂಬ ಮುನಿಗಳು ಇರುವರು. ಅವರೊಡನೆ ಕೇಳಿರಿ ಎಂದನು.

ರಾಮದೇವರು ಸರ್ವಜ್ಞರಾದರೂ ಸರ್ವಶಕ್ತರಾದರೂ ದುಷ್ಟಜನರನ್ನು ಮೋಹಗೊಳಿಸುವುದಕ್ಕಾಗಿ ದಾಲ್ಭ್ಯರ ಬಳಿಗೆಹೋಗಿ ನಮಸ್ಕರಿಸಿ ಸಮುದ್ರವನ್ನು ದಾಟುವ ಉಪಾಯವನ್ನು ಹೇಳಬೇಕೆಂದರು. ಮುನಿಗಳು ರಾಮದೇವರ ಮಾತನ್ನು ಕೇಳಿ ಅವರೊಡನೆ 'ನಾನು ಹೇಳುವ ವ್ರತವನ್ನು ಮಾಡಿದರೆ ನಿಮಗೆ ವಿಜಯವಾಗುವುದು. ಫಾಲ್ಗುನಮಾಸದ ಕೃಷ್ಣಪಕ್ಷದ ಏಕಾದಶಿಗೆ ವಿಜಯಾ ಎಂದು ಹೆಸರು. ಆದಿನ ಉಪವಾಸ ಮಾಡಿದರೆ ವಿಜಯವಾಗುವುದು. ಅದನ್ನು ಮಾಡುವ ವಿಧಾನವು ದಶಮೀದಿನದಲ್ಲಿ ಬಂಗಾರದ ಬೆಳ್ಳಿಯ ತಾಮ್ರದ ಅಥವಾ ಮಣ್ಣಿನ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಬಂಗಾರದ ನಾರಾಯಣ ಪ್ರತಿಮೆಯನ್ನು ಇಟ್ಟು ಏಕಾದಶೀದಿನದಲ್ಲಿ ಸ್ನಾನಮಾಡಿ ವೈಭವದಿಂದ ಪೂಜಿಸಿ ರಾತ್ರಿಯಲ್ಲಿ ಜಾಗರ ಮಾಡಬೇಕು. ತುಪ್ಪದ ದೀಪವನ್ನು ಇಡಬೇಕು. ದ್ವಾದಶಿಯಲ್ಲಿ ಆ ಕಲಶವನ್ನು ನದೀತೀರಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಪೂಜೆಯನ್ನು ಮಾಡಿ ಆ ಕಲಶವನ್ನು

---

1. ಪ.ಪು.ಉ.ಖಂ. ಅ.46

ವೇದಶಾಸ್ತ್ರ ಪಾರಂಗತನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಆಮೇಲೆ ಅನೇಕ ಮಹಾದಾನಗಳನ್ನು ಮಾಡಬೇಕು. ಈಪ್ರಕಾರವಾಗಿ ಮಾಡಿದರೆ ನಿಮಗೆ ಜಯ ವಾಗುವುದು' ಎಂದು ಹೇಳಿದರು. ಸರ್ವಶಕ್ತರಾದ ರಾಮದೇವರು ದುಷ್ಟಜನರನ್ನು ಮೋಹಗೊಳಿಸುವುದಕ್ಕಾಗಿಯೂ ಜನರ ಶಿಕ್ಷೆಗಾಗಿಯೂ ಆ ವ್ರತವನ್ನು ಮಾಡಿ ತೋರಿಸಿದರು. ಲಂಕೆಗೆ ಹೋಗಿ ರಾವಣನನ್ನು ಜಯಿಸಿ ಸೀತಾದೇವಿಯರನ್ನು ಕರಕೊಂಡು ಬಂದರು. ಇದರ ಮಹಿಮೆಯನ್ನು ಓದುವುದರಿಂದ ಕೇಳುವುದರಿಂದ ವಾಜಪೇಯಯಾಗದ ಫಲವು ಬರಬೇಕು.



## ಪುರುಷೋತ್ತಮ ಮಾಸದ ಶುಕ್ಲ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು. ಶುಕ್ಲಪಕ್ಷದಲ್ಲಿಯೋ ಕೃಷ್ಣಪಕ್ಷ ದಲ್ಲಿಯೋ ಯಾವಾಗಲೂ ಏಕಾದಶೀ ವ್ರತವನ್ನು ಮಾಡಬೇಕು. ಅಧಿಕಮಾಸದ ಶುಕ್ಲ ಏಕಾದಶಿಯು **ಕಾಮದಾ** ಎಂದು ಹೆಸರುಳ್ಳದ್ದು. ಆದಿತ್ಯವಾರ ವಾಗಿರಲಿ, ಸಂಕ್ರಾತಿ ಯಾಗಿರಲಿ ಆದಿವಸದಲ್ಲಿ ಉಪವಾಸವನ್ನು ಮಾಡಬೇಕು. ಅದರಿಂದ ಮಕ್ಕಳು ಮೊಮ್ಮಕ್ಕಳು ಅಭಿವೃದ್ಧಿಯಾಗುವುದು. ಆಯುಷ್ಯಕೀರ್ತಿ ಸಂತಾನ ಆರೋಗ್ಯ ಹಣ ಮೋಕ್ಷ ಇತ್ಯಾದಿ ಫಲಗಳು ಅದರಿಂದ ಆಗುವುದು. ಯಾರು ಕಲಿಯುಗದಲ್ಲಿ ವಿಧಿ ಪ್ರಕಾರವಾಗಿ ಉಪವಾಸವನ್ನು ಮಾಡುವರೋ ಅವರು ಜೀವನ್ಮುಕ್ತರಂತೆಯೇ ಆಗುವರು. ಏಕಾದಶಿಯು ಸರ್ವಪಾಪಪರಿಹಾರಕವಾದದ್ದು. ದಶಮಿಯಲ್ಲಿ ಒಂದುಹೊತ್ತು ಭೋಜನ ಮಾಡಿ ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯಲ್ಲಿ ಪಾರಣೆ ಮಾಡಿದರೆ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುವರು. ಶ್ರದ್ಧೆಯಿಂದ ಯಾರು ಕಾಮದಾ ಏಕಾದಶೀ ವ್ರತವನ್ನು ಮಾಡುವರೋ ಅವರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅಭೀಷ್ಟವನ್ನು ಹೊಂದುವರು. ಈದಿನ ಪುರುಷೋತ್ತಮನಾಮಕ ಪರಮಾತ್ಮನನ್ನು ಪುಷ್ಪಧೂಪದೀಪ ಫಲ ಇತ್ಯಾದಿಗಳಿಂದ ಪೂಜಿಸಬೇಕು. ರಾತ್ರಿಯಲ್ಲಿ ಜಾಗರವನ್ನು ಮಾಡಬೇಕು. ಈ ವ್ರತವನ್ನು ಮಾಡಿದವರು ಸರ್ವಪಾಪರಹಿತರಾಗಿ ಉತ್ತಮವಾದ ಗತಿಯನ್ನು ಹೊಂದುವರು. ಇದರ ಮಹಿಮೆಯನ್ನು ಓದುವುದರಿಂದ ಕೇಳುವುದರಿಂದ ಸಾವಿರಗೋದಾನ ಮಾಡಿದ ಫಲವು ಬರುವುದು.

1. ಪ.ಪು.ಉ.ಖಂ. ಅ.65

# ಪುರುಷೋತ್ತಮಮಾಸದ ಕೃಷ್ಣ ಏಕಾದಶೀ [1]

ಕೃಷ್ಣಪರಮಾತ್ಮನು ಧರ್ಮರಾಜನೊಡನೆ ಹೇಳಿದನು— ಅಧಿಕಮಾಸದ ಕೃಷ್ಣ ಏಕಾದಶಿಗೆ **ಕಮಲಾ** ಎಂದು ಹೆಸರು. ಆದಿನ ಉಪವಾಸ ಮಾಡಿದರೆ ರಮಾದೇವಿಯರು ಅನುಗ್ರಹ ಮಾಡುವರು. ಆದಿವಸ ಬೆಳಿಗ್ಗೆ ಬೇಗನೇ ಎದ್ದು ಪುರುಷೋತ್ತಮನನ್ನು ಸ್ಮರಿಸಿ ಸ್ನಾನ ಮಾಡಬೇಕು. ಆಮೇಲೆ ನಿಯಮದಿಂದ ಉಪವಾಸ ಮಾಡಬೇಕು.

ಪೂರ್ವದಲ್ಲಿ ಅವಂತೀದೇಶದಲ್ಲಿ ಶಿವಶರ್ಮನೆಂಬ ಬ್ರಾಹ್ಮಣನಿದ್ದನು. ಅವನಿಗೆ ಐದುಜನ ಮಕ್ಕಳಿದ್ದರು. ಅವರಲ್ಲಿ ಚಿಕ್ಕವನು ದೋಷವುಳ್ಳವನಾಗಿದ್ದನು. ಅದರಿಂದ ತಂದೆಯೂ ಬಂಧುಗಳೂ ಬಿಟ್ಟುಬಿಟ್ಟರು. ಅವನು ಬಹುದೂರದಿಂದ ಕಾಡಿಗೆ ಹೋದನು. ಒಂದು ದಿನದಲ್ಲಿ ದೈವೇಚ್ಛೆಯಿಂದ ತ್ರಿವೇಣಿಗೆ ಹೋಗಿ ಸ್ನಾನವನ್ನು ಮಾಡಿದನು. ಹಸಿವೆಯುಳ್ಳವನಾಗಿ ಮುನಿಗಳ ಆಶ್ರಮವನ್ನು ಹುಡುಕುತ್ತಾ ಹೋಗಿ ಪುರುಷೋತ್ತಮಮಾಸದಲ್ಲಿ ಹರಿಮಿತ್ರ ಮುನಿಯ ಆಶ್ರವನ್ನು ನೋಡಿದನು. ಅಲ್ಲಿ ಜನರು ತುಂಬಾ ಸೇರಿದ್ದರು. ಅಲ್ಲಿ ಕಮಲಾ ಏಕಾದಶಿಯ ಮಹಿಮೆಯನ್ನು ಬ್ರಾಹ್ಮಣರ ಮುಖದಿಂದ ಶ್ರದ್ಧೆಯಿಂದ ಕೇಳಿದನು. ಜಯಶರ್ಮನು ಆ ಆಶ್ರಮದಲ್ಲಿಯೇ ಇದ್ದುಕೊಂಡು ಆ ಏಕಾದಶಿಯಲ್ಲಿ ಉಪವಾಸ ಮಾಡಿದನು. ಮಧ್ಯರಾತ್ರಿಯಲ್ಲಿ ರಮಾದೇವಿಯರು ಬಂದು 'ಬ್ರಾಹ್ಮಣನೇ! ನಿನಗೆ ಕಮಲಾವ್ರತದ ಪ್ರಭಾವದಿಂದ ವರವನ್ನು ಕೊಡುವೆನು' ಎಂದರು. ಜಯಶರ್ಮನು 'ನೀವು ಯಾರು? ನನ್ನ ಮೇಲೆ ಹೇಗೆ ಪ್ರಸನ್ನರಾದಿರಿ?' ಎಂದು ಕೇಳಿದನು.

ಅದಕ್ಕೆ ಅವರು 'ಪುರುಷೋತ್ತಮ ಮಾಸದ ಕೃಷ್ಣಪಕ್ಷದ ಕಮಲಾ ಎಂದು ಹೆಸರುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಿದಿಯಾದ ಕಾರಣ ಆ ವ್ರತದ ಪ್ರಭಾವದಿಂದ ನಿನಗೆ ವರವನ್ನು ಕೊಡಲಿಕ್ಕ ಬಂದಿರುವೆನು. ನಿನ್ನ ವಂಶದಲ್ಲಿ ಉತ್ತಮರಾದವರು ಹುಟ್ಟುವರು' ಎಂದು ಹೇಳಿದರು. ಜಯಶರ್ಮನು 'ಈ ವ್ರತವನ್ನು ವಿಸ್ತಾರವಾಗಿ ಹೇಳಬೇಕೆಂದನು. ಆಗ ರಮಾದೇವಿಯರು 'ಏಕಾದಶೀ ವ್ರತವು ಶ್ರೇಷ್ಠವಾದದ್ದು. ಯಾರು ಪರಮಾತ್ಮನ ವಿಷಯವಾಗಿ ಭಕ್ತಿಯಿಂದ ಜಪವನ್ನು ಮಾಡುವರೋ ಅವರನ್ನು ಬ್ರಹ್ಮಾದಿದೇವತೆಗಳು ಸತ್ಕರಿಸುವರು. ಯಾರು ಪರಮಾತ್ಮನ ನಾಮವನ್ನು ಹೇಳುತ್ತಿರುವರೋ ಪರಮಾತ್ಮನ ಕೀರ್ತನೆಯನ್ನು

1. ಪ.ಪು.ಉ.ಖಂ. ಅ.64

ಮಾಡುವರೋ ಪರಮಾತ್ಮನ ಪೂಜೆಯನ್ನು ಮಾಡುವರೋ ಅವರು ಕಲಿಯುಗದಲ್ಲಿ ಕೃತಾರ್ಥರು. ಏಕಾದಶೀ ರಾತ್ರಿಯಲ್ಲಿ ದೇವರ ಮುಂಭಾಗದಲ್ಲಿ ಜಾಗರವನ್ನು ಮಾಡಬೇಕು. ಗೀತವಾದ್ಯ ನರ್ತನ ಪುರಾಣಪಠನ ಇತ್ಯಾದಿಗಳಿಂದ ಜಾಗರವನ್ನು ಮಾಡಬೇಕು. ತರುವಾಯ ಬೆಳಿಗ್ಗೆ ದ್ವಾದಶೀದಿನದಲ್ಲಿ ಸ್ನಾನಮಾಡಿ ಪರಮಾತ್ಮನನ್ನು ಪೂಜಿಸಬೇಕು. ದ್ವಾದಶೀದಿನದಲ್ಲಿ ದೇವರಿಗೆ ಹಾಲಿನ ಅಭಿಷೇಕವನ್ನು ಮಾಡಬೇಕು. ಪರಮಾತ್ಮನನ್ನು ಪ್ರಾರ್ಥಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ದಕ್ಷಿಣೆಯನ್ನು ಕೊಡಬೇಕು. ತರುವಾಯ ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿ ಪಂಚಯಜ್ಞಗಳನ್ನು ಮಾಡಿ ಭೋಜನ ಮಾಡಬೇಕು' ಎಂದು ಹೇಳಿ ವರವನ್ನು ಕೊಟ್ಟು ಹೋದರು. ಆ ಬ್ರಾಹ್ಮಣನು ಆವ್ರತವನ್ನು ಮಾಡಿ ಹಣವಂತನಾಗಿ ತಂದೆಯ ಮನೆಗೆ ಬಂದನು. ಇದನ್ನು ಕೇಳಿದರೆ ಪಾಪಪರಿಹಾರವಾಗುವುದು.



## ಅನಂತನ ಕಥೆ [1]

ಪೂರ್ವದಲ್ಲಿ ಧರ್ಮರಾಜನು ಭೀಮಸೇನದೇವರಿಂದ ಜರಾಸಂಧನ ಸಂಹಾರವನ್ನು ಮಾಡಿಸಿ ಗಂಗಾತೀರದಲ್ಲಿ ರಾಜಸೂಯಯಾಗವನ್ನು ಮಾಡಿದನು. ಕೃಷ್ಣಪರಮಾತ್ಮನಿಂದ ಕೂಡಿಕೊಂಡು ಭೀಮಾರ್ಜುನರಿಂದಲೂ ಸಹಿತನಾಗಿ ಇಂದ್ರದೇವರ ಮಂದಿರದಂತೆ ಇರುವ ಆ ಯಜ್ಞಶಾಲೆಯನ್ನು ಪ್ರವೇಶಿಸಿ ಎಲ್ಲಾ ರಾಜರನ್ನೂ ಕರೆಸಿ ಸಂಭ್ರಮದಿಂದ ರಾಜಸೂಯಯಾಗವನ್ನು ಮಾಡಿದನು. ಒಂದು ದಿನ ದುರ್ಯೋಧನನು ಆ ಸಭಾಮಂಟಪದಲ್ಲಿ ನೀರಿನಂತೆ ಕಾಣುವ ಬರೇ ನೆಲದಲ್ಲಿ ವಸ್ತ್ರವನ್ನು ಮೇಲಕ್ಕೆ ಎತ್ತಿಕೊಂಡು ನಡೆದನು. ಅದನ್ನು ನೋಡಿ ದ್ರೌಪದೀ ದೇವಿಯರೇ ಮೊದಲಾದವರು ಮುಗುಳು ನಗೆಯುಳ್ಳವರಾದರು. ತರುವಾಯ ಮುಂದೆ ಹೋಗುತ್ತಾ ನೀರಿನ ಮಧ್ಯದಲ್ಲಿ ಬಿದ್ದನು. ಆಗ ಎಲ್ಲಾ ರಾಜರೂ ದ್ರೌಪದೀದೇವಿಯರೇ ಮೊದಲಾದ ಹೆಂಗಸರೂ ಗಟ್ಟಿಯಾಗಿ ನಗಾಡಿದರು. ಮಹಾರಾಜನಾದ ದುರ್ಯೋಧನನು ಮಹಾಕೋಪವುಳ್ಳವನಾಗಿ ಎದ್ದು ಶಕುನಿ ಯಿಂದ ಸಹಿತನಾಗಿ ತನ್ನ ಸ್ಥಾನಕ್ಕೆ ಹೋದನು. ಆಕಾಲದಲ್ಲಿ ಶಕುನಿಯು ರಾಜನೇ ಮುಂದಿನ ಕಾರ್ಯದ ಗೌರವದಿಂದ ಮಹಾರೋಷವನ್ನು ಬಿಡು. ಬೇಗನೆ ಏಳು.

1. ಭ.ಪೂ.

ನಮ್ಮ ಮನೆಗೆ ಹೋಗುವ ಎಂದನು. ಹಾಗೆಯೇ ಆಗಲಿ ಎಂದು ಹೇಳಿ ದುರ್ಯೋಧನನು ತನ್ನ ರಾಜ್ಯಕ್ಕೆ ಹೊರಟುಹೋದನು. ಬಂದವರೆಲ್ಲರೂ ತಮ್ಮ ತಮ್ಮ ರಾಜ್ಯಕ್ಕೆ ಹೊರಟುಹೋದರು. ತರುವಾಯ ದುರ್ಯೋಧನನು ಪಾಂಡವ ರನ್ನು ಕರೆಸಿ ಅವರ ರಾಜ್ಯವನ್ನು ಅಪಹರಿಸುವ ಇಚ್ಛೆಯಿಂದ ಪಗಡೆ ಆಟವನ್ನು ಆಡಿಸಿದನು. ಪಾಂಡವರೆಲ್ಲರೂ ದ್ಯೂತದಲ್ಲಿ ಸೋತುಹೋದರು. ಅರಣ್ಯಕ್ಕೆ ಹೋದರು. ಅಲ್ಲಿ ಬಂದಿರುವ ಕೃಷ್ಣಪರಮಾತ್ಮನನ್ನೂ ನೋಡಿ ನಮಸ್ಕರಿಸಿದರು. ಆಗ ಧರ್ಮರಾಜನು 'ನಾನು ಸಹೋದರರಿಂದ ಸಹಿತನಾಗಿ ಈರೀತಿಯಾಗಿ ದುಃಖ ವುಳ್ಳವನಾದೆನು. ನನಗೆ ಈ ದುಃಖದಿಂದ ಹೇಗೆ ಬಿಡುಗಡೆಯಾಗುವುದು? ನಾನು ಯಾವ ದೇವತೆಯನ್ನು ಪೂಜಿಸಲಿ? ಯಾವ ವ್ರತವನ್ನು ಮಾಡಿದರೆ ನಿನ್ನ ಅನುಗ್ರಹದಿಂದ ರಾಜ್ಯವನ್ನು ಹೊಂದುವೆನು?' ಎಂದು ಕೇಳಿದನು.

ಅದಕ್ಕೆ ಶ್ರೀಕೃಷ್ಣನು 'ಅನಂತವ್ರತವೆಂಬ ಒಂದು ಪವಿತ್ರವಾದ ವ್ರತವಿರುವುದು. ಹೆಂಗಸರೂ ಗಂಡಸರೂ ಮಾಡುವ ವ್ರತವಿದು. ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶೀದಿನದಲ್ಲಿ ಆ ವ್ರತವನ್ನು ಮಾಡಬೇಕು. ಆ ವ್ರತವನ್ನೂ ಮಾಡುವುದ ರಿಂದ ಎಲ್ಲಾ ಪಾಪವೂ ಪರಿಹೃತವಾಗುವುದು' ಎಂದನು.

ಅದಕ್ಕೆ ಧರ್ಮರಾಜನು 'ಕೃಷ್ಣ! ಅನಂತನೆಂದರೆ ಯಾರು? ಶೇಷನೋ? ತಕ್ಷಕನೋ? ಅಥವಾ ಪರಮಾತ್ಮನೋ? ಬ್ರಹ್ಮದೇವರೋ? ಅದನ್ನು ನನಗೆ ತಿಳಿಸಬೇಕು' ಎಂದನು.

ಕೃಷ್ಣಪರಮಾತ್ಮನು 'ಧರ್ಮರಾಜ! ಅನಂತ ಎನ್ನುವುದು ನನ್ನದೇ ಒಂದು ರೂಪವು. ಆದಿತ್ಯಾದಿ ಗ್ರಹಗಳಿಗೆ ಆಶ್ರಯನಾದ ರಾತ್ರಿಹಗಲು ದಿನ ಮಾಸ ವರ್ಷ ಇತ್ಯಾದಿ ಕಾಲಕ್ಕೆ ನಿಯಾಮಕವಾದ ಕಾಲವೆಂದು ಹೆಸರುಳ್ಳವನೇ ಕಾಲನು. ಆ ಕಾಲನೇ ನಾನು ಅವತರಿಸಿರುವೆನು. ದಾನವರ ನಾಶಕ್ಕೋಸ್ಕರ ಸಜ್ಜನರ ರಕ್ಷಣೆಗಾಗಿ ವಸುದೇವರಿಗೆ ಮಗನಾಗಿ ನಾನು ಅವತರಿಸಿರುವೆನು. ಅಷ್ಟವಸುಗಳೂ ದ್ವಾದಶ ಆದಿತ್ಯರೂ ಹನ್ನೊಂದು ರುದ್ರರೂ ಸಪ್ತಋಷಿಗಳೂ ಸಮುದ್ರಗಳೂ ಪರ್ವತಗಳೂ ನದಿಗಳೂ ಮರಗಳೂ ನಕ್ಷತ್ರಗಳೂ ದಿಕ್ಕುಗಳೂ ಭೂಮಿಯೂ ಪಾತಾಳವೂ ಎಲ್ಲವೂ ನನ್ನಲ್ಲಿ ಆಶ್ರಯಿಸಿರುವುವು' ಎಂದನು.

ಧರ್ಮರಾಜನು 'ಅನಂತವ್ರತದ ಮಹಿಮೆಯನ್ನು ಅದನ್ನು ಮಾಡುವ ಕ್ರಮವನ್ನು ಅದನ್ನು ಪೂರ್ವದಲ್ಲಿ ಯಾರು ಮಾಡಿರುವರು ಎಂಬುದನ್ನು ಅದನ್ನು ಮಾಡಿದವರಿಗೆ ಏನು ಫಲವಾಗುವುದೆಂಬುದನ್ನು ತಿಳಿಸಬೇಕು' ಎಂದನು.

ಶ್ರೀಭಗವಂತನು 'ಧರ್ಮರಾಜ! ಪೂರ್ವದಲ್ಲಿ ಕೃತಯುಗದಲ್ಲಿ ಸುಮಂತು ಎಂಬ ಬ್ರಾಹ್ಮಣನಿದ್ದನು. ವಸಿಷ್ಠಗೋತ್ರದಲ್ಲಿ ಹುಟ್ಟಿದ ಸುರೂಪಿಣಿಯಾದ ಭೃಗು ಎಂಬ ಬ್ರಾಹ್ಮಣನ ಮಗಳಾದ ದೀಕ್ಷಾ ಎಂಬವಳನ್ನು ವೇದದಲ್ಲಿ ಹೇಳಿದ ರೀತಿಯಿಂದ ಮದುವೆಮಾಡಿಕೊಂಡನು. ಅವಳಲ್ಲಿ ಕಾಲಕ್ರಮದಿಂದ ಸುಂದರಿಯಾದ ಮಗಳು ಹುಟ್ಟಿದಳು. ಅವಳಿಗೆ ಶೀಲಾ ಎಂದು ಹೆಸರು. ಒಳ್ಳೇ ಸ್ವಭಾವದವಳು. ತಂದೆಯ ಮನೆಯಲ್ಲಿ ಬೆಳೆಯುತ್ತಿದ್ದಳು. ಸ್ವಲ್ಪ ದಿವಸದಲ್ಲಿ ದೀಕ್ಷೆಯು ಜ್ವರದಿಂದ ಸ್ವರ್ಗಸ್ಥಳಾದಳು.

ತರುವಾಯ ಸುಮಂತುವು ಧರ್ಮಪುರುಷನೆಂಬವನ ಮಗಳನ್ನು ಮದುವೆಯಾದನು. ಅವಳ ಹೆಸರು ಕರ್ಕಶೆಯೆಂದು ಅವಳು ತುಂಬಾ ದುಷ್ಟಸ್ವಭಾವದವಳು. ಯಾವಾಗಲೂ ಜಗಳಾಡವುವವಳು. ಶೀಲೆಯು ತಂದೆಯ ಮನೆಯಲ್ಲಿಯೇ ಮನೆಯ ಕೆಲಸವನ್ನು ಮಾಡಿಕೊಂಡು ಇದ್ದಳು. ಗೋಡೆಯಲ್ಲಿ ಹೊಸ್ತಿಲಲ್ಲಿ ನಾನಾ ಸ್ಥಳಗಳಲ್ಲಿ ನಾನಾ ಬಣ್ಣಗಳಿಂದ ಚಿತ್ರಗಳನ್ನು ಬರೆದು ಅಲಂಕರಿಸುತ್ತಿದ್ದಳು. ಈರೀತಿಯಾಗಿ ತಂದೆಯ ಮನೆಯ್ಲಲಿಯೇ ಬೆಳೆಯುತ್ತಿದ್ದಳು. ತಂದೆಯು ಮಗಳನ್ನು ನೋಡಿ ಯಾವ ವರನಿಗೆ ಮದುವೆ ಮಾಡಲಿ ಎಂದು ಯೋಚಿಸಿ ದುಃಖಿಸುತ್ತಿದ್ದನು. ಆಸಮಯದಲ್ಲಿ ಕೌಂಡಿನ್ಯ ಎಂಬ ಬ್ರಾಹ್ಮಣನು ಕನ್ಯಾರ್ಥಿಯಾಗಿ ಬಂದನು. ಬಂದು ರೂಪವತಿಯಾದ ನಿಮ್ಮ ಮಗಳನ್ನು ನಾನು ಮದುವೆಯಾಗುವೆನು ಎಂದು ಕೇಳಿಕೊಂಡನು. ತಂದೆಯು ಶುಭದಿನದಲ್ಲಿ ಗೃಹ್ಯಸೂಕ್ತದಲ್ಲಿ ಹೇಳಿದ ರೀತಿಯಿಂದ ಮದುವೆ ಮಾಡಿದನು. ಸಂಭ್ರಮದಿಂದ ಮದುವೆಯಾಯಿತು. ಸುಮಂತುವು ಮದುವೆಯನ್ನು ತೀರಿಸಿ ಕರ್ಕಶೆಯೊಡನೆ 'ಅಳಿಯನಿಗೆ ಏನಾದರೂ ಉಡುಗರೆಯನ್ನು ಕೊಡಬೇಕು' ಎಂದನು. ಅದನ್ನು ಕೇಳಿ ಕರ್ಕಶೆಯು ಕೋಪಿಸಿಕೊಂಡು ಮಂಟಪದ ಹೊರಗೆ ಹೋಗಿ ಎಲ್ಲಾ ವಸ್ತುಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಬೀಗಹಾಕಿ 'ಒಂದೂ ಮನೆಯಲ್ಲಿ ಇಲ್ಲ, ಹೋಗಲಿ' ನೋಡಿರಿ. ಇದ್ದರೆ ಕೊಡಿರಿ' ಎಂದು ಹೇಳಿದಳು. ಅದನ್ನು ಕೇಳಿ ಸುಮಂತುವು ಮನಸ್ಸಿನಲ್ಲೇ ನೊಂದುಕೊಂಡವನಾಗಿ ಒಂದಿಷ್ಟು ಹಿಟ್ಟನ್ನು ದಾರಿಯಲ್ಲಿ ಆಹಾರಕ್ಕಾಗಿ ಕೊಟ್ಟನು. ಕೌಂಡಿನ್ಯರು ಶೀಲೆಯನ್ನು ಕರೆದುಕೊಂಡು ಎತ್ತಿನಬಂಡಿಯಲ್ಲಿ ಕೂತುಕೊಂಡು ಹೋದರು. ದಾರಿಯಲ್ಲಿ ಯಮುನೆಯನ್ನು ದಾಟಿ ತೀರದಲ್ಲಿ ಶಿಷ್ಯರಿಂದ ಸಹ ಶೀಲೆಯನ್ನು ಬಿಟ್ಟು ನದಿಯಲ್ಲಿ ಸ್ನಾನಾದಿಗಳನ್ನು ಮಾಡಲಿಕ್ಕೆ ಹೋದರು. ಶೀಲೆಯು ಮಧ್ಯಾಹ್ನದಲ್ಲಿ ಭೋಜನ ಮಾಡುವ ಸಮಯದಲ್ಲಿ ನದಿಯಲ್ಲಿ ಇಳಿದು ನೋಡಿದಳು. ಆ ದಿವಸ

ಚತುರ್ದಶಿಯಾಗಿದ್ದಿತು. ಅನೇಕ ಹೆಂಗಸರು ಕೆಂಪುಸೀರೆಯನ್ನು ಉಟ್ಟುಕೊಂಡು ಗುಂಪುಗುಂಪಾಗಿ ಇದ್ದುಕೊಂಡು ಭಕ್ತಿಯಿಂದ ಪೂಜಿಸುವುದನ್ನು ನೋಡಿದಳು. ಅವರ ಸಮೀಪಕ್ಕೆ ಮೆಲ್ಲನೆ ಹೋಗಿ 'ಪೂಜ್ಯರೇ! ನೀವು ಯಾವ ವ್ರತವನ್ನು ಮಾಡು ತ್ತಿರುವೆವು ಎಂದು ಕೇಳಿದಳು. ಅದಕ್ಕೆ ಅವರು 'ಅನಂತವ್ರತ'ವನ್ನು ಮಾಡುತ್ತಿರುವೆವು ಎಂದರು. ಶೀಲೆಯು 'ನಾನೂ ವ್ರತವನ್ನು ಮಾಡುವೆನು. ಮಾಡುವ ಕ್ರಮವು ಹೇಗೆ? ಯಾರನ್ನು ಪೂಜಿಸುವುದು? ಏನು ದಾನ ಮಾಡಬೇಕು?' ಎಂದು ಕೇಳಿದಳು. ಅದಕ್ಕೆ ಸ್ತ್ರೀಯರು 'ಒಂದು ಪಡಿ ಪಕ್ವಾನ್ನವನ್ನು ಮಾಡಬೇಕು. ಅದಕ್ಕೆ ತುಪ್ಪವನ್ನು ಹಾಕಿರಬೇಕು. ಅದರಲ್ಲಿ ಅರ್ಧವನ್ನು ಬ್ರಾಹ್ಮಣರಿಗೆ ಕೊಡಬೇಕು. ಅರ್ಧವನ್ನು ತಾನು ಸ್ವೀಕರಿಸಬೇಕು. ಶಕ್ತಿಯನ್ನು ಅನುಸರಿಸಿ ದಕ್ಷಿಣೆಕೊಡಬೇಕು. ನದೀತೀರದಲ್ಲಿ ಈ ವ್ರತವನ್ನು ಮಾಡಬೇಕು. ಅಲ್ಲಿಯೇ ಈ ವ್ರತದ ಕಥೆಯನ್ನು ಕೇಳಬೇಕು. ದರ್ಭೆಯಿಂದ ಶೇಷಪ್ರತಿಮೆಯನ್ನು ಮಾಡಿ ಬಿದಿರಿನ ಪಾತ್ರೆಯಲ್ಲಿ ಇಟ್ಟು ಗಂಧ ಪುಷ್ಪ ಧೂಪದೀಪ ನೈವೇದ್ಯ ಅರಸಿನ ವಸ್ತ್ರಗಳಿಂದ ಪೂಜಿಸಬೇಕು. ಅದರ ಎದುರಲ್ಲಿ ಹದಿನಾಲ್ಕು ಗಂಟುಗಳುಳ್ಳ ದೋರವನ್ನು ಪೂಜಿಸಿ ತನ್ನ ಎಡಕೈಯಲ್ಲಿ ಕಟ್ಟಿಕೊಳ್ಳಬೇಕು. ಒಂದು ವರ್ಷದವರೆಗೂ ಕೈಯಲ್ಲಿ ದೋರವಿರಬೇಕು. ಆಮೇಲೆ ಭೋಜನ ಮಾಡಬೇಕು. ತರುವಾಯ ಭಗವಂತನನ್ನು ಧ್ಯಾನ ಮಾಡುತ್ತಾ ಮನೆಗೆ ಹೋಗ ಬೇಕು' ಎಂದು ಹೇಳಿದರು.

ಈ ಮಾತನ್ನು ಕೇಳಿ ಶೀಲೆಯು ಅವರು ಹೇಳಿದಂತೆ ವ್ರತವನ್ನು ಮಾಡಿ ದೋರವನ್ನು ಕಟ್ಟಿಕೊಂಡಳು. ಭೋಜನಮಾಡಿ ಗಂಡನೊಡನೆ ಭಂಡಿಯಲ್ಲಿ ಕೂತುಕೊಂಡು ಮನೆಗೆ ಹೋದಳು. ಅವಳಲ್ಲಿ ಪತಿಯ ವಿಶ್ವಾಸವು ಉಂಟಾಯಿತು. ಆ ಅನಂತವ್ರತದ ಪ್ರಭಾವದಿಂದ ಅವಳ ಮನೆಯಲ್ಲಿ ಬೇಕಾದ ದಿನಗಳು ಧನಧಾನ್ಯ ಎಲ್ಲವೂ ಬಂದವು. ಅತಿಥಿಗಳು ಮನೆಗೆ ಬರುತ್ತಿದ್ದರು. ಶೀಲೆಯು ಮುತ್ತಿನಸರಗಳನ್ನು ಹಾಕಿಕೊಂಡು ಒಳ್ಳೇ ಸೀರೆಯನ್ನು ಉಟ್ಟುಕೊಂಡು ಬಂಗಾರದ ಡಾಬನ್ನು (ಪಟ್ಟಿಯನ್ನು) ಹಾಕಿಕೊಂಡು ಸಾವಿತ್ರೀದೇವಿಯಂತೆ ಶೋಭಿಸಿದಳು. ಒಂದು ದಿನದಲ್ಲಿ ಶೀಲೆಯು ಕೂತಿರಲು ಅವಳು ಕೈಯಲ್ಲಿ ಕಟ್ಟಿಕೊಂಡಿರುವ ದೋರವನ್ನು ಕೌಂಡಿನ್ಯರು ನೋಡಿದರು. ಆಗ 'ಶೀಲೆ! ಏನಿದು ನನ್ನನ್ನು ವಶಮಾಡಿಕೊಳ್ಳಲಿಕ್ಕೆ ಈ ಹಾಳು ದೋರವನ್ನು ಕಟ್ಟಿಕೊಂಡಿರುವೆ' ಎಂದು ಕೇಳಿದನು. ಅದಕ್ಕೆ ಶೀಲೆಯು ಯಾರ ಪರಮಾನುಗ್ರಹದಿಂದ ನಮಗೆ ಧನಧಾನ್ಯಾದಿ ಸಂಪತ್ತುಗಳು ಬಂದಿರು ವುವೋ ಅಂತಹ ಅನಂತನನ್ನು ಧರಿಸಿರುವೆನು ಎಂದು ಹೇಳಿದಳು. ಕೌಂಡಿನ್ಯರು

ಶೀಲೆಯ ಮಾತನ್ನು ಕೇಳಿ 'ಶೀಲೆ! ಏನು ನನ್ನನ್ನು ವಶಮಾಡಿಕೊಳ್ಳಲಿಕ್ಕೆ ದೋರವನ್ನು ಕಟ್ಟಿಕೊಂಡಿರುವೆಯಾ?' ಎಂದು ಹೇಳುತ್ತಾ ಯಾರವನು ಅನಂತನು ಎಂದು ಹೇಳುತ್ತಾ ಆ ದೋರವನ್ನು ಕಡಿದು ಉರಿಯುವ ಬೆಂಕಿಯಲ್ಲಿ ಹಾಕಿದರು. ಶೀಲೆಯು ಹಾಹಾಕಾರವನ್ನು ಮಾಡುತ್ತಾ ಓಡಿಹೋಗಿ ಆ ದೋರವನ್ನು ಹಾಲಿನ ಮಧ್ಯದಲ್ಲಿ ಹಾಕಿದಳು. ಈರೀತಿಯಾಗಿ ಮಾಡಿದ ಪಾಪಕರ್ಮದಿಂದ ಅವರ ಸಂಪತ್ತೆಲ್ಲಾ ನಾಶವನ್ನು ಹೊಂದಿತು. ಕಳ್ಳರು ಬಂದು ದನಗಳನ್ನೆಲ್ಲಾ ಕದ್ದುಕೊಂಡು ಹೋದರು. ಮನೆಗೆ ಬೆಂಕಿ ಹಿಡಿಯಿತು. ಹಣವೆಲ್ಲವೂ ಬಂದಂತೆಯೇ ಹೊರಟುಹೋಯಿತು. ಬಂಧುಗಳೆಲ್ಲರೂ ನಿತ್ಯವೂ ಜಗಳವಾಡುತ್ತಿದ್ದರು. ಹೆಚ್ಚಿಗೆ ಮಾತಾಡಿದರೆ ಪೆಟ್ಟು ಬಡಿಯುತ್ತಿದ್ದರು. ಅನಂತನನ್ನು ನಿಂದಿಸಿದ ದೋಷದಿಂದ ಮನೆಯಲ್ಲಿ ದಾರಿದ್ರ್ಯವು ಬಂದು ಸೇರಿತು. ಅವರೊಡನೆ ಒಬ್ಬರೂ ಮಾತಾಡುತ್ತಿರಲಿಲ್ಲ. ದೇಹದಲ್ಲಿ ರೋಗ ವುಂಟಾಯಿತು. ಮನಸ್ಸಿನಲ್ಲಿ ಸಂತಾಪವುಂಟಾಯಿತು. ತುಂಬಾ ವೈರಾಗ್ಯವುಳ್ಳವರಾಗಿ ಶೀಲೆಯೊಡನೆ 'ಶೀಲೆ! ನನಗೆ ಹೀಗೇಕೆ ಇಂತಹ ವಿಪತ್ತು ಬಂದಿತು? ನಾನು ಏನು ಅನ್ಯಾಯ ಮಾಡಿದೆನು? ನಿನಗೆ ತಿಳಿದಿರುವುದಾ? ಎಂದು ಕೇಳಿದರು. ಅದಕ್ಕೆ ಶೀಲೆಯು ಅನಂತನನ್ನು ನಿಂದಾಮಾಡಿದ ಪಾಪದಿಂದ ಇಂತಹ ವಿಪತ್ತು ಬಂದಿತು. ಇದನ್ನು ಪರಿಹಾರ ಮಾಡಿಕೊಳ್ಳಲಿಕ್ಕೆ ಪ್ರಯತ್ನಮಾಡಿರಿ' ಎಂದಳು.

ಶೀಲೆಯ ಮಾತನ್ನು ಕೇಳಿ ಕೌಂಡಿನ್ಯರು ವೈರಾಗ್ಯದಿಂದ ಭಗವಂತನನ್ನು ಸ್ಮರಿಸುತ್ತಾ ವನಕ್ಕೆ ಹೋದರು. ತಪಸ್ಸು ಮಾಡುವೆನೆಂದು ಸಂಕಲ್ಪ ಮಾಡಿಕೊಂಡು ಅನಂತನನ್ನು ಯಾವಾಗ ನೋಡುವೆನು? ಎಂದು ಧ್ಯಾನ ಮಾಡುತ್ತಾ ಹೋದರು. ಕಾಡಿನಲ್ಲಿ ಸಂಚರಿಸುತ್ತಾ ಇರಲು ಹೂವಿನಿಂದ ಕೂಡಿದ ದೊಡ್ಡ ಮಾವಿನಮರವನ್ನು ನೋಡಿದರು. ಆ ಮರದಲ್ಲಿ ಒಂದು ಪಕ್ಷಿಯೂ ಇರಲಿಲ್ಲ. ಕೋಟಿ ಕೀಟಗಳಿದ್ದವು. ಆಮರದೊಡನೆ ಕೌಂಡಿನ್ಯರು ನೀನು ಅನಂತನನ್ನು ನೋಡಿರುವೆಯಾ? ನೋಡಿದ್ದರೆ ನನಗೆ ಸ್ವಲ್ಪ ಹೇಳು. ನನ್ನ ಮನಸ್ಸಿನಲ್ಲಿ ತುಂಬಾ ದುಃಖವಿರುವುದು' ಎಂದರು. ಅದಕ್ಕೆ ಆ ಮಾವಿನಮರವು 'ಬ್ರಾಹ್ಮಣ! ನಾನು ಅನಂತನನ್ನು ನೋಡಲೇ ಇಲ್ಲ' ಎಂದು ಹೇಳಿತು. ಕೌಂಡಿನ್ಯರು ಮನಸ್ಸಿನಲ್ಲಿ ದುಃಖವುಳ್ಳವರಾಗಿ ಅನಂತನನ್ನು ಎಲ್ಲಿ ನೋಡಲಿ ಎಂದು ಯೋಚಿಸುತ್ತಾ ಮುಂದೆ ಹೋಗುತ್ತಾ ಕಾಡಿನ ಮಧ್ಯದಲ್ಲಿ ಅತ್ತಿತ್ತ ಓಡುತ್ತಾ ಇದ್ದ ಒಂದು ದನವನ್ನೂ ಕರುವನ್ನೂ ನೋಡಿದರು. ಅದರೊಡನೆ ದನವೇ! ಅನಂತನನ್ನು ನೋಡಿದೆಯಾ? ಎಂದು ಕೇಳಿದರು. ಅದೂ ಇಲ್ಲ ಅಲ್ಲಿಂದ ಮುಂದೆ ಹೋಗಲು ಒಳ್ಳೇ ಹುಲ್ಲು ಬೆಳೆದ ಸ್ಥಳದಲ್ಲಿ ಒಂದು ಎತ್ತು ನಿಂತುಕೊಂಡಿತ್ತು. ಆ

ಎತ್ತಿನೊಡನೆ ಅನಂತನನ್ನು ನೋಡಿದೆಯಾ ಎಂದು ಕೇಳಲು ಇಲ್ಲವೆಂದಿತು. ಮುಂದೆ ಹೋಗಲು ಎರಡು ಸರೋವರಗಳು ಇದ್ದವು. ಅವುಗಳ ನೀರು ಪರಸ್ಪರ ಒಂದರಿಂದ ಮತ್ತೊಂದಕ್ಕೆ ಹೋಗುತ್ತಾ ಇತ್ತು. ಅವುಗಳ ಹತ್ತಿರ ಕೌಂಡಿನ್ಯರು ಅನಂತನನ್ನು ನೋಡಿದಿರಾ ಎಂದು ಕೇಳಿದರು. ಅವುಗಳೂ ನಮಗೆ ತಿಳಿಯದು ಎಂದವು. ಹಾಗೆಯೇ ಮುಂದೆ ಹೋಗುತ್ತಾ ಒಂದು ಕತ್ತೆಯೊಡನೆಯೂ ಆನೆಯೊಡನೆಯೂ ಅನಂತನನ್ನು ಕೇಳಿದರು. ಅವೂ ನಮಗೆ ತಿಳಿಯದು ಎಂದವು. ಹೀಗೆ ಯಾರಲ್ಲಿ ಕೇಳಿದರೂ ನಮಗೆ ತಿಳಿಯದು ಎನ್ನಲು ಕೌಂಡಿನ್ಯರು ಆಶಾ ಭಂಗವುಳ್ಳವರಾಗಿ ಬದುಕುವುದರಲ್ಲಿ ಆಸೆಯನ್ನು ಬಿಟ್ಟು ದೀರ್ಘಶ್ವಾಸವನ್ನು ಬಿಡುತ್ತಾ ಭೂಮಿಯಲ್ಲಿ ಬಿದ್ದು ಬಿಟ್ಟರು. ಮೂರ್ಛಿತರಾದರು. ಮೂರ್ಛೆಯಿಂದ ಎದ್ದು ಅನಂತನನ್ನೇ ಜಪಿಸುತ್ತಾ ಇನ್ನು ನಾನು ಪ್ರಾಣವನ್ನು ಬಿಡುವೆನೆಂದು ಯೋಚಿಸಿ ಕುತ್ತಿಗೆಗೆ ಹಗ್ಗವನ್ನು ಹಾಕಿಕೊಂಡು ಮರದಿಂದ ಜೋಲುಬಿದ್ದು ಸಾಯುವೆನೆಂದು ಹೊರಟರು. ಆಗ ಅನಂತನಾಮಕ ಪರಮಾತ್ಮನು ವೃದ್ಧಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾದನು. ಇಲ್ಲಿ ಬಾ ಎಂದು ಕರೆದನು. ಬಲಕೈಯಲ್ಲಿ ಹಿಡಿದು ಒಂದು ಗುಹೆಯೊಳಗೆ ಕರೆದುಕೊಂಡು ಹೋದರು.

ಅಲ್ಲಿ ದಿವ್ಯಸ್ತ್ರೀಪುರುಷರಿಂದ ಕೂಡಿದ ತನ್ನ ಪುರವನ್ನು ತೋರಿಸಿದನು. ಅಲ್ಲಿ ದಿವ್ಯಸಿಂಹಾಸನದಲ್ಲಿ ಕೂತಿರುವ ನಾನಾ ಆಭರಣಗಳಿಂದ ಅಲಂಕೃತವಾದ ಶಂಖಚಕ್ರಾದಿ ಆಯುಧಗಳಿಂದ ಯುಕ್ತವಾದ ತನ್ನ ರೂಪವನ್ನು ತೋರಿಸಿದರು. ಕೌಂಡಿನ್ಯರು ಆ ಭಗವಂತನನ್ನು ನೋಡಿ ಸ್ತೋತ್ರ ಮಾಡುತ್ತಾ ನಮಸ್ಕರಿಸಿದರು. ಅವರ ಸ್ತೋತ್ರವನ್ನು ಕೇಳಿ ಅನಂತನಾಮಕ ಪರಮಾತ್ಮನು ಸುಂದರವಾದ ವಾಣಿಯಿಂದ ಬ್ರಾಹ್ಮಣ 'ಭಯಪಡಬೇಡ. ನಿನ್ನ ಮನಸ್ಸಿನಲ್ಲಿ ಏನಿದೆ? ಎಂದು ಕೇಳಿದರು. ಅದಕ್ಕೆ ಕೌಂಡಿನ್ಯರು 'ನಾನು ಅಹಂಕಾರದಿಂದ ಅನಂತನ ದೋರವನ್ನು ಕಡಿದುಹಾಕಿದೆನು. ಆ ಪಾಪದಿಂದ ನನ್ನ ಐಶ್ವರ್ಯವೆಲ್ಲವೂ ನಾಶವನ್ನು ಹೊಂದಿತು. ಸ್ವಕೀಯ ಜನರೆಲ್ಲರೂ ನನ್ನೊಡನೆ ಜಗಳಾಡುತ್ತಿರುವರು. ಒಬ್ಬರೂ ನನ್ನೊಡನೆ ಮಾತಾಡುವುದಿಲ್ಲ. ವೈರಾಗ್ಯದಿಂದ ನಿಮ್ಮನ್ನು ನೋಡಬೇಕೆಂದು ಆಸೆಯಿಂದ ಸಂಚರಿಸುವಾಗ ಕೃಪೆಯಿಂದ ತಮ್ಮ ದರ್ಶನವನ್ನು ಕೊಡೋಣವಾಯಿತು. ಕೃಪೆಯಿಂದ ನನ್ನ ಪಾಪದ ಶಾಂತಿಯನ್ನು ಹೇಳಬೇಕು' ಎಂದು ಹೇಳಿದರು. ಈರೀತಿಯಾಗಿ ಕೌಂಡಿನ್ಯರ ಮಾತನ್ನು ಕೇಳಿ ಅನಂತನಾಮಕ ಭಗವಂತನು 'ಕೌಂಡಿನ್ಯ! ಬೇಗನೇ ಮನೆಗೆ ಹೋಗು. ಹದಿನಾಲ್ಕು ವರ್ಷ ಅನಂತವ್ರತವನ್ನು

ಮಾಡು. ಸರ್ವಪಾಪರಹಿತನಾಗಿ ಸಿದ್ಧಿಯನ್ನು ಹೊಂದುವಿ. ಮಕ್ಕಳು ಮೊಮ್ಮಕ್ಕಳಿಂದ ಕೂಡಿಕೊಂಡು ಬೇಕಾದ ಭೋಗಗಳನ್ನು ಅನುಭವಿಸುವಿ. ಕೊನೆಗೆ ನನ್ನ ಸ್ಮರಣೆಯನ್ನು ಹೊಂದಿ ನನ್ನನ್ನು ಹೊಂದುವಿ. ಈ ಕಥೆಯನ್ನು ಕೇಳಿ ಯಾರು ಅನಂತವ್ರತವನ್ನು ಮಾಡುವರೋ ಅವರು ಬೇಗನೇ ಪಾಪರಹಿತರಾಗಿ ಬೇಗನೇ ಉತ್ತಮವಾದ ಗತಿಯನ್ನು ಹೊಂದುವರು. ಬ್ರಾಹ್ಮಣ! ಬೇಗನೇ ಬಂದ ದಾರಿಯಿಂದಲೇ ಹೊರಟುಹೋಗು' ಎಂದು ಹೇಳಿದನು.

ಕೌಂಡಿನ್ಯರು 'ಸ್ವಾಮಿ! ಕೆಲವು ಆಶ್ಚರ್ಯವಸ್ತುಗಳನ್ನು ನೋಡಿರುವೆನು. ಅದನ್ನು ಹೇಳಬೇಕು. ನಾನು ಬರುವಾಗ ಮಾವಿನಮರವನ್ನೂ, ಒಂದು ದನವನ್ನೂ, ಎತ್ತನ್ನೂ, ಎರಡು ಸರೋವರಗಳನ್ನೂ, ಒಂದು ಕತ್ತೆಯನ್ನೂ, ಒಂದು ಆನೆಯನ್ನೂ ನೋಡಿದೆನು. ಅವರೆಲ್ಲರೂ ಯಾರು? ಕೊನೆಗೆ ವೃದ್ಧಬ್ರಾಹ್ಮಣನನ್ನು ನೋಡಿದೆನು. ಅದು ಯಾರು?' ಎಂದು ಕೇಳಿದರು.

ಅನಂತದೇವರು 'ಆ ಮಾವಿನಮರವು ಒಳ್ಳೇ ಓದಿಕೊಂಡ ಪಂಡಿತನು. ಅವನು ಶಿಷ್ಯರಿಗೆ ಪಾಠವನ್ನು ಹೇಳುತ್ತಿರಲಿಲ್ಲ. ಆದರಿಂದ ಅವನಿಗೆ ಮರದ ಜನ್ಮವು ಬಂದಿರುವುದು. ಪೂರ್ವದಲ್ಲಿ ಬೀಜವನ್ನು ನುಂಗಿರುವ ಭೂಮಿಯೇ ದನವು. ಧರ್ಮವಿಕ್ರಯ ಮಾಡಿರುವವನು ಎತ್ತಾಗಿರುವನು. ಇಬ್ಬರು ಅಕ್ಕತಂಗಿಯರು ಇದ್ದರು. ಅವರು ಪರಸ್ಪರ ಅಕ್ಕನು ತಂಗಿಗೂ ತಂಗಿಯು ಅಕ್ಕನಿಗೂ ದಾನಮಾಡಿಕೊಳ್ಳುತ್ತಿದ್ದರು. ವೇದಜ್ಞಾನಿಯಾದ ಬ್ರಾಹ್ಮಣನಿಗೆ ದಾನ ಮಾಡಿದ್ದಿಲ್ಲ. ಆದುದರಿಂದ ಅವರಿಬ್ಬರೂ ಸರೋವರಗಳಾಗಿರುವರು. ಆದುದರಿಂದಲೇ ಪರಸ್ಪರ ವಾಗಿ ಒಂದರ ನೀರು ಮತ್ತೊಂದಕ್ಕೆ ಹೋಗುತ್ತಾ ಇರುವುದು. ಕ್ರೋಧಾಭಿ ಮಾನಿಯು ಕತ್ತೆಯು ಮದಾಭಿಮಾನಿಯು ಆನೆಯು. ವೃದ್ಧಬ್ರಾಹ್ಮಣನು ನಾನೇ ಈರೀತಿಯಾಗಿ ನೀನು ಕೇಳಿದ ವಿಷಯವನ್ನೆಲ್ಲಾ ಹೇಳಿರುವೆನು. ನೀನು ಮನೆಗೆ ಹೋಗು. ಹದಿನಾಲ್ಕು ವರ್ಷ ಅನಂತವ್ರತವನ್ನು ಮಾಡು. ನಿನಗೆ ನಕ್ಷತ್ರಲೋಕವನ್ನು ಕೊಡುವೆನು. ಈ ಲೋಕದಲ್ಲಿ ಬೇಕಾದ ಭೋಗಗಳನ್ನು ಅನುಭವಿಸಿ ಮಕ್ಕಳು ಮೊಮ್ಮಕ್ಕಳಿನಿಂದ ಸಹಿತನಾಗಿದ್ದು ಕೊನೆಗೆ ಮೋಕ್ಷವನ್ನು ಹೊಂದುವಿ! ಎಂದು ವರವನ್ನು ಕೊಟ್ಟು ಮರೆಯಾದನು. ಕೌಂಡಿನ್ಯರು ಪುನಃ ತನ್ನ ಆಶ್ರಮಕ್ಕೆ ಬಂದರು. ಪತ್ನಿಯಾದ ಶೀಲೆಯೊಡನೆ ಈ ವ್ರತವನ್ನು ಮಾಡಿದರು. ಆ ವ್ರತದ ಪ್ರಭಾವದಿಂದ ಪರಮಾತ್ಮನ ಅನುಗ್ರಹದಿಂದ ಸರ್ವವಸ್ತುಗಳನ್ನು ಪಡೆದರು. ಪತ್ನಿಯಿಂದ ಸಹಿತ ರಾಗಿ ಸಕಲಭೋಗಗಳನ್ನೂ ಅನುಭವಿಸಿ ಪುನರ್ವಸು ಎಂಬ ನಕ್ಷತ್ರಲೋಕವನ್ನು

ಹೊಂದಿದರು. ಇನ್ನು ಇತರ ಹೆಂಗಸರೋ ಗಂಡಸರೋ ಈವ್ರತವನ್ನು ಮಾಡಿದರೂ ಸಂತೋಷವನ್ನು ಹೊಂದಿ ಉತ್ತಮಲೋಕವನ್ನು ಹೊಂದುವರು. ಕುಬೇರನೂ ಈ ವ್ರತವನ್ನು ಮಾಡಿ ರಾಜ್ಯವನ್ನು ಹೊಂದಿರುವನು. ಸಗರರಾಜನೂ ದಿಲೀಪರಾಜನೂ ಭರತರಾಜನೂ ಈವ್ರತವನ್ನು ಮಾಡಿ ಯುದ್ಧದಲ್ಲಿ ಶತ್ರುಸಮೂಹವನ್ನು ಜಯಿಸಿ ರಾಜ್ಯವನ್ನು ಹೊಂದಿರುವರು. ಧರ್ಮರಾಜ! ನೀನೂ ಈ ವ್ರತವನ್ನು ಮಾಡಿ ನಿನ್ನ ರಾಜ್ಯವನ್ನು ಹೊಂದು. ಯಾರು ಈ ಪವಿತ್ರವಾದ ವ್ರತವನ್ನು ಕೇಳಿ ಇನ್ನೊಬ್ಬರಿಗೆ ಹೇಳುವನೋ ಅವನಿಗೆ ಅತ್ಯಂತ ಪುಣ್ಯವುಂಟಾಗುವುದು.



# ಋಷಿಪಂಚಮಿ ಕಥೆಯು

ವಿದೇಹನಗರದಲ್ಲಿ ಉದಂಕ ಎಂಬ ಬ್ರಾಹ್ಮಣರಿದ್ದರು. ಅವರಿಗೆ ಸುಶೀಲೆಯೆಂಬ ಪತಿವ್ರತೆಯಾದ ಹೆಂಡತಿಯಿದ್ದಳು. ಆ ದಂಪತಿಗಳಿಗೆ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಒಂದು ಗಂಡು ಒಂದು ಹೆಣ್ಣು. ಮಗನು ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡಿದನು. ಸರಿಯಾದ ವಯಸ್ಸಿನಲ್ಲಿ ಉದಂಕರು ಮಗನಿಗೆ ಒಳ್ಳೆಯ ಕಡೆಯ ಹೆಣ್ಣು ನೋಡಿ ಮದುವೆ ಮಾಡಿದನು. ಹೆಣ್ಣಿಗೂ ಕೂಡ ಒಳ್ಳೆಯ ವರವನ್ನು ನೋಡಿ ಮದುವೆ ಮಾಡಿದನು. ಮದುವೆಯಾದ ಕೂಡಲೇ ಅವಳ ಗಂಡನು ಮೃತನಾದನು. ಮಗಳು ಮನೆಗೆ ಬಂದು ಸೇರಿದಳು. ತನ್ನ ಪಾತಿವ್ರತ್ಯವನ್ನು ರಕ್ಷಿಸುತ್ತಾ ತಂದೆಯ ಮನೆಯಲ್ಲಿಯೇ ಇದ್ದಳು. ತಂದೆಯು ಮಗಳ ದುಃಖದಿಂದ ಸಂತಾಪವುಳ್ಳವನಾಗಿ ಮಗನನ್ನು ಮನೆಯಲ್ಲಿಯೇ ಬಿಟ್ಟು ಪತ್ನಿಯನ್ನು ಕರೆದುಕೊಂಡು ಮಗಳನ್ನು ಕರೆದುಕೊಂಡು ಗಂಗಾತೀರಕ್ಕೆ ಹೋಗಿ ಅಲ್ಲಿ ಶಿಷ್ಯರಿಗೆ ವೇದಪಾಠ ಹೇಳುತ್ತಾ ಇದ್ದನು. ಅಲ್ಲಿ ಮಗಳು ತಂದೆಯ ಸೇವೆಯನ್ನು ಮಾಡುತ್ತಾ ಇದ್ದಳು.

ಒಂದುದಿನ ತಂದೆಯ ಸೇವೆಯನ್ನು ಮಾಡಿ ಮಲಗಿರಲು ಮಧ್ಯರಾತ್ರಿಯಲ್ಲಿ ಮಗಳ ಮೈಯಮೇಲೆ ಎಲ್ಲಾ ಕ್ರಿಮಿಗಳು ಉಂಟಾದವು. ಆರೀತಿಯಾಗಿ ಹಾಸಿಗೆಯಲ್ಲಿ ಮಲಗಿರುವಾಗ ಶಿಷ್ಯರು ನೋಡಿ ತಾಯಿಯೊಡನೆ ಬಂದು ತಿಳಿಸಿದರು. ಅವರ ಮಾತನ್ನು ಕೇಳಿ ತಾಯಿಯು ಅಳುತ್ತಾ ಮಗಳಿದ್ದಲ್ಲಿಗೆ ಓಡಿದಳು. ಎದೆ ಬಡೆದುಕೊಂಡಳು. ಮೂರ್ಛಿತಳಾದಳು. ಆಮೇಲೆ ಮಗಳನ್ನು ಕೈಗಳಿಂದ ಆಲಿಂಗಿಸಿ ತನ್ನ ಗಂಡನ ಬಳಿಗೆ ಕರೆದುಕೊಂಡು ಬಂದಳು. ಪತಿಯೊಡನೆ ಸ್ವಾಮಿ! ನಿಮ್ಮ

ಮಗಳಿಗೆ ಯಾವ ಪಾಪದಿಂದ ಈರೀತಿಯಾಗಿ ಕೃಮಿಗಳೆಲ್ಲಾ ಮೈಯಲ್ಲಿ ಬರುತ್ತಿರುವುವು?' ಎಂದು ಕೇಳಿದಳು.

ಉದಂಕರು ಧ್ಯಾನಮಾಡಿ ಮಗಳ ಪೂರ್ವಜನ್ಮದ ವೃತ್ತಾಂತವನ್ನು ತಿಳಿದು ಹೇಳಿದರು. 'ಸುಶೀಲೆ! ನಿನ್ನ ಈ ಮಗಳು ಹಿಂದಿನ ಏಳನೇ ಜನ್ಮದಲ್ಲಿ ಬ್ರಾಹ್ಮಣ ಸ್ತ್ರೀಯಾಗಿದ್ದಳು. ಅವಳು ಮುಟ್ಟಾದ ಸಮಯದಲ್ಲಿ ಮನೆಯ ಪಾತ್ರೆಗಳನ್ನೆಲ್ಲಾ ಮುಟ್ಟುತ್ತಾ ಇದ್ದಳು. ಆ ದೋಷದಿಂದ ಈಗ ಇವಳ ಮೈಯಲ್ಲಿ ಕೃಮಿ ಉಂಟಾಗಿರುವುದು. ಮುಟ್ಟಾದ ಸ್ತ್ರೀಯಲ್ಲಿ ಪಾಪವಿರುವುದು. ಅದಕ್ಕೆ ಕಾರಣವನ್ನು ಹೇಳುವೆನು. ಪೂರ್ವದಲ್ಲಿ ವೃತ್ರಾಸುರನ ಸಂಹಾರದಿಂದ ಉಂಟಾದ ಬ್ರಹ್ಮಹತ್ಯೆಯಿಂದ ಪೀಡಿತರಾದ ಇಂದ್ರದೇವರು ಬ್ರಹ್ಮದೇವರ ಬಳಿಗೆ ಹೋಗಿ ತನಗೆ ಶುದ್ಧಿಯಾಗುವಂತೆ ಪ್ರಾರ್ಥಿಸಿಕೊಂಡರು. ತರುವಾಯ ಬ್ರಹ್ಮದೇವರು ಒಂದುಕ್ಷಣ ದೇವತೆಗಳೊಡನೆ ಯೋಚನೆ ಮಾಡಿದಂತೆ ತೋರಿಸಿ ಸಂತೋಷದಿಂದ ಬ್ರಹ್ಮಹತ್ಯೆಯನ್ನು ನಾಲ್ಕು ವಿಭಾಗ ಮಾಡಿ ಒಂದು ಭಾಗವನ್ನು ಬೆಂಕಿಯ ಮೊದಲಿನ ಜ್ವಾಲೆಗಳಲ್ಲಿಯೂ ಎರಡನೇ ಭಾಗವನ್ನು ನದಿಗಳಲ್ಲಿಯೂ ಇನ್ನೊಂದು ಭಾಗವನ್ನು ಪರ್ವತಗಳಲ್ಲಿಯೂ ಮತ್ತೊಂದು ಭಾಗವನ್ನು ಮುಟ್ಟಾದ ಸ್ತ್ರೀಯರಲ್ಲಿಯೂ ಹಾಕಿದರು. ಆದುದರಿಂದ ಎಲ್ಲಾ ಜಾತಿಯವರೂ ಮುಟ್ಟಾದ ಸ್ತ್ರೀಯನ್ನು ಪರಿತ್ಯಾಗ ಮಾಡಬೇಕು. ಮುಟ್ಟಾದ ಸ್ತ್ರೀಯು ಮೊದಲಿನ ದಿನದಲ್ಲಿ ಚಂಡಾಲಸ್ತ್ರೀಗೆ ಸಮಾನಳು. ಎರಡನೇದಿನ ಬ್ರಹ್ಮಹತ್ಯೆಯನ್ನು ಮಾಡಿದವಳಿಗೆ ಸಮಾನಳು.

ಮೂರನೇ ದಿನದಲ್ಲಿ ಅಗಸಸ್ತ್ರೀಗೆ ಸಮಾನಳು. ನಾಲ್ಕನೇ ದಿನ ಶುದ್ಧಿಯನ್ನು ಹೊಂದುವಳು. ಅದೇ ಪ್ರಕಾರವಾಗಿ ನಿನ್ನ ಮಗಳು ಪುಣ್ಯಕರವಾದ ಒಂದು ವ್ರತವನ್ನು ನೋಡಿ ಅದನ್ನು ಅವಮಾನ ಮಾಡಿದಳು. ಆ ವ್ರತವನ್ನು ನೋಡಿದ ಕಾರಣದಿಂದ ಬ್ರಾಹ್ಮಣನಿಗೆ ಮಗಳಾಗಿ ಹುಟ್ಟಿದಳು. ಅದನ್ನು ಅವಮಾನ ಮಾಡಿದ ಕಾರಣ ಇವಳ ಮೈಯಲ್ಲಿ ಕೃಮಿಯುಂಟಾಯಿತು. ಅಂತಹ ವ್ರತವು ಯಾವುದೆಂದರೆ ಋಷಿಪಂಚಮೀ ವ್ರತವು. ಆವ್ರತವನ್ನು ಮಾಡುವುದರಿಂದ ಪಾಪಪರಿಹಾರವಾಗುವುದು. ಮಂಗಳವು ಹೆಚ್ಚುವುದು. ಸಂಪತ್ತೂ ಹೆಚ್ಚಿಗೆ ಆಗುವುದು. ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮಿಗೆ ಋಷಿಪಂಚಮೀ ಎಂದು ಹೆಸರು. ಆ ದಿವಸದಲ್ಲಿ ಮಧ್ಯಾಹ್ನದಲ್ಲಿ ನದ್ಯಾದಿಗಳಲ್ಲಿ ಸ್ನಾನಮಾಡಿ ಹೋಗಿ ಉತ್ತರಾಯಣ ಕಡ್ಡಿಯ ಅಭಿಮಾನಿ ದೇವತೆಯನ್ನು ಪ್ರಾರ್ಥಿಸಿ ಆ ಕಡ್ಡಿಗಳಿಂದ ಹಲ್ಲು ಉಜ್ಜಿಕೊಳ್ಳಬೇಕು.

ತರುವಾಯ ಸ್ನಾನಮಾಡಿ ಮಡಿವಸ್ತ್ರವನ್ನು ಧರಿಸಿಕೊಂಡು ನಿತ್ಯಕರ್ಮಗಳನ್ನು

ಮಾಡಿ ಮನೆಗೆ ಬಂದು ಗೋಮಯದಿಂದ ಸಾರಿಸಿ ರಂಗೋಲೆ ಹಾಕಿ ನಾನಾವಿಧ ಪುಷ್ಪಗಳಿಂದ ಅಲಂಕರಿಸಿ ಅಲ್ಲಿ ಕಶ್ಯಪ, ಅತ್ರಿ, ಭರದ್ವಾಜ, ಗೌತಮ, ಜಮದಗ್ನಿ, ವಸಿಷ್ಠ ಎಂಬ ಸಪ್ತಋಷಿಗಳನ್ನು ವಸಿಷ್ಠರ ಪತ್ನಿಯಾದ ಅರುಂಧತಿಯನ್ನೂ ಪೂಜಿಸಬೇಕು. ಆಮೇಲೆ ಋಷಿಗಳ ಧ್ಯಾನವನ್ನು ಮಾಡುತ್ತಾ ಶ್ರದ್ಧಾಭಕ್ತಿಯಿಂದ ಈ ಕಥೆಯನ್ನು ಕೇಳಬೇಕು. ಈರೀತಿಯಾಗಿ ಏಳು ವರ್ಷ ಈ ವ್ರತವನ್ನು ಮಾಡಬೇಕು. ಮೊದಲಿನ ವರ್ಷದಲ್ಲಿ ನೆಲ್ಲನ್ನು (ಭತ್ತವನ್ನು) ದಾನಮಾಡಬೇಕು. ಎರಡನೇ ವರ್ಷದಲ್ಲಿ ಯವ ಎಂಬ ಧಾನ್ಯವನ್ನೂ ಮೂರನೇ ವರ್ಷದಲ್ಲಿ ಗೋಧಿಯನ್ನೂ ನಾಲ್ಕನೇ ವರ್ಷದಲ್ಲಿ ಉದ್ದನ್ನೂ ಐದನೇ ವರ್ಷಲ್ಲಿ ಶ್ಯಾಮೆ ಅಕ್ಕಿಯನ್ನೂ ಆರನೇ ವರ್ಷದಲ್ಲಿ ನೀವಾರ ಎಂಬ ಧಾನ್ಯವನ್ನೂ ಏಳನೇ ವರ್ಷದಲ್ಲಿ ಎಳ್ಳನ್ನೂ ದಾನಮಾಡಬೇಕು. ಇತರ ಯಾವುದೂ ಸಿಗದಿದ್ದರೂ ಎಳ್ಳನ್ನು ದಾನಮಾಡಬಹುದು. ದಕ್ಷಿಣೆ ತಾಂಬೂಲಸಹಿತವಾಗಿ ಭಕ್ತಿಯಿಂದ ಬ್ರಾಹ್ಮಣರಿಗೆ ದಾನ ಮಾಡಬೇಕು. ಕೃಷಿ ಮಾಡದೆ ಅಂದರೆ ಉಳದೆ ಆಗಿರುವ ಹಣ್ಣು ಮೊದಲಾದವನ್ನು ಆಹಾರವನ್ನು ಸ್ವೀಕರಿಸಬಹುದು. ಋಷಿಗಳನ್ನು ಧ್ಯಾನಮಾಡುತ್ತಾ ರಾತ್ರಿಯಲ್ಲಿ ಮಲಗಬೇಕು. ಈರೀತಿಯಾಗಿ ಏಳು ವರ್ಷ ಮಾಡಬೇಕು. ಆರಂಭದಲ್ಲಿಯೋ ಮಧ್ಯದಲ್ಲಿಯೋ ಕೊನೆಗೋ ಉದ್ಯಾಪನ ಮಾಡಬೇಕು.

ಉದ್ಯಾಪನೆಗೆ ಸಪ್ತಋಷಿಗಳ ಮತ್ತು ಅರುಂಧತಿಯ ಪ್ರತಿಮೆಗಳನ್ನೂ ತನ್ನ ಶಕ್ತಿಯನ್ನು ಅನುಸರಿಸಿ ಬಂಗಾರದಿಂದಲೋ ಬೆಳ್ಳಿಯಿಂದಲೋ ತಾಮ್ರದಿಂದಲೋ ಮಾಡಿಸಬೇಕು. ಪಂಚಾಮೃತ ಅಭಿಷೇಕವನ್ನು ಆ ಪ್ರತಿಮೆಗಳಿಗೆ ಮಾಡಬೇಕು. ಗಂಧವನ್ನು ಹಚ್ಚಬೇಕು. ಆ ಪ್ರತಿಮೆಗಳನ್ನು ಎಂಟು ಮಣ್ಣಿನ ಗಡಿಗೆಗಳಲ್ಲಿ ಇಡಬೇಕು. ಆ ಗಡಿಗೆಗಳಲ್ಲಿ ಪಂಚರತ್ನಗಳನ್ನೂ ಹಾಕಬೇಕು. ತರುವಾಯ ಪುಷ್ಪ ಧೂಪ ದೀಪ ನೈವೇದ್ಯ ಇತ್ಯಾದಿಗಳಿಂದ ಪೂಜಿಸಬೇಕು. ತರುವಾಯ ಅರ್ಘ್ಯವನ್ನು ಕೊಟ್ಟು ಹೋಮವನ್ನು ಮಾಡಬೇಕು. ಆಮೇಲೆ ಸಪ್ತಧಾನ್ಯಗಳಿಂದ ಏಳುವಾಯನ ದಾನಗಳನ್ನು ಕೊಡಬೇಕು. ಆಚಾರ್ಯರಿಗೆ ಪೂಜಿಸಬೇಕು. ಪ್ರತಿಮೆಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಅರುಂಧತಿಯ ಪ್ರತಿಮೆಯನ್ನು ಮುತ್ತೈದೆಗೆ ದಾನಮಾಡಬೇಕು. ಆಮೇಲೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ತರುವಾಯ ಬ್ರಾಹ್ಮಣರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಈ ವಿಧಾನದಿಂದ ಈ ವ್ರತವನ್ನು ಮಾಡಬೇಕು. ಇದರಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವೂ ಸರ್ವಯಜ್ಞಗಳನ್ನೂ ಮಾಡಿದ ಫಲವೂ ಸರ್ವದಾನಗಳನ್ನು ಮಾಡಿದ ಪುಣ್ಯವೂ ಬರುವುದು.

ಈ ವ್ರತದ ವಿಷಯದಲ್ಲಿ ಒಂದು ಇತಿಹಾಸವಿರುವುದು. ಅಂಗದೇಶದಲ್ಲಿ ವಿಷ್ಣುಸ್ವಾಮಿಯೆಂದು ಹೆಸರುಳ್ಳ ಒಬ್ಬ ಹಣವಂತನಾದ ಮತ್ತು ಸರ್ವಶಾಸ್ತ್ರಗಳಲ್ಲಿಯೂ ಪಂಡಿತನಾದ ಬ್ರಾಹ್ಮಣನಿದ್ದನು. ಅವನಿಗೆ ಪುಣ್ಯಶೀಲಾ ಎಂಬ ಹೆಂಡತಿಯಿದ್ದಳು. ಅವಳು ಪತಿವ್ರತೆಯಾಗಿದ್ದಳು. ಪತಿಯ ಸೇವೆಯನ್ನು ಮಾಡುತ್ತಿದ್ದಳು. ಆ ದಂಪಂತಿಗಳಿಗೆ ಧರ್ಮಶೀಲನೆಂಬ ಮಗನಿದ್ದನು. ಒಂದು ದಿನದಲ್ಲಿ ಪುಣ್ಯಶೀಲೆಯು ಗಂಡನೊಡನೆ ಮಲಗಿರುವಾಗ ಮುಟ್ಟಾದಳು. ಆದರೂ ಕಾಮುಕಳಾಗಿ ಹಾಗೆಯೇ ಮಲಗಿದ್ದಳು. ಗಂಡನಿಗೂ ಈ ವಿಷಯವು ತಿಳಿಯದೆ ಅವಳೊಡನೆ ಸಂತೋಷದಿಂದ ಇಟ್ಟುಬಿಟ್ಟನು. ಈರೀತಿಯಾಗಿ ಮುಟ್ಟಾದವಳ ಸಂಸರ್ಗ ಮಾಡಿದ ದೋಷದಿಂದ ಅವನು ಕಾಲಾಂತರದಲ್ಲಿ ಸತ್ತವನು ಎತ್ತಾಗಿ ಹುಟ್ಟಿದನು. ಪುಣ್ಯಶೀಲೆಯು ನಾಯಿಯಾದಳು. ಮಗನ ಮನೆಯ ಬಾಗಿಲನ್ನು ಕಾಯುತ್ತಿದ್ದಳು. ಅವಳಿಗೆ ಪೂರ್ವಸ್ಮರಣೆಯಿತ್ತು. ಆ ನಾಯಿಯು ಎಂಜಲನ್ನು ತಿನ್ನುತ್ತಾ ಪೂರ್ವದಲ್ಲಿ ಮಾಡಿದ ಪಾಪವನ್ನು ಸ್ಮರಿಸುತ್ತಾ ಇದ್ದಿತು.

ಒಂದು ದಿವಸದಲ್ಲಿ ಧರ್ಮಶೀಲನ ತಂದೆಯ ಶ್ರಾದ್ಧವು ಬಂದಿತು. ಹೆಂಡತಿಯೊಡನೆ 'ನಾಳೆಯ ದಿನದಲ್ಲಿ ನನ್ನ ತಂದೆಯ ಮೃತದಿನವು ಶ್ರಾದ್ಧಮಾಡುವೆನು. ಬ್ರಾಹ್ಮಣರ ಭೋಜನವಾಗಬೇಕು. ಒಳ್ಳೇ ಅಡಿಗೆಯನ್ನು ಮಾಡು' ಎಂದು ಹೇಳಿದನು. ಹೆಂಡತಿಯು ಗಂಡನ ಅಪ್ಪಣೆಯಂತೆ ಅಡಿಗೆಯನ್ನು ಮಾಡಿದಳು. ಆ ಸಮಯದಲ್ಲಿ ಒಂದು ಸರ್ಪವು ಬಂದು ಪಾಯಸದ ಪಾತ್ರೆಯನ್ನು ವಿಷವನ್ನು ಕಾರಿತು. ಇದನ್ನು ಹೊರಗಿನ ಬಾಗಿಲಲ್ಲಿ ನಿಂತಿದ್ದ ನಾಯಿಯು ನೋಡಿತು. ಇನ್ನು ಬ್ರಾಹ್ಮಣರು ಈ ವಿಷಯುಕ್ತವಾದ ಪಾಯಸವನ್ನು ಕುಡಿದು ಸಾಯುವರು. ಇದರಿಂದ ಮಗನಿಗೆ ಬ್ರಹ್ಮಹತ್ಯೆಯು ಬರುವುದು ಎಂದು ಅಂಜಿಕೊಂಡು ಒಳಗೆ ಬಂದು ಪಾಯಸದ ಪಾತ್ರೆಯನ್ನು ಮುಟ್ಟಿತು. ಇದನ್ನು ನೋಡಿ ಪುಣ್ಯಶೀಲನ ಹೆಂಡತಿಯು ಕೋಪಿಸಿಕೊಂಡು ಬೆಂಕಿಯ ಕೊಳ್ಳಿಯಿಂದಲೇ ಆ ನಾಯಿಗೆ ಚೆನ್ನಾಗಿ ಬಡೆದಳು. ಆಮೇಲೆ ಅಡಿಗೆ ಮಾಡಿದ್ದನ್ನೆಲ್ಲಾ ಹೊರಗೆ ಹಾಕಿ ಸಾರಿಸಿ ಪುನಃ ಬೇರೇ ಅಡಿಗೆಯನ್ನು ಮಾಡಿದಳು. ಆಮೇಲೆ ಬ್ರಾಹ್ಮಣರು ಊಟ ಮಾಡಿದ ಮೇಲೆ ಎಂಜಲನ್ನು ಹೊರಗೆ ಹಾಕಲಿಲ್ಲ. ಅದನ್ನು ನಾಯಿಯು ತಿಂದರೆ ಪಾಪ ಬರುವುದೆಂದು ನೆಲದ ಕೆಳಗೆ ಹೂಳಿಟ್ಟರು. ಬಾಗಿಲಲ್ಲಿ ಇದ್ದ ತಾಯಿಯಾದ ನಾಯಿಗೆ ಉಪವಾಸವಾಯಿತು.

ತರುವಾಯ ರಾತ್ರಿಯಾಗಲು ನಾಯಿಯು ಒಳ್ಳೇ ಹಸಿವೆಯಿಂದ ಪೀಡಿತವಾಗಿ ಕೊಟ್ಟಿಗೆಯಲ್ಲಿ ಇದ್ದ ತನ್ನ ಪೂರ್ವಜನ್ಮದ ಗಂಡನಾದ ಎತ್ತಿನ ಬಳಿಗೆ ಬಂದು 'ಸ್ವಾಮಿ!

ನನಗೆ ಒಳ್ಳೇ ಹಸಿವೆಯಾಗುತ್ತಿದೆ. ಮನೆ ತುಂಬಾ ಎಂಜಿಲಿದ್ದರೂ ಹೊರಗೆ ಹಾಕಲೇ ಇಲ್ಲ. ಬೇರೆ ದಿವಸಗಳಲ್ಲಿ ಮಗನು ಒಂದಿಷ್ಟು ಆಹಾರವನ್ನು ಹಾಕುತ್ತಿದ್ದನು. ಈದಿವಸ ಅವನೂ ಸ್ವಲ್ಪವೂ ಕೊಡಲಿಲ್ಲ. ಸೊಸೆಯು ಅಡಿಗೆ ಮಾಡುತ್ತಿರುವಾಗ ಪಾಯಸದಲ್ಲಿ ವಿಷವು ಬಿದ್ದಿತು. ಅದನ್ನು ನೋಡಿ ನಾನು ಬ್ರಾಹ್ಮಣರು ಆ ವಿಷಯುಕ್ತವಾದ ಪಾಯಸವನ್ನು ಕುಡಿದು ಸಾಯುವರು ಎಂದು ಯೋಚಿಸಿ ಪಾಯಸದ ಪಾತ್ರೆಯನ್ನು ಮುಟ್ಟಿದೆನು. ಇದರಿಂದ ಸೊಸೆಯು ಸಿಟ್ಟಾಗಿ ಚೆನ್ನಾಗಿ ಬಡೆದಿರುವಳು. ನನ್ನ ಸೊಂಟವು ಮುರಿದುಹೋಯಿತು. ನಾನು ಏನು ಮಾಡಲಿ' ಎಂದು ಹೇಳಿತು.

ಆಗ ಎತ್ತು 'ನೀನು ಮಾಡಿದ ಪಾಪದಿಂದ ಹೀಗಾಯಿತು. ಏನು ಮಾಡಲಿ? ನಾನೂ ಭಾರವನ್ನು ಹೊರುತ್ತಿದ್ದೇನೆ. ಈದಿನ ನನ್ನ ಮಗನ ಗದ್ದೆಯಲ್ಲಿ ಆಹಾರವಿಲ್ಲದೆ ಹಗಲೆಲ್ಲಾ ಉಳುವವನಾದೆನು. ನನಗೂ ಬಹಳ ಕಷ್ಟವಾಗಿದೆ. ನನ್ನ ಮಗನು ಶ್ರಾದ್ಧವನ್ನು ಮಾಡಿದ್ದು ವ್ಯರ್ಥವಾಯಿತು. ನನಗೆ ಬಹು ಕಷ್ಟವಾಯಿತು' ಎಂದು ಹೇಳಿತು. ಈರೀತಿಯಾಗಿ ಅವುಗಳು ಮಾತಾಡಿಕೊಂಡದ್ದನ್ನು ಮಗನಾದ ಧರ್ಮ ಶೀಲನು ಕೇಳಿ ಆಗಲೇ ಅವರಿಬ್ಬರಿಗೂ ಬೇಕಾದಷ್ಟು ಆಹಾರವನ್ನು ತಂದುಹಾಕಿದನು. ತನ್ನ ತಂದೆತಾಯಿಗಳಿಗೆ ಇಂತಹ ಅವಸ್ಥೆಯು ಉಂಟಾಯಿತೆಂದು ತುಂಬಾ ದುಃಖಪಟ್ಟನು. ಅವರಿಗೆ ಸುಖವನ್ನು ಉಂಟುಮಾಡಬೇಕೆಂದು ವನಕ್ಕೆ ಹೋದನು. ಅಲ್ಲಿ ಜ್ಞಾನಿಗಳಾದ ಋಷಿಗಳನ್ನು ನೋಡಿ ನಮಸ್ಕಾರ ಮಾಡಿ ನನ್ನ ತಂದೆತಾಯಿಗಳಿಗೆ ಯಾವ ಕರ್ಮದಿಂದ ಎತ್ತು ನಾಯಿಗಳ ಜನ್ಮವು ಬಂದಿರುವುದು? ಅವರ ಪಾಪವು ಹೇಗೆ ನಾಶವಾಗುವುದು ಎಂದು ಕೇಳಿದನು. ಅದಕ್ಕೆ ಋಷಿಗಳು ನಿನ್ನ ತಾಯಿಯು ಮುಟ್ಟಾದವಳು ಪತಿಯ ಸಂಸರ್ಗವನ್ನು ಮಾಡಿರುವಳು. ಇದರಿಂದ ನಾಯಿಯ ಜನ್ಮ ವನ್ನು ಹೊಂದಿರುವಳು. ಅವಳ ಸಂಸರ್ಗದೋಷದಿಂದಲೇ ನಿನ್ನ ತಂದೆಯು ಎತ್ತಿನ ಜನ್ಮವನ್ನು ಹೊಂದಿರುವನು. ಇವರ ಪಾಪಪರಿಹಾರಕ್ಕಾಗಿ ನೀನು ಋಷಿಪಂಚಮೀ ವ್ರತವನ್ನು ಮಾಡು. ಪತ್ನಿಯಿಂದ ಸಹಿತನಾಗಿ ಋಷಿಗಳಪೂಜೆಯನ್ನು ಮಾಡಬೇಕು. ಈರೀತಿಯಾಗಿ ಆ ವ್ರತವನ್ನು ಮಾಡಿದರೆ ನಿನ್ನ ತಂದೆತಾಯಿಗಳು ಪೂರ್ವಜನ್ಮದ ಪಾಪದಿಂದ ರಹಿತರಾಗವರು. ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮೀದಿನ ಭಕ್ತಿಯಿಂದ ಸಪ್ತಋಷಿಗಳನ್ನು ಪೂಜಿಸಬೇಕು. ಇದರಿಂದ ಸ್ತ್ರೀಯ ಮುಟ್ಟಾದ ಪ್ರಯುಕ್ತ ಉಂಟಾದ ದೋಷಗಳೆಲ್ಲಾ ಪರಿಹೃತವಾಗುವುವು ಎಂದು ಹೇಳಿದರು.

ತರುವಾಯ ಧರ್ಮಶೀಲನು ಮುನಿಗಳು ಹೇಳಿದ ಮಾತನ್ನು ಕೇಳಿ ಮನೆಗೆ ಬಂದು ಪತ್ನಿಯಿಂದ ಸಹಿತನಾಗಿ ಶ್ರದ್ಧೆಯಿಂದ ಆ ವ್ರತವನ್ನು ಮಾಡಿ ತಂದೆತಾಯಿ

ಗಳಿಗೆ ಆ ವ್ರತದ ಫಲವನ್ನು ಧಾರೆ ಎರೆದು ಕೊಟ್ಟನು. ಆವ್ರತದ ಪುಣ್ಯ ಪ್ರಭಾವದಿಂದ ತಾಯಿಯು ನಾಯಿಯ ಜನ್ಮದಿಂದಲೂ ತಂದೆಯು ಎತ್ತಿನ ಜನ್ಮದಿಂದಲೂ ಬಿಡುಗಡೆಯನ್ನು ಹೊಂದಿ ಇಬ್ಬರೂ ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು. ಈ ವ್ರತವನ್ನು ಯಾವ ಹೆಂಗಸು ಮಾಡುವಳೋ ಅವಳು ಸುಖವನ್ನು ಹೊಂದುವಳು. ರೂಪಲಾವಣ್ಯಉಳ್ಳವಳಾಗಿ ಮಕ್ಕಳು ಮೊಮ್ಮಕ್ಕಳಿಂದ ಯುಕ್ತಳಾಗಿ ಆಗುವಳು' ಎಂದು ಹೇಳಿದರು.

ಈರೀತಿಯಾಗಿ ಹೇಳಿದ ಉದಂಕರ ಮಾತನ್ನು ಕೇಳಿ ಅವರ ಹೆಂಡತಿಯು ಅವರು ಹೇಳಿದಂತೆ ಆ ವ್ರತವನ್ನು ಮಾಡಿ ಅದರ ಫಲವನ್ನು ಮಗಳಿಗೆ ಧಾರೆ ಎರೆದುಕೊಟ್ಟಳು. ಈ ವ್ರತದ ಪುಣ್ಯದಿಂದ ಮಗಳ ಮೈಯಲ್ಲಿ ಇದ್ದ ಕೃಮಿಗಳು ನಾಶವಾದವು. ಕೊನೆಗೆ ಅವಳು ಸದ್ಗತಿಯನ್ನು ಹೊಂದಿದಳು.



# ಮಂಗಳಗೌರಿಯ ಕಥೆಯು [1]

ಪೂರ್ವದಲ್ಲಿ ಕೃತಯುಗದಲ್ಲಿ ವೀರಸೇನ ಎಂಬ ರಾಜನಿದ್ದನು. ಅವನಿಗೆ ದೇವಸೇನೆಯೆಂಬ ಮಗಳಿದ್ದಳು. ಅವಳನ್ನು ಹರದತ್ತ ಎಂಬವನಿಗೆ ಮದುವೆ ಮಾಡಿಕೊಟ್ಟನು. ಸ್ವಲ್ಪ ಸಮಯ ಅವಳು ಗಂಡನೊಡನೆ ಸುಖದಿಂದ ಇದ್ದಳು. ತರುವಾಯ ಪೂರ್ವಕರ್ಮದಿಂದ ಅವಳ ಗಂಡನು ಮೃತನಾದನು. ಅವಳು ಅದರಿಂದ ಬಹಳ ದುಃಖಿತಳಾದಳು. ಒಂದು ದಿವಸದಲ್ಲಿ ಅವಳು ತನ್ನ ಚಿಕ್ಕಕೂಸನ್ನು ಹಿಡಿದುಕೊಂಡು ಯಮುನಾನದಿಗೆ ಸ್ನಾನಮಾಡಲಿಕ್ಕೆ ಹೋದಳು. ನದಿಯಲ್ಲಿ ಇಳಿದಾಗ ನೀರಿನ ವೇಗದಿಂದ ಕೈತಪ್ಪಿ ಕೂಸು ನೀರಿನಲ್ಲಿ ಬಿದ್ದು ಪ್ರವಾಹದಲ್ಲಿ ಹೊರಟುಹೋಗಿ ಬಿದ್ದಿತು. ಆಮೇಲೆ ಸಿಗಲೇ ಇಲ್ಲ. ಆಗ ಅವಳು ದುಃಖವನ್ನು ಸಹಿಸಲಿಕ್ಕೆ ಆಗಲಾರದೆ ಕೆಳಗೆ ಬಿದ್ದುಬಿಟ್ಟಳು. ಜನರೆಲ್ಲರೂ ಬಂದುಸೇರಿ ಅವಳ ಮನೆಗೆ ಕರತಂದುಬಿಟ್ಟು ಸಮಾಧಾನಪಡಿಸಿದರು. ತರುವಾಯ ದೇವಸೇನೆಯು ಬಹುಕಷ್ಟದಿಂದ ಮನಸ್ಸಮಾಧಾನ ಮಾಡಿಕೊಂಡು ಎಲ್ಲಾ ಬ್ರಾಹ್ಮಣರನ್ನು ಕರೆದು

1. ಭವಿಷ್ಯೋತ್ತರ ಪುರಾಣದಲ್ಲಿ ಶ್ರೀಕೃಷ್ಣನು ಧರ್ಮರಾಜನಿಗೆ ಉಪದೇಶಿಸಿದ್ದಾನೆ. ಅಲ್ಲದೆ ಸ್ಕಂದಪುರಾಣ-ಹಾಟಕೇಶ್ವರ ಕ್ಷೇತ್ರ ಮಹಿಮೆ. ಅ-246ರಲ್ಲಿ ಈಶ್ವರನು ಸನತ್ಕುಮಾರರಿಗೆ ಉಪದೇಶಿಸಿದ್ದಾನೆ.

ಪಶುಗಳನ್ನೂ ಧನವನ್ನೂ ದಾನಮಾಡಿದಳು. ಎಲ್ಲವನ್ನು ಪರಿತ್ಯಜಿಸಿ ಋಷಿಗಳ ಆಶ್ರಮಕ್ಕೆ ಹೋದಳು. ಅಲ್ಲಿ ಕೌಂಡಿನ್ಯಋಷಿಗಳ ಆಶ್ರಮಕ್ಕೆ ಹೋದಳು. ಆ ಋಷಿಗಳನ್ನು ನೋಡಿ ಅವರಿಗೆ ಉದ್ದಕ್ಕೆ ನಮಸ್ಕಾರ ಮಾಡಿದಳು. ತುಂಬಾ ದುಃಖದಿಂದ ಏಳಲೇ ಇಲ್ಲ. ಆಗ ಕೌಂಡಿನ್ಯರು ಕೃಪೆಯಿಂದ ಅವಳನ್ನು ಎಬ್ಬಿಸಿ ನೀನು ಯಾರು ಎಂದು ವಿಚಾರಿಸಿದರು. ಆಗ ಅವಳು ಎಲ್ಲವನ್ನೂ ತಿಳಿಸಿದಳು. ಆಗ ಅವರು ಅವಳ ದುಃಖದ ಕಾರಣವನ್ನು ಒಂದುಕ್ಷಣ ಯೋಚಿಸಿ 'ಸುಂದರಿ! ಪೂರ್ವಜನ್ಮದಲ್ಲಿ ಮಾಧವ ಎಂದು ಹೆಸರುಳ್ಳ ಕ್ಷತ್ರಿಯನೊಬ್ಬನಿದ್ದನು. ನೀನು ಅವನಿಗೆ ಹೆಂಡತಿಯಾಗಿ ಇದ್ದಿ. ಅವನ ಮನಸ್ಸನ್ನು ಅನುಸರಿಸಿದವಳಾಗಿ ಇದ್ದಿ. ಆಗ ಅನೇಕ ದಾನಗಳನ್ನೂ ವ್ರತಗಳನ್ನೂ ಮಾಡಿದಿ. ಆದರೆ ಉತ್ತಮವಾದ ಮಂಗಳಗೌರಿ ಪೂಜೆಯನ್ನು ಮಾಡಲಿಲ್ಲ. ಅದರಿಂದ ನೀನು ಈಗ ಹೀಗೆ ದುಃಖವನ್ನು ಹೊಂದಿರುವಿ. ಆ ದುಃಖ ಪರಿಹಾರಕ್ಕಾಗಿ ನನ್ನ ಆಜ್ಞೆಯಿಂದ ಆ ವ್ರತವನ್ನು ಮಾಡು ಎಂದು ಹೇಳಿ ಆ ವ್ರತವನ್ನು ಉಪದೇಶಿಸಿದರು. ತರುವಾಯ ಅವಳು ಆ ಮುನಿಗಳ ಆಶ್ರಮದಲ್ಲಿಯೇ ಆ ವ್ರತವನ್ನು ಮಾಡಿದಳು.

ಯಮುನಾನದಿಯಲ್ಲಿ ಮುಳುಗಿದ್ದ ಅವಳ ಮಗುವನ್ನು ನಾಗಕನ್ಯೆಯರು ನಾಗಲೋಕಕ್ಕೆ ಕರಕೊಂಡು ಹೋದರು. ಅಲ್ಲಿ ಅದನ್ನು ಸಾಕುತ್ತಿದ್ದರು. ತರುವಾಯ ಆ ಬಾಲಕನು ಯೌವನವನ್ನು ಹೊಂದು ನಾಗಕನ್ಯೆಯರಿಂದ ಸಂತೋಷದಿಂದ ಇದ್ದನು. ಒಂದುದಿನ ಅವನೊಡನೆ ನಿನ್ನ ಮುಖವು ಯಾಕೆ ಬಾಡಿರುವುದೆಂದು ನಾಗಕನ್ಯೆಯರು ಕೇಳಿದರು. ಆಗ ಅವನು ತನಗೆ ತಾಯಿಯನ್ನು ನೋಡಬೇಕೆಂಬ ಆಸೆಯನ್ನು ತೋರಿಸಿದನು. ಆಗ ಅವರು ಅವನಿಗೆ ರತ್ನಗಳನ್ನು ಕೊಟ್ಟು ಕಳುಹಿಸಿ ದರು. ಆ ರತ್ನಗಳ ಪ್ರಭಾವದಿಂದ ನೀರಿನಿಂದ ಮೇಲಕ್ಕೆ ಬಂದು ಕೌಂಡಿನ್ಯರ ಆಶ್ರಮಕ್ಕೆ ಬಂದನು. ಕೌಂಡಿನ್ಯರಿಗೂ ತಾಯಿಗೂ ನಮಸ್ಕರಿಸಿದನು. ಆಗ ತಾಯಿಯು ವ್ರತದ ಪ್ರಭಾವವನ್ನು ಮುನಿಗಳ ಪ್ರಭಾವವನ್ನು ಪುನಃಪುನಃ ಹೊಗಳುವವಳಾಗಿ ಮಗನನ್ನು ಆಲಿಂಗಿಸಿ ಮಗನೊಡನೆ ನಾಗಲೋಕಕ್ಕೆ ಹೋದಳು. ಅಲ್ಲಿ ಕೆಲವು ಕಾಲ ಮಗನಿಂದಲೂ ಸೊಸೆಯರಿಂದಲೂ ಯುಕ್ತಳಾಗಿ ಸುಖವನ್ನು ಅನುಭವಿಸಿ ಆಮೇಲೆ ದಿವ್ಯದೇಹವುಳ್ಳವಳಾಗಿ ರುದ್ರದೇವರ ಲೋಕವನ್ನು ಹೊಂದಿ ತನ್ನ ಪತಿಯೊಡನೆ ಸಂತೋಷದಿಂದ ಇದ್ದಳು. ಈಪ್ರಕಾರವಾದ ಮಹಿಮೆಯುಳ್ಳ ಮಂಗಳಗೌರಿ ವ್ರತವನ್ನು ಯಾರು ಮಾಡುವಳೋ ಅವಳು ದುರ್ಗತಿಯನ್ನು ಹೊಂದ ಲಾರಳು.

# ಸೋಮವಾರ ಅಮಾವಾಸ್ಯೆಯ ಕಥೆ

ಕಾಂಚೀನಗರದಲ್ಲಿ ಮಹಾಸೇನನೆಂಬ ಒಬ್ಬ ರಾಜನಿದ್ದನು. ಅವನು ಮಹಾ ಪರಾಕ್ರಮಶಾಲಿಯಾಗಿದ್ದನು. ಅವನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅವನ ಕಾಲದಲ್ಲಿ ದುರ್ಭಿಕ್ಷೆಯು ಬಂದದ್ದೇ ಇಲ್ಲ. ಆ ಊರಲ್ಲಿ ದೇವಸ್ವಾಮೀ ಎಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಧನವತೀ ಎಂದು ಹೆಸರುಳ್ಳ ಹೆಂಡತಿಯಿದ್ದಳು. ಅವನಿಗೆ ಆ ಹೆಂಡತಿಯಲ್ಲಿ ಆರು ಗಂಡು ಮಕ್ಕಳು ಹುಟ್ಟಿದರು. ಒಂದು ಹೆಣ್ಣುಮಗಳೂ ಹುಟ್ಟಿದಳು. ಆ ಹೆಣ್ಣು ಮಗಳಿಗೆ ಗುಣವತೀ ಎಂಬ ಹೆಸರನ್ನು ಇಟ್ಟನು. ಗಂಡುಮಕ್ಕಳಿಗೆಲ್ಲಾ ಮದುವೆಯಾಗಿ ಸುಖವಾಗಿದ್ದರು. ಹೆಣ್ಣುಮಗಳಿಗೆ ಮಾತ್ರ ಮದುವೆಯಾಗಿರಲಿಲ್ಲ.

ಹೀಗಿರಲು ಒಂದು ದಿನದಲ್ಲಿ ತೇಜಸ್ವಿಯಾದ ಒಬ್ಬ ಬ್ರಾಹ್ಮಣ ಶ್ರೇಷ್ಠನು ಭಿಕ್ಷೆಗಾಗಿ ಬಂದನು. ದೇವಸ್ವಾಮಿಯ ಸೊಸೆಯರೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಭಿಕ್ಷೆಯನ್ನು ಹಾಕಿದರು. ಅವರಿಗೆಲ್ಲಾ ಆಬ್ರಾಹ್ಮಣನು ದೀರ್ಘಸೌಮಂಗಲ್ಯವಾಗಲಿ ಎಂದು ಆಶೀರ್ವಾದವನ್ನು ಮಾಡಿದನು. ತರುವಾಯ ಗುಣಪತಿಯನ್ನು ತಾಯಿಯು ಕಳುಹಿಸಲು ಬಂದು ನಮಸ್ಕರಿಸಿ ಭಿಕ್ಷೆಯನ್ನು ಹಾಕಿದಳು. ಆಗ ಬ್ರಾಹ್ಮಣನು ಧರ್ಮವತಿಯಾಗು ಎಂದು ಆಶೀರ್ವದಿಸಿದನು. ಗುಣವತಿಯು ತಾಯಿಯಿದ್ದಲ್ಲಿಗೆ ಹೋಗಿ ಆಬ್ರಾಹ್ಮಣನು ಮಾಡಿದ ಆಶೀರ್ವಾದವನ್ನು ತಿಳಿಸಿದಳು. ಅದನ್ನು ಕೇಳಿ ತಾಯಿಯು ಮಗಳ ಕೈಯಲ್ಲಿ ಹಿಡಿದುಕೊಂಡು ಕರೆದುಕೊಂಡು ಬಂದು ಆಬ್ರಾಹ್ಮಣನಿಗೆ ಪುನಃ ನಮಸ್ಕಾರ ಮಾಡಿಸಿದಳು. ಆಗಲೂ ಬ್ರಾಹ್ಮಣನು ಧರ್ಮವತಿಯಾಗು ಎಂದು ಆಶೀವಾದವನ್ನು ಮಾಡಿದನು. ಅದನ್ನು ಕೇಳಿದ ಧನವತಿಯು 'ಪೂಜ್ಯರೇ! ನನ್ನ ಸೊಸೆಯರು ನಮಸ್ಕರಿಸುವಾಗ ಸುಮಂಗಲೆಯರಾಗುವಂತೆ ಆಶೀರ್ವದಿಸಿ ನನ್ನ ಮಗಳಿಗೆ ಮಾತ್ರ ಧರ್ಮವತಿಯಾಗು ಎಂದು ಆಶೀರ್ವದಿಸಲು ಕಾರಣವೇನು' ಎಂದು ಕೇಳಿದಳು.

ಅದಕ್ಕೆ ಬ್ರಾಹ್ಮಣನು 'ಅಮ್ಮ ಧನವತಿ! ನೀನು ಧನ್ಯಳಾಗಿರುವಿ. ನಾನು ಹೇಳುವ ಮಾತನ್ನು ಕೇಳು. ನಿನ್ನ ಮಗಳು ಮದುವೆಯ ದಿವಸದಲ್ಲೇ ಗಂಡನನ್ನು ಕಳೆದುಕೊಳ್ಳುವಳು. ಆದುದರಿಂದ ಧರ್ಮವನ್ನು ಮಾಡುತ್ತಾ ಇರಬೇಕು. ಅದಕ್ಕಾಗಿ ನಾನು ಹಾಗೆ ಆಶೀರ್ವದಿಸಿದೆನು' ಎಂದನು. ಈ ಮಾತನ್ನು ಕೇಳಿ ಧನವತಿಯು ತುಂಬಾ ದುಃಖವುಳ್ಳವಳಾಗಿ ಆ ಬ್ರಾಹ್ಮಣನಿಗೆ ಪುನಃ ನಮಸ್ಕಾರ ಮಾಡುವವಳಾಗಿ

ನನ್ನ ಮಗಳಿಗೆ ವೈಧವ್ಯವು ಬರಲಿಕ್ಕೆ ಕಾರಣವೇನೆಂದು ತಿಳಿಸಬೇಕು ಎಂದು ಪ್ರಾರ್ಥಿಸಿದಳು.

ಅದಕ್ಕೆ ಬ್ರಾಹ್ಮಣನು ಪೂರ್ವಜನ್ಮದಲ್ಲಿ ಇವಳು ಸೋಮವಾರ ಅಮಾವಾಸ್ಯಾ ವ್ರತವನ್ನು ಮಾಡುವೆನೆಂದು ಸಂಕಲ್ಪಮಾಡಿ ಆವ್ರತವನ್ನು ಮಾಡಲಿಲ್ಲ. ಭಗವಂತನಿಗೆ ಅವಮಾನ ಮಾಡಿದಳು. ಆ ಪಾಪದಿಂದ ಇವಳು ವೈಧವ್ಯವನ್ನು ಹೊಂದುವಳು. ಅದನ್ನು ತಿಳಿದುಕೊಂಡೇ ನಾನು ಹಾಗೆ ಆಶೀರ್ವಾದವನ್ನು ಮಾಡಿದೆನು. ಆ ದೊಡ್ಡ ವ್ರತವನ್ನು ಸಂಕಲ್ಪಮಾಡಿದ ಮಾತ್ರದಲ್ಲೇ ಇಂತಹ ದೊಡ್ಡ ವಂಶದಲ್ಲಿ ಹುಟ್ಟಿದಳು. ಅದನ್ನು ಮಾಡದೆ ಇದ್ದಕಾರಣ ವೈಧವ್ಯವುಂಟಾಗುವುದು' ಎಂದು ಹೇಳಿದನು.

ಆಗ ಧನವತಿಯು ನನ್ನ ಮಗಳ ವೈಧವ್ಯವನ್ನು ಪರಿಹರಿಸುವ ಉಪಾಯವಿದ್ದರೆ ತಿಳಿಸಬೇಕೆಂದು ಪ್ರಾರ್ಥಿಸಿದಳು. ಅದಕ್ಕೆ ಬ್ರಾಹ್ಮಣನು ಇವರ ಮದುವೆಯ ಸಮಯದಲ್ಲಿ ಸೋಮೆಯು ಹತ್ತಿರ ಇದ್ದುಕೊಂಡು ಪುಣ್ಯವನ್ನು ಕೊಡುವುದಾದರೆ ನಿನ್ನ ಮಗಳ ವೈಧವ್ಯ ಪರಿಹಾರವಾಗುವುದು ಎಂದನು. ಧನವತಿಯು ಸೋಮೆಯು ಯಾರು? ಯಾವ ಜಾತಿಯವಳು? ಎಲ್ಲಿ ಇರುವಳು? ಅದನ್ನು ಬೇಗನೇ ತಿಳಿಸಿರಿ ಎಂದು ಕೇಳಿದಳು. ಆ ಬ್ರಾಹ್ಮಣನು ಸೋಮೆಯು ಅಗಸರ ಜಾತಿಯವಳು. ಅವಳು ಸಿಂಧುದ್ವೀಪದಲ್ಲಿ ಸಿಂಹಲಪುರದಲ್ಲಿ ಇರುವಳು. ಅವಳು ನಿನ್ನ ಮಗಳ ಮದುವೆಯ ಸಮಯದಲ್ಲಿ ಬಂದಿದ್ದರೆ ಅವಳ ಪುಣ್ಯಪ್ರಭಾವದಿಂದ ನಿನ್ನ ಮಗಳಿಗೆ ವೈಧವ್ಯವು ಬರಲಾರದು ಎಂದು ಹೇಳಿ ಬೇರೆ ಒಂದು ಮನೆಗೆ ಭಿಕ್ಷೆಗೆ ಹೋದನು.

ತರುವಾಯ ಧನವತಿಯು ತನ್ನ ಮಕ್ಕಳನ್ನೆಲ್ಲಾ ಕರೆದು ಎಲ್ಲಾ ವಿಷಯವನ್ನು ತಿಳಿಸಿ ನಿಮ್ಮ ತಂಗಿಯ ವೈಧವ್ಯವನ್ನು ಪರಿಹರಿಸುವುದಕ್ಕಾಗಿ ಸೋಮೆಯನ್ನು ಸಂತೋಷ ಪಡಿಸಿ ಕರೆದು ತನ್ನಿರಿ ಎಂದು ಹೇಳಿದಳು. ಆಗ ಪಿತೃಭಕ್ತನಾದ ಶಿವಸ್ವಾಮೀ ಎಂಬ ಮಗನು ಸೋಮೆಯು ಇರುವ ಸ್ಥಳವನ್ನು ತಿಳಿದುಕೊಂಡು ನಿನ್ನ ಅಪ್ಪಣೆಯಂತೆ ತಂಗಿಗೋಸ್ಕರ ಅವಳನ್ನು ಕರತರುವೆನು ಎಂದು ಹೇಳಿ ತಂಗಿಯನ್ನು ಕರೆದುಕೊಂಡು ಹೋದನು. ಬಹುದೂರ ತಂಗಿಯನ್ನು ಹೆಗಲಲ್ಲಿ ಹೊತ್ತುಕೊಂಡು ಹೋದನು. ಸಮುದ್ರತೀರಕ್ಕೆ ಹೋಗಿ ಸೇರಿದನು. ಅಲ್ಲಿ ಕೆಲವು ಸಿಂಹಲದ್ವೀಪದಲ್ಲಿ ವಾಸಮಾಡುತ್ತಿದ್ದ ವ್ಯಾಪಾರಿಗಳನ್ನು ನೋಡಿ ಅವರೊಡನೆ ಸಿಂಹಲದ್ವೀಪದ ವಿಷಯವಾಗಿ ಕೇಳಿದನು. ಅದಕ್ಕೆ ಅವರು ನಿನಗೆ ಅಲ್ಲಿ ಏನು ಕಾರ್ಯವಿದೆ? ಅದನ್ನು ತಿಳಿಸಿದರೆ ನಿನ್ನನ್ನು ಅಲ್ಲಿಗೆ ನಾವು ಕರೆದುಕೊಂಡೇ ಹೋಗುವೆವು ಎಂದರು. ಅದಕ್ಕೆ ಶಿವಸ್ವಾಮಿಯು ಅಲ್ಲಿ ಲೋಕಪ್ರಸಿದ್ಧಳಾದ ಧನ್ಯಳಾದ ಸೋಮಾ ಎಂಬ

ಆಗಸಸ್ತ್ರೀಯು ಇರುವಳು. ನನ್ನ ತಂಗಿಯ ಸೌಭಾಗ್ಯಕ್ಕಾಗಿ ಅವಳನ್ನು ನೋಡಲು ಬಯಸುವೆನು ಎಂದು ಹೇಳಿದನು. ಆದಕ್ಕೆ ವ್ಯಾಪಾರಿಗಳು ಬ್ರಾಹ್ಮಣ! ಆಗಸವಂಶದವಳಾದ ಸೋಮೆಯು ಅಲ್ಲಿ ಪ್ರಸಿದ್ಧಳಾಗಿರುವಳು. ಅವಳ ಪ್ರಭಾವದಿಂದ ಆ ಊರಿನಲ್ಲೇ ಜನರಿಗೆಲ್ಲಾ ಅಪಮೃತ್ಯು ಭಯವು ಇರುವುದಿಲ್ಲ. ಆದುದರಿಂದ ನೀನು ಈಗ ನಿನ್ನ ತಂಗಿಯೊಡನೆ ನಮ್ಮ ಕಪ್ಪಲನ್ನು ಹತ್ತಿ ಸಮುದ್ರವನ್ನು ದಾಟಿ ಬೇಗನೇ ಅವಳನ್ನು ನೋಡುವೆ ಎಂದು ಹೇಳಿದಳು. ಹಾಗೆಯೇ ಶಿವಸ್ವಾಮಿಯು ತಂಗಿಯೊಡನೆ ಕಪ್ಪಲನ್ನು ಏರಿ ಬೇಗನೆ ಸಿಂಹಲದ್ವೀಪಕ್ಕೆ ಹೋಗಿ ಸೇರಿದನು. ಸಮುದ್ರತೀರವನ್ನು ಹೊಂದಿ ವ್ಯಾಪಾರಿಗಳಿಂದ ಅತ್ಯಂತ ಸತ್ಕೃತನಾಗಿ ಸೋಮೆಯ ಮನೆಯನ್ನು ಹುಡುಕುತ್ತಾ ಹೋದನು. ಊರಜನರಲ್ಲಿ ವಿಚಾರಿಸಿ ಅವಳ ಮನೆಯನ್ನು ತಿಳಿದುಕೊಂಡು ಅವಳನ್ನು ಸಂತೋಷಪಡಿಸುವ ಉಪಾಯವನ್ನೂ ಊರಿಗೆ ಕರೆದುಕೊಂಡು ಹೋಗುವ ಉಪಾಯವನ್ನೂ ಯೋಚಿಸಿ ಸಂತೋಷ ಪಟ್ಟನು. ಬೆಳಿಗ್ಗೆ ನಾಲ್ಕೂವರೆ ಗಂಟೆಗೆ ಎದ್ದು ತಂಗಿಯನ್ನು ಕರೆದುಕೊಂಡು ಸೋಮೆಯ ಮನೆಗೆ ಎಲ್ಲರೂ ಏಳುವ ಮೊದಲೇ ಮನೆಯ ಎದುರಿಗೆಲ್ಲಾ ನೀರನ್ನು ಹಾಕಿ ರಂಗೋಲೆಹಾಕಿದನು. ಮರಗಳಿಗೆಲ್ಲಾ ನೀರು ಹಾಕಿದನು. ಹೀಗೆಯೇ ಬಹಳದಿವಸ ಮಾಡುತ್ತಾ ಬಂದನು. ಒಂದುದಿನ ಸೋಮೆಯು ತನ್ನ ಮನೆಯವ ರೊಡನೆ ಯಾರು ಇಷ್ಟು ಬೇಗ ಮನೆಯ ಎದುರಲ್ಲಿ ನೀರುಹಾಕಿ ರಂಗೋಲೆ ಹಾಕುತ್ತಿರುವುದು ಎಂದು ಕೇಳಿದಳು. ನಾವ್ಯೊಬ್ಬರೂ ಅಲ್ಲ ಎಂದು ಅವರೆಲ್ಲರೂ ಹೇಳಿಬಿಟ್ಟರು. ಆಗ ಸೋಮೆಯು ನಾಳೆ ಒಬ್ಬರಿಗೂ ಕಾಣಿಸದಂತೆ ನೋಡುತ್ತಾ ಇದ್ದರೆ ನೀರು ಹಾಕಿ ರಂಗೋಲೆ ಹಾಕುವವರನ್ನು ಕಂಡು ಹಿಡಿಯಬಹುದು ಎಂದು ನಿಶ್ಚಯಿಸಿ ರಾತ್ರಿಯಲ್ಲಿ ಕಾಣಿಸದಂತೆ ನಿಂತುಕೊಂಡಿದ್ದಳು. ಎಂದಿನಂತೆ ಶಿವಸ್ವಾಮಿಯೂ ಅವನ ತಂಗಿಯೂ ಬಂದು ನೀರು ಹಾಕಿ ರಂಗೋಲೆ ಹಾಕಲಿಕ್ಕೆ ಆರಂಭಿಸಿದರು. ಆಗ ಸೋಮೆಯು ಬ್ರಾಹ್ಮಣರು ತನ್ನ ಮನೆಯ ಅಂಗಳವನ್ನು ಬಳಿಯುವುದನ್ನು ನೋಡಿ ಅವರ ಹತ್ತಿರ ಬಂದು 'ನಾನಿಷ್ಟುವರೆಗೆ ನಿಮ್ಮನ್ನು ನೋಡಿದ್ದೇ ಇಲ್ಲ. ಬ್ರಾಹ್ಮಣರಾದ ನೀವು ಯಾರು? ಯಾವುದಕ್ಕಾಗಿ ನನ್ನ ಮನೆಯ ಅಂಗಳವನ್ನು ಸಾರಿಸುತ್ತಿರಿ? ಎಂದು ಕೇಳಲು ಶಿವಸ್ವಾಮಿಯು ಸರ್ವವೃತ್ತಾಂತವನ್ನು ತಿಳಿಸಿದನು. ಅದನ್ನು ಕೇಳಿ ಸೋಮೆಯು ಬಹಳ ಆಶ್ಚರ್ಯವನ್ನು ಹೊಂದುವವಳಾಗಿ ಮನಸ್ಸಿನಲ್ಲೇ ತನಗೆ ಬಹಳ ಪಾಪವು ಬಂದಿತು ಎಂದು ಯೋಚಿಸಿದಳು. ಬ್ರಾಹ್ಮಣರು ನೀವು ಬಂದು ನನ್ನ ಮನೆಯ ಅಂಗಳವನ್ನು ಸಾರಿಸಿದ್ದರಿಂದ ನಾನು ಅನರ್ಥವನ್ನು

ಹೊಂದಿದೆನು. ನನಗೆ ಬಹಳ ಪಾಪವು ಬಂದಿತು. ನಾನು ನೀಚಜಾತಿಯವಳು. ಅಗಸಜಾತಿಯವಳು. ನನ್ನ ಮನೆಯಲ್ಲಿ ನೀನು ಬ್ರಾಹ್ಮಣನು ಬಂದು ಹೇಗೆ ವಿರುದ್ಧವಾದ ಕಾರ್ಯವನ್ನು ಮಾಡಿದೆ? ಎಂದಳು.

ಅದಕ್ಕೆ ಶಿವಸ್ವಾಮಿಯು 'ಸೋಮೆ! ಇವಳು ನನ್ನ ತಂಗಿಯು. ಇವಳ ಹೆಸರು ಗುಣವಂತಿಯೆಂದು. ಇವಳು ತಂದೆತಾಯಿಗಳಿಗೂ ನಮಗೂ ಪ್ರಾಣಕ್ಕಿಂತಲೂ ಹೆಚ್ಚಿಗೆ ಪ್ರಿಯಳಾಗಿರುವವಳು. ಇವಳಿಗೆ ವೈಧವ್ಯವು ಬರುವುದೆಂದು ನಾವು ಬಹಳ ದುಃಖವುಳ್ಳವರಾಗಿರುವೆವು. ಒಬ್ಬರು ಬ್ರಾಹ್ಮಣರ ಮಾತಿನಿಂದ ಅದಕ್ಕೆ ಪ್ರತೀಕಾರವನ್ನು ತಿಳಿದು ನನ್ನನ್ನು ಇವಳನ್ನೂ ನಿನ್ನ ದಾಸ್ಯಕ್ಕೆ ಕಳುಹಿಸಿರುವರು. ತಂದೆತಾಯಿಗಳಿಗೋಸ್ಕರ ನಿನ್ನ ಅನುಗ್ರಹವಾಗಬೇಕೆಂದು ಹೀಗೆ ಮಾಡುತ್ತಿರುವೆನು ಎಂದನು. ಅದಕ್ಕೆ ಸೋಮೆಯು ಇನ್ನು ಮೇಲೆ ಹೀಗೆ ಮಾಡುವುದು ಬೇಡ. ನಾನು ನಿಮ್ಮ ಮನೆಗೆ ಬರುವೆನು ಎಂದಳು. ತರುವಾಯ ಮನೆಗೆ ಬಂದು ನಾನು ಬರುವವರೆಗೆ ನಮ್ಮ ಊರಿನಲ್ಲೋ ನಮ್ಮ ಮನೆಯಲ್ಲಿಯೋ ಯಾರಾದರೂ ಸತ್ತರೆ ಅವರ ದೇಹವನ್ನು ಹಾಗೆಯೇ ರಕ್ಷಿಸುತ್ತಿರಬೇಕು. ಸುಡಬಾರದು ಎಂದು ಹೇಳಿ ಕಾಂಚೀನಗರಕ್ಕೆ ಹೋದಳು. ತಾನು ಮಾಡಿದ ವ್ರತದ ಪ್ರಭಾವದಿಂದ ಅವರಿಬ್ಬರನ್ನು ಕರೆದುಕೊಂಡು ಆಕಾಶಮಾರ್ಗದಿಂದ ಒಂದೇ ಕ್ಷಣದಲ್ಲಿ ಕಾಂಚೀಪುರಕ್ಕೆ ಬಂದು ಆಕಾಶದಿಂದ ಕೆಳಗೆ ಇಳಿದು ದೇವಸ್ವಾಮಿಯ ಮನೆಗೆ ಬಂದಳು. ಸೋಮೆಯನ್ನು ನೋಡಿ ಧನವತಿಯು ಅತ್ಯಂತ ಉಪಚಾರವನ್ನು ಮಾಡಿದಳು. ಕನ್ಯೆಗೆ ವರವನ್ನು ಹುಡುಕಿಕೊಂಡು ಬರುವುದಕ್ಕಾಗಿ ಮಗನನ್ನು ಕಳುಹಿಸಿದನು. ಮಗನು ಎಂಟು ದಿವಸಗಳಲ್ಲೇ ಕನ್ಯೆಗೆ ಯೋಗ್ಯವರವನ್ನು ಕರೆದುಕೊಂಡು ಬಂದನು. ದೇವಸ್ವಾಮಿಯು ವರನನ್ನು ನೋಡಿ ಸಂತೋಷದಿಂದ ಒಳ್ಳೇ ಮುಹೂರ್ತದಲ್ಲಿ ಮಗಳಿಗೆ ಮದುವೆ ಮಾಡಿದನು.

ಮದುವೆಯ ಕಾಲದಲ್ಲಿ ಹೋಮವನ್ನು ಮಾಡಿ ಸಪ್ತಪದಿಯಾಗುತ್ತಿರಲು ರುದ್ರ ಎಂಬ ಹೆಸರುಳ್ಳ ಆ ವರನು ಹಾವು ಕಚ್ಚಿ ಸತ್ತುಹೋದನು. ಬಂಧುಗಳೆಲ್ಲರೂ ವರನು ಮೃತನಾದದ್ದನ್ನು ನೋಡಿ ಅಳಲಿಕ್ಕೆ ಆರಂಭಿಸಿದರು. ಮದುವೆಯ ಮನೆಯಲ್ಲಿ ದೊಡ್ಡ ಅಳುವ ಧ್ವನಿಯುಂಟಾಯಿತು. ತರುವಾಯ ಧನವತಿಯು ಕಣ್ಣೀರು ಸುರಿಸುತ್ತಾ ಸೋಮೆಯೊಡನೆ ಸೋಮೇ! ಈಗೇನು ಮಾಡಲಿ? ಈ ಬ್ರಾಹ್ಮಣನು ಮೃತನಾಗಿರುವನಲ್ಲಾ ಎಂದಳು. ಆಗ ಸೋಮೆಯು ತಾನು ಮಾಡಿರುವ ವ್ರತದಿಂದ ಉಂಟಾಗಿರುವ ಅಪಮೃತ್ಯು ಪರಿಹಾರಕವಾದ ಪುಣ್ಯವನ್ನು ಆ ವರನಿಗೆ ಕೊಟ್ಟಳು.

ಆಗಸಸ್ತ್ರೀಯು ಇರುವಳು. ನನ್ನ ತಂಗಿಯ ಸೌಭಾಗ್ಯಕ್ಕಾಗಿ ಅವಳನ್ನು ನೋಡಲು ಬಯಸುವೆನು ಎಂದು ಹೇಳಿದನು. ಅದಕ್ಕೆ ವ್ಯಾಪಾರಿಗಳು ಬ್ರಾಹ್ಮಣ! ಆಗಸವಂಶದವಳಾದ ಸೋಮೆಯು ಅಲ್ಲಿ ಪ್ರಸಿದ್ಧಳಾಗಿರುವಳು. ಅವಳ ಪ್ರಭಾವದಿಂದ ಆ ಊರಿನಲ್ಲೇ ಜನರಿಗೆಲ್ಲಾ ಅಪಮೃತ್ಯು ಭಯವು ಇರುವುದಿಲ್ಲ. ಆದುದರಿಂದ ನೀನು ಈಗ ನಿನ್ನ ತಂಗಿಯೊಡನೆ ನಮ್ಮ ಕಪ್ಪಲನ್ನು ಹತ್ತಿ ಸಮುದ್ರವನ್ನು ದಾಟಿ ಬೇಗನೇ ಅವಳನ್ನು ನೋಡುವೆ ಎಂದು ಹೇಳಿದಳು. ಹಾಗೆಯೇ ಶಿವಸ್ವಾಮಿಯು ತಂಗಿಯೊಡನೆ ಕಪ್ಪಲನ್ನು ಏರಿ ಬೇಗನೆ ಸಿಂಹಲದ್ವೀಪಕ್ಕೆ ಹೋಗಿ ಸೇರಿದನು. ಸಮುದ್ರತೀರವನ್ನು ಹೊಂದಿ ವ್ಯಾಪಾರಿಗಳಿಂದ ಅತ್ಯಂತ ಸತ್ಕೃತನಾಗಿ ಸೋಮೆಯ ಮನೆಯನ್ನು ಹುಡುಕುತ್ತಾ ಹೋದನು. ಊರಜನರಲ್ಲಿ ವಿಚಾರಿಸಿ ಅವಳ ಮನೆಯನ್ನು ತಿಳಿದುಕೊಂಡು ಅವಳನ್ನು ಸಂತೋಷಪಡಿಸುವ ಉಪಾಯವನ್ನೂ ಊರಿಗೆ ಕರೆದುಕೊಂಡು ಹೋಗುವ ಉಪಾಯವನ್ನೂ ಯೋಚಿಸಿ ಸಂತೋಷ ಪಟ್ಟನು. ಬೆಳಿಗ್ಗೆ ನಾಲ್ಕೂವರೆ ಗಂಟೆಗೆ ಎದ್ದು ತಂಗಿಯನ್ನು ಕರೆದುಕೊಂಡು ಸೋಮೆಯ ಮನೆಗೆ ಎಲ್ಲರೂ ಏಳುವ ಮೊದಲೇ ಮನೆಯ ಎದುರಿಗೆಲ್ಲಾ ನೀರನ್ನು ಹಾಕಿ ರಂಗೋಲೆಹಾಕಿದನು. ಮರಗಳಿಗೆಲ್ಲಾ ನೀರು ಹಾಕಿದನು. ಹೀಗೆಯೇ ಬಹಳದಿವಸ ಮಾಡುತ್ತಾ ಬಂದನು. ಒಂದುದಿನ ಸೋಮೆಯು ತನ್ನ ಮನೆಯವ ರೊಡನೆ ಯಾರು ಇಷ್ಟು ಬೇಗ ಮನೆಯ ಎದುರಲ್ಲಿ ನೀರುಹಾಕಿ ರಂಗೋಲೆ ಹಾಕುತ್ತಿರುವುದು ಎಂದು ಕೇಳಿದಳು. ನಾವ್ಯೊಬ್ಬರೂ ಅಲ್ಲ ಎಂದು ಅವರೆಲ್ಲರೂ ಹೇಳಿಬಿಟ್ಟರು. ಆಗ ಸೋಮೆಯು ನಾಳೆ ಒಬ್ಬರಿಗೂ ಕಾಣಿಸದಂತೆ ನೋಡುತ್ತಾ ಇದ್ದರೆ ನೀರು ಹಾಕಿ ರಂಗೋಲೆ ಹಾಕುವವರನ್ನು ಕಂಡು ಹಿಡಿಯಬಹುದು ಎಂದು ನಿಶ್ಚಯಿಸಿ ರಾತ್ರಿಯಲ್ಲಿ ಕಾಣಿಸದಂತೆ ನಿಂತುಕೊಂಡಿದ್ದಳು. ಎಂದಿನಂತೆ ಶಿವಸ್ವಾಮಿಯೂ ಅವನ ತಂಗಿಯೂ ಬಂದು ನೀರು ಹಾಕಿ ರಂಗೋಲೆ ಹಾಕಲಿಕ್ಕೆ ಆರಂಭಿಸಿದರು. ಆಗ ಸೋಮೆಯು ಬ್ರಾಹ್ಮಣರು ತನ್ನ ಮನೆಯ ಅಂಗಳವನ್ನು ಬಳಿಯುವುದನ್ನು ನೋಡಿ ಅವರ ಹತ್ತಿರ ಬಂದು 'ನಾನಿಷ್ಟುವರೆಗೆ ನಿಮ್ಮನ್ನು ನೋಡಿದ್ದೇ ಇಲ್ಲ. ಬ್ರಾಹ್ಮಣರಾದ ನೀವು ಯಾರು? ಯಾವುದಕ್ಕಾಗಿ ನನ್ನ ಮನೆಯ ಅಂಗಳವನ್ನು ಸಾರಿಸುತ್ತಿರಿ? ಎಂದು ಕೇಳಲು ಶಿವಸ್ವಾಮಿಯು ಸರ್ವವೃತ್ತಾಂತವನ್ನು ತಿಳಿಸಿದನು. ಅದನ್ನು ಕೇಳಿ ಸೋಮೆಯು ಬಹಳ ಆಶ್ಚರ್ಯವನ್ನು ಹೊಂದುವವಳಾಗಿ ಮನಸ್ಸಿನಲ್ಲೇ ತನಗೆ ಬಹಳ ಪಾಪವು ಬಂದಿತು ಎಂದು ಯೋಚಿಸಿದಳು. ಬ್ರಾಹ್ಮಣರು ನೀವು ಬಂದು ನನ್ನ ಮನೆಯ ಅಂಗಳವನ್ನು ಸಾರಿಸಿದ್ದರಿಂದ ನಾನು ಅನರ್ಥವನ್ನು

ಹೊಂದಿದೆನು. ನನಗೆ ಬಹಳ ಪಾಪವು ಬಂದಿತು. ನಾನು ನೀಚಜಾತಿಯವಳು. ಅಗಸಜಾತಿಯವಳು. ನನ್ನ ಮನೆಯಲ್ಲಿ ನೀನು ಬ್ರಾಹ್ಮಣನು ಬಂದು ಹೇಗೆ ವಿರುದ್ಧವಾದ ಕಾರ್ಯವನ್ನು ಮಾಡಿದೆ? ಎಂದಳು.

ಅದಕ್ಕೆ ಶಿವಸ್ವಾಮಿಯು 'ಸೋಮೆ! ಇವಳು ನನ್ನ ತಂಗಿಯು. ಇವಳ ಹೆಸರು ಗುಣವಂತಿಯೆಂದು. ಇವಳು ತಂದೆತಾಯಿಗಳಿಗೂ ನಮಗೂ ಪ್ರಾಣಕ್ಕಿಂತಲೂ ಹೆಚ್ಚಿಗೆ ಪ್ರಿಯಳಾಗಿರುವವಳು. ಇವಳಿಗೆ ವೈಧವ್ಯವು ಬರುವುದೆಂದು ನಾವು ಬಹಳ ದುಃಖವುಳ್ಳವರಾಗಿರುವೆವು. ಒಬ್ಬರು ಬ್ರಾಹ್ಮಣರ ಮಾತಿನಿಂದ ಅದಕ್ಕೆ ಪ್ರತೀಕಾರವನ್ನು ತಿಳಿದು ನನ್ನನ್ನು ಇವಳನ್ನೂ ನಿನ್ನ ದಾಸ್ಯಕ್ಕೆ ಕಳುಹಿಸಿರುವರು. ತಂದೆತಾಯಿಗಳಿಗೋಸ್ಕರ ನಿನ್ನ ಅನುಗ್ರಹವಾಗಬೇಕೆಂದು ಹೀಗೆ ಮಾಡುತ್ತಿರುವೆನು ಎಂದನು. ಅದಕ್ಕೆ ಸೋಮೆಯು ಇನ್ನು ಮೇಲೆ ಹೀಗೆ ಮಾಡುವುದು ಬೇಡ. ನಾನು ನಿಮ್ಮ ಮನೆಗೆ ಬರುವೆನು ಎಂದಳು. ತರುವಾಯ ಮನೆಗೆ ಬಂದು ನಾನು ಬರುವವರೆಗೆ ನಮ್ಮ ಊರಿನಲ್ಲೋ ನಮ್ಮ ಮನೆಯಲ್ಲಿಯೋ ಯಾರಾದರೂ ಸತ್ತರೆ ಅವರ ದೇಹವನ್ನು ಹಾಗೆಯೇ ರಕ್ಷಿಸುತ್ತಿರಬೇಕು. ಸುಡಬಾರದು ಎಂದು ಹೇಳಿ ಕಾಂಚೀನಗರಕ್ಕೆ ಹೋದಳು. ತಾನು ಮಾಡಿದ ವ್ರತದ ಪ್ರಭಾವದಿಂದ ಅವರಿಬ್ಬರನ್ನು ಕರೆದುಕೊಂಡು ಆಕಾಶಮಾರ್ಗದಿಂದ ಒಂದೇ ಕ್ಷಣದಲ್ಲಿ ಕಾಂಚೀಪುರಕ್ಕೆ ಬಂದು ಆಕಾಶದಿಂದ ಕೆಳಗೆ ಇಳಿದು ದೇವಸ್ವಾಮಿಯ ಮನೆಗೆ ಬಂದಳು. ಸೋಮೆಯನ್ನು ನೋಡಿ ಧನವತಿಯು ಅತ್ಯಂತ ಉಪಚಾರವನ್ನು ಮಾಡಿದಳು. ಕನ್ಯೆಗೆ ವರವನ್ನು ಹುಡುಕಿಕೊಂಡು ಬರುವುದಕ್ಕಾಗಿ ಮಗನನ್ನು ಕಳುಹಿಸಿದನು. ಮಗನು ಎಂಟು ದಿವಸಗಳಲ್ಲೇ ಕನ್ಯೆಗೆ ಯೋಗ್ಯವರವನ್ನು ಕರೆದುಕೊಂಡು ಬಂದನು. ದೇವಸ್ವಾಮಿಯು ವರನನ್ನು ನೋಡಿ ಸಂತೋಷದಿಂದ ಒಳ್ಳೇ ಮುಹೂರ್ತದಲ್ಲಿ ಮಗಳಿಗೆ ಮದುವೆ ಮಾಡಿದನು.

ಮದುವೆಯ ಕಾಲದಲ್ಲಿ ಹೋಮವನ್ನು ಮಾಡಿ ಸಪ್ತಪದಿಯಾಗುತ್ತಿರಲು ರುದ್ರ ಎಂಬ ಹೆಸರುಳ್ಳ ಆ ವರನು ಹಾವು ಕಚ್ಚಿ ಸತ್ತುಹೋದನು. ಬಂಧುಗಳೆಲ್ಲರೂ ವರನು ಮೃತನಾದದ್ದನ್ನು ನೋಡಿ ಅಳಲಿಕ್ಕೆ ಆರಂಭಿಸಿದರು. ಮದುವೆಯ ಮನೆಯಲ್ಲಿ ದೊಡ್ಡ ಅಳುವ ಧ್ವನಿಯುಂಟಾಯಿತು. ತರುವಾಯ ಧನವತಿಯು ಕಣ್ಣೀರು ಸುರಿಸುತ್ತಾ ಸೋಮೆಯೊಡನೆ ಸೋಮೇ! ಈಗೇನು ಮಾಡಲಿ? ಈ ಬ್ರಾಹ್ಮಣನು ಮೃತನಾಗಿರುವನಲ್ಲಾ ಎಂದಳು. ಆಗ ಸೋಮೆಯು ತಾನು ಮಾಡಿರುವ ವ್ರತದಿಂದ ಉಂಟಾಗಿರುವ ಅಪಮೃತ್ಯು ಪರಿಹಾರಕವಾದ ಪುಣ್ಯವನ್ನು ಆ ವರನಿಗೆ ಕೊಟ್ಟಳು.

ಇದರಿಂದ ವರನು ನಿದ್ದೆ ಮಾಡಿದವನು ಎದ್ದು ನಿಲ್ಲುವಂತೆ ಕಣ್ಣು ತೆರೆದು ಎದ್ದು ನಿಂತನು. ತರುವಾಯ ಎಲ್ಲರೂ ಮದುವೆಯನ್ನು ಮುಗಿಸಿ ಸಂತೋಷದಿಂದ ಹೊರಟುಹೋದರು. ಸೋಮೆಗೆ ಬೇಕಾದ ಹಣ ರತ್ನ ವಸ್ತ್ರಗಳನ್ನು ಕೊಟ್ಟು ಸಂತೋಷಪಡಿಸಿ ಅವಳು ಮಾಡುತ್ತಿದ್ದ ವ್ರತವನ್ನು ಎಲ್ಲರೂ ಮಾಡಿದರು. ಈರೀತಿಯಾಗಿ ಆ ಸೋಮೆಯು ವರನನ್ನು ಬದುಕಿಸಿ ಹೋಗಿಬರುತ್ತೇನೆ ಎಂದು ಹೇಳಿ ತನ್ನ ಮನೆಗೆ ಹೋದಳು. ಅವಳು ಹೋಗುವಾಗ ದಾರಿಯಲ್ಲಿ ಸೋಮವಾರವು ಬಂದಿತು. ಆಗ ಮೃತಸಂಜೀವಿನೀದೇವತೆಯು ಒಂದು ಮುದುಕಿಯ ರೂಪವನ್ನು ಧರಿಸಿಕೊಂಡು ದೊಡ್ಡ ಹತ್ತಿಯ ಮೂಟೆಯನ್ನು ಹೊತ್ತುಕೊಂಡು ಈ ಭಾರದಿಂದ ತುಂಬಾ ದುಃಖವುಳ್ಳವಳಾಗಿದ್ದೇನೆ. ಭಾರವನ್ನು ಕೆಳಗೆ ಇಳಿಸು ಎಂದಳು. ಅದಕ್ಕೆ ಸೋಮೆಯು ನಾನು ಭಗವಂತನಿಗೆ ಪ್ರಿಯವಾದ ಒಂದು ವ್ರತವನ್ನು ಮಾಡುತ್ತಿರುವೆನು. ಆದುದರಿಂದ ಈದಿನ ಹತ್ತಿಯನ್ನು ಮುಟ್ಟಲಾರೆನು ಎಂದು ಹೇಳಿದಳು. ಆಗ ಆ ಮುದುಕಿಯು ನಗುತ್ತಾ ನೀನು ವ್ರತವನ್ನು ಮಾಡಿ ಏನು ಉಪಯೋಗ? ಇನ್ನೊಬ್ಬರ ಪ್ರಾಣರಕ್ಷಣೆಯನ್ನು ಮಾಡಲಿಕ್ಕೆ ಮನಸ್ಸು ಕರಗುವುದಿಲ್ಲ ಎಂದಳು. ಅದಕ್ಕೆ ಸೋಮೆಯು ವೃದ್ಧಳೇ! ಹಾಗೆ ಹೇಳಬೇಡ. ಭಗವಂತನು ದಯಾಮಯನು ಎಂದು ಹೇಳಿ ಹತ್ತಿಯ ಮೂಟೆಯನ್ನು ಮುಟ್ಟಿದಳು. ಈ ಸಮಯದಲ್ಲಿ ಸೋಮೆಯ ಮನೆಯಲ್ಲಿ ಮೊದಲಿನ ಮಗನು ಮೃತನಾದನು. ಆಮೇಲೆ ಅವಳ ಗಂಡನು ಸತ್ತನು. ತರುವಾಯ ಅಳಿಯನೂ ಮರಣವನ್ನು ಹೊಂದಿದನು. ಸೊಸೆಯಂದಿರು ಅವರ ದೇಹವನ್ನೆಲ್ಲಾ ಹಾಗೆಯೇ ರಕ್ಷಿಸುತ್ತಾ ಇದ್ದರು. ಮನೆಯಲ್ಲಿ ಸಂಪತ್ತೆಲ್ಲವೂ ನಷ್ಟವಾಯಿತು.

ಸೋಮೆಯು ಮನೆಯಲ್ಲಿ ಬರುತ್ತಿರಲು ಸೋಮವಾರ ಅಮಾವಾಸ್ಯೆಯು ಬಂದಿತು. ದಾರಿಯಲ್ಲಿ ನದೀತೀರದಲ್ಲಿ ಅಶ್ವತ್ಥಮರವನ್ನು ನೋಡಿ ಸೋಮೆಯು ಭಗವಂತನನ್ನು ಸ್ಮರಿಸುತ್ತಾ ನದಿಯಲ್ಲಿ ಸ್ನಾನಮಾಡಿ ಭಗವಂತನನ್ನು ಪೂಜಿಸಿ ಸಕ್ಕರೆಯನ್ನು ಹಾಕಿ ನೂರ ಎಂಟು ಪ್ರದಕ್ಷಿಣೆಗಳನ್ನು ಬಂದಳು. ಆ ವ್ರತದ ಪ್ರಭಾವದಿಂದ ಸತ್ತುಹೋಗಿದ್ದ ಅವಳ ಗಂಡನೂ ಅಳಿಯನೂ ಮಗನೂ ಬದುಕಿದರು. ಹಣವೆಲ್ಲವೂ ಬಂದು ಸೇರಿತು. ಮನೆಯಲ್ಲಿರುವವರೆಲ್ಲರೂ ಆರೋಗ್ಯದಿಂದ ಇದ್ದರು. ಸೋಮೆಯು ಮನೆಗೆ ಹೋಗಿ ಸೇರಿದಳು. ಆಗ ಅವಳ ಸೊಸೆಯರು ಇಲ್ಲಿ ಸತ್ತುಹೋಗಿದ್ದ ನಿಮ್ಮ ಪತಿ ಅಳಿಯ ಮಕ್ಕಳು ಪುನಃ ಹೇಗೆ ಬದುಕಿದರು? ಈ ಆಶ್ಚರ್ಯವನ್ನು ನಮಗೆ ಹೇಳಬೇಕು ಎಂದು ಕೇಳಿಕೊಂಡರು. ಆಗ ಸೋಮೆಯು

ಸೋಮವಾರ ಅಮಾವಾಸ್ಯಾ ವ್ರತದ ಪ್ರಭಾವವೆಂದು ತಿಳಿಸಿದಳು. ಅನಂತರದಲ್ಲಿ ಸೋಮೆಯು ಆ ವ್ರತದ ಪ್ರಭಾವದಿಂದ ಪತಿಪುತ್ರಾದಿಗಳಿಂದ ಕೂಡಿಕೊಂಡು ಭೋಗಗಳನ್ನು ಅನುಭವಿಸಿ ಕೊನೆಗೆ ವೈಕುಂಠಲೋಕಕ್ಕೆ ಹೋದಳು.



## ತ್ರಿಸ್ಪೃಶಾವ್ರತವು [1]

ಪ್ರಾಚೀನ ಸರಸ್ವತೀತೀರದಲ್ಲಿ ಭಗವಂತನು ಗಂಗಾದೇವಿಗೆ ತ್ರಿಸ್ಪೃಶಾವ್ರತವನ್ನು ಹೇಳಿದನು. ಗಂಗಾದೇವಿಯು ಪ್ರಾಚೀಮಾಧವ ಎಂದು ಹೆಸರುಳ್ಳ ಭಗವಂತ ನೊಡನೆ 'ಭಗವಂತನೇ! ಕಲಿಕಾಲದಲ್ಲಿ ಬ್ರಹ್ಮಹತ್ಯಾದಿ ಬಹುಪಾಪಗಳನ್ನು ಮಾಡಿರುವ ಜನರು ಬಂದು ನನ್ನ ಜಲದಲ್ಲಿ ಸ್ನಾನ ಮಾಡುವರು. ಅವರ ನೂರಾರು ಪಾಪಗಳು ನನಗೆ ಬಂದು ಸೇರುವುವು. ನನಗೆ ಆ ಪಾಪಗಳ ಪರಿಹಾರವು ಹೇಗೆ ಆಗುವುದು?' ಎಂದು ಕೇಳಿದಳು.

ಅದಕ್ಕೆ ಪ್ರಾಚೀಮಾಧವನು 'ಮಗಳೇ! ಅಳಬೇಡ. ನಿನಗೆ ಪರಿಹಾರವನ್ನು ಹೇಳುವೆನು. ಶ್ಯಾಮವಟವು ನನ್ನ ಸ್ಥಾನವು. ನನ್ನ ಮುಂಭಾಗದಲ್ಲಿ ಬ್ರಹ್ಮಪುತ್ರಿಯಾದ ಪ್ರಾಚೀನಸರಸ್ವತೀ ನದಿಯು ಹರಿಯುತ್ತಿರುವಳು. ಅಲ್ಲಿ ನೀನು ನಿತ್ಯವೂ ಸ್ನಾನ ಮಾಡು. ಅದರಿಂದ ಪವಿತ್ರಳಾಗುವಿ. ಅಲ್ಲಿ ನಾನು ನೂರುಕೋಟಿ ತೀರ್ಥ ಗಳಿಂದಲೂ ದೇವತೆಗಳಿಂದಲೂ ಸಹಿತನಾಗಿ ವಾಸಮಾಡುವೆನು. ಪ್ರಾಚೀನ ಸರಸ್ವತೀಜಲದಲ್ಲಿ ಯಾವಾಗಲೂ ನನ್ನ ಆಜ್ಞೆಯಿಂದ ಸಾವಿರಕೋಟಿ ತೀರ್ಥಾಭಿ ಮಾನಿ ದೇವತೆಗಳು ಇರುವರು. ಬ್ರಹ್ಮಹತ್ಯಾ ಸುರಾಪಾನ ಗೋವಧ ವೃಷಲೀವಧ ಬ್ರಾಹ್ಮಣರ ದೇವರ ಸೊತ್ತನ್ನು ಅಪಹರಿಸೋಣ, ತಂದೆತಾಯಿಗಳನ್ನು ಪೂಜಿಸದೆ ಇರೋಣ, ವಿಕ್ರಯ, ಗುರುದ್ರೋಹ, ಅಭಕ್ಷ್ಯ ಭಕ್ಷಣ ಇತ್ಯಾದಿಗಳಿಂದ ಉಂಟಾದ ಪಾಪವೆಲ್ಲವೂ ಇಲ್ಲಿ ಸ್ನಾನ ಮಾಡುವುದರಿಂದ ಪರಿಹೃತವಾಗುವುದು' ಎಂದು ಹೇಳಿದನು.

ಆಗ ಗಂಗಾದೇವಿಯು 'ಸ್ವಾಮಿ! ಆ ತೀರ್ಥವು ಬಹು ದೂರದಲ್ಲಿರುವುದು. ಅಲ್ಲಿಗೆ ನಿತ್ಯವೂ ಬರಲಿಕ್ಕೆ ನನಗೆ ಸಾಧ್ಯವಾಗಲಾರದು' ಎಂದಳು.

ಅದಕ್ಕೆ ಪ್ರಾಚೀಮಾಧವನು 'ನೀನು ಅಲ್ಲಿಗೆ ನಿತ್ಯವೂ ಬರಲಿಕ್ಕೆ ಅಶಕ್ತಳಾದರೆ

1. ಪ.ಪು.ಉ.ಖಂ. ಅ.34

ನಿನಗೆ ಬೇರೊಂದು ಉಪಾಯವನ್ನು ಹೇಳುವೆನು. ಸರಸ್ವತಿಯಿಂದಲೂ ಅಧಿಕವಾದ ನೂರುಕೋಟಿ ತೀರ್ಥಗಳಿಂದಲೂ ಅಧಿಕವಾದ ಕೋಟಿ ಯಜ್ಞಗಳಿಂದಲೂ ಅಧಿಕವಾದ ವ್ರತದಾನಗಳಿಂದ ಅಧಿಕವಾದ ಜಪಹೋಮಗಳಿಂದ ಅಧಿಕವಾದ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುವ **ತ್ರಿಸ್ಪೃಶಾ** ಎಂಬ ವ್ರತವನ್ನು ಮಾಡು. ಅದು ಯಾವ ಮಾಸದಲ್ಲಿಯಾದರೂ ಶುಕ್ಲಪಕ್ಷದಲ್ಲಿಯೋ ಕೃಷ್ಣಪಕ್ಷದಲ್ಲಿಯೋ ಬಂದರೆ ಅದನ್ನು ಅನುಷ್ಠಾನ ಮಾಡಬೇಕು' ಎಂದು ಹೇಳಿದನು.

ಆಗ ಗಂಗಾದೇವಿಯು ತ್ರಿಸ್ಪೃಶಾವ್ರತವು ಯಾವುದು? ಅದರ ಮಹಿಮೆಯನ್ನು ಹೇಳಬೇಕು. ದಶಮೀ ಏಕಾದಶೀ ದ್ವಾದಶಿಗಳು ಒಂದು ದಿನದಲ್ಲಿ ಬಂದರೆ ಅದು ತ್ರಿಸ್ಪೃಶಾ ಆಗುವುದೋ? ಎಂದು ಕೇಳಿದಳು.

ಅದಕ್ಕೆ ಪ್ರಾಚೀನಮಾಧವನು 'ನೀನು ಹೇಳಿದ ಆಸುರ ತ್ರಿಸ್ಪೃಶಾ ಆಗುವುದು. ಅದು ಅಸುರರಿಗೆ ಆಯುಷ್ಯವನ್ನೂ ಬಲವನ್ನೂ ಹೆಚ್ಚಿಸುವುದು. ಅದನ್ನು ಪ್ರಯತ್ನ ಪೂರ್ವಕವಾಗಿ ಬಿಡಬೇಕು. ಹೇಗೆ ರಜಸ್ವಲಾ ಸ್ತ್ರೀಯ ಸಂಗದಿಂದ ದೋಷಿಗಳಾಗುವರೋ ಹಾಗೆಯೇ ದಶಮಿಯಿಂದ ಕೂಡಿದ ಏಕಾದಶಿಯು ದೋಷಿಯಾಗುವುದು. **ಏಕಾದಶೀ ದ್ವಾದಶೀ ಆಮೇಲೆ ತ್ರಯೋದಶಿಯು ಒಂದು ದಿನದಲ್ಲಿ ಬಂದರೆ ಅಂದು ತ್ರಿಸ್ಪೃಶಾ ಎನಿಸಿಕೊಳ್ಳುವುದು.** ಆ ದಿನದಲ್ಲಿ ಉಪವಾಸ ಮಾಡಿದರೆ ಹತ್ತುಸಾವಿರ ಹತ್ಯೆಯ ದೋಷವು ಪರಿಹೃತವಾಗುವುದು. ಇತರ ಅಪರಾಧವನ್ನು ಮಾಡಿದವನೂ ವ್ರತಗಳನ್ನು ಮಾಡಿ ಪಾಪವನ್ನು ಪರಿಹರಿಸಿಕೊಳ್ಳುವನು. ದಶಮೀವೇಧದಿಂದ ಉಂಟಾದ ದೋಷವನ್ನು ನಾನು ಸಹಿಸಲಾರೆನು. ದಶಮೀ ವೇಧವುಳ್ಳ ಏಕಾದಶಿಯನ್ನು ಯಾರು ಉಪವಾಸ ಮಾಡುವನೋ ಅವನು ಹಾಲಾಹಲ ವಿಷವನ್ನು ಕುಡಿದ ಫಲವನ್ನು ಹೊಂದುವನು. ನಾಯಿಯ ಮಲವನ್ನು ತಿಂದ ದೋಷವನ್ನು ಹೊಂದಿದನು. ಹೀಗೆ ತಿಳಿದುಕೊಂಡು ದಶಮಿವೇಧವುಳ್ಳ ಏಕಾದಶಿಯಲ್ಲಿ ಉಪವಾಸ ಮಾಡಬಾರದು. ಹಾಗೆ ಉಪವಾಸ ಮಾಡಿದರೆ ಕೋಟಿ ಜನ್ಮಗಳಲ್ಲಿ ಮಾಡಿದ ಪುಣ್ಯವು ನಷ್ಟವಾಗುವುದು. ಸಂತಾನವು ನಾಶವನ್ನು ಹೊಂದುವುದು. ಅವನ ಮಗುವನ್ನೇ ಸ್ವರ್ಗದಿಂದ ಬೀಳಿಸುವುದು. ನರಕಕ್ಕೆ ಕಳುಹಿಸುವುದು. ಆದುದರಿಂದ ದಶಮೀವೇಧದ ಸಂದೇಹವಿದ್ದರೂ ಆ ಏಕಾದಶಿಯಲ್ಲಿ ಉಪವಾಸ ಮಾಡದೆ ದ್ವಾದಶಿಯಲ್ಲಿಯೇ ಉಪವಾಸ ಮಾಡಬೇಕು' ಎಂದು ಹೇಳಿದನು.

ಆಗ ಗಂಗೆಯು 'ಜಗನ್ನಾಥನೇ! ನಾನು ತ್ರಿಸ್ಪೃಶಾವ್ರತವನ್ನು ಮಾಡುತ್ತೇನೆ. ಪಾಪವನ್ನು ಪರಿಹರಿಸಿಕೊಳ್ಳುತ್ತೇನೆ' ಎಂದು ಹೇಳಿದಳು.

ಭಗವಂತನು 'ನೀನು ನಿನ್ನ ಸ್ಥಾನಕ್ಕೆ ಹೋಗು. ಭಯಪಡಬೇಡ. ನಿನಗೆ ಪಾಪವುಂಟಾಗುವುದಿಲ್ಲ. ಸರಸ್ವತಿಯಲ್ಲಿ ಸ್ನಾನಮಾಡಿ ಮಾಧವನನ್ನು ಪೂಜಿಸಿ ಯಾರು ನಮಸ್ಕರಿಸುತ್ತಾರೋ ಅವರು ಉತ್ತಮವಾದ ಗತಿಯನ್ನು ಹೊಂದುವರು' ಎಂದು ಹೇಳಿದನು.

ಆಮೇಲೆ ಗಂಗೆಯು ಆ ವ್ರತವನ್ನು ಮಾಡುವ ವಿಧಾನವನ್ನು ಕೇಳಿದಳು. ಅದಕ್ಕೆ ಭಗವಂತನು 'ದೇವಿ! ತ್ರಿಸ್ಪೃಶಾವ್ರತವನ್ನು ಮಾಡುವ ಪ್ರಕಾರವನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದರೆ ಪಾಪವು ಪರಿಹಾರವನ್ನು ಹೊಂದುವುದು. ಬಂಗಾರದ ಪ್ರತಿಮೆಯನ್ನು ಮಾಡಿಸಬೇಕು. ತಾಮ್ರದ ಪಾತ್ರೆಯಲ್ಲಿ ಎಳ್ಳನ್ನು ತುಂಬಿಸಿ ಇಡಬೇಕು. ಕಲಶದಲ್ಲಿ ನೀರನ್ನು ತುಂಬಿಸಿ ಪಂಚರತ್ನಗಳನ್ನಿಟ್ಟು ಅದರ ಮೇಲೆ ಎಳ್ಳು ತುಂಬಿದ ತಾಮ್ರದ ಪಾತ್ರೆಯನ್ನಿಟ್ಟು ಅದರಲ್ಲಿ ಅಭಿಷೇಕ ಮಾಡಿ ಗಂಧವನ್ನು ಹಚ್ಚಿದ ಪ್ರತಿಮೆಯನ್ನು ಇಡಬೇಕು. ಹೂವಿನ ಮಾಲೆಯನ್ನು ಹಾಕಬೇಕು. ಆಕಾಲದಲ್ಲಿ ಸಿಗುವ ಪುಷ್ಪಗಳಿಂದ ಕೋಮಲ ತುಲಸೀಪತ್ರಗಳಿಂದ ಪೂಜಿಸಬೇಕು. ಪರಮಾತ್ಮನಿಗೆ ಛತ್ರವನ್ನು ಪಾದುಕೆಗಳನ್ನು ಸಮರ್ಪಿಸಬೇಕು. ನೈವೇದ್ಯವನ್ನು ಸಮರ್ಪಿಸಬೇಕು. ಉಪವೀತವನ್ನು ಉತ್ತರೀಯ ವಸ್ತ್ರವನ್ನು ಸಮರ್ಪಿಸಬೇಕು. ಅಂಗಗಳಿಗೆ ಪೂಜಿಸಬೇಕು. ಪೂಜೆಯನ್ನು ಮುಗಿಸಿ ಭಗವಂತನನ್ನು ಪ್ರಾರ್ಥಿಸಬೇಕು. ಕೊನೆಗೆ ಗುರುಗಳನ್ನು ಪೂಜಿಸಬೇಕು. ರಾತ್ರಿಯಲ್ಲಿ ಜಾಗರ ಮಾಡಬೇಕು. ಗಾಯನ ನರ್ತನ ಇತ್ಯಾದಿಗಳನ್ನು ಮಾಡಬೇಕು. ತರುವಾಯ ದೇವರಿಗೆ ಅರ್ಘ್ಯವನ್ನು ಕೊಡಬೇಕು. ತರುವಾಯ ದ್ವಾದಶಿಯಲ್ಲಿ ಬೆಳಿಗ್ಗೆ ಸ್ನಾನಮಾಡಿ ಭಗವಂತನಿಗೆ ಪೂಜೆ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನು ಭೋಜನ ಮಾಡಬೇಕು. ಈ ವ್ರತವನ್ನು ಮಾಡಿದ ಮಹಾಪುಣ್ಯವು ಬರುವುದು' ಎಂದು ಹೇಳಿದನು.



# ಪಂಚಾಗ್ನಿಸಾಧನ ವ್ರತವು[1]

ಜ್ಯೇಷ್ಠಶುಕ್ಲ ತೃತೀಯಾದಿನದಲ್ಲಿ ಪಂಚಾಗ್ನಿಸಾಧನ ವ್ರತವನ್ನು ಮಾಡಬೇಕು. ಪೂರ್ವದಲ್ಲಿ ರುದ್ರದೇವರು ತನ್ನ ಮೂರನೇ ಕಣ್ಣಿನಿಂದ ಮನ್ಮಥನನ್ನು ಸುಟ್ಟು ಮರೆಯಾಗಿ ಹೋದಮೇಲೆ ಪಾರ್ವತೀದೇವಿಯರು ತಂದೆಯ ಮನೆಯಲ್ಲಿ ವಾಸಮಾಡುತ್ತಾ ಮನಸ್ಸಿಗೆ ಸಂತೋಷವಿಲ್ಲದೆ ಲೋಕರೀತಿಯಿಂದ ಹಿಮವತ್ ಪರ್ವತದಲ್ಲಿ ವಾಸಮಾಡುತ್ತಿದ್ದ ಸಪ್ತಋಷಿಗಳೊಡನೆ ನನ್ನ ಮನಸ್ಸಿಗೆ ಸಮಾಧಾನ ವಾಗುವ ಉಪಾಯವನ್ನು ಹೇಳಿರೆಂದು ಕೇಳಿದರು. ಆಗ ಭೃಗುಋಷಿಗಳು 'ದೇವಿ! ಪಂಚಾಗ್ನಿಸಾಧನವ್ರತವನ್ನು ಮಾಡು. ಜ್ಯೇಷ್ಠಮಾಸ ತೃತೀಯಾದಿನದಲ್ಲಿ ಬೆಳಿಗ್ಗೆ ಬೇಗನೆ ಸ್ನಾನವನ್ನು ಮಾಡಿ ನಿತ್ಯಕರ್ಮವನ್ನು ಮಾಡಿ ಬಿಳಿವಸ್ತ್ರವನ್ನು ಧರಿಸಿಕೊಂಡು ಮನೆಗೆ ಹೋಗಬೇಕು. ಪುಣ್ಯಾಹವಾಚನವನ್ನು ಮಾಡಿಸಿಕೊಳ್ಳಬೇಕು. ಬ್ರಾಹ್ಮಣರಿಗೆ ಪೂಜಿಸಬೇಕು. ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಅಗ್ನಿಗಳನ್ನು ಇಟ್ಟುಕೊಂಡು ಆ ಅಗ್ನಿಗಳನ್ನು ಪೂಜಿಸಿ ಅವುಗಳ ಮಧ್ಯದಲ್ಲಿ ನಿಂತುಕೊಂಡು ಸೂರ್ಯನನ್ನೇ ನೋಡುತ್ತಾ ಸೂರ್ಯನು ಮುಳುಗುವವರೆಗೆ ಇರಬೇಕು. ಹೀಗೆಯೇ ಉಪವಾಸ ದಿಂದ ಒಂದು ತಿಂಗಳು ಮಾಡಬೇಕು' ಎಂದು ಹೇಳಿದರು.

ಪಾರ್ವತೀದೇವಿಯರು ಹನ್ನೆರಡುವರ್ಷ ಜ್ಯೇಷ್ಠಮಾಸಗಳಲ್ಲಿ ಹೀಗೆಯೇ ವ್ರತವನ್ನು ಮಾಡಿದರು. ರುದ್ರದೇವರು ಪಾರ್ವತೀದೇವಿಯಲ್ಲಿ ಪ್ರೇಮವುಳ್ಳವರಾಗಿ ಬೇಡರ ವೇಷವನ್ನು ಧರಿಸಿಕೊಂಡು ಬಂದು ಪಾರ್ವತೀದೇವಿಯನ್ನು ನಾನಾವಿಧ ವಾಗಿ ಸಮಾಧಾನಪಡಿಸಿದರು. ಅವರು ನಿರಾಕರಿಸಲು ತನ್ನ ನಿಜರೂಪವನ್ನು ಧರಿಸಿದರು. ಆಗ ಪಾರ್ವತಿಯರು ಲಜ್ಜೆಯಿಂದ ಮುಖವನ್ನು ತಗ್ಗಿಸಿದರು. ರುದ್ರದೇವರು ಪಾರ್ವತೀದೇವಿಯರನ್ನು ತೊಡೆಯಲ್ಲಿ ಕೂತುಕೊಳ್ಳಿಸಿಕೊಂಡು ಆಲಿಂಗಿಸಿದರು. ಹಿಮವಂತನು ಇದನ್ನು ತಿಳಿದು ಬಂದು ಪಾರ್ವತೀದೇವಿಯರನ್ನು ಮದುವೆ ಮಾಡಿಕೊಟ್ಟು ಬೇಕಾದರೀತಿಯಿಂದ ಉಪಚರಿಸಿದನು. ತರುವಾಯ ರುದ್ರದೇವರು ಪಾರ್ವತೀದೇವಿಯನ್ನು ಕರೆದುಕೊಂಡು ಕೈಲಾಸಕ್ಕೆ ಹೋದರು.



1. ಭ.ಪು.ಜ್ಯೇ.ಮಾ.ಮ. ಅ.4

# ರಂಭಾವ್ರತವು [1]

ಉದ್ಯಾನದಲ್ಲಿಯೋ ತನ್ನ ಮನೆಯಲ್ಲಿಯೋ ಬಾಳೆಯ ಮರಗಳ ವನವನ್ನು ಮಾಡಬೇಕು. ಜ್ಯೇಷ್ಠಮಾಸದ ಶುಕ್ಲಪಕ್ಷದ ತೃತೀಯಾದಿನದಲ್ಲಿ ಪಂಚಾಮೃತ ದಿಂದಲೂ ನಾನಾ ಗಂಧಗಳಿಂದಲೂ ಲಾವಂಚವನ್ನು ಹಾಕಿರುವ ತಣ್ಣಗಿರುವ ನೀರಿನಿಂದಲೂ ಬಾಳೆಮರಗಳನ್ನು ಪೂಜಿಸಬೇಕು. ಕಟ್ಟೆಯನ್ನು ಕಟ್ಟಿ ನೀರನ್ನು ಹಾಕ ಬೇಕು. ಒಂದು ತಿಂಗಳು ಆಮೇಲೆ ಪ್ರತಿನಿತ್ಯವೂ ನೀರನ್ನು ಹಾಕಬೇಕು. ಪರಮಾತ್ಮನ ನಾಭಿಕಮಲದಲ್ಲಿ ಕೂತಿರುವ ಬ್ರಹ್ಮದೇವರ ಪ್ರತಿಮೆಯನ್ನು ಬಂಗಾರದಿಂದ ಮಾಡಿಸಿ ಅದನ್ನು ಕಲಶದಲ್ಲಿ ಇಟ್ಟು ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ನಾನಾವಿಧ ನೈವೇದ್ಯಗಳನ್ನು ಸಮರ್ಪಿಸಬೇಕು. ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ತಾನು ಹವಿಷ್ಯಾನ್ನವನ್ನು ಭೋಜನ ಮಾಡಬೇಕು. ಗಾಯನ ವಾದ್ಯ ಘೋಷಗಳಿಂದಲೂ ಪುರಾಣಶ್ರವಣಾದಿಗಳಿಂದಲೂ ಜಾಗರವನ್ನು ಮಾಡಬೇಕು. ಈರೀತಿಯಾಗಿ ಬಾಳೇಮರದ ವನದಲ್ಲಿ ಇದ್ದುಕೊಂಡು ಒಂದು ತಿಂಗಳು ಪ್ರತಿನಿತ್ಯವೂ ಮಾಡಬೇಕು. ಒಂದು ತಿಂಗಳಾದ ಮೇಲೆ ಆ ಪ್ರತಿಮೆಯನ್ನೂ ಕಳಸವನ್ನು ಆಚಾರ್ಯರಿಗೆ ಸಮರ್ಪಿಸಬೇಕು. ಅನೇಕ ದಾನಗಳನ್ನು ಮಾಡಬೇಕು. ಒಳ್ಳೇ ಹಾಲನ್ನು ಕೊಡುವ ಗೋವನ್ನೂ ದಾನಮಾಡಬೇಕು. ಹೋಮವನ್ನು ಮಾಡಬೇಕು. ಬ್ರಾಹ್ಮಣರಿಗೆ ಬಹಳವಾಗಿ ದಕ್ಷಿಣೆಯನ್ನು ಕೊಡಬೇಕು. ತನ್ನ ಶಕ್ತಿಯನ್ನು ಅನುಸರಿಸಿ ಬ್ರಾಹ್ಮಣರಿಗೆ ಸಕ್ಕರೆ ಹಾಕಿದ ಪಾಯಸದಿಂದ ಭೋಜನ ಮಾಡಿಸಬೇಕು. ಆ ಬ್ರಾಹ್ಮಣರನ್ನು ಕಳುಹಿಸಿ ಪಾರಣೆಯನ್ನು ಮಾಡಬೇಕು. ಇತರ ಪ್ರಾಣಿಗಳಿಗೂ ಅನ್ನವನ್ನು ಹಾಕಬೇಕು. ಹೀಗೆ ಮಾಡುವುದಕ್ಕೆ ರಂಭಾವ್ರತವೆಂದು ಹೆಸರು.

ತ್ರೇತಾಯುಗದಲ್ಲಿ ಧೂರ್ಜಟಿಯೆಂದು ಹೆಸರುಳ್ಳ ಬ್ರಾಹ್ಮಣನೊಬ್ಬನಿದ್ದನು. ಅವನು ಹಣವಂತನಾಗಿದ್ದನು. ಬಹಳ ಬಂಧುಗಳಿಂದ ಯುಕ್ತನಾಗಿದ್ದನು. ಅವನು ಮಕ್ಕಳಿಲ್ಲವೆಂದು ದುಃಖವುಳ್ಳವನಾಗಿ ನಾನಾವ್ರತಗಳನ್ನೂ ದಾನಗಳನ್ನೂ ಮಾಡಿದನು. ಬಹುಸಮಯದ ಮೇಲೆ ಅವನಿಗೆ ಪರಮಸುಂದರಿಯಾದ ಮಗಳೊಬ್ಬಳು ಹುಟ್ಟಿದಳು. ಕ್ರಮದಿಂದ ಮಗಳಿಗೆ ಮದುವೆಯೋಗ್ಯವಾದ ವಯಸ್ಸು ಉಂಟಾ ಯಿತು. ಅವನು ತನ್ನ ಹೆಂಡತಿಯೊಡನೆ ರೂಪವತಿಯಾದ ನಮ್ಮ ಮಗಳನ್ನು ಯಾರಿಗೆ ಮದುವೆ ಮಾಡಿಕೊಡಲಿ? ಇವಳಿಗೆ ಸಮನಾದ ವರನೂ ಕಾಣಿಸುವುದಿಲ್ಲವಲ್ಲಾ!'

1. ಭ.ಪು.ಜ್ಯೇ.ಮಾ.ಮ. ಅ.5,6

ಎಂದು ಹೇಳಿಕೊಂಡನು. ಅನೇಕ ಗ್ರಾಮಗಳಿಗೂ ದೇಶಗಳಿಗೂ ಹುಡುಕುತ್ತಾ ಹೋದನು. ತನ್ನ ಕನ್ಯೆಗೆ ಯೋಗ್ಯನಾದದ ವರನನ್ನು ನೋಡಲಿಲ್ಲ. ಆಮೇಲೆ ಋಷಿಗಳ ಆಶ್ರಮಗಳಲ್ಲಿ ಹುಡುಕುತ್ತಾ ಹೋದನು. ಹೀಗೆಯೇ ಹೋಗುತ್ತಾ ಕೌಶಿಕ ಮುನಿಗಳ ಆಶ್ರಮದಲ್ಲಿ ಒಬ್ಬ ವರನನ್ನು ನೋಡಿದನು. ಅವನಿಗೆ ಶಿವಶರ್ಮ ಎಂದು ಹೆಸರು. ಅವನಿಗೆ ತಂದೆತಾಯಿಗಳು ಇರಲಿಲ್ಲ. ಅವನಿಗೆ ರೂಪರಾಶಿಯೆಂದು ಇನ್ನೊಂದು ಹೆಸರು ಇದ್ದಿತು. ಅವನಂತೆ ರೂಪವಂತರು ಲೋಕದಲ್ಲಿಯೇ ಇರಲಿಲ್ಲ. ಧೂರ್ಜಟಿಯು ಅಲ್ಲಿದ್ದ ಋಷಿಗಳೊಡನೆ ಅವನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡುವುದಾಗಿ ಹೇಳಿದನು. ಋಷಿಗಳೆಲ್ಲರೂ ಅಂಗೀಕರಿಸಿದರು. ತರುವಾಯ ಧೂರ್ಜಟಿಯು ಸಂತೋಷದಿಂದ ಶಿವಶರ್ಮನನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ಅಲ್ಲಿ ಸರ್ವಬಂಧುಗಳಿಂದ ಸಹಿತನಾಗಿ ಮದುವೆ ಮಾಡಿದನು. ಶಿವಶರ್ಮನಿಗೆ ತನ್ನ ಮನೆಯ ಹತ್ತಿರವೇ ಒಂದು ಮನೆಯನ್ನು ಮಾಡಿಕೊಟ್ಟನು. ಬಹಳ ಗೋವುಗಳನ್ನೂ ಹಣವನ್ನೂ ಕೊಟ್ಟನು. ಬ್ರಾಹ್ಮಣರಿಗೆ ಬಹಳ ದಕ್ಷಿಣೆಯನ್ನು ಕೊಟ್ಟನು. ತರುವಾಯ ಶಿವಶರ್ಮನು ಗುಣವತಿಯೆಂದು ಹೆಸರುಳ್ಳ ತನ್ನ ಹೆಂಡತಿಯಿಂದ ಸಹಿತನಾಗಿ ಬಹುಕಾಲ ಸುಖವನ್ನು ಅನುಭವಿಸುತ್ತಾ ಇದ್ದನು.

ಒಂದು ದಿವಸದಲ್ಲಿ ಶಿವಶರ್ಮನು ಸಮಿಧೆಯನ್ನು ತರುವುದಕ್ಕಾಗಿ ವನಕ್ಕೆ ಹೋದನು. ಅಲ್ಲಿ ಒಂದು ಮರದ ನೆರಳಿನಲ್ಲಿ ಕೂತುಕೊಂಡನು. ತಣ್ಣಗಿರುವ ನೀರನ್ನು ಕುಡಿದು ಮರದ ಬುಡದಲ್ಲಿ ನಿದ್ರೆಯನ್ನು ಮಾಡಿದನು. ಆ ಸಮಯದಲ್ಲಿ ಒಂದು ಹೆಬ್ಬಾವು ಅಲ್ಲಿಗೆ ಬಂದು ಅವನನ್ನು ನುಂಗಿಬಿಟ್ಟಿತು. ಈ ವಿಷಯವು ಯಾರಿಗೂ ತಿಳಿಯಲಿಲ್ಲ. ಸೂರ್ಯನು ಮುಳುಗಿದನು. ತರುವಾಯ ಅವನ ಮಾವನೂ ಅವನ ಹೆಂಡತಿಯೂ ಅತ್ತೆಯೂ ಸೇವಕರಿಂದ ಸಹಿತರಾಗಿ ದೀಪವನ್ನು ಹಿಡಿದುಕೊಂಡು ಬಂದು ವನವೆಲ್ಲವನ್ನೂ ಹುಡುಕಿದರು. ಹುಡುಕುತ್ತಾ ಸೂರ್ಯೋದಯವೂ ಆಯಿತು. ಅವರಿಗೆ ಒಂದು ವರ್ತಮಾನವೂ ತಿಳಿಯಲಿಲ್ಲ. ಅವರು ದುಃಖವುಳ್ಳವರಾಗಿ ನಿರಾಶರಾಗಿ ಮನೆಗೆ ಹೋದರು. ತರುವಾಯ ಗುಣವತಿಯು ತಂದೆಯ ಮನೆಯಲ್ಲಿಯೇ ವಾಸಮಾಡುತ್ತಾ ಶೋಕವುಳ್ಳವಳಾಗಿ ದೇವರ ಸೇವೆಯನ್ನು ಮಾಡುತ್ತಾ ಇದ್ದಳು. ಒಂದು ದಿನದಲ್ಲಿ ದೈವೇಚ್ಛೆಯಿಂದ ನಾರದರು ಅಲ್ಲಿಗೆ ಬಂದರು. ಗುಣವತಿಯು ಪುನಃ ಪುನಃ ನಮಸ್ಕಾರವನ್ನು ಮಾಡಿ ವಿಧಿಪ್ರಕಾರವಾಗಿ ಅವರಿಗೆ ಪೂಜೆಯನ್ನು ಮಾಡಿದಳು. ಅದರಿಂದ ನಾರದರು ಸಂತುಷ್ಟರಾಗಿ 'ಸುಂದರಿ! ನೀನು ಜ್ಯೇಷ್ಠಮಾಸದಲ್ಲಿ ರಂಭಾವ್ರತವನ್ನು ಮಾಡು. ವಿಧಿ

ಪ್ರಕಾರವಾಗಿ ಪತಿಯಲ್ಲಿ ಸನ್ನಿಹಿತನಾದ ಪರಮಾತ್ಮನನ್ನು ಪೂಜಿಸು. ಪರಮಾತ್ಮನಲ್ಲಿಯೇ ಭಕ್ತಿಯುಳ್ಳವಳಾಗಿ ಬದುಕಿರುವ ಪರ್ಯಂತ ಆ ವ್ರತವನ್ನು ಮಾಡು. ಆದರಿಂದ ನೀನು ಪರಮಾತ್ಮನನ್ನೇ ಗಂಡನನ್ನಾಗಿ ಪಡೆದು ಶಾಶ್ವತವಾದ ಭೋಗವನ್ನು ಅನುಭವಿಸುವಿ' ಎಂದು ಹೇಳಿ ಆ ವ್ರತವನ್ನು ಮಾಡುವ ಕ್ರಮವನ್ನು ಹೇಳಿಹೋದರು. ಗುಣವತಿಯು ಭಕ್ತಿಯಿಂದ ನಾರದರು ಹೇಳಿದಂತೆಯೇ ವ್ರತವನ್ನು ಮಾಡಿದಳು. ಬಹಳ ಸಮಯವಾದ ಮೇಲೆ ಮುದುಕಿಯಾಗಿ ಆ ವನದಲ್ಲಿಯೇ ಮರಣವನ್ನು ಹೊಂದಿದಳು. ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದಳು. ಆ ಪುಣ್ಯಸಮೂಹದಿಂದ ಅವಳು ಪರಮಾತ್ಮನ ಪತ್ನಿಯಾಗಿ ತುಲಸಿಯಾದಳು. ಆದುದರಿಂದ ಪರಮಾತ್ಮನಿಗೆ ತುಲಸಿಯಿಂದ ಪ್ರಿಯವಾದದ್ದು ಬೇರೊಂದು ಇರುವುದಿಲ್ಲ. ಈ ವ್ರತವನ್ನು ರುದ್ರದೇವರ ಆಜ್ಞೆಯಿಂದ ಪಾರ್ವತೀದೇವಿಯೂ ಮಾಡಿರುವರು.



## ಜ್ಯೇಷ್ಠಮಾಸದಲ್ಲಿ ಮಾಡುವ ವ್ರತಗಳು [1]

ಜ್ಯೇಷ್ಠಮಾಸದ ಶುಕ್ಲಪಕ್ಷದ ಪಾಡ್ಯವನ್ನು ಆರಂಭಿಸಿ ದಶಮಿಯವರೆಗೆ **ದಶಹರಾ** ಎಂಬ ವ್ರತವನ್ನು ಮಾಡಬೇಕು. ಪ್ರತಿನಿತ್ಯವೂ ಶುಭವಾದ ಗಂಗೆಯ ಜಲದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು. ಗಂಗೆಯಲ್ಲಿ ಸ್ನಾನಮಾಡಲಿಕ್ಕೆ ಸೌಕರ್ಯವಾಗದೆ ಇದ್ದರೆ ಇತರ ತೀರ್ಥಗಳಲ್ಲಿ ಸ್ನಾನಮಾಡಬೇಕು. ಆ ಸಮಯದಲ್ಲಿ ಎಲ್ಲಾ ಜಲವೂ ಗಂಗಾಜಲಕ್ಕೆ ಸಮಾನವಾಗಿರುವುದು. ಜ್ಯೇಷ್ಠಮಾಸದಲ್ಲಿ ಶುಕ್ಲಪಕ್ಷದಲ್ಲಿ ದಶಮೀ ದಿವಸದಲ್ಲಿ ಬುಧವಾರದಲ್ಲಿ ಹಸ್ತಾನಕ್ಷತ್ರದಲ್ಲಿ......ವ್ಯತೀಪಾತ ಯೋಗದಲ್ಲಿ ಕನ್ಯಾರಾಶಿಯಲ್ಲಿ ಚಂದ್ರನಿರುವಾಗ ವೃಷಭರಾಶಿಯಲ್ಲಿ ಸೂರ್ಯನಿರುವಾಗ ಇಷ್ಟೂ ಸೇರಿದ ಸಮಯದಲ್ಲಿ ಈ ವ್ರತವನ್ನು ಮಾಡುವುದು ಅತಿಪ್ರಶಸ್ತವಾಗಿರುವುದು. ಈ ವ್ರತವನ್ನು ಮಾಡಿದರೆ ಈ ಲೋಕದಲ್ಲಿ ಭೋಗವನ್ನು ಅನುಭವಿಸಿ ಸಾಧನವನ್ನು ಮಾಡಿ ಕೊನೆಗೆ ಭಗವಂತನ ಲೋಕವನ್ನು ಹೊಂದುವನು. ಈ ವ್ರತವನ್ನು ಮಾಡುವುದರಿಂದ ಹತ್ತು ವಿಧ ಪಾಪಗಳು ಪರಿಹೃತವಾಗುವುವು. ಆದುದರಿಂದ ಇದಕ್ಕೆ ದಶಹರಾ ಎಂದು ಹೆಸರು.

---

1. **ಭವಿಷ್ಯೋತ್ತರ ಪುರಾಣ-ಜ್ಯೇಷ್ಠಮಾಸ ಮಹಾತ್ಮ್ಯದಲ್ಲಿ 30 ಅಧ್ಯಾಯಗಳಲ್ಲಿ ಅನೇಕ ವ್ರತಗಳು ನಿರೂಪಿತವಾಗಿವೆ. ಸಾವಿತ್ರೀ ಕಥಾ ಮತ್ತು ವ್ರತ ಅ-22-27ರಲ್ಲಿದೆ.**

ಒಬ್ಬರು ತನಗೆ ಕೊಡದೆ ಇರುವ ವಸ್ತುವನ್ನು ತಾನಾಗಿ ಅಪಹರಿಸುವುದು, ಇನ್ನೊಬ್ಬರನ್ನು ಹಿಂಸಾಮಾಡುವುದು, ಪರಸ್ತ್ರೀಯರನ್ನು ಸೇವಿಸುವುದು ಈ ರೀತಿಯಾಗಿ ಮೂರು ವಿಧ ಪಾಪಗಳು ದೇಹದಿಂದ ನಡೆಯು ವುವು. ಕಠಿಣವಾಗಿ ಮಾತಾಡುವುದು, ಸುಳ್ಳು ಹೇಳುವುದು, ಚಾಡಿಹೇಳುವುದು, ಅಸಂಬದ್ಧ ಮಾಡು ವುದು ಈ ನಾಲ್ಕು ವಾಗಿಂದ್ರಿಯದಿಂದ ನಡೆಯುವ ಪಾಪಗಳು. ಇನ್ನೊಬ್ಬರ ದ್ರವ್ಯವನ್ನು ತನಗೆ ಬೇಕೆಂದು ಯೋಚಿಸುವುದು, ಮನಸ್ಸಿನಿಂದ ಇನ್ನೊಬ್ಬರಿಗೆ ಅನಿಷ್ಟ ಚಿಂತನೆಯನ್ನು ಮಾಡುವುದು, ವ್ಯರ್ಥವಾದ ಆಗ್ರಹವು ಮನಸ್ಸಿನಿಂದ ನಡೆಯುವ ಪಾಪಗಳು. ಈರೀತಿಯಾಗಿ ಹತ್ತು ವಿಧಗಳಾದದ ಪಾಪಗಳೂ ಈ ದಶಹರಾವ್ರತವನ್ನು ಮಾಡುವುದರಿಂದ ಪರಿಹೃತವಾಗುವುದು.

ಈ ಹತ್ತು ದಿನಗಳಲ್ಲಿ ಪ್ರಾತಃಸ್ನಾನವನ್ನು ಮಾಡುವುದರಿಂದ ಹತ್ತು ಜನ್ಮಗಳಲ್ಲಿ ಮಾಡಿರುವ ಪಾಪಗಳು ಪರಿಹೃತವಾಗುವುವು. ಆದರಿಂದಲೂ ಈ ವ್ರತಕ್ಕೆ ದಶಹರಾ ಎಂದು ಹೆಸರು. ಈ ವ್ರತವನ್ನು ಮಾಡುವಾಗ ಗಂಗಾದೇವಿಯ ಸ್ತೋತ್ರ ಮಾಡ ಬೇಕು. ಶ್ರೀಪರಮಾತ್ಮನನ್ನು ಅವನ ಪರಿವಾರತ್ವೇನ ಬ್ರಹ್ಮದೇವರನ್ನು ರುದ್ರದೇವ ರನ್ನು ಸೂರ್ಯದೇವರನ್ನು ಸ್ಕಂದನನ್ನು ವಿನಾಯಕನನ್ನು ಚಂದ್ರನನ್ನು ಚಂಡೀಶನನ್ನು ಹಿಮವಂತನನ್ನು ಭಗೀರಥನನ್ನು ಈರೀತಿಯಾಗಿ ಹತ್ತು ದೇವತೆಗಳನ್ನು ಪೂಜಿಸ ಬೇಕು. ಹತ್ತು ವಿಧ ಹಣ್ಣುಗಳಿಂದ ಪೂಜಿಸಬೇಕು. ಹತ್ತು ಬ್ರಾಹ್ಮಣರನ್ನು ಪೂಜಿಸ ಬೇಕು. ಹತ್ತು ಪಡಿ ಎಳ್ಳನ್ನು ದಾನಮಾಡಬೇಕು. ಗಂಗೆಯನ್ನು ಪೂಜಿಸಿ ಹತ್ತು ಹಿಟ್ಟಿನ ಪಿಂಡಗಳನ್ನು ಗಂಗಾಜಲದಲ್ಲಿ ಹಾಕಬೇಕು. ಹತ್ತು ಬೆಲ್ಲದ ಅಚ್ಚುಗಳನ್ನು ಗಂಗೆಯಲ್ಲಿ ಹಾಕಬೇಕು. ಮೀನು ಆಮೆ ಕಪ್ಪೆ ಚೇಳು ಇತ್ಯಾದಿಗಳನ್ನು ಬಂಗಾರ ದಿಂದಲೋ ಬೆಳ್ಳಿಯಿಂದಲೋ ಇತರ ಲೋಹದಿಂದಲೋ ಹಿಟ್ಟಿನಿಂದಲೋ ಮಾಡಿ ಪೂಜಿಸಿ ನೀರಿನಲ್ಲಿ ಹಾಕಬೇಕು. ತರುವಾಯ ಬ್ರಾಹ್ಮಣರಿಗೆ ಹತ್ತು ಪಡಿ ಎಳ್ಳನ್ನು ಹತ್ತು ಪಡಿ ನೆಲ್ಲನ್ನೂ ಹತ್ತು ಗೋವುಗಳನ್ನೂ ದಾನ ಮಾಡಬೇಕು. ಈರೀತಿಯಾಗಿ ಮಾಡಿ ಹಣದಲ್ಲಿ ವಂಚನೆಯಿಲ್ಲದೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದರಿಂದ ಹತ್ತು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

ದಶಮಿಯವರೆಗೆ ಪ್ರತಿನಿತ್ಯವೂ ಪ್ರಾತಃಸ್ನಾನವನ್ನು ಮಾಡಬೇಕು. ಈ ವ್ರತಕ್ಕೆ ಜ್ಯೇಷ್ಠಮಾಸ ಹಸ್ತನಕ್ಷತ್ರ ಬುಧವಾರ ಇತ್ಯಾದಿ ಹತ್ತು ಯೋಗಗಳು ಸೇರಿದರೆ ಪ್ರಶಸ್ತವಾದದ್ದು. ಇಲ್ಲದಿದ್ದರೂ ಜ್ಯೇಷ್ಠ ಮಾಸ ಶುಕ್ಲಪಕ್ಷದಲ್ಲಿ ದಶಮಿಯು ಸೇರಿದಾಗ ಈ ವ್ರತವನ್ನು ಮಾಡಬೇಕು. ಆ ದಶಮೀದಿವಸದಲ್ಲಿ ಹಸ್ತಾನಕ್ಷತ್ರವಿರುವಾಗ

ಗಂಗಾದೇವಿಯು ಭೂಮಿಗೆ ಬಂದಿರುವಳು. ಪೂರ್ವದಲ್ಲಿ ಬ್ರಹ್ಮದೇವರ ಕಮಂಡಲುವಿನಲ್ಲಿ ಗಂಗಾದೇವಿಯು ಇದ್ದರು. ಒಂದು ಸಮಯದಲ್ಲಿ ಲೋಕದಲ್ಲಿ ದೈತ್ಯರ ಉಪದ್ರವವುಂಟಾಯಿತು. ಆಗ ಇಂದ್ರದೇವರಿಂದ ಪ್ರಾರ್ಥಿತರಾಗಿ ಬ್ರಹ್ಮ ದೇವರು ತನ್ನ ಕಮಂಡಲು ಜಲದಿಂದ ಶ್ರೀಪರಮಾತ್ಮನ ಪಾದವನ್ನು ತೊಳೆದರು. ಅದರಿಂದ ಗಂಗಾದೇವಿಯು ಪರಮಾತ್ಮನ ಪಾದದಿಂದ ಹೊರಟು ಬಂದಳು. ರುದ್ರದೇವರು ಗಂಗೆಯನ್ನು ತನ್ನ ಜಟೆಯಲ್ಲಿ ಧರಿಸಿದರು. ತರುವಾಯ ದೇವತೆಗಳು ಪ್ರಾರ್ಥಿಸಲು ರುದ್ರದೇವರು ತನ್ನ ಜಟೆಯಿಂದ ಗಂಗೆಯನ್ನು ಸ್ವರ್ಗಕ್ಕೆ ಬಿಟ್ಟರು. ಅದರಿಂದ ಗಂಗೆಗೆ ಸ್ವರ್ಣದೀ ಎಂದೂ ಸ್ವರ್ಗಂಗೆಯೆಂದೂ ಹೆಸರಾಯಿತು. ತರುವಾಯ ಭಗೀರಥರಾಜನು ತನ್ನ ಪಿತೃಗಳಿಗೆ ಸದ್ಗತಿ ಯಾಗುವುದಕ್ಕಾಗಿ ತಪಸ್ಸು ಮಾಡಿ ಭೂಲೋಕಕ್ಕೆ ಕರೆದುಕೊಂಡು ಬಂದನು. ಆಮೇಲೆ ಪಾತಾಳಕ್ಕೆ ಹೋದಳು. ಭಗೀರಥನು ಭೂಮಿಗೆ ಕರಕೊಂಡು ಬಂದ ಕಾರಣ ಗಂಗೆಗೆ ಭಾಗೀರಥಿಯೆಂದು ಹೆಸರಾಯಿತು. ಮಧ್ಯದಲ್ಲಿ ಜಹ್ನುರಾಜನು ಗಂಗೆಯನ್ನು ಕುಡಿದು ಬಲ ಕಿವಿಯಿಂದ ಬಿಟ್ಟನು. ಆದುದರಿಂದ ಜಾಹ್ನವೀ ಎಂದು ಹೆಸರನ್ನು ಹೊಂದಿದಳು. ಮೂರುಲೋಕ ಗಳಲ್ಲಿ ಹರಿಯುವ ಕಾರಣ ತ್ರಿಪಥಗಾ ಎಂಬ ಹೆಸರಾಯಿತು. ಗಂಗೆಗೆ ಕಮಂಡಲು ಸಮುದ್ಭೂತಾ, ವಿಷ್ಣುಪಾದಸಮುದ್ಭವಾ, ಹರಜಟೋದ್ಭೂತಾ, ಸ್ವರ್ಧುನೀ, ಭಾಗೀರಥಿ, ಜಾಹ್ನವೀ, ತ್ರಿಸ್ರೋತಾ, ಭೀಷ್ಮಸೂ, ಮಂದಾಕಿನೀ, ಭಾಗವತೀ, ತ್ರೈಲೋಕ್ಯವಾಸಿನೀ ಎಂದು ಇನ್ನು ಅನೇಕ ನೂರಾರು ಹೆಸರುಗಳು ಇರುವುವು. ಈ ಹೆಸರುಗಳನ್ನು ಹೇಳಿ ಗಂಗಾದೇವಿಗೆ ನಮಸ್ಕರಿಸಿದರೆ ಸಮಸ್ತ ಪಾಪಗಳು ಪರಿಹಾರವಾಗುವುದು. ಈ ಗಂಗೆಗೆ ಅತ್ಯಂತ ಮಹಾತ್ಮೆಯು ಇರುವುದು. ಅಂತಹ ಗಂಗೆಯ ಜನ್ಮವು ಜ್ಯೇಷ್ಠಶುಕ್ಲದಶಮಿಯಾಗಿರುವುದು. ಆ ದಶಮಿಯವರೆಗೆ ದಶಹರಾವ್ರತವನ್ನು ಮಾಡಬೇಕು. ಈ ವ್ರತದಲ್ಲಿ ಅನೇಕ ದಾನಗಳನ್ನು ಮಾಡಬೇಕು. ಅವು ಅಕ್ಷಯಫಲಕ್ಕೆ ಕಾರಣವಾಗುವುವು.

ಜ್ಯೇಷ್ಠ ಶುಕ್ಲ ದ್ವಿತೀಯಾದಿವಸದಲ್ಲಿ ಅಪರಾಹ್ಣದಲ್ಲಿ ಸಮಾನ ಎಂಬ ಕಲ್ಪವು ಉಂಟಾಯಿತು. ಆದುದರಿಂದ ಆ ದಿನದಲ್ಲಿ ಸ್ನಾನವೂ ದಾನವೂ ಶ್ರಾದ್ಧವೂ ಬ್ರಾಹ್ಮಣ ರನ್ನು ತೃಪ್ತಿಪಡಿಸುವುದೂ ಪ್ರಶಸ್ತವಾದವು. ಇವುಗಳನ್ನು ಪರಮಾತ್ಮನ ಉದ್ದೇಶವಾಗಿ ಭಕ್ತಿಯಿಂದ ಮಾಡಿದರೆ ಕೋಟಿಪಾಲು ಪುಣ್ಯಕ್ಕೆ ಕಾರಣವಾಗುವುದು.

ಹಾಗೆಯೇ ಶುಕ್ಲತೃತೀಯಾ ದಿನದಲ್ಲಿ ಪಂಚಾಗ್ನಿಸಾಧನವೆಂಬ ವ್ರತವನ್ನು ಮಾಡಬೇಕು. ಅದರಿಂದ ಸೂರ್ಯನಂತೆ ತೇಜಸ್ಸು ಉಂಟಾಗುವುದು. ಈ ದಿವಸವೇ

ಒಬ್ಬರು ತನಗೆ ಕೊಡದೆ ಇರುವ ವಸ್ತುವನ್ನು ತಾನಾಗಿ ಅಪಹರಿಸುವುದು, ಇನ್ನೊಬ್ಬರನ್ನು ಹಿಂಸಾಮಾಡುವುದು, ಪರಸ್ತ್ರೀಯರನ್ನು ಸೇವಿಸುವುದು ಈ ರೀತಿಯಾಗಿ ಮೂರು ವಿಧ ಪಾಪಗಳು ದೇಹದಿಂದ ನಡೆಯು ವುವು. ಕಠಿಣವಾಗಿ ಮಾತಾಡುವುದು, ಸುಳ್ಳು ಹೇಳುವುದು, ಚಾಡಿಹೇಳುವುದು, ಅಸಂಬದ್ಧ ಮಾಡು ವುದು ಈ ನಾಲ್ಕು ವಾಗಿಂದ್ರಿಯದಿಂದ ನಡೆಯುವ ಪಾಪಗಳು. ಇನ್ನೊಬ್ಬರ ದ್ರವ್ಯವನ್ನು ತನಗೆ ಬೇಕೆಂದು ಯೋಚಿಸುವುದು, ಮನಸ್ಸಿನಿಂದ ಇನ್ನೊಬ್ಬರಿಗೆ ಅನಿಷ್ಟ ಚಿಂತನೆಯನ್ನು ಮಾಡುವುದು, ವ್ಯರ್ಥವಾದ ಆಗ್ರಹವು ಮನಸ್ಸಿನಿಂದ ನಡೆಯುವ ಪಾಪಗಳು. ಈರೀತಿಯಾಗಿ ಹತ್ತು ವಿಧಗಳಾದದ ಪಾಪಗಳೂ ಈ ದಶಹರಾವ್ರತವನ್ನು ಮಾಡುವುದರಿಂದ ಪರಿಹೃತವಾಗುವುದು.

ಈ ಹತ್ತು ದಿನಗಳಲ್ಲಿ ಪ್ರಾತಃಸ್ನಾನವನ್ನು ಮಾಡುವುದರಿಂದ ಹತ್ತು ಜನ್ಮಗಳಲ್ಲಿ ಮಾಡಿರುವ ಪಾಪಗಳು ಪರಿಹೃತವಾಗುವುವು. ಆದರಿಂದಲೂ ಈ ವ್ರತಕ್ಕೆ ದಶಹರಾ ಎಂದು ಹೆಸರು. ಈ ವ್ರತವನ್ನು ಮಾಡುವಾಗ ಗಂಗಾದೇವಿಯ ಸ್ತೋತ್ರ ಮಾಡ ಬೇಕು. ಶ್ರೀಪರಮಾತ್ಮನನ್ನು ಅವನ ಪರಿವಾರತ್ವೇನ ಬ್ರಹ್ಮದೇವರನ್ನು ರುದ್ರದೇವ ರನ್ನು ಸೂರ್ಯದೇವರನ್ನು ಸ್ಕಂದನನ್ನು ವಿನಾಯಕನನ್ನು ಚಂದ್ರನನ್ನು ಚಂಡೀಶನನ್ನು ಹಿಮವಂತನನ್ನು ಭಗೀರಥನನ್ನು ಈರೀತಿಯಾಗಿ ಹತ್ತು ದೇವತೆಗಳನ್ನು ಪೂಜಿಸ ಬೇಕು. ಹತ್ತು ವಿಧ ಹಣ್ಣುಗಳಿಂದ ಪೂಜಿಸಬೇಕು. ಹತ್ತು ಬ್ರಾಹ್ಮಣರನ್ನು ಪೂಜಿಸ ಬೇಕು. ಹತ್ತು ಪಡಿ ಎಳ್ಳನ್ನು ದಾನಮಾಡಬೇಕು. ಗಂಗೆಯನ್ನು ಪೂಜಿಸಿ ಹತ್ತು ಹಿಟ್ಟಿನ ಪಿಂಡಗಳನ್ನು ಗಂಗಾಜಲದಲ್ಲಿ ಹಾಕಬೇಕು. ಹತ್ತು ಬೆಲ್ಲದ ಅಚ್ಚುಗಳನ್ನು ಗಂಗೆಯಲ್ಲಿ ಹಾಕಬೇಕು. ಮೀನು ಆಮೆ ಕಪ್ಪೆ ಚೇಳು ಇತ್ಯಾದಿಗಳನ್ನು ಬಂಗಾರ ದಿಂದಲೋ ಬೆಳ್ಳಿಯಿಂದಲೋ ಇತರ ಲೋಹದಿಂದಲೋ ಹಿಟ್ಟಿನಿಂದಲೋ ಮಾಡಿ ಪೂಜಿಸಿ ನೀರಿನಲ್ಲಿ ಹಾಕಬೇಕು. ತರುವಾಯ ಬ್ರಾಹ್ಮಣರಿಗೆ ಹತ್ತು ಪಡಿ ಎಳ್ಳನ್ನು ಹತ್ತು ಪಡಿ ನೆಲ್ಲನ್ನೂ ಹತ್ತು ಗೋವುಗಳನ್ನೂ ದಾನ ಮಾಡಬೇಕು. ಈರೀತಿಯಾಗಿ ಮಾಡಿ ಹಣದಲ್ಲಿ ವಂಚನೆಯಿಲ್ಲದೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದರಿಂದ ಹತ್ತು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

ದಶಮಿಯವರೆಗೆ ಪ್ರತಿನಿತ್ಯವೂ ಪ್ರಾತಃಸ್ನಾನವನ್ನು ಮಾಡಬೇಕು. ಈ ವ್ರತಕ್ಕೆ ಜ್ಯೇಷ್ಠಮಾಸ ಹಸ್ತನಕ್ಷತ್ರ ಬುಧವಾರ ಇತ್ಯಾದಿ ಹತ್ತು ಯೋಗಗಳು ಸೇರಿದರೆ ಪ್ರಶಸ್ತವಾದದ್ದು. ಇಲ್ಲದಿದ್ದರೂ ಜ್ಯೇಷ್ಠ ಮಾಸ ಶುಕ್ಲಪಕ್ಷದಲ್ಲಿ ದಶಮಿಯು ಸೇರಿದಾಗ ಈ ವ್ರತವನ್ನು ಮಾಡಬೇಕು. ಆ ದಶಮೀದಿವಸದಲ್ಲಿ ಹಸ್ತಾನಕ್ಷತ್ರವಿರುವಾಗ

ಗಂಗಾದೇವಿಯು ಭೂಮಿಗೆ ಬಂದಿರುವಳು. ಪೂರ್ವದಲ್ಲಿ ಬ್ರಹ್ಮದೇವರ ಕಮಂಡಲುವಿನಲ್ಲಿ ಗಂಗಾದೇವಿಯು ಇದ್ದರು. ಒಂದು ಸಮಯದಲ್ಲಿ ಲೋಕದಲ್ಲಿ ದೈತ್ಯರ ಉಪದ್ರವವುಂಟಾಯಿತು. ಆಗ ಇಂದ್ರದೇವರಿಂದ ಪ್ರಾರ್ಥಿತರಾಗಿ ಬ್ರಹ್ಮ ದೇವರು ತನ್ನ ಕಮಂಡಲು ಜಲದಿಂದ ಶ್ರೀಪರಮಾತ್ಮನ ಪಾದವನ್ನು ತೊಳೆದರು. ಆದರಿಂದ ಗಂಗಾದೇವಿಯು ಪರಮಾತ್ಮನ ಪಾದದಿಂದ ಹೊರಟು ಬಂದಳು. ರುದ್ರದೇವರು ಗಂಗೆಯನ್ನು ತನ್ನ ಜಟೆಯಲ್ಲಿ ಧರಿಸಿದರು. ತರುವಾಯ ದೇವತೆಗಳು ಪ್ರಾರ್ಥಿಸಲು ರುದ್ರದೇವರು ತನ್ನ ಜಟೆಯಿಂದ ಗಂಗೆಯನ್ನು ಸ್ವರ್ಗಕ್ಕೆ ಬಿಟ್ಟರು. ಆದರಿಂದ ಗಂಗೆಗೆ ಸ್ವರ್ಣದೀ ಎಂದೂ ಸ್ವರ್ಗಂಗೆಯೆಂದೂ ಹೆಸರಾಯಿತು. ತರುವಾಯ ಭಗೀರಥರಾಜನು ತನ್ನ ಪಿತೃಗಳಿಗೆ ಸದ್ಗತಿ ಯಾಗುವುದಕ್ಕಾಗಿ ತಪಸ್ಸು ಮಾಡಿ ಭೂಲೋಕಕ್ಕೆ ಕರೆದುಕೊಂಡು ಬಂದನು. ಆಮೇಲೆ ಪಾತಾಳಕ್ಕೆ ಹೋದಳು. ಭಗೀರಥನು ಭೂಮಿಗೆ ಕರಕೊಂಡು ಬಂದ ಕಾರಣ ಗಂಗೆಗೆ ಭಾಗೀರಥಿಯೆಂದು ಹೆಸರಾಯಿತು. ಮಧ್ಯದಲ್ಲಿ ಜಹ್ನುರಾಜನು ಗಂಗೆಯನ್ನು ಕುಡಿದು ಬಲ ಕಿವಿಯಿಂದ ಬಿಟ್ಟನು. ಆದುದರಿಂದ ಜಾಹ್ನವೀ ಎಂದು ಹೆಸರನ್ನು ಹೊಂದಿದಳು. ಮೂರುಲೋಕ ಗಳಲ್ಲಿ ಹರಿಯುವ ಕಾರಣ ತ್ರಿಪಥಗಾ ಎಂಬ ಹೆಸರಾಯಿತು. ಗಂಗೆಗೆ ಕಮಂಡಲು ಸಮುದ್ಭೂತಾ, ವಿಷ್ಣುಪಾದಸಮುದ್ಭವಾ, ಹರಜಟೋದ್ಭೂತಾ, ಸ್ವರ್ಧುನೀ, ಭಾಗೀರಥಿ, ಜಾಹ್ನವೀ, ತ್ರಿಸ್ರೋತಾ, ಭೀಷ್ಮಸೂ, ಮಂದಾಕಿನೀ, ಭಾಗವತೀ, ತ್ರೈಲೋಕ್ಯವಾಸಿನೀ ಎಂದು ಇನ್ನು ಅನೇಕ ನೂರಾರು ಹೆಸರುಗಳು ಇರುವುವು. ಈ ಹೆಸರುಗಳನ್ನು ಹೇಳಿ ಗಂಗಾದೇವಿಗೆ ನಮಸ್ಕರಿಸಿದರೆ ಸಮಸ್ತ ಪಾಪಗಳು ಪರಿಹಾರವಾಗುವುದು. ಈ ಗಂಗೆಗೆ ಅತ್ಯಂತ ಮಹಾತ್ಮೆಯು ಇರುವುದು. ಅಂತಹ ಗಂಗೆಯ ಜನ್ಮವು ಜ್ಯೇಷ್ಠಶುಕ್ಲದಶಮಿಯಾಗಿರುವುದು. ಆ ದಶಮಿಯವರೆಗೆ ದಶಹರಾವ್ರತವನ್ನು ಮಾಡಬೇಕು. ಈ ವ್ರತದಲ್ಲಿ ಅನೇಕ ದಾನಗಳನ್ನು ಮಾಡಬೇಕು. ಅವು ಅಕ್ಷಯಫಲಕ್ಕೆ ಕಾರಣವಾಗುವುವು.

ಜ್ಯೇಷ್ಠ ಶುಕ್ಲ ದ್ವಿತೀಯಾದಿವಸದಲ್ಲಿ ಅಪರಾಹ್ಣದಲ್ಲಿ ಸಮಾನ ಎಂಬ ಕಲ್ಪವು ಉಂಟಾಯಿತು. ಆದುದರಿಂದ ಆ ದಿನದಲ್ಲಿ ಸ್ನಾನವೂ ದಾನವೂ ಶ್ರಾದ್ಧವೂ ಬ್ರಾಹ್ಮಣ ರನ್ನು ತೃಪ್ತಿಪಡಿಸುವುದೂ ಪ್ರಶಸ್ತವಾದವು. ಇವುಗಳನ್ನು ಪರಮಾತ್ಮನ ಉದ್ದೇಶವಾಗಿ ಭಕ್ತಿಯಿಂದ ಮಾಡಿದರೆ ಕೋಟಿಪಾಲು ಪುಣ್ಯಕ್ಕೆ ಕಾರಣವಾಗುವುದು.

ಹಾಗೆಯೇ ಶುಕ್ಲತೃತೀಯಾ ದಿನದಲ್ಲಿ ಪಂಚಾಗ್ನಿಸಾಧನವೆಂಬ ವ್ರತವನ್ನು ಮಾಡಬೇಕು. ಆದರಿಂದ ಸೂರ್ಯನಂತೆ ತೇಜಸ್ಸು ಉಂಟಾಗುವುದು. ಈ ದಿವಸವೇ

ಹೆಂಗಸರು ರಂಭಾವ್ರತವನ್ನು ಮಾಡಬೇಕು. ಈ ದಿವಸವೇ ವಾಮನಕಲ್ಪವು ಆರಂಭವಾಯಿತು. ಈದಿನ ಮೊಸರನ್ನವನ್ನು ದಾನ ಮಾಡುವುದರಿಂದ ವಾಮನ ದೇವರು ಸಂತೋಷಪಡುವರು. ಈದಿವಸ ಶ್ರಾದ್ಧ ಮಾಡಬೇಕು. ಬ್ರಾಹ್ಮಣಭೋಜನ ಮಾಡಿಸಬೇಕು. ಒಂದು ತಿಂಗಳೂ ಬ್ರಾಹ್ಮಣರಿಗೆ ಮೊಸರನ್ನು ಮಾಡಿಸಬೇಕು.

ಜ್ಯೇಷ್ಠ ಶುಕ್ಲ ಚತುರ್ಥೀದಿವಸದಲ್ಲಿ ಕಪಿಲಾಶ್ರಮದಲ್ಲಿ ಕುಂಡದಿಂದ ನಾಲ್ಕು ಕೈಗಳುಳ್ಳ ವಿಘ್ನೇಶ್ವರನು ಉದ್ಭವಿಸಿದನು. ಆದುದರಿಂದ ಆ ದಿವಸದಲ್ಲಿ ವಿಘ್ನೇಶ್ವರನಿಗೆ ಉತ್ಸವವನ್ನು ಮಾಡಬೇಕು. ಈ ಚತುರ್ಥೀದಿವಸದಲ್ಲಿಯೇ ಪಾರ್ವತೀದೇವಿಯರು ಹುಟ್ಟಿದರು. ಆದುದರಿಂದ ಈ ದಿವಸದಲ್ಲಿ ಸುವಾಸಿನಿಯರು ಸೌಭಾಗ್ಯ ಅಭಿವೃದ್ಧಿಗಾಗಿ ಪಾರ್ವತೀದೇವಿಯ ಪೂಜೆಯನ್ನು ಮಾಡಬೇಕು.

ಪಂಚಮೀದಿನದಲ್ಲಿ ತುಪ್ಪದಲ್ಲಿ ಅಪ್ಪಗಳನ್ನು ಮಾಡಿ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು.

ಸಂತಾನವನ್ನು ಅಪೇಕ್ಷಿಸುವ ಸ್ತ್ರೀಯರು ಷಷ್ಠೀದಿವಸದಲ್ಲಿ ಹೋಮ ಹಾಲು ವಸ್ತ್ರ ಪುಷ್ಪ ಇತ್ಯಾದಿಗಳಿಂದ ಪೂಜಿಸಬೇಕು.

ಜ್ಯೇಷ್ಠಮಾಸದಲ್ಲಿ ಸಪ್ತಮಿಯಲ್ಲಿ ಜ್ಯೇಷ್ಠಾದೇವಿಯನ್ನು ಪೂಜಿಸದೆ ಇದ್ದರೆ ದಾರಿದ್ರ್ಯಕ್ಕೆ ಕಾರಣಳಾದ ಜ್ಯೇಷ್ಠಾದೇವಿಯು ಅವರ ಮನೆಯಲ್ಲಿ ವಾಸಮಾಡುವಳು. ಆದುದರಿಂದ ದಾರಿದ್ರ್ಯದಿಂದ ಭಯವುಳ್ಳವರು ಆ ದಿವಸದಲ್ಲಿ ಜ್ಯೇಷ್ಠಾದೇವಿಯನ್ನು ಪೂಜಿಸಬೇಕು.

ದಶಮೀದಿನದಲ್ಲಿ ವೈಭವದಿಂದ ಗಂಗಾದೇವಿಯನ್ನು ಪೂಜಿಸಬೇಕು. ತರುವಾಯ ಏಕಾದಶೀ ಉಪವಾಸವ್ರತವನ್ನು ಮಾಡಬೇಕು.

**ತ್ರಯೋದಶಿಯನ್ನು ಆರಂಭಿಸಿ ಹುಣ್ಣಿಮೆಯವರೆಗೆ ಸಾವಿತ್ರೀವ್ರತವನ್ನು ಮಾಡಬೇಕು.** ಆಲದ ಮರದ ಬುಡಕ್ಕೆ ನೀರನ್ನು ಹಾಕಿ ಅದರ ಬಳಿಯಲ್ಲಿ ಬ್ರಹ್ಮದೇವರನ್ನೂ ಯಮದೇವರನ್ನೂ ಸತ್ಯವಂತನನ್ನು ಸಾವಿತ್ರಿಯನ್ನು ಪೂಜಿಸಬೇಕು. **ಮೂರು ದಿವಸ ನಿದ್ರಾಹಾರವಿಲ್ಲದೆ ಪೂಜಿಸಬೇಕು. ಕೃಷ್ಣಪಕ್ಷದ ಪಾಡ್ಯದ ದಿವಸದಲ್ಲಿ ಪಾರಣೆಯನ್ನು ಮಾಡಬೇಕು.** ಹುಣ್ಣಿಮೆದಿನದಲ್ಲಿ ಜ್ಯೇಷ್ಠ ನಕ್ಷತ್ರವು ಸೇರಿದರೆ ಕೋಟಿ ನೂರು ಪರ್ವಕಾಲಕ್ಕಿಂತಲೂ ಅಧಿಕಪರ್ವಕಾಲವಾಗುವುದು. ಆ ದಿವಸ ದಾನ ಗಳನ್ನು ಮಾಡಬೇಕು. ಆ ದಿವಸ ಕೂರ್ಮಕಲ್ಪವು ಆರಂಭವಾಯಿತು. ಆದುದರಿಂದ ಆ ದಿವಸದಲ್ಲಿ ಸ್ನಾನ ದಾನ ತರ್ಪಣ ಬ್ರಾಹ್ಮಣಭೋಜನಗಳನ್ನು ಪಿತೃಗಳನ್ನು ಉದ್ದೇಶಿಸಿಕೊಂಡು ಮಾಡಿದರೆ ಉತ್ತಮವಾದ ಗತಿಯಾಗುವುದು.

ಈರೀತಿಯಾಗಿ ಜ್ಯೇಷ್ಠಮಾಸದ ವ್ರತಗಳನ್ನು ಮಾಡಬೇಕು.

# ದಾನ ಪರಿಚ್ಛೇದ

## ದಾನದ ಪಾತ್ರರ ಲಕ್ಷಣಾದಿಗಳು [1]

ಧರ್ಮರಾಜನು ಭೀಷ್ಮಾಚಾರ್ಯರೊಡನೆ 'ದಾನಕ್ಕೆ ಪಾತ್ರರು ಯಾರು? ದಂಡಾದಿ ಚಿಹ್ನೆಯುಳ್ಳ ಬ್ರಹ್ಮಚಾರಿಗಳೂ ಯತಿಗಳೂ ಇವರೋ? ಅಥವಾ ಇತರರಾದ ಗೃಹಸ್ಥಾದಿಗಳೂ ಆಗಬಹುದೋ?' ಎಂದು ಕೇಳಿದನು.

ಅದಕ್ಕೆ ಭೀಷ್ಮಾಚಾರ್ಯರು 'ಯಾರಾದರೂ ತಮ್ಮ ಧರ್ಮವನ್ನು ಅನುಷ್ಠಾನ ಮಾಡಿಕೊಂಡು ಇರುವರೋ ಅವರಿಗೆ ದಾನ ಮಾಡಬೇಕಾದದ್ದು. ಅವರು ಬ್ರಹ್ಮಚಾರಿ, ಯತಿಗಳು ಆಗಿದ್ದರೂ ಆಗಬಹುದು. ಇತರರಾಗಿದ್ದರೂ ಇರಬಹುದು' ಎಂದು ಹೇಳಿದರು.

ಧರ್ಮರಾಜನು 'ಒಬ್ಬ ಪುರುಷನು ತಾನು ಅಪವಿತ್ರನಾಗಿದ್ದರೂ ಶ್ರದ್ಧೆಯಿಂದ ಒಳ್ಳೇ ಬ್ರಾಹ್ಮಣರಿಗೆ ಹವ್ಯಕವ್ಯಗಳನ್ನು ಕೊಡುತ್ತಾನೆ. ಆಗ ಏನಾಗುವುದು?'

ಭೀಷ್ಮಾಚಾರ್ಯರು—'ತಾನು ಅಪವಿತ್ರನಾಗಿದ್ದರೂ ಶ್ರದ್ಧೆಯಿಂದ ದಾನವನ್ನು ಮಾಡಿದುದಾದರೆ ಅವನು ಪವಿತ್ರನಾಗುವನು. ಶ್ರದ್ಧೆಯೇ ಅವನಿಗೆ ಪಾವಿತ್ರ್ಯವನ್ನು ತಂದುಕೊಡುವುದು'

ಧರ್ಮರಾಜನು—'ದೇವತಾಕಾರ್ಯದಲ್ಲಿ ಬ್ರಾಹ್ಮಣರನ್ನು ಪರೀಕ್ಷಾಮಾಡ ಬಾರದು. ಪಿತೃಕಾರ್ಯದಲ್ಲಿ ಹೇಳಲಿಕ್ಕೆ ಬ್ರಾಹ್ಮಣರನ್ನು ಪರೀಕ್ಷಾಮಾಡಬೇಕೆಂದು ಹೇಳುವರಲ್ಲಾ!'

ಭೀಷ್ಮಾಚಾರ್ಯರು— 'ಹೌದು, ದೇವತಾಕಾರ್ಯವು ಬ್ರಾಹ್ಮಣರ ನಿಮಿತ್ತ ದಿಂದ ಸಿದ್ಧಿಸುವುದಿಲ್ಲ, ದೇವತೆಗಳಿಂದಲೇ ಸಿದ್ಧಿಯನ್ನು ಉಂಟುಮಾಡುವುದು. ದೇವತೆಗಳ ಅನುಗ್ರಹದಿಂದಲೇ ಯಜಮಾನರಿಗೆ ಕಾರ್ಯಸಿದ್ಧಿಯಾಗುವುದು. ಪಿತೃಕಾರ್ಯವು ಬ್ರಾಹ್ಮಣಾನುಗ್ರಹದಿಂದಲೇ ಸಿದ್ಧಿಯನ್ನು ಹೊಂದುವುದಾದ ಕಾರಣ ಅದರಲ್ಲಿ ಅನುಗ್ರಹಮಾಡುವ ಬ್ರಾಹ್ಮಣರಿಗೆ ತಪೋಬಲವು ಅವಶ್ಯವಾಗಿದೆ. ಅಂದರೆ ಪಿತೃಕಾರ್ಯದಲ್ಲಿ ಬ್ರಾಹ್ಮಣರನ್ನು ಪರೀಕ್ಷಿಸಿ ಒಳ್ಳೇ ಬ್ರಾಹ್ಮಣರನ್ನೇ ಕೂಗಬೇಕು'.

ಧರ್ಮರಾಜನು—'ಅಪೂರ್ವನಾದ ಪಂಡಿತನೋ ಸಂಬಧಿಯಾದವನೋ ತಪಸ್ವಿಯೋ ಯಜ್ಞಶೀಲನೋ ಯಾರು ದಾನಕ್ಕೆ ಪಾತ್ರರಾಗುವರು?'

---

1. ಮ.ಭಾ.ಅಪ. ಅ-90

ಭೀಷ್ಮಾಚಾರ್ಯರು—'ಸದ್ವಂಶದಲ್ಲಿ ಹುಟ್ಟಿದವನಾಗಿ ಸತ್ಕರ್ಮವನ್ನು ಮಾಡುವವನಾಗಿ ಜ್ಞಾನವುಳ್ಳವನಾಗಿ ಒಳ್ಳೇ ಸ್ವಭಾವವುಳ್ಳವನಾಗಿ ಅಕಾರ್ಯದಲ್ಲಿ ಲಜ್ಜೆಯುಳ್ಳವನಾಗಿ ಋಜು ಸ್ವಭಾವವುಳ್ಳವನಾಗಿ ಸತ್ಯವಚನವುಳ್ಳವನಾಗಿ ಇರುವವನು ಅಪೂರ್ವಪಂಡಿತನಾಗಿರಲೀ ಸಂಬಂಧಿಯಾಗಿರಲೀ ತಪಸ್ವಿಯಾಗಿರಲಿ ಯಾರಾದರೂ ಪಾತ್ರರಾಗುವರು. ಈ ವಿಷಯದಲ್ಲಿ ಭೂದೇವಿಯೇ ಮೊದಲಾದವರ ಅಭಿಪ್ರಾಯವನ್ನು ಕೇಳು.

ಭೂದೇವಿಯು—'ದೊಡ್ಡ ಸಮುದ್ರದಲ್ಲಿ ಹಾಕಿದ ಒಂದು ಮಣ್ಣಿನ ಗೆಡ್ಡೆಯು ನಾಶವನ್ನು ಹೊಂದುವುದೋ ಹಾಗೆಯೇ ವೇದಗಳನ್ನು ಓದಿದ ಜ್ಞಾನಿಯಲ್ಲಿ ಎಲ್ಲಾ ದುಷ್ಟವ್ಯಾಪಾರಗಳೂ ನಾಶವನ್ನು ಹೊಂದುವುವು' ಎಂದು ಹೇಳಿದಳು.

ಅಗ್ನಿಯು—'ಯಾರು ತಾನು ಅಧ್ಯಯನ ಮಾಡಿದವನಾಗಿ ತಾನೇ ಪಂಡಿತನೆಂದು ತಿಳಿಯುವವನಾಗಿ ವಿದ್ಯಾಬಲದಿಂದ ಇನ್ನೊಬ್ಬರನ್ನು ಅವಮಾನ ಮಾಡುವನೋ ಆದರಿಂದ ಅವನು ಬ್ರಹ್ಮಹತ್ಯೆಯನ್ನು ಹೊಂದುವನು. ಅವನಿಗೆ ನಶ್ವರಲೋಕಗಳು' ಎಂದು ಹೇಳಿದನು.

ಮಾರ್ಕಂಡೇಯರು 'ಸಾವಿರ ಅಶ್ವಮೇಧ ಯಾಗಗಳನ್ನು ಸತ್ಯವಚನವನ್ನು ತಕ್ಕಡಿಯಲ್ಲಿ ತೂಕಮಾಡಿದರು. ಆಗ ಯಾಗಗಳು ಸತ್ಯವಚನದ ಅರ್ಧದಷ್ಟೂ ಆಗಲಿಲ್ಲ' ಎಂದರು.

ಕಶ್ಯಪರು 'ಸಮಸ್ತವೇದಗಳೂ ಆರು ಅಂಗಶಾಸ್ತ್ರಗಳೂ ಸಾಂಖ್ಯಶಾಸ್ತ್ರವೂ ಪುರಾಣವೂ ಒಳ್ಳೇ ವಂಶದಲ್ಲಿ ಜನ್ಮವೂ ಇವು ಯಾವುವೂ ಒಳ್ಳೇ ಸ್ವಭಾವ ಇಲ್ಲದಿದ್ದವನಿಗೆ ಸದ್ಗತಿಗೆ ಕಾರಣವಾಗಲಾರವು' ಈರೀತಿಯಾಗಿ ಹೇಳಿ ಭೂಮಿಯೇ ಮೊದಲಾದವರು ಹೊರಟುಹೋದರು.

ಧರ್ಮರಾಜನು—'ಬ್ರಹ್ಮಚಾರಿಗಳು ಶ್ರಾದ್ಧದಲ್ಲಿ ಭೋಜನ ಮಾಡಿದರೆ ಅವರ ವ್ರತವು ನಾಶವಾಗುವುದರಿಂದ ಶ್ರಾದ್ಧವು ದುಷ್ಟವಾಗುತ್ತದೋ ಇಲ್ಲವೋ?'

ಭೀಷ್ಮಾಚಾರ್ಯರು—'ಶ್ರಾದ್ಧ ಭೋಜನ ಮಾಡುವವರ ವ್ರತವು ಹಾಳಾಗುತ್ತದೆ. ಶ್ರಾದ್ಧವು ದುಷ್ಟವಾಗುವುದಿಲ್ಲ. ಶ್ರಾದ್ಧಮಾಡುವವನಿಗೆ ದೋಷವಿಲ್ಲ'.

ಧರ್ಮರಾಜನು—'ದಾನಪಾತ್ರರ ಗುಣಗಳು ಅನಂತವಾಗಿರುವುದರಿಂದ ದಾನಪಾತ್ರರಿಗೆ ಯಾವ ಗುಣಗಳು ಅವಶ್ಯವಾಗಿ ಇರಬೇಕೆಂಬುದನ್ನು ಹೇಳಿರಿ'.

ಭೀಷ್ಮಾಚಾರ್ಯರು—'ಒಬ್ಬರನ್ನು ಹಿಂಸಾ ಮಾಡದಿರುವುದು, ಸತ್ಯ

ವಚನವೂ, ಕೋಪವಿಲ್ಲದೆ ಇರುವುದೂ, ಶಾಂತತೆಯೂ ಇಂದ್ರಿಯನಿಗ್ರಹವೂ, ಋಜುಸ್ವಭಾವವೂ(ಮನಸ್ಸಿನಲ್ಲಿ ಇದ್ದಂತೆಯೇ ಬಾಯಿಯ್ಲಲಿ ಹೇಳಿ ಬಾಯಿಯಲ್ಲಿ ಇದ್ದಂತೆಯೇ ಕಾರ್ಯದಿಂದ ಮಾಡುವುದೂ) ದಾನಪಾತ್ರರಿಗೆ ಇರಬೇಕಾದ ಮುಖ್ಯಲಕ್ಷಣಗಳು. ಯಾರು ಭೂಮಿಯಲ್ಲಿ ಈ ಧರ್ಮಗಳನ್ನು ಪ್ರಶಂಸಾ ಮಾಡುತ್ತಾ ಸಂಚರಿಸುತ್ತಾರೆ. ತಾವು ಆ ಧರ್ಮಗಳನ್ನು ಅನುಸರಿಸುವುದಿಲ್ಲ, ಧರ್ಮಸಾಂಕರ್ಯ ವುಳ್ಳವರಾಗುತ್ತಾರೋ ಅವರಿಗೆ ಬಂಗಾರವನ್ನೋ ರತ್ನವನ್ನೋ ಗೋವನ್ನೋ ಕುದುರೆಯನ್ನೋ ಯಾರು ದಾನ ಮಾಡುತ್ತಾನೋ ಅವನು ನರಕವನ್ನು ಹೊಂದಿ ಹತ್ತುವರ್ಷ ಮಲವನ್ನು ತಿನ್ನುವನು. ಸ್ವಭಾವದಿಂದಲೇ ಬ್ರಾಹ್ಮಣಾದಿಗಳನ್ನು ಹಿಂಸಿ ಸುವ ಚಂಡಾಲರ ಚರ್ಮಕಾರಾದಿಗಳ ಮತ್ತು ಇನ್ನೊಬ್ಬರು ಮಾಡಿರುವ ಅಥವಾ ಮಾಡದೆ ಇರುವ ಪಾಪವನ್ನು ಹೇಳುವವರ ಹಣವನ್ನು ಸ್ವೀಕಾರ ಮಾಡುವುದ ರಿಂದಲೂ ದೋಷವುಂಟಾಗುವುದು. ಯಾರು ಬ್ರಹ್ಮಚಾರಿಗಳಿಗೂ ಯತಿಗಳಿಗೂ ಭಿಕ್ಷಾನ್ನವನ್ನು ಕೊಡುವುದಿಲ್ಲವೋ ಅವರು ಅಶುಭಲೋಕಗಳನ್ನು ಹೊಂದುವರು'.

ಧರ್ಮರಾಜನು—'ಉತ್ತಮವಾದ ಬ್ರಹ್ಮಚರ್ಯವು ಯಾವುದು? ಉತ್ತಮ ವಾದ ಧರ್ಮದ ಲಕ್ಷಣವೇನು? ಅತಿಶ್ರೇಷ್ಠವಾದ ಶೌಚವು ಯಾವುದು?'

ಭೀಷ್ಮಾಚಾರ್ಯರು—'ಮದ್ಯಮಾಂಸವನ್ನು ಪರಿತ್ಯಜಿಸುವುದೇ ಉತ್ತಮವಾದ ಬ್ರಹ್ಮಚರ್ಯವು. ಶಾಸ್ತ್ರದಲ್ಲಿ ಹೇಳಿದ ಮರ್ಯಾದೆಯಲ್ಲಿ ಇರುವುದೇ ಧರ್ಮವು. ಪರಮಾತ್ಮನಲ್ಲಿ ಮನಸ್ಸನ್ನು ಇಡುವುದೇ ಶೌಚವು'.

ಧರ್ಮರಾಜನು—'ಯಾವ ಸಮಯದಲ್ಲಿ ಧರ್ಮವನ್ನು ಮಾಡಬೇಕು? ಯಾವ ಸಮಯದಲ್ಲಿ ಅರ್ಥವನ್ನು ಸಂಪಾದಿಸಬೇಕು? ಯಾವ ಸಮಯದಲ್ಲಿ ಸುಖಿಯಾಗಿರಬೇಕು?

ಭೀಷ್ಮಾಚಾರ್ಯರು—'ಪೂರ್ವಾಹ್ನದಲ್ಲಿ ಅರ್ಥವನ್ನು ಸೇವಿಸಬೇಕು. ಆಮೇಲೆ ಧರ್ಮವನ್ನು ಆಮೇಲೆ ಕಾಮವನ್ನು ಸೇವಿಸಬೇಕು. ಇತರ ಪ್ರಸಂಗವನ್ನು ಹೊಂದಬಾರದು. ಬ್ರಾಹ್ಮಣರಿಗೆ ಬಹುಮಾನ ಮಾಡಬೇಕು. ಗುರುಗಳನ್ನು ಪೂಜಿಸಬೇಕು. ಎಲ್ಲರಿಗೂ ಅನುಕೂಲನಾಗಿರಬೇಕು. ಮೃದುಸ್ವಭಾವವುಳ್ಳವ ನಾಗಿರಬೇಕು. ಪ್ರಿಯವಾಗಿ ಮಾತಾಡುವವನಾಗಬೇಕು. ಅಧಿಕಾರದಲ್ಲಿ ಸುಳ್ಳು ಹೇಳುವುದೂ, ರಾಜರಲ್ಲಿ ಚಾಡಿ ಹೇಳಿಕೊಡುವುದೂ, ಗುರುಗಳಿಗೆ ವ್ಯರ್ಥವಾಗಿ ನಿರ್ಬಂಧಮಾಡುವುದೂ ಬ್ರಹ್ಮಹತ್ಯೆಗೆ ಸಮಾನಗಳು. ರಾಜರಿಗೆ ಬಡಿಯಬಾರದು. ಗೋವನ್ನು ಸಂಹರಿಸಬಾರದು. ಇವು ಎರಡೂ ಭ್ರೂಣಹತ್ಯೆಗೆ ಸಮಾನಗಳು.

ಅಗ್ನಿಯನ್ನು ಪರಿತ್ಯಜಿಸಬಾರದು. ವೇದಗಳನ್ನು ಪರಿತ್ಯಜಿಸಬಾರದು. ಬ್ರಾಹ್ಮಣರನ್ನು ನಿಂದಿಸಬಾರದು. ಇವೂ ಬ್ರಹ್ಮಹತ್ಯೆಗೆ ಸಮಾನಗಳು'.

ಧರ್ಮರಾಜನು—'ಯಾವ ವಿಧವಾದ ಬ್ರಾಹ್ಮಣರು ಉತ್ತಮರು? ಯಾರಿಗೆ ದಾನ ಮಾಡಿದ್ದು ಮಹಾಫಲಕ್ಕೆ ಕಾರಣವಾಗುತ್ತದೆ?'

ಭೀಷ್ಮಾಚಾರ್ಯರು—'ಯಾರು ಕೋಪವಿಲ್ಲದವರಾಗಿ ಧರ್ಮದಲ್ಲಿ ಆಸಕ್ತರಾಗಿ ಸತ್ಯವಚನವುಳ್ಳವರಾಗಿ ಇಂದ್ರಿಯನಿಗ್ರಹವುಳ್ಳವರಾಗಿ ಇರುತ್ತಾರೋ ಅವರಿಗೆ ದಾನಮಾಡಿದ್ದು ಮಹಾಫಲಪ್ರದವಾದದ್ದು. ಅಭಿಮಾನರಹಿತರಾಗಿ ಸರ್ವವನ್ನು ಸಹಿಸುವವರಾಗಿ ಜಿತೇಂದ್ರಿಯರಾಗಿ ಸರ್ವಭೂತಗಳಿಗೂ ಹಿತರಾಗಿ ಮಿತ್ರರಾಗಿ ಇರುವವರಿಗೆ ದಾನಮಾಡಿದರೆ ಮಹಾಫಲವುಂಟಾಗುವುದು. ಲೋಭ ರಹಿತರಾದ ಶುದ್ಧರಾದ ವಿದ್ಯಾವಂತರಾದ ಅಕಾರ್ಯದಲ್ಲಿ ಲಜ್ಜಾವುಳ್ಳವರಾದ ಸತ್ಯವಚನವುಳ್ಳವರಾದ ವಿಹಿತಧರ್ಮದಲ್ಲಿ ಆಸಕ್ತರಾದ ಬ್ರಾಹ್ಮಣರಿಗೆ ದಾನ ಮಾಡಿದರೆ ಮಹಾಫಲವು ಬರುವುದು. ಯಾರು ಅಂಗಶಾಸ್ತ್ರಗಳಿಂದ ಸಹಿತಗಳಾದ ನಾಲ್ಕು ವೇದಗಳನ್ನು ಓದಿರುವನೋ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಆರು ಕರ್ಮಗಳಲ್ಲಿ ಆಸಕ್ತನಾಗಿರುವನೋ ಅವನು ದಾನಕ್ಕೆ ಪಾತ್ರವೆಂದು ಋಷಿಗಳು ತಿಳಿಯುವರು. ಇಂತಹವರಿಗೆ ದಾನಮಾಡಿದರೆ ಮಹಾಫಲವು ಬರುವುದು. ಗುಣವಂತರಿಗೆ ದಾನ ಮಾಡಿದರೆ ಸಾವಿರ ಪಾಲು ಫಲವು ಬರುವುದು. ಜ್ಞಾನ, ಶಾಸ್ತ್ರ ಶ್ರವಣ, ಸದಾಚಾರ, ಉತ್ತಮ ಸ್ವಭಾವ ಇವುಗಳಿಂದ ಕೂಡಿದ ಒಬ್ಬ ಬ್ರಾಹ್ಮಣನಾದರೂ ಕುಲವನ್ನೇ ಉದ್ಧರಿಸುವನು. ಅಂತಹ ಬ್ರಾಹ್ಮಣನು ತೃಪ್ತನಾದರೆ ಎಲ್ಲಾ ದೇವತೆಗಳೂ ತೃಪ್ತಿಯನ್ನು ಹೊಂದುವರು. ಅಂತಹ ಬ್ರಾಹ್ಮಣನಿಗೇ ಗೋವನ್ನು ಕುದುರೆಯನ್ನೂ ಹಣವನ್ನು ಅನ್ನವನ್ನೂ ಇತರ ವಸ್ತುಗಳನ್ನು ದಾನಮಾಡಬೇಕು. ಹಾಗೆ ಮಾಡಿದರೆ ಮರಣಾನಂತರದಲ್ಲಿ ದುಃಖ ಪಡಲಾರನು. ಉತ್ತಮ ಗುಣಗಳುಳ್ಳ ಬ್ರಾಹ್ಮಣನನ್ನು ಕೇಳಿದರೆ ದೂರದಿಂದ ಲಾದರೂ ಅವನನ್ನು ಕರೆತಂದು ಸತ್ಕಾರ ಮಾಡಿ ಸರ್ವಪ್ರಕಾರದಿಂದ ಪೂಜಿಸ ಬೇಕು'.



# ಶ್ರಾದ್ಧಾದಿಗಳಿಗೆ ಯೋಗ್ಯಾಯೋಗ್ಯ ಬ್ರಾಹ್ಮಣರ ವಿವೇಕವು [1]

ಭೀಷ್ಮಾಚಾರ್ಯರು ಧರ್ಮರಾಜನಿಗೆ ಹೇಳಿದರು. ''ಮಧ್ಯಾಹ್ನದ ಮೊದಲೇ ದೇವತಾಕಾರ್ಯವನ್ನು ಮಾಡಬೇಕು. ಮಧ್ಯಾಹ್ನದ ಮೇಲೆ ಪಿತೃಕಾರ್ಯವನ್ನು ಮಾಡಬೇಕು. ಮನುಷ್ಯರಿಗೆ ಮಧ್ಯಾಹ್ನದಲ್ಲಿ ಆದರಿಸಿ ಭೋಜನ ಮಾಡಿಸಬೇಕು. ಕಾಲಹೀನವಾದ ದಾನವು ರಾಕ್ಷಸರ ಭಾಗವೆನ್ನುವರು. ಅನ್ನವನ್ನು ದಾಟಿಹೋದರೆ ಅಥವಾ ಮೂಸಿನೋಡಿದರೆ ಅಂತಹ ಅನ್ನವನ್ನು ಭೋಜನ ಮಾಡಿಸಿದರೂ, ಯಾವ ಸಮಯದಲ್ಲಿ ಭೋಜನ ಮಾಡಿಸಬೇಕೋ ಅದಕ್ಕಿಂತ ಮೊದಲೇ ಭೋಜನ ಮಾಡಿಸಿದರೂ, ಭೋಜನ ಮಾಡುವಾಗ ಮುಟ್ಟಾದವಳು ನೋಡುತ್ತಾ ಇದ್ದರೆ ಅದು ರಾಕ್ಷಸರ ಭಾಗವೆನ್ನುವರು. ಪಾಯಸಾದಿಗಳನ್ನು ಶಬ್ದಮಾಡುತ್ತಾ ಭೋಜನ ಮಾಡಿದರೂ ವ್ರತವಿಲ್ಲದೆ ಭೋಜನ ಮಾಡಿದರೂ ನಾಯಿಯು ಮುಟ್ಟಿದ್ದನ್ನು ಭೋಜನ ಮಾಡಿದರೂ, ರಾಕ್ಷಸಭಾಗವಾಗುವುದು. ಕೂದಲು ಅಥವಾ ಕ್ರಿಮಿ ಯಿರುವ ಅನ್ನವನ್ನು ಅನ್ನದ ಮೇಲೆ ಸೀನುವವನಾಗಿ ಅಂತಹ ಅನ್ನವನ್ನೂ ಭೋಜನ ಮಾಡಿಸಿದರೂ, ನಾಯಿಯು ನೋಡಿದ ಅನ್ನವನ್ನು ಭೋಜನ ಮಾಡಿಸಿದರೂ, ಅಳುತ್ತಾ ಅಥವಾ ತಿರಸ್ಕಾರಮಾಡುತ್ತಾ ಭೋಜನ ಮಾಡಿಸಿದರೂ ಅದೂ ರಾಕ್ಷಸಭಾಗವಾಗುವುದು. ಶೂದ್ರನೂ ಶೂದ್ರಪ್ರಾಯನೂ ಭೋಜನ ಮಾಡಿದ್ದೂ, ಶಸ್ತ್ರಧಾರಿಯು ಭೋಜನ ಮಾಡಿದ್ದೂ, ದುಷ್ಟನು ಭೋಜನ ಮಾಡಿದ್ದೂ, ರಾಕ್ಷಸಭಾಗವಾಗುವುದು. ಇನ್ನೊಬ್ಬರ ಎಂಜಿಲನ್ನು ಭೋಜನ ಮಾಡಿದ್ದೂ, ದೇವತಾ ಅತಿಥಿ ಪಿತೃಬಾಲಕಾದಿಗಳನ್ನು ಬಿಟ್ಟು ತಾನೇ ಭೋಜನಮಾಡಿದ್ದೂ ದೇವಕಾರ್ಯ ದಲ್ಲಿ ಪಿತೃಕಾರ್ಯದಲ್ಲಿಯೂ ರಾಕ್ಷಸಭಾಗವಾಗುವುದು. ಬ್ರಾಹ್ಮಣಕ್ಷತ್ರಿಯ ವೈಶ್ಯರು ಶ್ರಾದ್ಧದಲ್ಲಿ ಮಂತ್ರವಿಲ್ಲದೆ ವಿಹಿತಕ್ರಿಯೆಯಿಲ್ಲದೆ ಬಡಿಸಿದರೆ ಅದು ರಾಕ್ಷಸಭಾಗವು. ಪಾತ್ರ ಅಭಿಘಾರ ಮಾಡದೆ ಬಡಿಸಿದ್ದೂ, ದುರಾಚಾರಿಗಳೂ ಭೋಜನ ಮಾಡಿದ್ದೂ ರಾಕ್ಷಸಭಾಗವಾಗುವುದು.

ಪತಿತರಾದ ಮಡ್ಡರಾದ ಹುಚ್ಚರಾದ ಬ್ರಾಹ್ಮಣರು ಶ್ರಾದ್ಧಕ್ಕೆ ಪೂರ್ವಪಂಕ್ತಿಗೆ ಅರ್ಹರಲ್ಲ. ಬಿಳಿ ಕುಷ್ಠರೋಗವುಳ್ಳವನೂ, ಇತರ ಕುಷ್ಠರೋಗವುಳ್ಳವನೂ, ನಪುಂ ಸಕನೂ, ಕ್ಷಯರೋಗವುಳ್ಳವನೂ, ಅಪಸ್ಮಾರ ರೋಗವುಳ್ಳವನೂ, ಕುರುಡನೂ,

1. ಮ.ಭಾ.ಅ.ಪ. ಅ-90

ಶ್ರಾದ್ಧಭೋಜನಕ್ಕೆ ಅರ್ಹರಲ್ಲ. ವೈದ್ಯರೂ, ದೇವರಪೂಜೆಯೇ ಜೀವನವಾಗಿ ಇಟ್ಟುಕೊಂಡವರೂ, ಡಂಭವುಳ್ಳವರೂ, ಸೋಮವಿಕ್ರಯಮಾಡುವವರೂ, ಗಾಯನಮಾಡುವವರೂ, ನರ್ತನಮಾಡುವವರೂ, ದೋಣಿಯಿಂದ ದಾಟಿಸುವವರೂ, ವಾದ್ಯಬಾರಿಸುವವರೂ, ಕಥಾ ಮಾಡುವವರೂ, ಯುದ್ಧ ಮಾಡುವವರೂ, ಶೂದ್ರರಿಗೆ ಪೌರೋಹಿತ್ಯ ಮಾಡಿಸುವವರೂ, ಶೂದ್ರರಿಗೆ ಪಾಠ ಹೇಳುವವರೂ ಶೂದ್ರದಿಂದ ಪಾಠ ಕೇಳುವವರೂ ಸಂಬಳ ತೆಗೆದುಕೊಂಡು ಪಾಠಹೇಳುವವರೂ, ಸಂಬಳ ಕೊಟ್ಟು ಪಾಠಕೇಳುವವರೂ, ಶ್ರಾದ್ಧಭೋಜನಕ್ಕೆ ಅರ್ಹರಲ್ಲ. ಗ್ರಾಮಾಧಿಕಾರಿಯಾಗಿದ್ದ ಬ್ರಾಹ್ಮಣನೂ, ಶೂದ್ರಸ್ತ್ರೀಯ ಸಂಬಂಧವುಳ್ಳ ಬ್ರಾಹ್ಮಣನೂ, ವಿದ್ಯಾವಂತನಾಗಿದ್ದರೂ ಶ್ರಾದ್ಧಭೋಜನಕ್ಕೆ ಅರ್ಹನಾಗುವುದಿಲ್ಲ. ಔಪಾಸನವನ್ನು ಮಾಡದೆ ಇರುವವರೂ, ಹೆಣವನ್ನು ಹೊರುವವರೂ, ಕಳ್ಳತನ ಮಾಡುವವರೂ ಭ್ರಷ್ಟರಾದವರೂ, ಪೂರ್ವದಲ್ಲಿ ಅಪರಿಚಿತರಾದವರೂ ಪುತ್ರಿಕಾ ಪುತ್ರರೂ (ತಂದೆಯು ಮಗಳನ್ನು ಮದುವೆ ಮಾಡಿಕೊಡುವಾಗಲೇ ಇವಳಲ್ಲಿ ಹುಟ್ಟುವ ಮಗನನ್ನು ನನಗೆ ಕೊಡಬೇಕು ಎಂದು ಹೇಳಿ ಮದುವೆ ಮಾಡಿಕೊಟ್ಟ ಕನ್ಯೆಯಲ್ಲಿ ಹುಟ್ಟಿದವನಿಗೆ ಪುತ್ರಿಕಾಪುತ್ರನೆಂದು ಹೆಸರು) ಸಾಲಮಾಡಿದವನೂ, ಬಡ್ಡಿಗೆ ಹಣವನ್ನು ಹಾಕಿದವನೂ, ಪ್ರಾಣಿಗಳನ್ನು ಮಾರುವವನೂ, ಸ್ತ್ರೀಯರಿಂದ ಜೀವಿಸುವವರೂ, ವೇಶ್ಯಾಪತಿಗಳೂ, ಸಂಧ್ಯಾವಂದನೆಯನ್ನು ಮಾಡದೆ ಇರುವವರೂ, ಶ್ರಾದ್ಧಭೋಜನಕ್ಕೆ ಅರ್ಹರಾಗುವುದಿಲ್ಲ.

ಕೃಷಿ ಮಾಡಿದವರಾದರೂ ವ್ರತವುಳ್ಳವರಾಗಿ ಗುಣವಂತರಾಗಿ ಸಂಧ್ಯಾವಂದನೆ ಮಾಡುವವರಾದ ಶ್ರಾದ್ಧಭೋಜನಕ್ಕೆ ಅರ್ಹರಾಗುವರು. ಕ್ಷತ್ರಿಯಧರ್ಮವುಳ್ಳ ಬ್ರಾಹ್ಮಣನನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಬಹುದು. ವೈಶ್ಯಧರ್ಮವುಳ್ಳವನನ್ನು ಭೋಜನ ಮಾಡಿಸಲೇಬಾರದು. ಯಾರು ಅಗ್ನಿಹೋತ್ರವನ್ನು ಮಾಡುತ್ತಿರುವನೋ, ಗ್ರಾಮವಾಸಿಯಾಗಿರುವನೋ, ಕಳ್ಳತನವನ್ನು ಮಾಡುವವನಲ್ಲವೋ, ಅತಿಥಿ ಸತ್ಕಾರವನ್ನು ಮಾಡುತ್ತಿರುವನೋ ಅವನು ಶ್ರಾದ್ಧಕ್ಕೆ ಅರ್ಹನಾಗುವನು. ಯಾರು ಪ್ರತಿನಿತ್ಯವೂ ಮೂರು ಹೊತ್ತು ಗಾಯತ್ರಿಯನ್ನು ಜಪಿಸುವನೋ, ಭಿಕ್ಷಾವೃತ್ತಿಯುಳ್ಳವನಾಗಿರುವನೋ, ಸತ್ಕರ್ಮಗಳನ್ನು ಮಾಡುತ್ತಿರುವನೋ, ಅವನೂ ಶ್ರಾದ್ಧಕ್ಕೆ ಅರ್ಹನಾಗುವನು. ಪೂರ್ವದಲ್ಲಿ ಹಣವಂತನಾಗಿದ್ದು ಆಗ ದರಿದ್ರನಾದವನೂ, ಪೂರ್ವದಲ್ಲಿ ದರಿದ್ರನಾಗಿದ್ದು ಆಗ ಹಣವಂತನಾದವನೂ, ಒಬ್ಬರನ್ನು ಹಿಂಸಾ ಮಾಡದೆ ಇದ್ದವನೂ, ಅಲ್ಪದೋಷವುಳ್ಳವನೂ ಶ್ರಾದ್ಧಕ್ಕೆ ಯೋಗ್ಯನು. ಡಂಭ

ರಹಿತನೂ, ಪಾಪರಹಿತನೂ, ಕುಯುಕ್ತಿಯಿಲ್ಲದಿದ್ದವನೂ, ಯೋಗ್ಯರ ಮನೆಯಲ್ಲಿ ಭಿಕ್ಷಾ ಬೇಡುವವನೂ, ಶ್ರಾದ್ಧಕ್ಕೆ ಯೋಗ್ಯನಾಗುವನು. ವ್ರತಹೀನನಾದವನೂ ವಂಚಕನಾದವನೂ, ಕಳ್ಳತನ ಮಾಡಿ ದವನೂ ಪ್ರಾಣಿಗಳನ್ನು ಮಾರಿದವನೂ, ಪುನಃ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಯಾಗವನ್ನು ಮಾಡಿದವನಾದರೆ ಅವನು ಶ್ರಾದ್ಧಕ್ಕೆ ಅರ್ಹನಾಗುವನು. ಪೂರ್ವದಲ್ಲಿ ಕ್ರೂರಕರ್ಮಗಳಿಂದಲಾದರೂ ಹಣವನ್ನು ಸಂಪಾದಿಸಿ ಆಮೇಲೆ ಎಲ್ಲರಿಗೂ ಆತಿಥ್ಯೋಪಾಚಾರವನ್ನು ಮಾಡಿದರೆ ಅವನೂ ಯೋಗ್ಯನಾಗುವನು. ವೇದವಿಕ್ರಯನ್ನು ಮಾಡಿ ಸಂಪಾದಿಸಿದ ಹಣವನ್ನು, ಸ್ತ್ರೀಯು ಸಂಪಾದಿಸಿದ ಹಣವನ್ನು ದೈನ್ಯದಿಂದ ಸುಳ್ಳುಹೇಳಿ ಸಂಪಾದಿಸಿದ ಹಣವನ್ನು, ಪಿತೃಗಳಿಗೂ ಬ್ರಾಹ್ಮಣರಿಗೂ ಕೊಡಬಾರದು. ಶ್ರಾದ್ಧದಲ್ಲಿ ಭೋಜನ ಮಾಡುವ ಬ್ರಾಹ್ಮಣನು 'ಅಸ್ತು ಸ್ವಧಾ' ಇತ್ಯಾದಿ ಪ್ರತಿವಚನವನ್ನು ಹೇಳದೆ ಇದ್ದರೆ ಒಂದು ದನವನ್ನು ಕೊಡುವೆನೆಂದು ಸುಳ್ಳು ಪ್ರತಿಜ್ಞೆಯನ್ನು ಮಾಡಿದರೆ ಬರುವ ದೋಷವು ಬರುವುದು.

ಒಳ್ಳೇ ಬ್ರಾಹ್ಮಣರೂ ಮೊಸರು ತುಪ್ಪವೂ ಸಿಕ್ಕಿದ ಸಮಯವೂ ಅಮಾವಾಸ್ಯೆಯೂ ಶ್ರಾದ್ಧಕ್ಕೆ ವಿಹಿತವಾದ ಸಮಯವು. ಸೂರ್ಯೋದಯವಾಗಿ ಮೂರು ಮುಹೂರ್ತಗಳಿಗೆ **ಪ್ರಾತಃಕಾಲ**ವೆಂದು ಹೆಸರು. ಆಗ ಬ್ರಾಹ್ಮಣರು ಜಪಧ್ಯಾನಾದಿಗಳನ್ನು ಮಾಡಬೇಕು. ಆಮೇಲೆ ಮೂರು ಮುಹೂರ್ತಗಳಿಗೆ **ಸಂಗವ ಕಾಲ**ವೆಂದು ಹೆಸರು. ಆಮೇಲೆ ಮೂರು ಮುಹೂರ್ತ **ಮಧ್ಯಾಹ್ನವು.** ಆಮೇಲೆ ಮೂರುಮುಹೂರ್ತವು **ಅಪರಾಹ್ನವು.** ಅದು ಪಿತೃಕಾರ್ಯಕ್ಕೆ ಯೋಗ್ಯವಾದದ್ದು. ಆಮೇಲೆ ಮೂರು ಮುಹೂರ್ತವು **ಸಾಯಂಕಾಲವು.** ಅಪರಾಹ್ನಕಾಲದಲ್ಲಿ ಶ್ರಾದ್ಧವನ್ನು ಮಾಡಬೇಕು.

ಶೂದ್ರಾನ್ನರಸದಿಂದ ಪುಷ್ಟವಾದ ಅಂಗವುಳ್ಳ ಬ್ರಾಹ್ಮಣನು ಉತ್ತಮ ಲೋಕವನ್ನು ಹೊಂದಲಾರನು. ಅಶುಚಿಯಾಗಿಯೂ ನಾಸ್ತಿಕನಾಗಿಯೂ ಭೋಜನ ಮಾಡಬಾರದು. ಬ್ರಾಹ್ಮಣನು ಸ್ನಾನಮಾಡದೆ ದೇವತಾಕಾರ್ಯದಲ್ಲಿಯೇ ಪಿತೃಕಾರ್ಯದಲ್ಲಿಯೇ ಭೋಜನ ಮಾಡಿದರೂ, ತಿಳಿದುಕೊಂಡೇ ಲೋಭದಿಂದ ಜಾತಾಶೌಚ ಅಥವಾ ಮೃತಾಶೌಚವುಳ್ಳವನಾಗಿ ಭೋಜನ ಮಾಡಿದರೂ ಒಂದು ಗೋವನ್ನು ಕೊಡುತ್ತೇನೆಂದು ಸುಳ್ಳುಹೇಳಿದ ಫಲವು ಬರುವುದು. ತೀರ್ಥಯಾತ್ರೆಯನ್ನು ಮಾಡುತ್ತೇನೆ ಇತ್ಯಾದಿ ಸುಳ್ಳು ಹೇಳಿ ತನ್ನ ಜೀವನಕ್ಕಾಗಿ ಹಣವನ್ನು ಯಾಚಿಸಿದರೆ ಅವನಿಗೂ ಅದೇ ಫಲವು ಬರುವುದು. ವೇದವ್ರತ ಇತ್ಯಾದಿ ರಹಿತರು ಶ್ರಾದ್ಧದಲ್ಲಿ ಭೋಜನ ಮಾಡಿದರೆ ಅವರಿಗೂ ಅದೇ ದೋಷವುಂಟಾಗುವುದು.

# ದಾನದ ಫಲ

ಪೂರ್ವದಲ್ಲಿ ಸೌರಾಷ್ಟ್ರದೇಶದಲ್ಲಿ ಜೀಮೂತನೆಂಬ ವೈಶ್ಯನಿದ್ದನು. ಅವನು ಬಹು ಹಣವನ್ನು ಸಂಪಾದಿಸಿದ್ದನು. ಅವನು ಒಂದೊಂದು ಮನೆಯಲ್ಲಿ ನೂರುಕೋಟಿ ಬಂಗಾರದ ನಾಣ್ಯಗಳನ್ನು ತುಂಬಿಸಿದನು. ಅವನಿಗೆ ಅರವತ್ತು ವರ್ಷವಾಗಲು ದಾನಮಾಡಬೇಕೆಂಬ ಬುದ್ಧಿಯುಂಟಾಯಿತು. ನಾನು ಎಲ್ಲಾ ಹಣವನ್ನೂ ದಾನ ಮಾಡುವೆನೆಂದು ಪ್ರಸಿದ್ಧಿ ಪಡಿಸಿದನು. ಅದನ್ನು ತಿಳಿದು ಅನೇಕ ದೇಶದಿಂದ ಅನೇಕ ಬ್ರಾಹ್ಮಣರು ಬಹಳ ಹಣವನ್ನು ಸಿಗುವುದೆಂಬ ಆಸೆಯಿಂದ ಬಂದರು.

ಜೀಮೂತನು ಹಣದ ಅಹಂಕಾರವುಳ್ಳವನಾಗಿ ಬಂದ ಬ್ರಾಹ್ಮಣರಿಗೆ ಉಚಿತವಾಗಿ ಬೇಗನೇ ಹಣವನ್ನು ಕೊಡಲಿಲ್ಲ. ಒಂದು ವರ್ಷ ಆರು ತಿಂಗಳು ಅಥವಾ ಮೂರುತಿಂಗಳು ಕೊನೆಯ ಪಕ್ಷ ನಾಲ್ವತ್ತೈದು ದಿವಸಗಳಾದರೂ ಕೋಪಿಸಿಕೊಳ್ಳದೆ ಕಾಯುತ್ತಾ ಇದ್ದ ದೂರದಿಂದ ಬಂದಿರುವ ಬ್ರಾಹ್ಮಣರನ್ನು ನೋಡಿ ಅವರಿಗೆ ಅಷ್ಟು ದಿವಸವಿದ್ದದ್ದಕ್ಕೆ ಬಂದು ಹೋಗಲಿಕ್ಕೂ ಎಷ್ಟು ಖರ್ಚಾಗಬಹುದೋ ಅಷ್ಟೇ ಹಣವನ್ನು ದಾನಮಾಡಿದನು. ಹಾಗೆ ದಾನಮಾಡಿ ಅವನ ಹಣವನ್ನೆಲ್ಲಾ ಖರ್ಚಾಯಿತು. ನೂರು ವರ್ಷವಾಗಲು ಅವನನ್ನು ಯಮದೂತರು ಯಮದೇವ ರಿದ್ದಲ್ಲಿಗೆ ಕರೆದುಕೊಂಡು ಹೋದರು. ಯಮದೇವರು ಅವನನ್ನು ನೋಡಿ ಇವನು ಆನೆಯಾಗಿ ಹುಟ್ಟಲಿ ಎಂದರು. ಅದನ್ನು ಕೇಳಿ ಜೀಮೂತನು 'ಅದೇಕೆ? ನಾನು ಬಹಳ ದಾನಗಳನ್ನು ಮಾಡಿದೆನಲ್ಲಾ! ಅವುಗಳ ಫಲಗಳೊಂದೂ ಕಾಣಿಸುವುದಿಲ್ಲ. ನಾನು ಆನೆಯಾಗಿ ಯಾಕೆ ಹುಟ್ಟಬೇಕು?' ಎಂದನು.

ಯಮದೇವರು 'ನೀನು ಮಾಡಿದ ದಾನವು ಅವರ ಸೇವೆಗೆ ಸರಿಯಾಯಿತು. ಅವರು ಕಷ್ಟಪಟ್ಟಿದ್ದಕ್ಕೆ ಸರಿಯಾಗಿ ಹಣವನ್ನು ಕೊಟ್ಟಿರುವಿ. ಅದರಿಂದ ನಿನಗೆ ಫಲವು ಹೇಗೆ ಬರಬೇಕು. ಅವರು ಕಷ್ಟಪಟ್ಟದ್ದಕ್ಕೂ ನೀನು ಕೊಟ್ಟಿದ್ದಕ್ಕೂ ಸರಿಯಾಯಿತಷ್ಟೆ. ಬ್ರಾಹ್ಮಣರಿಂದ ಕೆಲಸ ಮಾಡಿಸಿ ಕೊಟ್ಟದ್ದು ದಾನವಾಗಲಾರದು. ಅದು ಸಂಬಳವಾಯಿತಷ್ಟೆ! ಅದರಿಂದ ನಿನಗೆ ಸ್ವಲ್ಪವೂ ಫಲವಾಗಲಾರದು. ನೀನು ದಾನಮಾಡುತ್ತಿರುವ ಸಮಯದಲ್ಲಿ ಕೃಷ್ಣಾ ನದಿಯ ತೀರದಲ್ಲಿ ವಾಸಮಾಡುತ್ತಿದ್ದ ವಿಷ್ಣು ಶರ್ಮಾ ಎಂಬ ಬ್ರಾಹ್ಮಣನು ತನಗೆ ಹಣವು ಸಿಗುವುದೆಂದು ಆಸೆಯಿಂದ ಬಂದನು. ಅಷ್ಟರಲ್ಲಿ ನಿನ್ನ ಆಯುಷ್ಯವು ಪೂರ್ಣವಾಗಿತ್ತು. ಆದುದರಿಂದ ನೀನು ಅವನಿಗೆ ಸಾಲಗಾರನಾರುವಿ. ಆ ಸಾಲವನ್ನು ನೀನು ತೀರಿಸಬೇಕಾಗಿದೆ. ಅದಕ್ಕಾಗಿಯೇ ನೀನು

ಆನೆಯಾಗಿ ಹುಟ್ಟಬೇಕು. ಈ ದಿವಸದಿಂದ ಹತ್ತನೇ ವರ್ಷದಲ್ಲಿ ವಿಷ್ಣುಶರ್ಮನು ಸಾಯುವನು. ತರುವಾಯ ಅವನು ಮಾಹಿಷ್ಮತೀನಗರದಲ್ಲಿ ಕ್ಷತ್ರಿಯವಂಶದಲ್ಲಿ ಹೈಹಯ ಕುಲದಲ್ಲಿ ಪ್ರತೀಪ ಎಂಬ ರಾಜನಾಗಿ ಹುಟ್ಟುವನು. ಅವನ ದ್ವಾರದಲ್ಲಿ ಆನೆಯಾಗಿ ಇದ್ದುಕೊಂಡು ಯುದ್ಧದಲ್ಲಿ ದೇಹವನ್ನು ಪರಿತ್ಯಾಗ ಮಾಡಿ ಅವನ ಸಾಲವನ್ನು ತೀರಿಸಿಕೊಂಡು ಆಮೇಲೆ ಪುನಃ ವೈಶ್ಯನಾಗಿ ಹುಟ್ಟುವಿ' ಎಂದು ಹೇಳಿದರು.

ಯಮದೇವರ ಮಾತನ್ನು ಕೇಳಿ ಜೀಮೂತನು ಸುಮ್ಮನೆ ಆದನು. ಯಮದೂತರು ಅವನನ್ನು ವಿಂಧ್ಯಪರ್ವತದಲ್ಲಿದ್ದ ಅರಣ್ಯದಲ್ಲಿ ಒಂದು ಆನೆಯ ಹೊಟ್ಟೆಯಲ್ಲಿ ಹುಟ್ಟುವಂತೆ ಮಾಡಿದರು.

ದಾನದ ಫಲವು ಯಾರು ಯಾರಿಗೆ ಎಷ್ಟೆಷ್ಟು ಲಭಿಸುವುದು ಎಂಬ ವಿಷಯದಲ್ಲಿ ಒಂದು ಕಥೆಯಿದೆ. ಪೂರ್ವದಲ್ಲಿ ಉತ್ಕಲ ದೇಶದಲ್ಲಿ ವೀರಬಾಹುವೆಂಬ ರಾಜನಿದ್ದನು. ಅವನಿಗೆ ಸುಮಂತ್ರನೆಂಬ ಮಂತ್ರಿಯಿದ್ದನು. ರಾಜನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಅವನ ರಾಜ್ಯದಲ್ಲಿ ಒಂದು ತಗ್ಗಾದ ಪ್ರದೇಶದಲ್ಲಿ ಮಳೆಕಾಲದಲ್ಲಿ ಒಂದು ಚಿಕ್ಕ ಪಾರಿವಾಳ ಪಕ್ಷಿಯು (ಪೊರೆ) ಹೊರಳಾಡಿತು. ಅದರಿಂದ ಅಲ್ಲಿ ಸ್ವಲ್ಪ ತಗ್ಗಾಗಿ ಸ್ವಲ್ಪ ನೀರು ನಿಂತಿತು. ಅಲ್ಲಿಗೆ ಬಂದ ಒಂದು ಹಂದಿಯು ಅಲ್ಲಿ ಸ್ವಲ್ಪ ನೀರು ನಿಂತಿರುವುದನ್ನು ನೋಡಿ ತಾನೂ ಹೊರಳಾಡಿತು. ಇದರಿಂದ ಇನ್ನೂ ಸ್ವಲ್ಪ ತಗ್ಗಾಗಿ ಅಲ್ಲಿ ಮತ್ತಷ್ಟು ಕೆಸರುನೀರು ನಿಂತಿತು. ಅಲ್ಲಿಗೆ ಒಂದು ಎಮ್ಮೆಯು ಬಂದು ಅದೂ ಹೊರಳಾಡಿತು. ಅದರಿಂದ ಮತ್ತೂ ಹೆಚ್ಚಾಗಿ ತಗ್ಗಾಗಿ ನೀರು ನಿಂತಿತು. ಆಮೇಲೆ ಅಲ್ಲಿಗೆ ಒಂದು ಆನೆಯು ಬಂದಿತು. ಅದೂ ಆ ನೀರನ್ನು ನೋಡಿ ತಾನೂ ಬಿದ್ದುಕೊಂಡು ಹೊರಳಾಡಿತು. ಇದರಿಂದ ಅಲ್ಲಿ ತುಂಬಾ ತಗ್ಗಾಯಿತು. ಮಳೆಯು ಬರಲು ಅಲ್ಲಿ ಬಹುನೀರು ನಿಂತಿತು. ಒಂದುದಿನ ದೈವೇಚ್ಛೆಯಿಂದ ಅಲ್ಲಿಗೆ ರಾಜನಾದ ವೀರಬಾಹುವೂ ಮಂತ್ರಿಯಾದ ಸುಮಂತ್ರನೂ ಬಂದರು. ಸುಮಂತ್ರನು ಆ ಕೊಳವನ್ನು ನೋಡಿ ಸುತ್ತಲೂ ಅಲ್ಲಿಗೆ ಮಳೆನೀರು ಬರಲಿಕ್ಕೆ ಮಾರ್ಗವಿರುವುದನ್ನು ನೋಡಿ ರಾಜನೊಡನೆ 'ಇಲ್ಲಿ ಒಂದು ದೊಡ್ಡ ಸರೋವರವನ್ನು ಕಟ್ಟಿಸಿದರೆ ಬಹು ನೀರು ನಿಲ್ಲುವುದು. ಬಹುಜನರು ತೃಪ್ತಿಯನ್ನು ಹೊಂದುವರು. ಮಹಾರಾಜನಿಗೆ ಬಹುಪುಣ್ಯವು ಬರುವುದು' ಎಂದನು. ರಾಜನು ಹಾಗೆಯೇ ಮಾಡು ಎಂದು ಮಂತ್ರಿಯೊಡನೆ ಹೇಳಿದನು. ತರುವಾಯ ಅಲ್ಲಿ ದೊಡ್ಡ ಸರೋವರವನ್ನು ಮಂತ್ರಿಯು ಕಟ್ಟಿಸಿದನು. ಅಲ್ಲಿ ನಿರ್ಮಲವಾದ ಬಹುನೀರು

ನಿಂತಿತ್ತು. ತಾವರೆ ಹೂಗಳು ಬೆಳೆದವು. ತೀರ್ಥಯಾತ್ರೆಗೆ ಹೋಗುವ ಜನರೂ ಬೇರೆ ಮಾರ್ಗದಲ್ಲಿ ಹೋಗುವ ಜನರೂ ಪಶುಗಳೂ ಕ್ರಿಮಿಕೀಟಾದಿಗಳೂ ಅಲ್ಲಿ ನೀರನ್ನು ಕುಡಿದು ಬಹುಸಂತೋಷವನ್ನು ಹೊಂದಿದವು. ಈ ಸರೋವರದಿಂದ ಪುಣ್ಯವು ಯಾರಿಗೆ ಎಷ್ಟು ಎಂದು ವಿವಾದವಾಗಲು ಯಮದೇವರು ಚಿತ್ರಗುಪ್ತನೊಡನೆ ಪಾರಿವಾಳಪಕ್ಷಿ, ಹಂದಿ, ಎಮ್ಮೆ, ಆನೆ, ವೀರಬಾಹುರಾಜ, ಸುಮಂತ್ರ ಎಂಬ ಮಂತ್ರಿ ಇಷ್ಟು ಜನರೂ ಕೂಡ ತಮ್ಮ ಯೋಗ್ತತಾನುಸಾರವಾಗಿ ಸಮವಾದ ಅಂದರೆ ಯಾರು ಯಾರು ಎಷ್ಟು ಸಹಾಯ ಮಾಡಿದ್ದಾರೋ ಅವರವರು ಅಷ್ಟಷ್ಟು ಪುಣ್ಯವನ್ನು ಹೊಂದುವರು' ಎಂದರು. ಚಿತ್ರಗುಪ್ತನು ಹಾಗೆಯೇ ಬರೆದನು. ಆದುದರಿಂದ ಪುಣ್ಯಕಾರ್ಯವನ್ನು ತನ್ನಿಂದ ಮಾಡಲಿಕ್ಕೆ ಸಾಧ್ಯವಾಗದಿದ್ದರೆ ಇನ್ನೊಬ್ಬರನ್ನಾದರೂ ಧರ್ಮಕಾರ್ಯದಲ್ಲಿ ಪ್ರೇರಿಸಬೇಕು. ಪಾಪಕಾರ್ಯವನ್ನು ಮಾಡದಂತೆ ನಿಷೇಧಿಸಬೇಕು.



## ಅನ್ನದಾನದ ಕಥೆ [1]

ಧರ್ಮರಾಜನು ಸರಳ ಮಂಟಪದಲ್ಲಿ ಮಲಗಿರುವ ಭೀಷ್ಮಾಚಾರ್ಯರೊಡನೆ 'ರಾಜನು ಗುಣವಂತರಾದ ಬ್ರಾಹ್ಮಣರಿಗೆ ದಾನಮಾಡಬೇಕೆಂಬ ಅಭಿಪ್ರಾಯವುಳ್ಳವನು ಯಾವ ದಾನವನ್ನು ಮಾಡಬೇಕು. ಯಾವ ದಾನದಿಂದ ಸಂತುಷ್ಟರಾಗಿ ಮಹಾಫಲವನ್ನು ಕೊಡುವರು' ಎಂದು ಕೇಳಲು—

ಭೀಷ್ಮಾಚಾರ್ಯರು 'ಧರ್ಮರಾಜ! ಪೂರ್ವದಲ್ಲಿ ಈ ವಿಷಯವನ್ನು ನಾರದರು ಹೀಗೆ ಹೇಳಿರುವರು—

ದೇವತೆಗಳೂ ಋಷಿಗಳೂ ಅನ್ನವನ್ನೇ ಹೊಗಳುವರು. ಲೋಕದ ವ್ಯಾಪಾರವೆಲ್ಲವೂ ಅನ್ನದ ಅಧೀನವಾಗಿದೆ. ಅನ್ನದಾನಕ್ಕೆ ಸಮಾನವಾದ ದಾನವು ಇಷ್ಟರವರೆಗೆ ಇಲ್ಲ. ಇನ್ನು ಮುಂದೆ ಬರಲಾರದು. ಅನ್ನವು ಬಲವನ್ನು ಕೊಡುವುದು. ಪ್ರಾಣಗಳು ಅನ್ನದ ಅಧೀನ. ಗೃಹಸ್ಥರೂ ಸನ್ಯಾಸಿಗಳೂ ತಪಸ್ವಿಗಳೂ ಎಲ್ಲರೂ ಅನ್ನದಿಂದಲೇ ಜೀವಿಸುವರು. ಕುಟುಂಬಿಯಾದ ಶ್ರಮಪಡುತ್ತಿರುವ ಗೃಹಸ್ಥನಿಗೂ, ಭಿಕ್ಷಾಬೇಡುವ ಬ್ರಹ್ಮಚಾರಿ ಯತಿಗಳಿಗೂ, ಅನ್ನವನ್ನು ಕೊಡಬೇಕು. ಯಾರು

1. ಮ.ಭಾ.ಅಪ. ಅ-63

ಯೋಗ್ಯಬ್ರಾಹ್ಮಣನಿಗೆ ಅನ್ನವನ್ನು ಹಾಕುವನೋ ಅವನು ತನಗಾಗಿ ಪರಲೋಕದ ಒಂದು ನಿಧಿಯನ್ನು ಸಂಪಾದಿಸುವನು. ಮಾರ್ಗದಲ್ಲಿ ನಡೆದುಕೊಂಡು ಬಂದು ಶ್ರಮದಿಂದ ಇರುವ ವೃದ್ಧನಾದ ಯೋಗ್ಯನಾದವನಿಗೆ ಅವಶ್ಯವಾಗಿಯೂ ಗೃಹಸ್ಥನು ಅನ್ನವನ್ನು ಹಾಕಬೇಕು.

ಬ್ರಾಹ್ಮಣನು ಮನೆಗೆ ಬಂದಾಗ ಕೋಪಬಂದರೂ ತಡೆದು ಕೊಂಡು ಕೋಪಿಸಿ ಕೊಳ್ಳದೆ ಮಾತ್ಸರ್ಯವಿಲ್ಲದೆ ಅನ್ನದಾನವನ್ನು ಮಾಡುವವನು ಈಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖದಿಂದ ಇರುವನು. ಮನೆಗೆ ಬಂದವರನ್ನು ಅವಮಾನ ಮಾಡಬಾರದು. ಚಂಡಾಲನಿಗಾಗಲೀ ನಾಯಿಗಾಗಲೀ ಅನ್ನವನ್ನು ಹಾಕಿದ್ದು ವ್ಯರ್ಥ ವಾಗಬಾರದು. ಪಿತೃಗಳನ್ನು ಋಷಿಗಳನ್ನು ದೇವತೆಗಳನ್ನು ಅತಿಥಿ ಬ್ರಾಹ್ಮಣರನ್ನೂ ಯಾರು ಅನ್ನದಿಂದ ತೃಪ್ತಿಯನ್ನು ಪಡಿಸುವನೋ ಅವನಿಗೆ ಬಹು ಪುಣ್ಯವು ಬರುವುದು. ಮಹಾಪಾಪವನ್ನು ಮಾಡಿದವನಾದರೂ ಅನ್ನವನ್ನು ಅಪೇಕ್ಷಿಸುವ ಬ್ರಾಹ್ಮಣನಿಗೆ ಅನ್ನದಾನವನ್ನು ಮಾಡಿದರೆ ಅವನ ಪಾಪ ಪರಿಹಾರ ವಾಗುವುದು. ಬ್ರಾಹ್ಮಣರಿಗೆ ಅನ್ನದಾನ ಮಾಡಿದರೆ ಅಕ್ಷಯ ಫಲವುಂಟಾಗುವುದು. ಶೂದ್ರರಿಗೆ ಅನ್ನ ಹಾಕಿದರೂ ಮಹಾಫಲವಿದೆ. ಬ್ರಾಹ್ಮಣನು ಅನ್ನಾಪೇಕ್ಷಿಯಾಗಿ ಬಂದಾಗ ಅವನ ಗೋತ್ರವನ್ನೋ ಆಚಾರವನ್ನೋ ದೇಶವನ್ನೋ ಯಾವುದನ್ನೂ ಕೇಳಬಾರದು. ಅನ್ನವನ್ನು ಹಾಕಬೇಕು. ಇಂತಹ ಅನ್ನದಾನವನ್ನು ಮಾಡುವುದರಿಂದ ಪರಲೋಕದಲ್ಲಿ ಮಹಾಸುಖವುಂಟಾಗುವುದು. ಈಪ್ರಕಾರವಾಗಿ ನಾರದರು ಬಹುವಿಸ್ತಾರವಾಗಿ ಅನ್ನದಾನದ ಮಹಿಮೆಯನ್ನು ನಿರೂಪಿಸಿದರು' ಎಂದು ಹೇಳಿದರು.



## ಅನ್ನದಾನದ ಮಹಿಮೆ [1]

ಪೂರ್ವದಲ್ಲಿ ಯೋಗಭೂಷಣನೆಂಬ ಬ್ರಾಹ್ಮಣನಿದ್ದನು. ಅವನು ಎಲ್ಲಾ ಶಾಸ್ತ್ರಗಳ ಅರ್ಥವನ್ನು ತಿಳಿದವನಾಗಿದ್ದನು. ಬಹುಮಕ್ಕಳುಳ್ಳವನಾಗಿದ್ದನು. ಹಣವಂತ ನಾಗಿಯೂ ಇದ್ದನು. ಅವನು ಬಂಧುಗಳಿಗೆ ಹಿತವನ್ನು ಮಾಡುತ್ತಿದ್ದನು. ಅತಿಥಿಗಳಲ್ಲಿ ಪ್ರೀತಿಯುಳ್ಳವನಾಗಿದ್ದನು. ಅನ್ನದಾನವೇ ಉತ್ತಮವಾದ ದಾನವೆಂದು ತಿಳಿದು ಕೊಂಡು ಯಾವಾಗಲೂ ಅನ್ನದಾನವನ್ನು ಮಾಡುತ್ತಿದ್ದನು. ದುರ್ಭಿಕ್ಷೆಯಲ್ಲಿಯೂ

---

1. ಮ.ಭಾ.ಅಪ. ಅ-63

ಸುಭಿಕ್ಷೆಯಲ್ಲಿಯೂ ಯಾವಾಗಲೂ ಅನ್ನದಾನವನ್ನು ಮಾಡುತ್ತಿದ್ದನು. ಬ್ರಾಹ್ಮಣರಿಂದ ಆರಂಭಿಸಿ ಶೂದ್ರರವರೆಗೆ ಎಲ್ಲರಿಗೂ ರುಚಿಕರವಾದ ಅನ್ನವನ್ನು ಹಾಕುತ್ತಿದ್ದನು. ಈರೀತಿಯಾಗಿ ಇವನು ಅನ್ನದಾನವನ್ನು ಮಾಡುತ್ತಿರಲು ದೇವಲೋಕದಲ್ಲಿ ಗಂಧರ್ವರು ಅವನನ್ನು ಸ್ತುತಿಸುತ್ತಿದ್ದರು. ಅದನ್ನು ಕೇಳಿ ಇಂದ್ರದೇವರು ಅವನನ್ನು ಪರೀಕ್ಷಿಸುವುದಕ್ಕಾಗಿ ವೃದ್ಧಬ್ರಾಹ್ಮಣರೂಪವನ್ನು ಧರಿಸಿಕೊಂಡು ಬಂದರು. ತಾನು ಬರುವ ಮೊದಲೇ ಪುಷ್ಕಲಾವರ್ತಕ ಎಂಬ ಮೇಘಕ್ಕೆ ಆಜ್ಞಾಪಿಸಿ ಏಳು ದಿವಸಗಳವರೆಗೆ ಮಳೆಯನ್ನು ಸುರಿಸಿದರು. ಯೋಗಭೂಷಣನ ಮನೆಯ ಸುತ್ತಲೂ ನೂರುಮೈಲು ದೂರ ನೀರು ತುಂಬಿಹೋಯಿತು. ಆ ಸಮಯದಲ್ಲಿ ಸರಿಯಾಗಿ ಇಂದ್ರದೇವರು ಬಂದರು. ವೃದ್ಧ ಬ್ರಾಹ್ಮಣರೂಪವನ್ನು ಧರಿಸಿದ್ದರು. ತುಂಬಾ ಕೃಶರಾಗಿದ್ದರು. ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಹಸಿವೆಯಿಂದ ಬಂದರು.

ವೃದ್ಧಬ್ರಾಹ್ಮಣರೂಪದಿಂದ ಬಂದಿರುವ ಇಂದ್ರದೇವರನ್ನು ನೋಡಿ ಯೋಗ ಭೂಷಣನು ಕಾಲುಮುಟ್ಟಿ ನಮಸ್ಕಾರ ಮಾಡಿದನು. ನಾವೆಲ್ಲರೂ ಧನ್ಯರಾದೆವೆಂದು ಉಪಚಾರ ಮಾತನ್ನು ಹೇಳಿದನು. ಈರೀತಿಯಾಗಿ ಯೋಗಭೂಷಣ ಮಾತಾಡು ತ್ತಿರುವಾಗ ಅವನ ಹೆಂಡತಿಯು ಒಳ್ಳೇ ಮಳೆಯು ಸುರಿಯುತ್ತಿರಲು ಬಹುಕಷ್ಟದಿಂದ ಬೆಂಕಿಯನ್ನು ಮಾಡಿ ಅಡಿಗೆಯನ್ನು ಮಾಡಿದಳು. ತರುವಾಯ ಯೋಗಭೂಷಣನು ಬಂದ ಬ್ರಾಹ್ಮಣರ ಕಾಲನ್ನು ತೊಳೆದು ಎಲೆಯಲ್ಲಿ ಅನ್ನವನ್ನು ಹಾಕಿ ಭೋಜನ ಮಾಡಬೇಕೆಂದನು. ಭಗವಂತನು ಪ್ರೀತನಾಗಲಿ ಎಂದು ಮನಸ್ಸಿನಲ್ಲೇ ತಿಳಿದು ಕೊಂಡನು. ಆಗ ಬ್ರಾಹ್ಮಣರೂಪದಿಂದ ಇದ್ದ ಇಂದ್ರದೇವರು ದೇವತೆಗಳನ್ನು ಸ್ಮರಿಸಿಕೊಂಡರು. ಆಗ ಅವರೂ ಬ್ರಾಹ್ಮಣರೂಪದಿಂದ ಬಂದವರಾಗಿ ನಮಗೆ ಅನ್ನವನ್ನು ಹಾಕಬೇಕು ಎಂದರು. ಭೋಜನಕ್ಕೆಂದು ಕುಳಿತಿದ್ದ ಬ್ರಾಹ್ಮಣ ರೂಪದಿಂದ ಇದ್ದ ಇಂದ್ರದೇವರು ಆ ಬ್ರಾಹ್ಮಣರ ಮಾತನ್ನು ಕೇಳಿ ಯೋಗಭೂಷಣ ನೊಡನೆ 'ಬ್ರಾಹ್ಮಣ! ಈಗ ಬಂದಿರುವ ಬ್ರಾಹ್ಮಣರೆಲ್ಲರೂ ಹಸಿದಿರುವರು. ಅವರೊಡನೆಯೇ ನಾನೂ ಭೋಜನ ಮಾಡುವೆನು' ಎಂದು ಹೇಳಿದರು. ಅದನ್ನು ಕೇಳಿ ಯೋಗಭೂಷಣನು ತನ್ನ ಹೆಂಡತಿಯೊಡನೆ ಬೇಗನೇ ಅಡಿಗೆ ಮಾಡು ಎಂದನು. ಅದಕ್ಕೆ ಅವಳು 'ಮನೆಯಲ್ಲಿ ಕಟ್ಟಿಗೆಯೇ ಇಲ್ಲ, ಬ್ರಾಹ್ಮಣರು ಹಸಿದಿರುವರು. ಏನು ಮಾಡಲಿ' ಎಂದಳು. 'ಮನೆಯಲ್ಲಿರುವ ವಸ್ತುಗಳನ್ನೆಲ್ಲಾ ಮನೆಯಲ್ಲಿರುವ ತುಪ್ಪದಗಡಿಗೆಗಳಲ್ಲಿ ಒದ್ದೆಮಾಡಿ ಅದರಿಂದಲೇ ಅಡಿಗೆಮಾಡು' ಎಂದನು. ಅದನ್ನು ಕೇಳಿ ಅವಳು ಒಂದು ವಸ್ತ್ರವನ್ನು ಬಿಟ್ಟು ಮತ್ತೆ ಎಲ್ಲಾ ವಸ್ತುಗಳನ್ನೂ ತುಪ್ಪವನ್ನು ಹಾಕಿ

ಉರಿಸಿದಳು. ಆದರೂ ಅಡಿಗೆಯು ಆಗಲಿಲ್ಲ. ಅವಳು ಗಂಡನೊಡನೆ 'ಮನೆಯ ವಸ್ತ್ರಗಳೂ ತುಪ್ಪವೂ ಮುಗಿಯಿತು. ಆಡಿಗೆಯು ಆಗಲೇ ಇಲ್ಲ' ಎಂದಳು. 'ಇನ್ನು ನಾನೇನು ಮಾಡಲಿ' ಎಂದೂ ಕೇಳಿದಳು. ಈ ಮಾತನ್ನು ಕೇಳಿ ಬ್ರಾಹ್ಮಣನಿಗೆ ಕೋಪವು ಬಂದಿತು. 'ದುಷ್ಟೆಯೇ! ಬ್ರಾಹ್ಮಣೋತ್ತಮರು ಹಸಿವೆ ಯಿಂದ ಶ್ರಮಪಡುತ್ತಿದ್ದಾರೆ. ಅಡಿಗೆಯಾಗಿಲ್ಲ ಎಂದು ಹೇಳುವೆಯಾ? ನಿನ್ನ ಕಾಲು ಗಳನ್ನೇ ಕಟ್ಟಿಗೆಯಂತೆ ಇಟ್ಟು ಅಡಿಗೆ ಮಾಡು' ಎಂದು ಹೇಳಿದನು. ಪತಿವ್ರತೆಯಾದ ಆ ಸ್ತ್ರೀಯು ಕಾಲುಗಳಿಗೆ ಚೆನ್ನಾಗಿ ಎಣ್ಣೆಯನ್ನು ಸುರಿದು ಕಟ್ಟಿಗೆಯಂತೆ ಇಟ್ಟು ಅಡಿಗೆಯನ್ನು ಪೂರೈಸಿದಳು. ಬಂದ ಬ್ರಾಹ್ಮಣರೆಲ್ಲರೂ ಕಾಲುತೊಳೆದುಕೊಂಡು ಬಂದು ಕೂತು ಕೊಂಡರು. ಯೋಗಭೂಷಣನು ಹೆಂಡತಿಯನ್ನು ವಿಚಾರಿಸದೆ ಎಲೆಗಳನ್ನು ಹಾಕಿ ಬಡಿಸಿದನು. ಆಗ ಬ್ರಾಹ್ಮಣರೂಪಿಯಾದ ಇಂದ್ರದೇವರು 'ಅತಿಥಿಗಳಿಗೆ ಮನೆಯ ಯಜಮಾನಿಯು ಬಡಿಸಿದರೆ ಸಂತೋಷವುಂಟಾಗುವುದು. ಅದುದರಿಂದ ನಿನ್ನ ಪತ್ನಿಯು ಬಡಿಸಲಿ' ಎಂದರು. ಯೋಗಭೂಷಣನು ಅಡಿಗೆ ಮನೆಯ ಒಳಗೆ ಬದು ನೋಡುವಾಗ ಅವನ ಹೆಂಡತಿಯು ಮೊಳಕಾಲು ಸುಟ್ಟುಹೋಗಿ ಮೂರ್ಛಿತಳಾಗಿ ಮಲಗಿದ್ದಳು. ನೋಡಿ ಯೋಗಭೂಷಣನು ತುಂಬಾ ದುಃಖಪಟ್ಟನು. ತಾನು ಕೋಪದಿಂದ ಕಾಲುಗಳನ್ನು ಇಟ್ಟು ಅಡಿಗೆ ಮಾಡಲಿಕ್ಕೆ ಹೇಳಿದೆನೆಂದು ತುಂಬಾ ಪಶ್ಚಾತ್ತಾಪಪಟ್ಟನು. ಪತ್ನಿಯನ್ನೇ ಸ್ಮರಿಸಿಕೊಂಡು ತುಂಬಾ ದುಃಖವುಳ್ಳವನಾಗಿ ಮೂರ್ಛಿತನಾಗಿ ಬಿದ್ದನು.

ತರುವಾಯ ಇಂದ್ರದೇವರ ಅನುಗ್ರಹದಿಂದ ಎದ್ದವಳಾಗಿ ಬ್ರಾಹ್ಮಣರಿಗೆ ಬಡಿಸಿ ಭೋಜನ ಮಾಡಿಸಿದಳು. ಬ್ರಾಹ್ಮಣರೆಲ್ಲರೂ ತೃಪ್ತಿಯಿಂದ ಭೋಜನ ಮಾಡಿದವ ರಾಗಿ ನಿನ್ನ ಗಂಡನನ್ನು ಕರೆದುಕೊಂಡು ಬಾ ಎಂದರು. ಆಗ ಅವಳು ದುಃಖದಿಂದ ಬಿದ್ದಿರುವ ಗಂಡನನ್ನು ಎಬ್ಬಿಸಿ 'ನೀವು ಯಾಕೆ ಮಲಗಿರುವಿರಿ? ಬ್ರಾಹ್ಮಣರು ಭೋಜನಮಾಡಿ ನಿಮಗೆ ಆಶೀರ್ವದಿಸಲು ಕರೆಯುತ್ತಿರುವರು. ಬನ್ನಿರಿ' ಎಂದು ಕರೆದಳು. ಯೋಗಭೂಷಣನು ಸ್ವಪ್ನದಲ್ಲಿ ನೋಡಿದಂತೆ ಎಲ್ಲವನ್ನು ತಿಳಿದುಕೊಂಡು ಬೇಗನೇ ಎದ್ದು ಬಂದು ಅವರೆಲ್ಲರಿಗೂ ನಮಸ್ಕಾರ ಮಾಡಿ ನನ್ನ ಜನ್ಮವು ಸಫಲವಾಯಿತು ಎಂದುಕೊಂಡನು.

ಇಂದ್ರದೇವರು 'ನಾನು ತೃಪ್ತಿಯನ್ನು ಹೊಂದಿದೆನು. ದೇವತೆಗಳೆಲ್ಲರೂ ತೃಪ್ತ ರಾಗಿರುವರು. ನಾನು ದೇವೇಂದ್ರನೆಂದು ತಿಳಿ. ಇವರೆಲ್ಲರೂ ದೇವತೆಗಳು ಬ್ರಾಹ್ಮಣ ರೂಪದಿಂದ ಬಂದಿರುವರು. ನಿನ್ನನ್ನು ಪರೀಕ್ಷಾ ಮಾಡಲಿಕ್ಕೆ ನಾವೆಲ್ಲರೂ

ಬಂದಿರುವೆವು. ನಾನು ಸ್ವರ್ಗದಲ್ಲಿ ಇರುವಷ್ಟು ಸಮಯ ನೀನೂ ಇರುವಿ. ಬ್ರಾಹ್ಮಣೋತ್ತಮನೇ! ನಿನ್ನ ಧರ್ಮಕ್ಕೆ ವಿಘ್ನವುಂಟಾಗಲಾರದು' ಎಂದು ಹೇಳಿ ಆವನ ಹೆಂಡತಿಯನ್ನೂ ಸಂತೋಷಪಡಿಸಿ ದೇವತೆಗಳಿಂದ ಸಹಿತರಾಗಿ ಅಂತರ್ಧಾನವನ್ನು ಹೊಂದಿದರು. ಯೋಗಭೂಷಣನು ಪತ್ನಿಯೊಡನೆ ಬೇಕಾದ ಭೋಗಗಳನ್ನು ಅನುಭವಿಸಿ ಕೊನೆಗೆ ಪತ್ನಿಯಿಂದ ಸಹಿತನಾಗಿ ಸ್ವರ್ಗವನ್ನು ಹೊಂದಿದನು.



## ಸತ್ಯಕೇತುವಿನ ಅನ್ನದಾನ

ಪೂರ್ವದಲ್ಲಿ ಸತ್ಯಜಿತು ಎಂಬ ಧರ್ಮಿಷ್ಠನು ಇದ್ದನು. ಅವನು ತೀರ್ಥಯಾತ್ರೆಯನ್ನು ಮಾಡುತ್ತಾ ಇದ್ದನು. ಸತ್ಯಜಿತುವಿಗೆ ಬೇರೆ ಯಾವುದರಲ್ಲಿಯೂ ಮನಸ್ಸೇ ಹೋಗಲಾರದು. ಗಂಗೆಯಲ್ಲಿಯೇ ಯಾವಾಗಲೂ ಅವನ ಮನಸ್ಸು ಇರುವುದು. ಬೇರೆ ಯಾವ ದೇಶಕ್ಕೆ ಹೋದರೂ ಗಂಗೆಯನ್ನೇ ಸ್ಮರಿಸುತ್ತಿದ್ದನು. ಒಂದು ದಿವಸದಲ್ಲಿ ತೀರ್ಥಯಾತ್ರೆ ಮಾಡುತ್ತಾ ಕುರುಕ್ಷೇತ್ರಕ್ಕೆ ಹೋದನು. ಅಲ್ಲಿ ಸ್ನಾನಾದಿಗಳನ್ನು ಮಾಡಿ ಪುನಃ ಗಂಗೆಗೆ ಹೋದನು. ಹೋಗುವಾಗ ದಾರಿಯಲ್ಲಿ ವಿಶಾಲಾ ಎಂಬ ಪಟ್ಟಣದಲ್ಲಿ ಬಂದನು. ಅಲ್ಲಿಗೆ ಬಂದವನೇ ಈ ಗ್ರಾಮದಲ್ಲಿ ಅನ್ನದಾನವನ್ನು ಮಾಡುವವರು ಯಾರು ಇರುವರು ಎಂದು ಕೇಳಿದನು. ಆಗ ಜನರು ಸತ್ಯಕೇತು ಎಂಬುವನು ಅನ್ನದಾನವನ್ನು ಮಾಡುವನು ಎಂದರು. ಸತ್ಯಜಿತು ಹಸಿವೆ ಬಾಯಾರಿಕೆಗಳಿಂದ ಬಳಲಿದವನಾಗಿ ಸತ್ಯಕೇತುವಿನ ಮನೆಗೆ ಹೋದನು. ಸತ್ಯಕೇತುವು ಸತ್ಯಜಿತುವನ್ನು ನೋಡಿ ಸಂತೋಷದಿಂದ ಎದ್ದು ನಿಂತು ನಮಸ್ಕರಿಸಿದನು. ಬರಬೇಕು ಎಂದನು. 'ನಾನು ಏನು ಮಾಡಲಿ? ನಿಮ್ಮ ಆಗಮನದಿಂದ ನನ್ನ ಜನ್ಮವು ಸಾರ್ಥಕವಾಯಿತು. ನಿಮ್ಮ ಪಾದವನ್ನು ತೊಳೆದ ನೀರಿನಿಂದ ನನ್ನ ಪಿತೃಗಳು ತೃಪ್ತರಾದರು' ಎಂದು ಉಪಚಾರ ಮಾತನ್ನು ಹೇಳಿದನು. 'ನಿಮಗೆ ಯಾವ ಆಹಾರವನ್ನು ಕೊಡಲಿ. ಯಾವುದು ಬೇಕಾದರೂ ನಿಮ್ಮ ಅನುಗ್ರಹದಿಂದ ಸಿದ್ಧವಾಗಿದೆ' ಎಂದು ಹೇಳಿದನು.

ಅದನ್ನು ಕೇಳಿ ಸತ್ಯಜಿತುವು 'ನಿಮ್ಮ ಉಪಚಾರದಿಂದಲೇ ನಾನು ತೃಪ್ತನಾದೆನು. ಲೋಕದಲ್ಲಿ ನಿಮಗೆ ಸಮಾನರಾದ ಗೃಹಸ್ಥರನ್ನು ನಾನು ನೋಡಲೇ ಇಲ್ಲ. ಅನ್ನದಾನವನ್ನು ದೇವತೆಗಳೂ ಬಹುಮಾನಿಸುವರು. ನೀವು ಎಲ್ಲವನ್ನೂ ಮಾಡುವಿರಿ. ಆದರೆ ಗಂಗಾಯಾತ್ರೆಯನ್ನು ಮಾಡಿರುವಿರಾ ಇಲ್ಲವೇ' ಎಂದನು.

ಅದಕ್ಕೆ ಸತ್ಯಜಿತುವು 'ನಾನು ಇನ್ನೂ ಗಂಗೆಯನ್ನು ನೋಡಿದ್ದೇ ಇಲ್ಲ. ನಾನು ಮನೆಯನ್ನು ಬಿಟ್ಟು ಹೋದರೆ ಇಲ್ಲಿ ಅತಿಥಿಗಳಿಗೆ ಅನ್ನ ಮಾಡುವರು ಇಲ್ಲವೆಂದಾಗುತ್ತದೆ. ಆದುದರಿಂದ ನನಗೆ ಗಂಗಾಸ್ನಾನವು ಆಗಿಲ್ಲ' ಎಂದನು.

ಅದನ್ನುಕೇಳಿ ಸತ್ಯಜಿತುವು 'ಇಷ್ಟು ಕಾಲದವರೆಗೆ ಪಾಪಿಯಾದ ನಿನ್ನನ್ನು ವ್ಯರ್ಥವಾಗಿ ಸ್ತೋತ್ರಮಾಡಿದೆನಲ್ಲಾ! ನೀನಿನ್ನೂ ಗಂಗಾಸ್ನಾನವನ್ನೇ ಮಾಡಿಲ್ಲವೆನ್ನುವಿಯಲ್ಲಾ! ನಿನ್ನ ಮನೆಯಲ್ಲಿ ನಾನು ಭೋಜನ ಮಾಡಲಾರೆನು' ಎಂದು ಹೇಳಿ ಸತ್ಯಕೇತುವನ್ನು ನಿಂದಿಸುತ್ತಾ ಗಂಗೆಗೆ ಹೋದನು. ಆಗ ಸತ್ಯಜಿತುವಿಗೆ ಗಂಗೆಯು ಕಾಣಿಸಲೇ ಇಲ್ಲ. ಇದೇನು ಎಂದು ಯೋಚಿಸುತ್ತಾ ಗಂಗೆಗೆ ಇಳಿದು ಸ್ನಾನ ಮಾಡಲಿಕ್ಕೆ ಹೋದನು. ಅವನು ಮುಳುಗಲಿಕ್ಕೆ ಹೋದಲ್ಲಿ ಎಲ್ಲಾ ನೀರೇ ಕಾಣಲಿಲ್ಲ. ಕೊನೆಗೆ ಗಂಗಾದೇವಿಯನ್ನು ಪ್ರಾರ್ಥಿಸಿಕೊಂಡನು. 'ಅಮ್ಮ, ದೇವಿ! ನಾನು ನಿನ್ನ ಭಕ್ತನು ನಿನ್ನಲ್ಲಿ ಒಂದು ಅಪರಾಧವನ್ನು ಮಾಡಿದನವಲ್ಲ. ದಾಸನಾಗಿದ್ದೇನೆ. ಪಾದಗಳಿಗೆ ನಮಸ್ಕರಿಸುವೆನು. ನನ್ನಲ್ಲಿ ದಯೆಯನ್ನು ಮಾಡಬೇಕು. ನನ್ನನ್ನು ಕ್ಷಮಿಸಬೇಕು' ಎಂದು ಪ್ರಾರ್ಥಿಸಿದನು. ಆಗ ಗಂಗಾದೇವಿಯು ಪ್ರತ್ಯಕ್ಷಳಾಗಿ 'ಸತ್ಯಕೇತುವಿನ ಮನೆಗೆ ಹೋಗಿ ಅವನನ್ನು ಸಂತೋಷಪಡಿಸಿ ಅವನು ಹಾಕಿದ ಅನ್ನವನ್ನು ಊಟಮಾಡಿ ಬಾ. ಅವನ ಮನೆಯಲ್ಲಿ ಊಟ ಮಾಡಿದ ಅನೇಕರು ಪಾಪವು ಪರಿಹೃತವಾಗಿದೆ. ಅನ್ನದಾನ ಮಾಡುವವರು ಅತ್ಯಂತ ಶ್ರೇಷ್ಠರು' ಎಂದು ಹೇಳಿದಳು.

ಆ ಮಾತನ್ನು ಕೇಳಿ ಸತ್ಯಜಿತುವು ಸತ್ಯಕೇತುವಿನ ಮನೆಗೆ ಹೋಗಿ ಅವನಿಗೆ ನಮಸ್ಕರಿಸಿ ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದನು. ಸತ್ಯಕೇತುವು ಅವನಿಗೆ ಬೇಕಾದ ಉಪಚಾರವನ್ನು ಮಾಡಿ ಭಕ್ತಿಯಿಂದ ಭೋಜನವನ್ನು ಮಾಡಿಸಿದನು. ಸತ್ಯಜಿತುವು ಭೋಜನ ಮಾಡಿ ಅವನ ಅನುಜ್ಞೆಯನ್ನು ಪಡೆದು ಗಂಗೆಗೆ ಹೋಗಿ ಗಂಗಾಪ್ರವಾಹವನ್ನು ನೋಡಿ ಸಂತೋಷದಿಂದ ಸ್ನಾನ ಮಾಡಿದನು. ಆದುದರಿಂದ ಅನ್ನದಾನವು ಅತ್ಯಂತ ಶ್ರೇಷ್ಠವಾದದ್ದು. ಅದರಲ್ಲಿಯೂ ಕಾರ್ತಿಕಮಾಸದಲ್ಲಿ ಅನ್ನದಾನವು ಅತ್ಯಂತ ಶ್ರೇಷ್ಠವಾದದ್ದು.



# ಮೊಸರನ್ನ ದಾನದ ಮಹಿಮೆಯು [1]

ಪೂರ್ವದಲ್ಲಿ ಅಲಕಾನಗರದಲ್ಲಿ ಗೌತಮ ಎಂದು ಹೆಸರುಳ್ಳ ಬ್ರಾಹ್ಮಣನಿದ್ದನು. ಅವನು ಶ್ರುತಿಸ್ಮೃತಿಪುರಾಣಗಳನ್ನು ತಿಳಿದವನಾಗಿದ್ದನು. ಆದರೂ ದರಿದ್ರನಾಗಿ ಬಹಳ ದುಃಖಪಡುತ್ತಿದ್ದನು. ಕುಟುಂಬ ಪೋಷಣೆಯಲ್ಲಿ ಆಸಕ್ತನಾಗದ್ದನು. ಎಷ್ಟು ಬಂದರೂ ಸಾಕಾಗುತ್ತಿರಲಿಲ್ಲ. ಎಲ್ಲರಲ್ಲಿಯೂ ಎಲ್ಲಾ ದಾನಗಳನ್ನೂ ಪಡೆಯುತ್ತಿದ್ದನು. ಕೊನೆಗೆ ಕಳ್ಳರ ಸಹವಾಸವನ್ನು ಮಾಡಿ ಕಳ್ಳತನವನ್ನು ಮಾಡಿದನು. ಆದರೂ ಅವನಿಗೆ ಹಣವು ಸಾಕಾಗುತ್ತಿರಲಿಲ್ಲ. ಕೊನೆಗೆ ಕುಟುಂಬವನ್ನು ಬಿಟ್ಟು ಬಿಟ್ಟು ದೇಶಾಂತರಕ್ಕೆ ಹೋದನು. ಅಲ್ಲಿ ಪ್ರೇತಭೋಜನ ಮಾಡುವುದು ಇತ್ಯಾದಿ ವೃತ್ತಿಯಿಂದ ಕಾಲವನ್ನು ಕಳೆದನು. ಹೀಗೆಯೇ ಹನ್ನೆರಡು ವರ್ಷ ಕಾಲಕಳೆದನು. ಆಮೇಲೆ ಮುದುಕನಾದನು. ಅವನ ದೇಹದ ಶಕ್ತಿಯು ಅಡಗಿತು. ತರುವಾಯ ಜ್ಯೇಷ್ಠಮಾಸದಲ್ಲಿ ಬ್ರಾಹ್ಮಣರು ಮೊಸರನ್ನವನ್ನು ದಾನಮಾಡುತ್ತಿದ್ದರು. ಅಲ್ಲಿಗೆ ಹೋಗಿ ಬ್ರಾಹ್ಮಣರ ಎಲೆ(ಯಲ್ಲಿ) ಯಿದ್ದ ಎಂಜಲು ಮೊಸರನ್ನವನ್ನು ತಾನು ತಿನ್ನುತ್ತಾ ವಿನೋದಕ್ಕಾಗಿ ಕಾಗೆಗಳಿಗೆ ಹಾಕುತ್ತಾ ಕಾಗೆಗಳಿಗೆ ನೀರನ್ನು ಕೊಡುತ್ತಾ ಇದ್ದನು. ಹೀಗೆಯೇ ಅವನು ತಿಳಿಯದೆ ಜ್ಯೇಷ್ಠಮಾಸದಲ್ಲಿ ಸಂಪೂರ್ಣ ಮಾಡುತ್ತಿದ್ದನು. ಆಮೇಲೆ ಅವನು ಮರಣವನ್ನು ಹೊಂದಿದನು. ಆಗ ಯಮದೂತರು ಬಂದು ಪಾಶಹಾಕಿ ಸೆಳೆದು ಮುದ್ಗರದಿಂದ ಬಡೆಯುತ್ತಾ ಕರೆದುಕೊಂಡು ಹೋದರು. ಅಷ್ಟರಲ್ಲಿ ವಿಷ್ಣುದೂತರು ಬಂದು ಯಮದೂತರನ್ನು ತಡೆದು ಅವನಿಗೆ ದಿವ್ಯರೂಪ ಬರುವಂತೆ ಮಾಡಿ ವಿಮಾನದಲ್ಲಿ ಕೂತುಕೊಳ್ಳಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋದರು. ಆಗ ಯಮ ದೂತರು ಹೋಗಿ ಯಮದೇವರೊಡನೆ ದೂರಿಕೊಂಡರು. ಆಗ ಯಮದೂತರು ಕೋಪಿಸಿಕೊಂಡು ಬಂದು ವಿಷ್ಣುದೂತರಿಗೆ ದಂಡದಿಂದ ಬಡೆದರು. ಆಗ ವಿಷ್ಣುದೂತರು ಓಡಿಹೋಗಿ ಪರಮಾತ್ಮನೊಡನೆ ತಿಳಿಸಿದರು. ಆಗ ಪರಮಾತ್ಮನು ಬಂದು ಯಮದೇವರಿಗೆ ನಿಗ್ರಹ ಮಾಡಿದನು. ತರುವಾಯ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ದೇವತೆಗಳು ಸ್ತುತಿಸಲು ಪರಮಾತ್ಮನು ಯಮದೇವರಿಗೆ ಅನುಗ್ರಹ ಮಾಡಿದನು. ಈರೀತಿಯಾಗಿ ಜ್ಯೇಷ್ಠಮಾಸದಲ್ಲಿ ಮೊಸರನ್ನ ದಾನಮಾಡುವುದು ಪರಮಪ್ರಶಸ್ತವಾದದ್ದು.



1. ಭವಿಷ್ಯೋತ್ತರ ಪುರಾಣ-ಜ್ಯೇ.ಮಾ.ಮ.ಅ-2.

# ಚಿತ್ರಾನ್ನದಾನವು [1]

ಪೂರ್ವದಲ್ಲಿ ಸೌರಾಷ್ಟ್ರದೇಶದಲ್ಲಿ ಚಿತ್ರಾಂಗದನೆಂಬ ರಾಜನಿದ್ದನು. ಅವನು ಭೂರಿಶ್ರವರಾಜನ ಮಗನು. ಧರ್ಮಿಷ್ಠನೂ ಬಲಿಷ್ಠನು. ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಅವನು ಒಂದು ದಿನದಲ್ಲಿ ಧನುರ್ಧಾರಿಯಾಗಿ ಖಡ್ಗವನ್ನು ಹಿಡಿದುಕೊಂಡು ಮೃಗಬೇಟೆಗಾಗಿ ಕಾಡಿಗೆ ಹೋದನು. ಅಲ್ಲಿ ಮೃಗಗಳನ್ನು ಹುಡುಕುತ್ತಾ ಹೋದನು. ಮೃಗಗಳು ಅವನಿಗೆ ಸಿಗಲೇ ಇಲ್ಲ. ಮಧ್ಯಾಹ್ನವಾಯಿತು. ಅವನಿಗೆ ತುಂಬಾ ನೀರಡಿಕೆಯಾಯಿತು. ನೀರನ್ನು ಹುಡುಕುತ್ತಾ ಹೋದನು. ಒಂದು ನದಿಯು ಅವನಿಗೆ ಸಿಕ್ಕಿತು. ಅಲ್ಲಿ ಇಚ್ಛಾನುಸಾರವಾಗಿ ನೀರನ್ನು ಕುಡಿದನು. ಸ್ವಲ್ಪ ಶ್ರಮ ಪರಿಹಾರ ಮಾಡಿಕೊಂಡನು. ತರುವಾಯ ಆ ನದಿಯ ತೀರದಲ್ಲಿಯೇ ಇದ್ದ ಒಂದು ಆಶ್ರಮವನ್ನು ನೋಡಿದನು. ಅದು ಯಾರ ಆಶ್ರಮವೆಂದು ತಿಳಿಯಬೇಕೆಂದು ಅದರ ಒಳಗೆ ಪ್ರವೇಶಿಸಿದನು. ಅಲ್ಲಿ ಶಿಷ್ಯರಿಂದ ಸಹಿತರಾಗಿ ಕೂತುಕೊಂಡು ಶಿಷ್ಯರಿಗೆ ಪಾಠ ಹೇಳುತ್ತಿದ್ದ ತೇಜಸ್ವಿಯಾಗಿದ್ದ ಒಬ್ಬ ಮುನಿಗಳನ್ನು ನೋಡಿದನು. ಉದ್ದಕ್ಕೆ ನಮಸ್ಕಾರಮಾಡಿ ಅವರನ್ನು ಸ್ತುತಿಸಿದನು. ತನ್ನ ಪರಿಚಯವನ್ನು ಹೇಳಿಕೊಂಡು ತಾವು ಯಾರೆಂದು ಕೇಳಿದನು.

ಅದಕ್ಕೆ ಅವರು 'ನಾನು ಗಾಲವ ಎಂಬ ಮುನಿಯು. ಇಲ್ಲಿ ತಪಸ್ಸನ್ನು ಮಾಡುತ್ತಿರುವೆನು. ರಾಜನೇ! ಬರಬೇಕು. ನಾನು ಕೊಡುವ ಗೆಡ್ಡೆಹಣ್ಣುಗಳನ್ನು ಭಕ್ಷಿಸಿ ಇಲ್ಲಿಯೇ ಇದ್ದು ನಾಳೆ ಬೆಳಿಗ್ಗೆ ಹೊರಟುಹೋಗುವಿರಿ' ಎಂದು ಹೇಳಿದರು. ರಾಜನು ಹಾಗೆಯೇ ಆಗಲಿ ಎಂದು ಹೇಳಿ ರಾತ್ರಿಯಲ್ಲಿ ಅಲ್ಲಿಯೇ ನಿದ್ರೆಯನ್ನು ಮಾಡಿದನು. ಆಗ ಪುಷ್ಯಮಾಸವಾಗಿದ್ದಿತು. ಮರುದಿನ ಬೆಳಿಗ್ಗೆ ಬೇಗನೇ ಮುನಿಗಳು ಶಿಷ್ಯರಿಂದ ಸಹಿತ ಎದ್ದು ಸ್ನಾನಮಾಡಿ ಚಿತ್ರಾನ್ನವನ್ನು ಮಾಡಿ ದೇವರಿಗೆ ಸಮರ್ಪಿಸಿ ರಾಜನನ್ನು ಎಬ್ಬಿಸಿ 'ರಾಜನೇ! ಈಗ ಪುಷ್ಯಮಾಸವಾಗಿರುವುದು. ಚಿತ್ರಾನ್ನವನ್ನು ಭಕ್ಷಣೆ ಮಾಡಬೇಕು' ಎಂದು ಹೇಳಿದರು. ಅದನ್ನು ಕೇಳಿ ರಾಜನು ಆಶ್ಚರ್ಯವುಳ್ಳವನಾಗಿ 'ಮುನಿಗಳೇ! ನೀವು ಏನು ಮಾಡುತ್ತಿರುವಿರಿ? ಈಗ ಚಿತ್ರಾನ್ನವನ್ನು ಯಾಕೆ ತಿನ್ನಬೇಕು?' ಎಂದು ಕೇಳಿದನು.

ಅದಕ್ಕೆ ಗಾಲವರು 'ಧನೂರಾಶಿಯಲ್ಲಿ ಸೂರ್ಯನಿರುವಾಗ ಚಿತ್ರಾನ್ನವನ್ನು ದೇವರಿಗೆ ಸಮರ್ಪಿಸಿ ಭಕ್ಷಿಸಬೇಕು. ಒಂದು ತಿಂಗಳೂ ಹೀಗೆ ಮಾಡಬೇಕು. ಶಕ್ತಿಯಿಲ್ಲದಿದ್ದರೆ ಆದಿತ್ಯವಾರವಾದರೂ ಮಾಡಬೇಕು. ಈಪ್ರಕಾರವಾಗಿ ಶಾಸ್ತ್ರವಿರುವ

ಕಾರಣ ನಾವು ಮಾಡುತ್ತಿರುವೆವು. ರಾಜನೇ! ನಿನಗೂ ಇಷ್ಟವಿದ್ದರೆ ಮಾಡು. ಇಲ್ಲದಿದ್ದರೆ ಬಿಡು' ಎಂದರು. ಆಗ ರಾಜನು 'ನಾನು ಯಾವಾಗಲೂ ಚಿತ್ರಾನ್ನವನ್ನು ತಿನ್ನಬೇಕೆಂಬುದನ್ನು ಕೇಳಿದ್ದೇ ಇಲ್ಲ, ನೀವು ನಾಲಿಗೆಯ ರುಚಿಗಾಗಿ ತಿನ್ನುತ್ತಿರುವಿರಿ' ಎಂದು ಹೇಳಿ ನಿಂದಿಸಿ ತನ್ನ ಮನೆಗೆ ಬಂದು ಪೂರ್ವದಂತೆ ಇದ್ದನು.

ತರುವಾಯ ಸ್ವಲ್ಪದಿವಸದಲ್ಲಿ ರಾಜನ ಸಂಪತ್ತೆಲ್ಲವೂ ನಾಶವನ್ನು ಹೊಂದಿತು. ದಾರಿದ್ರ್ಯವು ಬಂದು ಸೇರಿತು. ಯಾಕೆ ಹೀಗಾಯಿತೆಂದು ರಾಜನು ಬಹಳ ಯೋಚನೆ ಮಾಡಿದನು. ಕೊನೆಗೆ ತನ್ನ ಗುರುಗಳಾದ ಶಮೀಕರನ್ನು ಕರೆತರಿಸಿ ಅವರ ಕಾಲುಗಳಿಗೆ ಬಿದ್ದು ತನಗೆ ಹೀಗೆ ಯಾಕೆ ಆಯಿತೆಂದು ಕೇಳಿಕೊಂಡನು. ಅದಕ್ಕೆ ಅವರು 'ರಾಜನೇ! ನೀನು ವನದಲ್ಲಿ ಗಾಲವ ಮುನಿಗಳನ್ನು ನಿಂದಿಸಿರುವಿ. ಅವರು ಮಾಡಿದ ವ್ರತವನ್ನು ನಿಂದಿಸಿರುವಿ. ಚಿತ್ರಾನ್ನವನ್ನು ನಿಂದಿರಿಸುವಿ. ಆದರಿಂದ ನಿನಗೆ ಈ ಅವಸ್ಥೆಯು ಬಂದಿರುವುದು. ಇನ್ನಾದರೂ ನೀನು ಅವರ ಬಳಿಗೆ ಹೋಗಿ ಅವರ ಹತ್ತಿರ ಕ್ಷಮಾ ಕೇಳಿಕೊಂಡು ಅವರನ್ನು ಸಂತೋಷಪಡಿಸಿ ಚಿತ್ರಾನ್ನದ ವ್ರತವನ್ನು ಮಾಡಿದಿಯಾದರೆ ನಿನಗೆ ಪೂರ್ವದಂತೆಯೇ ಸಂಪತ್ತು ಬರುವುದು' ಎಂದರು.

ಅದನ್ನು ಕೇಳಿ ರಾಜನು ಗಾಲವರಿದ್ದಲ್ಲಿಗೆ ಹೋಗಿ ನಮಸ್ಕರಿಸಿ ತನ್ನ ವೃತ್ತಾಂತವೆಲ್ಲವನ್ನೂ ಹೇಳಿಕೊಂಡು ತನ್ನ ದಾರಿದ್ರ್ಯವನ್ನು ಪರಿಹರಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಗಾಲವರು 'ರಾಜನೇ! ನಾನು ಪ್ರಸನ್ನನಾಗಿರುವೆನು. ನೀನು ಚಿತ್ರಾನ್ನ ವ್ರತವನ್ನು ಮಾಡಿದಿಯಾದರೆ ಪೂರ್ವದಂತೆಯೇ ಆಗುವುದು' ಎಂದರು. ರಾಜನು 'ಆ ವ್ರತವನ್ನು ಮಾಡುವ ವಿಧಾನವನ್ನು ನನಗೆ ಉಪದೇಶಿಸಬೇಕು' ಎಂದು ಕೇಳಿಕೊಂಡನು. ಅದಕ್ಕೆ ಗಾಲವಮುನಿಗಳು 'ನಾನು ಯಾವಾಗಲೂ ಶಿಷ್ಯರಿಗೆ ಪಾಠವನ್ನು ಹೇಳುತ್ತಿರುವುದ ರಿಂದ ನಿನಗೆ ಅದನ್ನು ಹೇಳಲಿಕ್ಕೆ ಅವಕಾಶವಿಲ್ಲ, ನಿನ್ನ ಪುರೋಹಿತರೊಡನೆ ಕೇಳು. ಅವರು ಎಲ್ಲವನ್ನೂ ಹೇಳುವರು' ಎಂದು ಹೇಳಿದರು. ತಾನು ಒಳಗೆ ಹೋದರು. ರಾಜನು ನಗರಕ್ಕೆ ಬಂದು ಪುರೋಹಿತರೊಡನೆ ಕೇಳಿ ಅವರು ಹೇಳಿದಂತೆ ಚಿತ್ರಾನ್ನ ವ್ರತವನ್ನು ಮಾಡಿ ಸಂಪತ್ತನ್ನು ಹೊಂದಿದನು. ಕೊನೆಗೆ ಭಗವಂತನ ಲೋಕವನ್ನು ಹೊಂದಿದನು. ಆದುದರಿಂದ ಪುಷ್ಯಮಾಸದಲ್ಲಿ ಶ್ರೀಭಗವಂತನಿಗೆ ಚಿತ್ರಾನ್ನವನ್ನು ಸಮರ್ಪಣೆ ಮಾಡಿ ಸ್ವೀಕರಿಸುವುದು ಪ್ರಶಸ್ತವಾದದ್ದು.



# ನೀರಿನ ದಾನ [1]

ಪೂರ್ವದಲ್ಲಿ ಸುಶೀಲ ಎಂಬ ಬ್ರಾಹ್ಮಣನಿದ್ದನು. ಅವನು ಮಹಾಪಂಡಿತನಾಗಿದ್ದನು. ಶಾಂತನಾಗಿದ್ದನು. ಅತಿಥಿಗಳಿಗೆ ಸತ್ಕಾರ ಮಾಡುತ್ತಿದ್ದನು. ಬಂದವರಿಗೆಲ್ಲಾ ನೀರನ್ನು ಕೊಡುತ್ತಿದ್ದನು. ಪಶುಪಕ್ಷಿಗಳಿಗೂ ಕೂಡ ನೀರು ನೀಡ್ತಿದ್ದನು. ಸರ್ವಸ್ಥಳದಲ್ಲಿ ಭಗವಂತನಿರುವನೆಂದು ಮನಸ್ಸಿನಲ್ಲಿ ಭಾವನೆಯಿಂದ ನೀರನ್ನು ಕೊಡುತ್ತಿದ್ದನು. ಈರೀತಿಯಾಗಿ ಜಲ ದಾನವನ್ನು ಮಾಡುತ್ತಾ ಬದರಿಕಾಶ್ರಮದಲ್ಲಿ ವಾಸಮಾಡು ತ್ತಿದ್ದನು. ದೇವತೆಗಳೂ ಯಕ್ಷರೂ ಸಿದ್ಧರೂ ಗುಹ್ಯಕರೂ ಸಿದ್ಧರೂ ಚಾರಣರೂ ಅವನ ಆಶ್ರಮಕ್ಕೆ ಬಂದು ಕ್ರೀಡಾ ಮಾಡುತ್ತಿದ್ದರು.

ಒಂದು ದಿವಸದಲ್ಲಿ ಇಂದ್ರದೇವರು ಅಗ್ನಿದೇವರಿಂದ ಸಹಿತರಾಗಿ ಬಿಸಿಲಿನಿಂದ ಬಳಲಿದಂತೆ ತೋರಿಸಿಕೊಂಡು ಬಂದು ನೀರನ್ನು ಕೇಳಿದರು. ಆಗ ಸುಶೀಲನು ನಾನು ಪರಮಧನ್ಯನಾದೆನು ಎಂದು ಹೇಳಿಕೊಂಡು ಅವರ ಕಾಲನ್ನು ತೊಳೆದು ಭಗವಂತನು ಸಂತುಷ್ಟನಾಗಲಿ ಎಂದು ಹೇಳಿಕೊಂಡು ನೀರನ್ನು ಕೊಟ್ಟನು. ಇಂದ್ರದೇವರು ಎಲ್ಲಾ ನೀರನ್ನು ಕುಡಿದು ತೃಪ್ತರಾದರು. ಆಮೇಲೆ ಅಗ್ನಿದೇವರನ್ನು ತೋರಿಸಿ ಈ ಬ್ರಾಹ್ಮಣರಿಗೆ ನೀರನ್ನು ಕೊಡು ಎಂದರು. ಆ ಮಾತನ್ನು ಕೇಳಿ ಸುಶೀಲನು ನೀರನ್ನು ತರಲಿಕ್ಕೆ ಒಳಕ್ಕೆ ಹೋದನು. ಒಳಗೆ ಹೋಗಿ ನೋಡಲು ಪಾತ್ರೆಗಳಲ್ಲಿ ನೀರೇ ಇರಲಿಲ್ಲ. ಸುಶೀಲನು ಆಶ್ಚರ್ಯವನ್ನು ಹೊಂದಿದನು. ಪರಮಾತ್ಮನನ್ನು ಬಹಳವಾಗಿ ಪ್ರಾರ್ಥಿಸಿದನು. ಭಗವಂತನು ಪಾತ್ರೆಗಳಲ್ಲಿ ತುಂಬಾ ನೀರು ತುಂಬುವಂತೆ ಅನುಗ್ರಹಿಸಿದನು. ಅಗ್ನಿದೇವರು ಎಲ್ಲಾ ನೀರನ್ನೂ ಕುಡಿದರು. ಮತ್ತೂ ದೇವರ ಅನುಗ್ರಹದಿಂದ ಪಾತ್ರೆಗಳು ನೀರಿನಿಂದ ತುಂಬಿದವು. ಈ ಆಶ್ಚರ್ಯವನ್ನು ನೋಡಿ ಇಂದ್ರದೇವರು ಆ ಬ್ರಾಹ್ಮಣನನ್ನು ಸತ್ಕರಿಸಿ ಸ್ವರ್ಗಕ್ಕೆ ಹೋದರು.

ತರುವಾಯ ಸುಶೀಲನು ಅಲ್ಲಿ ಅನೇಕ ಭಾವಿಗಳನ್ನು ಮಾಡಿಸಿದನು. ಪತ್ನಿಯಿಂದ ಸಹಿತನಾಗಿ ಭಗವಂತನನ್ನು ನಾನಾ ವಿಧವಾಗಿ ಪ್ರಾರ್ಥಿಸಿದನು. ಪತ್ನಿಯಿಂದ ಸಹಿತನಾಗಿ ಭಗವಂತನನ್ನು ನಾನಾ ವಿಧವಾಗಿ ಪ್ರಾರ್ಥಿಸಿದನು ಎಲ್ಲಾ ಪ್ರಾಣಿಗಳಿಗೂ ಭಕ್ತಿಯಿಂದ ನೀರನ್ನು ಕೊಟ್ಟನು. ಬಿಸಿಲಿನ ಕಾಲದಲ್ಲಿ ಇಂದ್ರದೇವರು ಋಷಿಗಳಿಂದ ಸಹಿತರಾಗಿ ಬಂದು ದಾರಿಯಲ್ಲಿ ಹೋಗುವ ಜನರಂತೆ ನೀರು ಕುಡಿದರು. ಹೀಗೆ ಇಪ್ಪತ್ತೊಂದು ಬಾರಿ ಬಂದು ಪರೀಕ್ಷಾ ಮಾಡಿದರು. ಕೊನೆಗೆ ಹದಿನೆರಡು ವರ್ಷಕಾಲ ಅವನು ಆಶ್ರಮದಲ್ಲಿ ಮಳೆಯು ಬಾರದಂತೆ ಮಾಡಿದರು.

ಆದರೂ ಭಗವಂತನ ಅನುಗ್ರಹದಿಂದ ಸುಶೀಲನ ಆಶ್ರಮದಲ್ಲಿ ನೀರು ದೊರೆಯುತ್ತಲೇ ಇತ್ತು. ಅವನು ಎಲ್ಲರಿಗೂ ನೀರಿನ ದಾನವನ್ನು ಮಾಡುತ್ತಲೇ ಇದ್ದನು. ತರುವಾಯ ಇಂದ್ರದೇವರು ಗ್ರಹಗಳನ್ನು ಕಳುಹಿಸಿದರು. ಗ್ರಹಗಳು ಬಂದು ನೀರುಬೇಕೆಂದು ಕೇಳಿ ಒಂದು ಸ್ಥಳದಲ್ಲಿ ಕೂತಿದ್ದವು. ಅಷ್ಟರಲ್ಲಿ ದೊಡ್ಡ ಮಳೆಯು ಬಂದಿತು. ಇಂದ್ರದೇವರು ತಾನು ಯೋಚನೆ ಮಾಡಿದ್ದು ಒಂದಾಯಿತು. ಆದ ಕಾರ್ಯವು ಒಂದಾಯಿತು ಎಂದು ಹೇಳಿಕೊಂಡರು. ಗ್ರಹಗಳನ್ನು ಬರಲಿಕ್ಕೆ ಹೇಳಿದರು.

ತರುವಾಯ ಗ್ರಹಗಳು ಸುಶೀಲನೊಡನೆ ನಾವು ದೇವತೆಗಳು ತೃಪ್ತರಾಗಿರುವೆವು. ನಿನ್ನ ಪಿತೃಗಳು ಸಂತುಷ್ಟರಾಗಿ ಸ್ವರ್ಗಕ್ಕೆ ಹೋಗಿರುವರು. ಪರಮಾತ್ಮನು ಸಂತುಷ್ಟನಾಗಿರುವನು. ನಿನು ಪತ್ನಿಯಿಂದ ಸಹಿತನಾಗಿ ಸ್ವರ್ಗಕ್ಕೆ ಹೋಗು. ಇಂದ್ರದೇವರು ನೀನು ಸ್ವರ್ಗಕ್ಕೆ ಬರಬೇಕೆಂದು ಅಪೇಕ್ಷಿಸುತ್ತಾರೆ. ನಾವು ಚಂದ್ರಸೂರ್ಯಾದಿ ಗ್ರಹಗಳು ನಿನಗಾಗಿ ಸೂರ್ಯನಂತೆ ಪ್ರಕಾಶಿಸುವ ವಿಮಾನವು ಬಂದಿರುತ್ತದೆ. ವಿಮಾನವನ್ನು ಏರು. ಸ್ವರ್ಗದಲ್ಲಿ ಸುಖವನ್ನು ಅನುಭವಿಸು ಎಂದರು. ಸುಶೀಲನು ನನ್ನ ಭಾವಿಯಲ್ಲಿ ನೀರನ್ನು ಕುಡಿಯುವವರಿಗೆ ಸ್ವರ್ಗವುಂಟಾಗಬೇಕು. ಹಾಗಿದ್ದರೆ ಮಾತ್ರ ನಾನು ಸ್ವರ್ಗಕ್ಕೆ ಬರುವೆನು ಇಲ್ಲದಿದ್ರೆ ನಾನು ಇಲ್ಲಿಯೇ ಇರುವೆನು. ನೀವು ಸ್ವರ್ಗಕ್ಕೆ ಹೋಗಿರಿ ಎಂದು ಪ್ರಾರ್ಥಿಸುವೆನು' ಎಂದನು. ಗ್ರಹಗಳು ನಿನ್ನ ಭಾವಿಯಲ್ಲಿ ಒಂದು ದಿನ ನೀರನ್ನು ಸ್ವೀಕರಿಸುವುದರಿಂದಲೇ ಪಾಪಪರಿಹಾರ ವಾಗುವುದು. ಸ್ವರ್ಗವುಂಟಾಗುವುದು ಎಂದು ಹೇಳಿ ಅವನನ್ನು ಪತ್ನಿಯಿಂದ ಸಹ ವಿಮಾನದಲ್ಲಿ ಕೂತುಕೊಳ್ಳಿರಿಸಿಕೊಂಡು ಸ್ವರ್ಗಕ್ಕೆ ಹೋದರು. ಸಾವಿರ ಚತುರ್ಯುಗಗಳವರೆಗೆ ಸ್ವರ್ಗದಲ್ಲಿ ಇದ್ದು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಇದ್ದನು. ಆದುದರಿಂದ ನೀರನ್ನು ದಾನ ಮಾಡುವುದು ಅತ್ಯಂತ ಶ್ರೇಷ್ಠವಾದದ್ದು.



# ಕನ್ಯಾದಾನದ ಮಹಿಮೆ

ಪೂರ್ವದಲ್ಲಿ ಕೃತಯುಗದಲ್ಲಿ ಪವಿತ್ರವಾದ ನರ್ಮದಾನದಿಯ ತೀರದಲ್ಲಿ ಕೌಂಡಿನ್ಯಕುಲದಲ್ಲಿ ಹುಟ್ಟಿದ ವೇದಶಾಸ್ತ್ರಪಾರಂಗತನಾದ ಅಗ್ನಿಹೋತ್ರಿಯಾದ ಧರ್ಮವ್ರತನೆಂಬ ಬ್ರಾಹ್ಮಣನು ತಪೋವನದಲ್ಲಿ ವಾಸಮಾಡುತ್ತಿದ್ದನು. ಶಿಷ್ಯರಿಂದ ಸಹಿತನಾಗಿ ವಾಸಮಾಡಿಕೊಂಡಿದ್ದನು. ಒಂದು ದಿವಸದಲ್ಲಿ ಶಿಷ್ಯರಿಂದ ಕೂಡಿಕೊಂಡು ಕಟ್ಟಿಗೆಯನ್ನು ತರುವುದಕ್ಕಾಗಿ ಕಾಡಿಗೆ ಹೋದನು. ಶಿಷ್ಯರೊಡನೆ ಕಟ್ಟಿಗೆಯನ್ನು ತರಲಿಕ್ಕೆ ಹೇಳಿ ತಾನು ಮತ್ತೊಂದು ಭಯಂಕರವಾದ ವನಕ್ಕೆ ಪ್ರವೇಶಿಸಿದನು. ಆ ವನದ ಶೋಭೆಯನ್ನು ನೋಡುತ್ತಾ ಒಂದು ಸ್ಥಳದಲ್ಲಿ ನಿಂತಿರಲು ರಕ್ಷಿಸು ರಕ್ಷಿಸು ಎಂದು ಹೇಳುವ ಶಬ್ದವು ಕೇಳಿಸಿತು. ಆ ಮಹಾಶಬ್ದವನ್ನು ಕೇಳಿ ಆಶ್ಚರ್ಯವುಳ್ಳವನಾಗಿ ಭಯಂಕರವಾದ ಆ ವನದಲ್ಲಿ ಮೆಲ್ಲನೆ ಮುಂದೆ ಹೋದನು. ಮುಂದೆ ಸ್ವಲ್ಪ ದೂರದಲ್ಲಿ ದೊಡ್ಡ ಸರ್ಪಗಳಿಂದ ಕೂಡಿರುವ ಭಾವಿಯನ್ನು ನೋಡಿ ಭಯವುಳ್ಳವನಾಗಿ ತನ್ನ ಆಶ್ರಮಕ್ಕೆ ಬರಲು ಆರಂಭಿಸಿದನು. ಅಷ್ಟರಲ್ಲಿ ಪುನಃ ಭಾವಿಯೊಳಗಿನಿಂದ ರಕ್ಷಿಸು ರಕ್ಷಿಸು ಎಂಬ ಶಬ್ದವು ಕೇಳಿಸಿತು. ಮತ್ತು 'ಧರ್ಮವ್ರತ! ನಾವು ನಿಮ್ಮ ಪಿತೃಗಳು' ಎಂಬ ಮಾತು ಕೇಳಿಸಿತು. ಅದಕ್ಕೆ ಧರ್ಮವ್ರತನು 'ನೀವು ಪಿತೃಲೋಕವನ್ನು ಬಿಟ್ಟು ಇಲ್ಲಿ ಏಕೆ ಇರುವಿರಿ?' ಎಂದು ಕೇಳಿದನು. ಅದಕ್ಕೆ ಪಿತೃಗಳು 'ಧರ್ಮವ್ರತ! ನಮಗೆ ಈ ಗತಿಯಾಗಲಿಕ್ಕೆ ಕಾರಣವನ್ನು ಹೇಳುವೆನು ಕೇಳು. ನಮ್ಮ ವಂಶದಲ್ಲಿ ಒಬ್ಬರೂ ಧರ್ಮವನ್ನು ಮಾಡುವವರೇ ಇಲ್ಲ. ಅನ್ನದಾನಾದಿದಾನಗಳನ್ನು ಮಾಡುವವರೂ ವಿಷ್ಣುಭಕ್ತರೂ ವೇದಶಾಸ್ತ್ರಪಾರಂಗತರೂ ಇಲ್ಲ. ಆದುದರಿಂದ ನಾವು ಹೀಗೆ ಅವಸ್ಥೆಯನ್ನು ಹೊಂದಿರುವೆವು' ಎಂದು ಹೇಳಿದರು.

ಅದನ್ನು ಕೇಳಿ ಧರ್ಮವ್ರತನು ನಡುಗುವವನಾಗಿ ನನ್ನ ಅಪರಾಧವನ್ನು ಕ್ಷಮಿಸಬೇಕು ಎಂದು ಹೇಳಿ ಉದ್ದಕ್ಕೆ ನಮಸ್ಕಾರ ಮಾಡಿದನು. 'ನಾನು ನಿಮಗೆ ಕ್ಷೇಮವಾಗಲು ಏನು ಮಾಡಬೇಕು? ಯಾವ ಧರ್ಮದಿಂದ ನಿಮಗೆ ಬ್ರಹ್ಮಲೋಕವು ಸಿಗುವುದು? ಅದನ್ನು ಈಗಲೇ ಮಾಡಲಿಕ್ಕೆ ಪ್ರಯತ್ನ ಮಾಡುವೆನು' ಎಂದನು. ಪಿತೃಗಳ ಮೋಕ್ಷಕ್ಕೆ ಕಾರಣನಾದ ದಾನಗಳು ಅನೇಕವಿದೆ. ಆದರೂ ಸರ್ವದಾನಗಳಲ್ಲಿಯೂ ಶ್ರೇಷ್ಠವಾದ ದಾನವನ್ನು ಹೇಳುವೆವು. ಬ್ರಹ್ಮದೇವರು ಪೂರ್ವದಲ್ಲಿ 'ಕನ್ಯಾದಾನವನ್ನು ಮಾಡಿದರೆ ಬ್ರಹ್ಮಲೋಕಪ್ರಾಪ್ತಿಯಾಗುವುದು. ತನಗೆ ಕನ್ಯೆಯು ಇಲ್ಲದಿದ್ದರೆ ತಮ್ಮ ಹಣದಿಂದ ಇನ್ನೊಂದು ಕನ್ಯೆಗೆ ಮದುವೆ ಮಾಡಿಸಿದರೂ ಅವರಿಗೂ ಅವರ ಪಿತೃಗಳಿಗೂ ಬ್ರಹ್ಮಲೋಕಪ್ರಾಪ್ತಿಯಾಗುವುದು' ಎಂದಿರುವರು.

ಆದುದರಿಂದ ಕನ್ಯಾದಾನವು ಬ್ರಹ್ಮಲೋಕಕ್ಕೆ ಕಾರಣವಾದದ್ದು. ನೋಡು ಈ ಭಾವಿಯಲ್ಲಿ ತುಂಬಾ ವಿಷಜಂತುಗಳಿರುವುವು. ಹೊಗೆಯಿಂದ ಪೀಡಿತರಾಗಿ ತಿಲೋದಕವನ್ನು ಪ್ರಾರ್ಥಿಸುತ್ತಾ ಕೃಶರಾಗಿ ಇರುವೆವು. ನೀವೆಲ್ಲ ಈ ಕನ್ಯಾದಾನವನ್ನು ಮಾಡಿಲ್ಲ. ಆದುದರಿಂದ ಭಾವಿಯಲ್ಲಿ ಜೀರ್ಣವಾದ ಗರಿಕೆ ಹುಲ್ಲನ್ನು ಹಿಡಿದು ಜೋಲಾಡುತ್ತಾ ಇರುತ್ತಿರುವೆವು. ಆದುದರಿಂದ ನಮ್ಮ ಆಜ್ಞೆಯಿಂದ ಆ ದಾನವನ್ನು ಮಾಡಿಸು. ನಿನಗೆ ಕ್ಷೇಮವಾಗಲಿ' ಎಂದು ಹೇಳಿ ಮರೆಯಾಗಿ ಹೋದರು.

ಧರ್ಮವ್ರತನು ಆಶ್ಚರ್ಯವುಳ್ಳವನಾಗಿ ಪುನಃಪುನಃ ನಮಸ್ಕರಿಸಿ ಶಿಷ್ಯರೊಡನೆ ತನ್ನ ಆಶ್ರಮಕ್ಕೆ ಹೋದನು. ಎಲ್ಲಾ ಬ್ರಾಹ್ಮಣರಿಗೂ ತಾನು ಕೇಳಿದ ವಿಷಯವನ್ನು ಹೇಳಿ ಎಲ್ಲಾ ಬ್ರಾಹ್ಮಣರಿಂದಲೂ ಕನ್ಯಾದಾನವನ್ನು ಮಾಡಿಸಿದನು. ಆದುದರಿಂದ ಕನ್ಯಾದಾನವು ಪಿತೃಗಳಿಗೆ ಅತ್ಯಂತ ಪ್ರಿಯವಾದದ್ದು.



## ಕಂಚಿನ ಪಾತ್ರೆಯ ದಾನವು [1]

ಒಂದು ದಿನದಲ್ಲಿ ದ್ವಾರಕಾಪಟ್ಟಣದಲ್ಲಿ ಸುಧರ್ಮಾಸಭೆಯಲ್ಲಿ ಶ್ರೀಕೃಷ್ಣನು ಕುಳಿತಿರಲು ಬ್ರಾಹ್ಮಣನೊಬ್ಬನು ಬಂದು 'ಶ್ರೀಭಗವಂತನೇ! ನೀನು ಧರ್ಮ ಸಂಸ್ಥಾಪನೆಗಾಗಿ ಅವತರಿಸಿರುವೆ. ಆದುದರಿಂದ ಒಂದು ಧರ್ಮಕಾರ್ಯವನ್ನು ಮಾಡಬೇಕು ಎಂದು ಕೇಳಿಕೊಂಡನು. ಅದಕ್ಕೆ ಭಗವಂತನು ಯಾವ ಕಾರ್ಯವನ್ನು ಮಾಡಬೇಕೆಂದು ಕೇಳಿದನು. ಅದಕ್ಕೆ ಬ್ರಾಹ್ಮಣನು 'ಭಗವಂತನೇ! ಬ್ರಹ್ಮದೇವರ ವರದಿಂದ ಅಹಂಕಾರಿಯಾದ ವತ್ಸ ಎಂಬ ದೈತ್ಯನು ಮಾಹಿಷ್ಮತೀನಗರದಲ್ಲಿ ಬ್ರಾಹ್ಮಣರೆಲ್ಲರನ್ನು ಬೆದರಿಸುತ್ತಾ ಇರುವನು. ನೀನು ಅಲ್ಲಿಗೆ ಬಂದು ಆ ದೈತ್ಯನನ್ನು ಸಂಹರಿಸಿ ನಮಗೆಲ್ಲರಿಗೂ ಸುಖವನ್ನು ಉಂಟುಮಾಡಬೇಕು' ಎಂದು ವಿಜ್ಞಾಪಿಸಿ ಕೊಂಡನು. ಆಗ ಪರಮಾತ್ಮನು ಸುದರ್ಶನಚಕ್ರವನ್ನು ಹಿಡಿದುಕೊಂಡು ಮಾಹಿಷ್ಮತೀ ನಗರಕ್ಕೆ ಹೋದನು. ಆ ದೈತ್ಯನೊಡನೆ ಯುದ್ಧವನ್ನು ಮಾಡಿದನು. ಹತ್ತುಸಾವಿರ ಆನೆಗಳ ಬಲವುಳ್ಳ ಆ ದೈತ್ಯನು ಯುದ್ಧಕ್ಕೆ ಬಂದನು. ಸರ್ವ ಸಮರ್ಥನಾದ ಪರಮಾತ್ಮನು ಲೀಲೆಯಿಂದ ಇಪ್ಪತ್ತುದಿವಸ ಯುದ್ಧಮಾಡಿದನು. ಇವನನ್ನು ಹೇಗೆ ಸಂಹರಿಸಲಿ ಎಂದು ಯೋಚಿಸುವಂತೆ ನಟನೆ ಮಾಡಿದನು.

1. ಸ್ಕಂ.ಪು. ಪು.ಮಾ.ಮಾ.ಅ-10

ಆ ಸಮಯದಲ್ಲಿ ದೇವಶರ್ಮನೆಂಬ ಬ್ರಾಹ್ಮಣನು ಕಂಚಿನಿಂದ ಮಾಡಿರುವ ಮುದ್ಗರವನ್ನು ತೆಗೆದುಕೊಂಡು ಬಂದು 'ಶ್ರೀಭಗವಂತನೇ! ನನ್ನ ಈ ಮುದ್ಗರವನ್ನು ಸ್ವೀಕರಿಸಿ ದೈತ್ಯನನ್ನು ಸಂಹರಿಸು' ಎಂದು ಪ್ರಾರ್ಥಿಸಿಕೊಂಡನು. ಆಗ ಭಗವಂತನು ಆ ಮುದ್ಗರವನ್ನು ತೆಗೆದುಕೊಂಡು ಆ ಅಸುರನಿಗೆ ಬಿಡಲು ಉದ್ಯುಕ್ತನಾದನು. ಅದನ್ನು ನೋಡಿ ಆ ಕುತ್ಸ ಎಂಬ ದೈತ್ಯನು 'ದೇವ! ಈ ಮುದ್ಗರವು ನಿನಗೆ ಹೇಗೆ ಸಿಕ್ಕಿತು? ಇದರಿಂದ ನೀನು ನನ್ನನ್ನು ಸಂಹರಿಸುವಿಯಾ? ಈ ಮುದ್ಗರದ ಚರಿತ್ರೆಯೆಲ್ಲವನ್ನು ನಾನು ತಿಳಿದಿರುವೆನು. ವಿಚಾರಮಾಡದೆ ಇದರಿಂದ ನನ್ನನ್ನು ಸಂಹರಿಸು' ಎಂದು ಹೇಳಿದನು. ಆಗ ಭಗವಂತನು 'ಈ ಮುದ್ಗರವು ಯಾರದ್ದು?' ಎಂದು ಲೋಕವಿಡಂಬನ ಮಾಡುತ್ತಾ ಕೇಳಿದನು.

ಅದಕ್ಕೆ ದೈತ್ಯನು ಆ ಮುದ್ಗರದ ವಿಚಿತ್ರವಾದ ಚರಿತ್ರೆಯನ್ನು ಭಗವಂತನೊಡನೆ ಹೇಳಿದನು. 'ಪೂರ್ವದಲ್ಲಿ ಮಾಹಿಷ್ಮತಿಯಲ್ಲಿ ಶಿವ ಎಂದು ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಅವನು ಸಮಸ್ತ ಕಾರ್ಯಗಳನ್ನು ಬಿಟ್ಟು ಪ್ರಾತಃಸ್ನಾನವನ್ನು ಮಾಡುತ್ತಿದ್ದನು. ಆಮೇಲೆ ಇತರ ಕಾರ್ಯಗಳನ್ನು ಮಾಡುತ್ತಿದ್ದನು. ಆಮೇಲೆ ಇತರ ಮನೆಯ ಕಾರ್ಯಗಳನ್ನು ಮಾಡುತ್ತಿದ್ದನು. ಅವನು ಒಂದುದಿನ ರಾತ್ರಿಯಲ್ಲಿ ಬೆಳದಿಂಗಳಿನಲ್ಲಿ ಬೆಳಗಾಯಿತೆಂದು ಭ್ರಮಿಸಿಕೊಂಡು ಅರುಣೋದಯ ವಾಯಿತೆಂದು ನದಿಗೆ ಸ್ನಾನಕ್ಕೆ ಹೋದನು. ಆಗ ಮಧ್ಯರಾತ್ರಿಯಾಗಿದ್ದಿತು. ಆಗಲೇ ಸ್ನಾನ ಮಾಡಿದನು. ಜಪವನ್ನು ಮಾಡಲಿಕ್ಕಾಗಿ ನದೀತೀರದಲ್ಲಿ ಕೂತುಕೊಂಡನು. ಆಗ ಅಲ್ಲಿಗೆ ಭೂತಗಳ ಸಮೂಹವು ಬಂದಿತು. ಆಗ ಬ್ರಾಹ್ಮಣನು ಭಯವುಳ್ಳವನಾಗಿ ಇದೇನೆಂದು ಯೋಚಿಸಿದನು. ಈ ಭೂತಗಳು ಬರುವ ಮೊದಲೇ ನಾನು ಓಡಿಹೋಗುವ ಎಂದರೆ ಜಪವು ತಪ್ಪಿಹೋಗುವುದು ಎಂದು ಯೋಚಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಜಪವನ್ನೇ ಮಾಡುತ್ತಾ ಕೂತುಕೊಂಡನು. ತರುವಾಯ ಭೂತಗಳು ಸಮೀಪಕ್ಕೆ ಬಂದವು.

ಆ ಸಮಯದಲ್ಲಿ ವರುಣದೇವರು ಅಲ್ಲಿಗೆ ಬಂದು ಒಂದು ಮುದ್ಗರವನ್ನು ಕೊಟ್ಟು 'ದೈತ್ಯರಿಗೆ ನಾಶಕವಾದ ಈ ಮುದ್ಗರವನ್ನು ಸ್ವೀಕರಿಸು. ಇದನ್ನು ಯಾವಾ ಗಲೂ ನೆಲದಮೇಲೆ ಇಡಬೇಡ. ಇದರಿಂದ ದೈತ್ಯರೆಲ್ಲರಿಗೂ ನಾಶಕನಾಗುವಿ. ಭೂತಪ್ರೇತಪಿಶಾಚಗಳು ನೋಡಿ ದೂರಕ್ಕೆ ಓಡುತ್ತವೆ' ಎಂದು ಹೇಳಿ ಹೊರಟು ಹೋದರು. ಶಿವ ಎಂಬ ಬ್ರಾಹ್ಮಣನು ಆ ಮುದ್ಗರವನ್ನು ತೆಗೆದುಕೊಂಡು ತನ್ನ ಹೊಟ್ಟೆಯಲ್ಲಿ ಧರಿಸಿಕೊಂಡನು. ಭೂತ ಪ್ರೇತ ಪಿಶಾಚಗಳು ದೂರಕ್ಕೆ

ಓಡಿಹೋದವು. ಅವನು ಆ ಮುದ್ಗರವನ್ನು ಹೊಟ್ಟೆಯಲ್ಲಿಯೂ ಇಟ್ಟುಕೊಂಡು ಎಲ್ಲಾ ಸ್ಥಳದಲ್ಲಿಯೂ ಸಂಚರಿಸಿದನು. ಯಾವಾಗಲೂ ಆ ಮುದ್ಗರವನ್ನು ನೆಲದಲ್ಲಿ ಇಡಲಿಲ್ಲ. ಅವನನ್ನು ನೋಡಿ ಎಲ್ಲಾ ಭೂತಗಣಗಳೂ ವ್ಯಥೆಯನ್ನು ಹೊಂದಿದವು. ಆ ಮುದ್ಗರವನ್ನು ಅಪಹರಿಸಬೇಕೆಂದು ಅವಕಾಶವನ್ನು ನೋಡುತ್ತಾ ಇದ್ದವು. ಏನು ಮಾಡಿದರೂ ಅವಕಾಶವು ಸಿಗಲಿಲ್ಲ.

ಒಂದುದಿವಸದಲ್ಲಿ ಶಿವಬ್ರಾಹ್ಮಣನು ಪ್ರಾತಃಕಾಲದಲ್ಲಿ ಮುದ್ಗರವನ್ನು ಹಿಡಿದುಕೊಂಡು ಸ್ನಾನಮಾಡಲಿಕ್ಕೆ ಹೋದನು. ಅವನು ಸ್ನಾನ ಮಾಡುತ್ತಿರುವಾಗ ನಾನು ಆ ಮುದ್ಗರವನ್ನು ಹಿಡಿದುಕೊಂಡು ಓಡಲಿಕ್ಕೆ ಆರಂಭಿಸಿದನು. ಅಷ್ಟರಲ್ಲಿ ಅವನು ನನ್ನ ಹಿಂದೆಯೇ ಬಂದು ಹುಂಕಾರವನ್ನು ಮಾಡಿದನು. ತನ್ನ ಮುಖದಿಂದ ಜ್ವಾಲೆಯನ್ನು ಉಂಟುಮಾಡಿ ಸುಡುವಂತೆ ಮಾಡಿದನು. ಅದನ್ನು ನೋಡಿ ನಾನು ಭಯಪಟ್ಟು ಆ ಮುದ್ಗರವನ್ನು ಬಿಟ್ಟುಬಿಟ್ಟೆನು. ತರುವಾಯ ಅವನು ಮುದ್ಗರವನ್ನು ತೆಗೆದುಕೊಂಡು ನನ್ನೊಡನೆ 'ಈ ಮುದ್ಗರದಿಂದಲೇ ಭಗವಂತನು ನಿನ್ನನ್ನು ಸಂಹರಿಸುವನು' ಎಂದು ಹೇಳಿ ತನ್ನ ಆಶ್ರಮಕ್ಕೆ ಹೋದನು. ಆಮೇಲೆ ಆ ಮುದ್ಗರವನ್ನು ನೆಲದಮೇಲೆ ಇಡಲೇ ಇಲ್ಲ. ಸ್ವಲ್ಪ ಸಮಯದ ಮೇಲೆ ಅವನು ಮರಣವನ್ನು ಹೊಂದಿದನು. ಆಮೇಲೆ ಅವನ ಮಗನಾದ ದೇವಶರ್ಮನಿಗೆ ಆ ಮುದ್ಗರವು ಬಂದು ಸೇರಿತು. ದೇವಶರ್ಮನಿಂದ ನಿನ್ನ ಕೈಗೆ ಬಂದಿರುತ್ತದೆ. ಈರೀತಿಯಾಗಿ ಈ ಮುದ್ಗರದ ವಿಷಯವನ್ನು ಹೇಳಿರುವೆನು. ಇನ್ನು ಮೇಲೆ ವಿಚಾರ ಮಾಡದೆ ಈ ಮುದ್ಗರದಿಂದ ನನ್ನ ತಲೆಯನ್ನು ಕತ್ತರಿಸು' ಎಂದು ಹೇಳಿ ತನ್ನ ತಲೆಯನ್ನು ಮುಂದೆ ಮಾಡಿದನು.

ತರುವಾಯ ಭಗವಂತನು ಆ ಮುದ್ಗರದಿಂದ ಅವನ ತಲೆಯನ್ನು ಕತ್ತರಿಸಿದನು. ತರುವಾಯ ಅವನು ದೈತ್ಯದೇಹವನ್ನು ಬಿಟ್ಟು ದಿವ್ಯರೂಪವನ್ನು ಧರಿಸಿ 'ಶ್ರೀಭಗವಂತನೇ! ನಾನು ಶಾಪದಿಂದ ಈ ಅವಸ್ಥೆಯನ್ನು ಹೊಂದಿದ್ದೆನು. ನನ್ನ ಶಾಪವನ್ನು ಬಿಡಿಸುವವನಾದಿ. ನಾನು ಕೃತಾರ್ಥನಾದೆನು. ನಿನ್ನ ಲೋಕಕ್ಕೆ ಹೋಗ ಬೇಕೆಂದು ಆಸೆಯಿಂದ ಇರುವೆನು' ಎಂದನು. ಆಗ ಭಗವಂತನು 'ನೀನು ನನ್ನ ಲೋಕವನ್ನು ಹೊಂದುವವನಾಗು. ಇನ್ನು ಮೇಲೆ ಲೋಕದಲ್ಲಿ ನಿನ್ನ ಕೀರ್ತಿಯು ಸ್ಥಿರವಾಗಿ ಇರುವುದು. ಕಂಚಿನ ಮುದ್ಗರದಿಂದ ನಿನ್ನ ತಲೆಯನ್ನು ನಾನು ಅಪಹಾರ ಮಾಡಿದ ಕಾರಣ ಪುಷ್ಯಮಾಸದ ಹುಣ್ಣಿಮೆ ದಿನದಲ್ಲಿ ಯಾರು ಕಂಚಿನಪಾತ್ರೆಯನ್ನು ದಾನಮಾಡುವವರೋ ಮತ್ತು ಬಂಗಾರವನ್ನು ತುಪ್ಪವನ್ನು ದಾನಮಾಡುವವರೋ

ಅವರಿಗೆ ಭೂತಗಳ ಪೀಡೆಯಾಗಬಾರದು. ಅವರಿಗೆ ವಂಶವೃದ್ಧಿಯಾಗುವುದು' ಎಂದು ವರವನ್ನು ಕೊಟ್ಟನು. ಆಮೇಲೆ ಮಾಹಿಷ್ಮತೀನಗರದಲ್ಲಿ ಬ್ರಾಹ್ಮಣರಿಗೆ ಭಯವಿರಲಿಲ್ಲ. ಆದುದರಿಂದ ಪುಷ್ಯಮಾಸದ ಹುಣ್ಣಿಮೆಯಲ್ಲಿ ಕಂಚಿನಪಾತ್ರೆಯನ್ನು ತುಪ್ಪವನ್ನು ಬಂಗಾರವನ್ನು ದಾನಮಾಡುವುದು ಪ್ರಶಸ್ತವಾದದ್ದು.



# ವಸ್ತ್ರದಾನದ ಮಹಿಮೆಯು

ಪೂರ್ವದಲ್ಲಿ ಪಿಪ್ಪಲಾದ ಎಂಬ ರಾಜನಿದ್ದನು. ಅವನಿಗೆ ಇಂದ್ರದ್ಯುಮ್ನ ಎಂದು ಹೆಸರುಳ್ಳ ಮಗನಿದ್ದನು. ರಾಜನು ಮಗನಿಂದ ಕೂಡಿಕೊಂಡು ರಾಜ್ಯಭಾರವನ್ನು ಮಾಡುತ್ತಿದ್ದನು. ಆಮೇಲೆ ರಾಜನು ರಾಜ್ಯವನ್ನು ಮಗನಿಗೆ ಒಪ್ಪಿಸಿ ಸ್ವರ್ಗಸ್ಥನಾದನು. ಮಗನು ಅತಿಕ್ರೂರನು. ಇನ್ನೊಬ್ಬರ ಸ್ತ್ರೀಯರನ್ನು ಧನವನ್ನು ಅಪಹರಿಸುವವನು. ಅಧರ್ಮಿಷ್ಠ. ಅವನು ಧರ್ಮದ ವೃತ್ತಾಂತವನ್ನೇ ಕೇಳಿದವನಲ್ಲ.

ಒಂದು ದಿವಸದಲ್ಲಿ ಬೆಳಿಗ್ಗೆ ಯಮುನಾನದಿಗೆ ಹೋದನು. ಅಲ್ಲಿ ಜನರೆಲ್ಲರೂ ಸ್ನಾನಮಾಡುತ್ತಿರುವುದನ್ನು ನೋಡಿದನು. ಕೆಲವು(ವರು) ಪುರಾಣವನ್ನು ಹೇಳುತ್ತಿದ್ದರು. ಕೆಲವರು ಕೇಳುತ್ತಿದ್ದರು. ಕೆಲವರು ವಿಷ್ಣುಪೂಜೆಯನ್ನು ಮಾಡುತ್ತಿದ್ದರು. ಕೆಲವರು ಹರೇಕೃಷ್ಣ ಎಂದು ಹೇಳುತ್ತಿದ್ದರು. ಅಲ್ಲಿ ಒಬ್ಬ ಬ್ರಾಹ್ಮಣನು ಸ್ನಾನ ಮಾಡುತ್ತಿದ್ದುದನ್ನು ನೋಡಿದನು. ಅವನಿಗೆ ಸರಿಯಾಗಿ ಬಟ್ಟೆಯಿರಲಿಲ್ಲ. ಅವನು ಛಳಿಯಿಂದ ನಡುಗುತ್ತಿದ್ದನು. ಅವನನ್ನು ನೋಡಿ ರಾಜನಿಗೆ ದಯೆಯುಂಟಾಯಿತು. ತಾನು ಮೈಯಮೇಲೆ ಧರಿಸಿದ್ದ ತೆಳ್ಳಗಿರುವ ವಸ್ತ್ರವನ್ನು ಆ ಬ್ರಾಹ್ಮಣನಿಗೆ ಕೊಟ್ಟನು. ಇದರಿಂದ ಆ ಬ್ರಾಹ್ಮಣನು ಛಳಿಯಿಂದ ನಡುಗುವುದು ನಿಂತಿತು. ಆಮೇಲೆ ರಾಜನು ತನ್ನ ಮನೆಗೆ ಬಂದು ಪೂರ್ವದಂತೆಯೇ ಇದ್ದನು. ಸ್ವಲ್ಪ ಸಮಯದಲ್ಲಿಯೇ ಅವನು ಮೃತನಾದನು.

ಯಮದೂತರು ಅವನನ್ನು ಸೆಳೆದುಕೊಂಡು ಹೋಗಿ ಯಮದೇವರ ಹತ್ತಿರ ತಿಳಿಸಿದರು. ಯಮದೇವರು ಅವನನ್ನು ಕುಂಭೀಪಾಕದಲ್ಲಿ ಹಾಕಲಿಕ್ಕೆ ಹೇಳಿದರು. ದೂತರು ಹಾಗೆಯೇ ಅವನನ್ನು ಕುಂಭೀಪಾಕದಲ್ಲಿ ಹಾಕಲು ಆ ಕುಂಭೀಪಾಕವು ತಣ್ಣಗೆ ಆಗಿಹೋಯಿತು. ಅದನ್ನು ನೋಡಿ ಆಶ್ಚರ್ಯಪಟ್ಟು ದೂತರು ಬಂದು ಯಮದೇವರೊಡನೆ ತಿಳಿಸಿದರು. ಯಮದೇವರು ಆಶ್ಚರ್ಯವುಳ್ಳವರಾಗಿ ಅವನನ್ನು ಹತ್ತಿರಕ್ಕೆ ಕರೆಸಿದರು. ಆಗ ಚಿತ್ರಗುಪ್ತನು ಇವನು ಯಾವ ಕರ್ಮವನ್ನು

ಮಾಡಿರುವನೆಂದು ಕೇಳಿದರು. ಆಗ ಚಿತ್ರಗುಪ್ತನು ತಾನು ಬರೆದದ್ದನ್ನು ಶೋಧಿಸಲು ಅವನು ವಸ್ತ್ರದಾನವನ್ನು ಮಾಡಿದ್ದು ಕಂಡು ಬಂದಿತು. ಅದನ್ನು ಹೇಳಿದನು. ಯಮದೇವರು ಇವನು ವಸ್ತ್ರದಾನ ಮಾಡಿದ ಪುಣ್ಯದಿಂದ ಕುಂಭೀಪಾಕವು ತಣ್ಣಗೆ ಆಯಿತು. ಇನ್ನು ಬೇರೆ ನರಕದಲ್ಲಿ ಹಾಕಿರಿ ಎಂದು ಹೇಳಿದರು. ಯಮದೂತರು ಅವನನ್ನು ಅತಿಭಯಂಕರವಾದ ರೌರವ ನರಕದಲ್ಲಿ ಹಾಕದರು. ಅಲ್ಲಿಯೂ ಅವನಿಗೆ ಒಂದು ವೇದನೆಯೂ ಆಗಲಿಲ್ಲ. ಹೀಗೆ ಯಾವ ಯಾವ ನರಕದಲ್ಲಿ ಹಾಕಿದರೂ ವ್ಯರ್ಥವಾಯಿತು. ಅದನ್ನು ನೋಡಿ ಯಮದೇವರು ಇನ್ನು ಏನು ಮಾಡಲಿ ಎಂದು ಯೋಚಿಸುತ್ತಾ ಇದ್ದರು.

ತರುವಾಯ ಅಲ್ಲಿಗೆ ನಾರದರು ಬಂದರು. ಅವರು ಕ್ರೂರವಾದ ಮುಖವುಳ್ಳ ಯಮದೇವರನ್ನು ನೋಡಿ ಕೋಪಿಸಿಕೊಂಡಿರಲು ಕಾರಣವೇನೆಂದು ಕೇಳಿದರು. ಅದಕ್ಕೆ ಯಮದೇವರು ಈ ಚಂಡಾಲನನ್ನು ಎಷ್ಟು ನರಕದಲ್ಲಿ ಹಾಕಿದರೂ ಹಾಗೆಯೇ ಅವನನ್ನು ಪೀಡಿಸುವುದಿಲ್ಲ. ಅವನು ಏನು ಪುಣ್ಯ ಮಾಡಿದ್ದಾನೋ ತಿಳಿಯಲಿಲ್ಲ ಎಂದರು. ಅದಕ್ಕೆ ನಾರದರು ಇವನು ಇತರ ಧರ್ಮಗಳನ್ನು ಮಾಡಿರದಿದ್ದರೂ ಪುಷ್ಯಮಾಸದಲ್ಲಿ ವಸ್ತ್ರದಾನವನ್ನು ಮಾಡಿರುವನು. ಅದರಿಂದ ಅವನನ್ನು ನರಕಗಳು ಪೀಡಿಸುವುದಿಲ್ಲ. ಇವನನ್ನು ವಿಷ್ಣುದೂತರು ಕರೆದುಕೊಂಡು ಬರಲಿಕ್ಕೆ ಬಂದಿರುವರು ಎಂದು ಹೇಳಿ ಹೊರಟುಹೋದರು. ವಿಷ್ಣುದೂತರು ಬಂದು ಅವನನ್ನು ವಿಮಾನ ದಲ್ಲಿ ಕೂತುಕೊಳ್ಳಿರಿಸಿಕೊಂಡು ಕರೆದುಕೊಂಡು ಹೋದರು. ಅದನ್ನು ನೋಡಿ ಯಮದೇವರು ಆಶ್ಚರ್ಯವುಳ್ಳವರಾಗಿ ದೂತರೊಡನೆ 'ವಸ್ತ್ರದಾನದ ಮಹಿಮೆ ಯನ್ನು ನೋಡಿದಿರಾ? ಇನ್ನು ಮುಂದೆ ನೀವು ಪುಷ್ಯಮಾಸದಲ್ಲಿ ವಸ್ತ್ರದಾನವನ್ನು ಮಾಡಿದವನನ್ನು ಮುಟ್ಟಬೇಡಿರಿ ಎಂದು ಹೇಳಿದರು. ಆದುದರಿಂದ ಪುಷ್ಯಮಾಸದಲ್ಲಿ ವಸ್ತ್ರದಾನವು ಪ್ರಶಸ್ತವಾದದ್ದು.

# ದೀಪದಾನ ಮಾಡಿದ ಸುಮತಿಯು [1]

ಪೂರ್ವದಲ್ಲಿ ವೈದೇಹದೇಶದಲ್ಲಿ ಸುಮತಿಯೆಂಬ ಧರ್ಮಿಷ್ಟನಾದ ರಾಜನಿದ್ದನು. ಅವನಿಗೆ ಸುನಂದೆಯೆಂದು ಹೆಸರುಳ್ಳ ಪತಿವ್ರತೆಯಯಾದ ಹೆಂಡತಿಯಿದ್ದಳು. ಒಂದು ದಿವಸ ಅವನ ಮನೆಗೆ ಅಗಸ್ತ್ಯರು ಬಂದರು. ರಾಜನು ಅವರಿಗೆ ಅರ್ಘ್ಯಪಾದ್ಯಾದಿಪೂಜೆಯನ್ನು ಮಾಡಿ ತಾವು ಬಂದಿರುವ ಉದ್ದೇಶವೇನೆಂದು ಕೇಳಿದನು. ಅದಕ್ಕೆ ಅಗಸ್ತ್ಯರು 'ರಾಜನೇ! ಕಣ್ವಾಶ್ರಮದಲ್ಲಿ ಯಜ್ಞವು ನಡೆಯುತ್ತದೆ ಎಂದು ಕೇಳಿದೆನು. ಆ ಯಜ್ಞಕ್ಕಾಗಿ ಹೋಗುತ್ತಿರುವೆನು. ಹೋಗುವಾಗ ಮಾರ್ಗದಲ್ಲಿ ನಿನ್ನ ಮನೆಯನ್ನು ನೋಡಿ ಯಾರಿರುವರೆಂದು ನೋಡಲು ಬಂದೆನು. ನಿನ್ನ ಸತ್ಕಾರದಿಂದ ನನಗೆ ಬಹಳ ಸಂತೋಷವಾಯಿತು. ಇನ್ನು ನಾನು ಹೋಗುವೆನು. ನನಗೆ ಬಹಳ ನೀರಡಿಕೆಯಾಗುತ್ತಿದೆ' ಎಂದು ಹೇಳಿದನು. ಕೂಡಲೇ ರಾಜನು ಒಳಗೆ ಹೋಗಿ ಹೆಂಡತಿಯೊಡನೆ ಹೇಳಿದನು. ಕೂಡಲೇ ಸುನಂದೆಯು ಕಲಶದಲ್ಲಿ ನೀರನ್ನು ಹಿಡಿದುಕೊಂಡು ಬಂದಳು.

ಅದನ್ನು ನೋಡಿ ಅಗಸ್ತ್ಯರು 'ರಾಜನೇ! ಮಕ್ಕಳಿಲ್ಲದೆ ಇರುವ ನಿನ್ನ ನೀರನ್ನು ನಾನು ತೆಗೆದುಕೊಳ್ಳುವುದಿಲ್ಲ. ಪುತ್ರನಿಂದ ಉದ್ಧಾರವಾಗುವುದು. ಮಕ್ಕಳಿಲ್ಲದವರ ಮನೆಯಲ್ಲಿ ದೇವತೆಗಳು ಹವಿಸ್ಸನ್ನು ಸ್ವೀಕರಿಸುವುದಿಲ್ಲ. ಆದುದರಿಂದ ನೀನು ಮಕ್ಕಳಾಗುವಂತೆ ನಾನಾ ಧರ್ಮಗಳನ್ನು ಮಾಡು. ಆಮೇಲೆ ಅಂದರೆ ನಿನಗೆ ಮಕ್ಕಳಾದ ಮೇಲೆ ನಿನ್ನ ಮನೆಯಲ್ಲಿ ನೀರು ಮೊದಲಾದುವನ್ನು ಸ್ವೀಕರಿಸುವೆವು' ಎಂದು ಹೇಳಿದರು. ಅದನ್ನು ಕೇಳಿ ರಾಜನು ದುಃಖವುಳ್ಳವನಾಗಿ ಪತ್ನಿಸಹಿತನಾಗಿ ಅಗಸ್ತ್ಯರ ಕಾಲುಗಳನ್ನು ಹಿಡಿದು ನನಗೆ ಮಕ್ಕಳಾಗುವಂತೆ ಉಪಾಯವನ್ನು ಹೇಳಬೇಕೆಂದು ಪ್ರಾರ್ಥಿಸಿಕೊಂಡನು. ಅಗಸ್ತ್ಯರು ನೀನು ಪುಷ್ಯಮಾಸದಲ್ಲಿ ದೀಪದಾನವನ್ನು ಮಾಡಿದರೆ ಮಕ್ಕಳಾಗುವುವು ಎಂದರು. ಹೊರಟು ಹೋದರು. ತರುವಾಯ ರಾಜನು ಸಂತೋಷದಿಂದ ಪುಷ್ಯಮಾಸದಲ್ಲಿ ದೀಪದಾನವನ್ನು ಮಾಡಿದನು. ದೀಪದಾನ ಮಾಡಿದ್ದರಿಂದ ಅವನಿಗೆ ಧರ್ಮವನ್ನು ತಿಳಿದ ಉತ್ತಮಮಗನು ಹುಟ್ಟಿದನು. ಆದುದರಿಂದ ಪುಷ್ಯಮಾಸದಲ್ಲಿ ದೀಪದಾನವು ಪ್ರಶಸ್ತವಾದದ್ದು.



1. ಸ್ಕ.ಪು. ಪುಷ್ಯ ಮಾ.ಮ. ಅ-2.

# ಅಧಿಕಮಾಸದಲ್ಲಿ ದೀಪದಾನದ ಮಹಿಮೆಯು [1]

ಸೌಭಾಗ್ಯನಗರದಲ್ಲಿ ಚಿತ್ರಬಾಹು ಎಂಬ ರಾಜನಿದ್ದನು. ಸರ್ವಧರ್ಮವನ್ನು ತಿಳಿದವನಾಗಿ ಭಗವದ್ಭಕ್ತನಾಗಿ ಭಗವತ್ಕಥಾಶ್ರವಣದಲ್ಲಿ ಆಸಕ್ತನಾಗಿ ತನ್ನ ಪತ್ನಿಯಲ್ಲಿ ಆಸಕ್ತನಾಗಿ ಚತುರಂಗ ಸೈನ್ಯ ಸಹಿತನಾಗಿ ಕುಬೇರನಂತೆ ಧನವಂತನಾಗಿ ಸುಖದಿಂದ ಇದ್ದನು. ಅವನ ಪತ್ನಿಯು ಚಂದ್ರಕಳೆಯು ಭಗವದ್ಭಕ್ತಳು. ಪತಿವ್ರತೆಯು. ರಾಜನು ಪತ್ನಿಯೊಡನೆ ಸಹಿತನಾಗಿ ರಾಜ್ಯವನ್ನಾಳುತ್ತಿದ್ದನು. ಕೃಷ್ಣಪರಮಾತ್ಮನನ್ನೇ ಭಜಿಸುತ್ತಿದ್ದನು.

ಒಂದುದಿನ ಚಿತ್ರಬಾಹುರಾಜನು ದೂರದಲ್ಲಿ ಬರುತ್ತಿರುವ ಅಗಸ್ತ್ಯರನ್ನು ಕಂಡು ಎದ್ದು ನಿಂತು ಸಾಷ್ಟಾಂಗನಮಸ್ಕಾರ ಮಾಡಿ ಬೇಕಾದ ಸತ್ಕಾರವನ್ನು ಮಾಡಿ ಆಸನದಲ್ಲಿ ಕೂತುಕೊಳ್ಳಿಸಿ ವಿನಯದಿಂದ ಬಗ್ಗಿದವನಾಗಿ ಅಗಸ್ತ್ಯರೊಡನೆ 'ಪೂಜ್ಯರೇ! ತಮ್ಮ ದರ್ಶನದಿಂದ ನನ್ನ ಜನ್ಮವು ಸಫಲವಾಯಿತು. ತಮ್ಮ ಆಗಮನದಿಂದ ನನ್ನ ರಾಜ್ಯವು ಸಫಲವಾಯಿತು. ಸಮಸ್ತ ರಾಜ್ಯವನ್ನೇ ತಮಗೆ ಒಪ್ಪಿಸಿದ್ದೇನೆ' ಎಂದು ಹೇಳಿ ಸತ್ಕಾರ ಮಾಡಿದನು.

ಅಗಸ್ತ್ಯರು 'ಚಿತ್ರಬಾಹುವೇ! ನೀನು ಪರಮಧನ್ಯನು. ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿರುವಿ. ನಿನ್ನಂತಹ ವಿಷ್ಣುಭಕ್ತನಾದ ರಾಜನನ್ನು ಪಡೆದ ನನ್ನ ದೇಶದ ಪ್ರಜೆಗಳು ಧನ್ಯರು. ನಿನ್ನಂತಹ ವಿಷ್ಣುಭಕ್ತನೊಡನೆ ಮಾತಾಡಿದ ನನ್ನ ಬಾಯಿಯು ಸಾರ್ಥಕವಾಯಿತು. ಈ ರಾಜ್ಯವನ್ನು ನನ್ನ ಆಜ್ಞೆಯಿಂದ ನೀನೇ ಆಳುತ್ತಿರು. ನಿನಗೆ ಕ್ಷೇಮವಾಗಲಿ. ನಾನು ಹೋಗಿಬರುವೆನು' ಎಂದು ಹೇಳಿ ಹೊರಡಲು, ಪತಿವ್ರತೆಯಾದ ರಾಜಪತ್ನಿಯು ಬಂದು ಭಕ್ತಿಯಿಂದ ನಮಸ್ಕರಿಸಿದಳು. ಆಗ ಅಗಸ್ತ್ಯರು 'ನೀನು ಸರ್ವದಾ ಸುವಾಸಿನಿಯಾಗಿರು. ಭಕ್ತಿಯಿಂದ ಪತಿಯನ್ನು ಭಜಿಸುತ್ತಿರು. ನಿನಗೆ ಪರಮಾತ್ಮನಲ್ಲಿ ಭಕ್ತಿಯುಂಟಾಗಲಿ' ಎಂದು ಆಶೀರ್ವದಿಸಿದರು. ತರುವಾಯ ರಾಜನು ಕೈಮುಗಿದುಕೊಂಡು ವಿನಯದಿಂದ 'ಸ್ವಾಮಿ! ನನಗೆ ವಿಶಾಲವಾದ ಶತ್ರುರಹಿವಾದ ರಾಜ್ಯವೂ ಪತಿವ್ರತೆಯಾದ ಪತ್ನಿಯು ಇತ್ಯಾದಿ ಸೌಕರ್ಯಗಳು ಉಂಟಾಗಲಿಕ್ಕೆ ನಾನೇನು ಪುಣ್ಯವನ್ನು ಮಾಡಿರುವೆನು. ಅದನ್ನು ತಾವು ಹೇಳಬೇಕು' ಎಂದು ಕೇಳಿದನು.

ಅದಕ್ಕೆ ಅಗಸ್ತ್ಯರು 'ರಾಜನೇ! ಪೂರ್ವದಲ್ಲಿ ಮನೋಹರವಾದ

1. ಬೃ.ನಾ.ಪು.ಅ.ಮಾ.ಮಾ.

ಚಮತ್ಕಾರಪುರದಲ್ಲಿ ಮಣಿಗ್ರೀವ ಎಂದು ಹೆಸರುಳ್ಳ ಶೂದ್ರನಿದ್ದನು. ಜನರೆಲ್ಲಾ (ಲ್ಲರನ್ನು) ಹಿಂಸಿಸುತ್ತಾ, ಪರಸ್ತ್ರೀಯರನ್ನು ಕೆಡಿಸುತ್ತಾ, ದುರಾಚಾರಿಯಾಗಿ ಇದ್ದನು. ಅವನಿಗೆ ಸುಂದರಿಯೆಂಬ ಹೆಂಡತಿಯಿದ್ದಳು. ಅವಳು ಪರಮ ಪತಿವ್ರತೆಯಾಗಿದ್ದು ಗಂಡನು ದುಷ್ಟನಾಗಿದ್ದರೂ ಪತಿಯಸೇವೆಯನ್ನು ಮಾಡುತ್ತಲೇ ಇದ್ದಳು. ಗಂಡನಲ್ಲಿ ಯಾವಾಗಲೂ ದುಷ್ಟ ಅಭಿಪ್ರಾಯವನ್ನು ಮಾಡಿದ್ದಿಲ್ಲ. ಪಾಪಿಯಾದ ಆ ಶೂದ್ರನು ಬಂಧುಗಳಿಂದ ಬಿಡಲ್ಪಟ್ಟನು. ರಾಜನು ಕೋಪಿಸಿಕೊಂಡು ಅವನ ಹಣವನ್ನೆಲ್ಲಾ ಅಪಹರಿಸಿದನು. ಉಳಿದ ಹಣವನ್ನು ಬಂಧುಗಳು ಅಪಹರಿಸಿದರು. ತರುವಾಯ ಎಲ್ಲರಿಂದಲೂ ತಿರಸ್ಕೃತನಾಗಿ ಪತ್ನೀಸಹಿತನಾಗಿ ವನಕ್ಕೆ ಹೋದನು.

ಅಲ್ಲಿ ಪ್ರಾಣಿಗಳನ್ನೆಲ್ಲಾ ಸಂಹರಿಸುತ್ತಾ ಜೀವಿಸುತ್ತಿದ್ದನು. ಒಂದು ದಿವಸ ಮಣಿಗ್ರೀವನು ಧನುಸ್ಸನ್ನು ಹಿಡಿದುಕೊಂಡು ಬಹುಮೃಗಗಳಿಂದ ಕೂಡಿರುವ ಅರಣ್ಯಕ್ಕೆ ಹೋದನು. ಆ ಕಾಡಿನ ಮಧ್ಯದಲ್ಲಿ ಉಗ್ರದೇವ ಎಂದು ಹೆಸರುಳ್ಳ ಒಬ್ಬ ಬ್ರಾಹ್ಮಣನು ದಿಕ್ಕು ತಪ್ಪಿಹೋಗಿ ಮಧ್ಯಾಹ್ನದಲ್ಲಿ ಬಿಸಿಲಿನಿಂದ ಪೀಡಿತನಾಗಿ ಸಾಯುವಂತೆ ಆಗಿದ್ದನು. ಆ ಬ್ರಾಹ್ಮಣನನ್ನು ಎಬ್ಬಿಸಿ ತನ್ನ ಗುಡಿಸಲಿಗೆ ಕರಕೊಂಡು ಹೋದನು. ಶ್ರಮಪಟ್ಟಿರುವ ಬ್ರಾಹ್ಮಣನಿಗೆ ಮಣಿಗ್ರೀವನೂ ಅವನ ಹೆಂಡತಿಯೂ ಇಬ್ಬರೂ ಸರಿಯಾದ ಸೇವಾಮಾಡಿದರು. ಮೂರ್ಛಿತನಾದ ಆ ಬ್ರಾಹ್ಮಣನಿಗೆ ಒಂದು ಮುಹೂರ್ತದ ಮೇಲೆ ಜ್ಞಾನವು ಬಂದಿತು. ನಾನು ಎಲ್ಲಿ ಇದ್ದೇನೆ. ನನ್ನನ್ನು ಯಾರು ಕರೆದುಕೊಂಡು ಬಂದರು? ಎಂದನು. ಆಗ ಮಣಿಗ್ರೀವನು ಇಲ್ಲಿಯೇ ಒಂದು ಮನೋಹರವಾದ ಸರೋವರವಿದೆ. ಅದರಲ್ಲಿ ಸ್ನಾನಮಾಡಿ ನೀರು ಕುಡಿದು ಶ್ರಮಪರಿಹಾರ ಮಾಡಿಕೊಳ್ಳಿರಿ. ಫಲಾಹಾರವನ್ನು ಮಾಡಿರಿ. ನಾನು ನಿಮ್ಮನ್ನು ರಕ್ಷಿಸಿದ್ದೇನೆ. ಏಳಿರಿ ಎಂದನು.

ತರುವಾಯ ಉಗ್ರದೇವನು ಮಣಿಗ್ರೀವನ ಕೈಹಿಡಿದುಕೊಂಡು ಸರೋವರ ತೀರಕ್ಕೆ ಹೋಗಿ ಸ್ವಲ್ಪ ಹೊತ್ತು ನೆರಳಲ್ಲಿ ವಿಶ್ರಮಿಸಿ ಆಮೇಲೆ ಸರೋವರದಲ್ಲಿ ಸ್ನಾನಮಾಡಿ ಸಂಧ್ಯಾವಂದನೆ ದೇವರ್ಷಿಪಿತೃ ತರ್ಪಣಗಳನ್ನು ಮಾಡಿದನು. ಮಣಿ ಗ್ರೀವನು ಪತ್ನೀ ಸಹಿತನಾಗಿ ನಮಸ್ಕರಿಸಿದನು. ತಮ್ಮ ದರ್ಶನದಿಂದ ನನ್ನ ಪಾಪವು ಪರಿಹೃತವಾಯಿತು ಎಂದನು. ತನ್ನ ಹೆಂಡತಿಯೊಡನೆ 'ಸುಂದರಿ! ನೀನು ಬೇಗನೇ ಮಾವಿನಹಣ್ಣುಗನ್ನು ಇತರ ಹಣ್ಣುಗಳನ್ನು ತೆಗೆದುಕೊಂಡು ಬಾ' ಎಂದನು. ಸುಂದರಿಯು ಗಂಡನ ಮಾತಿನಂತೆ ಸಂತೋಷದಿಂದ ಒಳ್ಳೇ ಹಣ್ಣುಗಳನ್ನು ತಂದು ಉಗ್ರದೇವನ ಮುಂದೆ ಇಟ್ಟಳು. ಉಗ್ರದೇವನು ಮಣಿಗ್ರೀವನು ನೀನು ಯಾರು?

ನೀನು ಯಾರು ಎಂದು ತಿಳಿಯದೆ ನೀನು ಕೊಟ್ಟ ಹಣವನ್ನು ಹೇಗೆ ಸ್ವೀಕರಿಸಲಿ? ಎಂದನು.

ಅದಕ್ಕೆ ಮಣಿಗ್ರೀವನು ನಾನು ಮಣಿಗ್ರೀವ ಎಂದು ಹೆಸರುಳ್ಳ ಒಬ್ಬ ಶೂದ್ರನು. ಎಲ್ಲ ಬಂಧುಗಳೂ ನನ್ನನ್ನು ಬಿಟ್ಟುಬಿಟ್ಟರು ಎಂದು ಹೇಳಿದನು. ತರುವಾಯ ಉಗ್ರದೇವನು ಅವನ ಪ್ರಾರ್ಥನೆಯಿಂದ ಹಣ್ಣುಗಳನ್ನು ತಿಂದು ಸಂತೋಷವನ್ನು ಹೊಂದಿದನು. ತರುವಾಯ ಮಣಿಗ್ರೀವನು ಉಗ್ರದೇವನ ಕಾಲನ್ನು ಒತ್ತುತ್ತಾ ನೀವು ಎಲ್ಲಿಗೆ ಹೋಗುವವರು? ಮನುಷ್ಯ ಸಂಚಾರವಿಲ್ಲದ ಈ ಕಾಡಿಗೆ ಏಕೆ ಬಂದಿರುವಿರಿ ಎಂದು ಕೇಳಿದನು. ಅದಕ್ಕೆ ಉಗ್ರದೇವನು ನಾನು ಪ್ರಯಾಗಕ್ಕೆ ಹೊರಟಿರುವೆನು. ದಾರಿಯು ತಿಳಿಯದೆ ಈ ಘೋರವಾದ ವನಕ್ಕೆ ಬಂದು ಸೇರಿದೆನು. ನೀರಡಿಕೆಯಿಂದ ಪ್ರಾಣಹೋಗುವಂತೆ ಆಯಿತು. ನಿನ್ನಿಂದ ಬದುಕಿದೆನು. ನಿನಗೆ ನಾನೇನು ಉಪಕಾರಮಾಡಲಿ? ನೀವು ದಂಪತಿಗಳು ಕಾಡಿಗೆ ಏಕೆ ಬಂದಿರುವಿರಿ' ನಿಮ್ಮ ದುಃಖವನ್ನು ನಾನು ಪರಿಹರಿಸುವೆನು ಎಂದನು. ಮಣಿಗ್ರೀವನು ತನ್ನ ಚರಿತ್ರೆಯನ್ನು ತಿಳಿಸಿದನು. ಸ್ವಾಮಿ! ತಾವು ನಮಗೆ ಅನುಗ್ರಹ ಮಾಡಬೇಕು. ನಮ್ಮ ಪೂರ್ವಪುಣ್ಯ ದಿಂದ ತಾವು ಸಿಕ್ಕಿದಿರಿ. ನನಗೆ ದಾರಿದ್ರ್ಯವು ಪರಿಹೃತವಾಗಿ ಸುಖದಿಂದ ಇರುವ ಉಪಾಯವನ್ನು ಹೇಳಿರಿ ಎಂದನು.

ಆಗ ಉಗ್ರದೇವನು 'ಮಣಿಗ್ರೀವ! ನೀನು ನನಗೆ ಉಪಚಾರವನ್ನು ಮಾಡಿದ್ದರಿಂದ ಕೃತಾರ್ಥನಾಗಿದ್ದಿ. ಪತ್ನೀಸಹಿತನಾದ ನಿನಗೆ ಮಂಗಲವುಂಟಾಗು ವುದು. ವ್ರತ ತೀರ್ಥಯಾತ್ರೆ ಇತ್ಯಾದಿ ಒಂದೂ ಮಾಡದಯೇ ನಿನ್ನ ದಾರಿದ್ರ್ಯವು ಪರಿಹೃತ ವಾಗುವುದು. ಇನ್ನು ಮುಂದೆ ಬರುವ ಮೂರನೇ ಮಾಸವೇ ಅಧಿ ಕಮಾಸವು. ಅಂದರೆ ಪುರುಷೋತ್ತಮಮಾಸವು. ಆ ಮಾಸದಲ್ಲಿ ದಂಪತಿಗಳಾದ ನೀವು ಒಂದು ತಿಂಗಳೂ ದೀಪವಿಡಬೇಕು. ಎಳ್ಳೆಣ್ಣೆಯಿಂದ ದೀಪವಿಡಬೇಕು. ಸಂಪನ್ನರಾಗಿದ್ದರೆ ತುಪ್ಪದಿಂದಲೇ ಇಡಬೇಕು. ಈ ಕಾಡಿನಲ್ಲಿ ನಿನಗೆ ಅದು ಎರಡೂ ಸಿಗಲಾರದು. ಆದುದರಿಂದ ಇಂಗುದಿ ಎಂಬ ಫಲದ ಎಣ್ಣೆಯಿಂದ ದೀಪವಿಡು. ಒಂದು ತಿಂಗಳೂ ಪತ್ನೀಸಹಿತನಾಗಿ ಈ ಸರೋವರದಲ್ಲಿ ಸ್ನಾನಮಾಡಿ ದೀಪವನ್ನು ಇಡು. ಈ ದೀಪದಾನದಿಂದ ದಾರಿದ್ರ್ಯವು ಪರಿಹೃತವಾಗುತ್ತದೆ. ಸಮಸ್ತ ಶುಭವೂ ಉಂಟಾಗುವುದು' ಎಂದು ಹೇಳಿ ಭಗವಂತನನ್ನು ಸ್ಮರಿಸುತ್ತಾ ಹೊರಟುಹೋದನು. ಮಣಿಗ್ರೀವನು ಅವನ ಹಿಂದೆಯೇ ಸ್ವಲ್ಪದೂರ ಹೋಗಿ ಪತ್ನೀಸಹಿತನಾಗಿ ನಮಸ್ಕರಿಸಿ ತನ್ನ ಮನೆಗೆ ಬಂದನು. ಅಧಿಕಮಾಸವು ಬರಲು ದೀಪವನ್ನು ಇಟ್ಟನು. ತರುವಾಯ

ಕಾಲಕ್ರಮದಿಂದ ಮೃತರಾಗಿ ಇಂದ್ರಲೋಕವನ್ನು ಹೊಂದಿ ಸುಖವನ್ನು ಅನುಭವಿಸಿದರು. ತರುವಾಯ ಆ ಮಣಿಗ್ರೀವನೇ ವೀರಬಾಹುರಾಜನ ಮಗನಾದ ಚಿತ್ರಬಾಹು ಎಂಬ ಹೆಸರುಳ್ಳ ನೀನಾಗಿ ಹುಟ್ಟಿರುವುದು. ಪೂರ್ವಜನ್ಮದ ಸುಂದರಿಯೇ ನಿನ್ನ ಪತ್ನಿ ಚಂದ್ರಕಲೆಯು. ಆ ದೀಪದಾನದ ಮಹಿಮೆಯಿಂದಲೇ ನಿನಗೆ ವಿಶಾಲವಾದ ರಾಜ್ಯವು ಲಭಿಸಿರುವುದು. ಈರೀತಿಯಾಗಿ ಅಗಸ್ತ್ಯರು ಚಿತ್ರಬಾಹುವಿಗೆ ಪೂರ್ವಜನ್ಮದ ಚರಿತ್ರೆಯನ್ನು ಹೇಳಿ ಹೊರಟುಹೋದನು.



## ಕೊಡೆಮೆಟ್ಟುಗಳ ಕಥೆ [1]

ಒಂದು ಸಮಯದಲ್ಲಿ ಜಮದಗ್ನಿ ಋಷಿಗಳು ಧನುಸ್ಸಿನಿಂದ ಕ್ರೀಡಾ ಮಾಡುತ್ತಿದ್ದರು. ಬಾಣಗಳನ್ನು ಬಿಡುತ್ತಾ ಇದ್ದರು. ಆ ಬಾಣಗಳನ್ನು ಅವರ ಪತ್ನಿಯಾದ ರೇಣುಕೆಯು ತಂದುಕೊಡಬೇಕು. ಅವರು ಪುನಃ ಬಾಣಗಳನ್ನು ಬಿಡುವರು. ಹೀಗೆಯೇ ಮಾಡುತ್ತಿದ್ದರು. ಮಧ್ಯಾಹ್ನದಲ್ಲಿ ಒಳ್ಳೇ ಬಿಸಿಲಿನ ಸಮಯದಲ್ಲಿ ಬಾಣಗಳನ್ನು ಬಿಟ್ಟು ರೇಣುಕೆಯೊಡನೆ ಬಾಣಗಳನ್ನು ತರಲಿಕ್ಕೆ ಹೇಳಿದರು. ರೇಣುಕೆಯು ಬಾಣಗಳನ್ನು ತರಲಿಕ್ಕೆ ಹೋಗುವಾಗ ಬಿಸಿಲಿನಿಂದ ಅವಳ ತಲೆಯೂ ಕಾಲುಗಳೂ ಸುಟ್ಟುಹೋದವು. ಅವಳು ಸ್ವಲ್ಪ ಹೊತ್ತು ಒಂದು ಮರದ ಬುಡದಲ್ಲಿ ನೆರಳಿನಲ್ಲಿ ನಿಂತುಕೊಂಡಳು. ಆಮೇಲೆ ಗಂಡನು ಶಾಪಕೊಡುವರು ಎಂದು ಭಯವುಳ್ಳವಳಾಗಿ ಬಾಣಗಳು ಬಿದ್ದಲ್ಲಿಗೆ ಹೋಗಿ ಬಾಣಗಳನ್ನು ಹಿಡಿದುಕೊಂಡು ಬಂದಳು. ಬಿಸಿಲಿನಿಂದಾಗಿ ತುಂಬಾ ಶ್ರಮದಿಂದ ಬಂದಳು. ಗಂಡನಿಂದ ಭಯಪಡುತ್ತಲೇ ಬಂದಳು. ಜಮದಗ್ನಿ ಋಷಿಗಳು 'ರೇಣುಕೇ! ಏಕೆ ಇಷ್ಟು ಹೊತ್ತು ಮಾಡಿ ಬಂದಿರುವಿ' ಎಂದು ಪುನಃ ಪುನಃ ಕೇಳಿದರು.

ಅದಕ್ಕೆ ರೇಣುಕೆಯು ಸೂರ್ಯನ ಬಿಸಿಲಿನಿಂದ ತಲೆಯೂ ಪಾದಗಳೂ ಸುಟ್ಟುಹೋದವು. ಬಿಸಿಲನ್ನು ತಡೆಯಲಾಗದೆ ಮರದ ನೆರಳಿನಲ್ಲಿ ಸ್ವಲ್ಪ ಹೊತ್ತು ನಿಂತಿದ್ದೆನು. ಅದರಿಂದ ಹೊತ್ತಾಯಿತು. ನೀವು ಕೋಪಿಸಿಕೊಳ್ಳಬಾರದು ಎಂದಳು. ಜಮದಗ್ನಿ ಋಷಿಗಳು, 'ರೇಣುಕೇ! ನಿನಗೆ ಈಗ ಶ್ರಮವನ್ನು ಉಂಟುಮಾಡಿರುವ ಸೂರ್ಯನನ್ನು ಬಾಣಗಳಿಂದ ಬಡಿದು ಕೆಳಗೆ ಬೀಳಿಸುತ್ತೇನೆ ನೋಡು' ಎಂದು

---

1. ಮ.ಭಾ.ಅನುಪ. ಅ-95, 96

ಧನುರ್ಬಾಣಗಳನ್ನು ಹಿಡಿದುಕೊಂಡು ಸೂರ್ಯನು ಹೋದಂತೆ ಎದುರಾಗಿ ಹೋದರು. ಆಗ ಸೂರ್ಯದೇವರು ಬ್ರಾಹ್ಮಣರೂಪದಿಂದ ಬಂದು ಜಮದಗ್ನಿ ಋಷಿಗಳೊಡನೆ 'ನಿಮಗೆ ಸೂರ್ಯನೇನು ಅಪರಾಧ ಮಾಡಿದನು. ಅವನು ಆಕಾಶದಲ್ಲಿ ಇದ್ದುಕೊಂಡು ತನ್ನ ಕಿರಣಗಳಿಂದ ಭೂಮಿಯಲ್ಲಿ ಇರುವ ನೀರನ್ನು ಹೀರುವನು. ಆಮೇಲೆ ಮಳೆ ಸುರಿಸುವನು. ಆದರಿಂದ ಜನರಿಗೆಲ್ಲಾ ಆಹಾರ ವುಂಟಾಗುವುದು. ಆಹಾರದಿಂದಲೇ ಎಲ್ಲಾ ಶುಭಕಾರ್ಯಗಳೂ ನಡೆಯುವುವು. ನಿಮಗೇ ಎಲ್ಲವೂ ತಿಳಿಯುವುದಲ್ಲಾ! ನಿಮ್ಮ ಹತ್ತಿರ ನಾನು ಪ್ರಾರ್ಥಿಸಿಕೊಳ್ಳುತ್ತೇನೆ. ಸೂರ್ಯನನ್ನು ಬೀಳಿಸಬೇಡಿರಿ' ಎಂದನು.

ಆರೀತಿಯಾಗಿ ಸಮಾಧಾನಪಡಿಸಿದರೂ ಜಮದಗ್ನಿ ಋಷಿಗಳ ಕೋಪವು ಇಳಿಯಲೇ ಇಲ್ಲ. ತರುವಾಯ ಸೂರ್ಯದೇವರು ಬ್ರಾಹ್ಮಣರೂಪದಿಂದ ನಮಸ್ಕರಿಸಿ ಸೂರ್ಯನು ಚಲಿಸುತ್ತಲೇ ಇರುವನಲ್ಲಾ, ಸ್ಥಿರವಾಗಿ ನಿಂತಿರುವುದಿಲ್ಲವಲ್ಲಾ! ಹೇಗೆ ಬಾಣ ಬಿಡುವಿರಿ?' ಎಂದು ಕೇಳಿದರು.

ಜಮದಗ್ನಿ ಋಷಿಗಳು 'ನನಗೆ ಸ್ಥಿರ ಚಲ ಎಲ್ಲಾ ತಿಳಿದಿರುವೆನು. ಜ್ಞಾನದೃಷ್ಟಿಯಿಂದ ನೀನು ಯಾರು ಎಂದು ತಿಳಿದಿರುವೆನು. ಸೂರ್ಯನೇ! ನೀನು ಮಧ್ಯಾಹ್ನದಲ್ಲಿ ಅರ್ಧ ನಿಮಿಷ ನಿಲ್ಲುವಿ. ಆಗ ನಿನ್ನನ್ನು ಭೇದಿಸುವೆನು' ಎಂದರು.

ಋಷಿಗಳೇ! ನೀವು ನಿಶ್ಚಯವಾಗಿಯೂ ನನ್ನನ್ನು ಭೇದಿಸುವಿರಿ. ಆದರೆ ನಾನು ಅಪಕಾರವನ್ನು ಮಾಡಿದವನಾದರೂ ನಿಮ್ಮನ್ನು ಮರೆಹೊಂದಿರುವೆನು ಎಂದು ಸೂರ್ಯದೇವರು ಹೇಳಿದರು. (ಋಷಿಗಳಿಗಿಂತ ದೇವತೆಗಳು ಉತ್ತಮರಾಗಿದ್ದರೂ ಋಷಿಗಳಲ್ಲಿ ದೇವರ ಸನ್ನಿಧಾನವಿರುವ ಕಾರಣವೂ ಅವರು ಶಾಪಕೊಟ್ಟರೆ ಆದರಂತೆ ದೇವತೆಗಳು ನಡೆಯಬೇಕೆಂಬ ರೀತಿಯಾಗಿ ದೇವರ ಆಜ್ಞೆಯಿರುವ ಕಾರಣವೂ ದೇವತೆಗಳು ಋಷಿಗಳಿಗೆ ಭಯಪಟ್ಟಂತೆ ತೋರಿಸುವರು)

ಆಗ ಜಮದಗ್ನಿ ಋಷಿಗಳು ನಗುತ್ತಾ ಸೂರ್ಯ! ಭಯಪಡುವುದು ಬೇಡ. ನಮಸ್ಕಾರ ಮಾಡಿದವನಾಗಿದ್ದಿ. ಶರಣಾಗತರನ್ನು ಹಿಂಸಿಸಿದರೆ ಮಹಾಪಾಪವು ಬರುವುದು. ಆದರೆ ನಿನ್ನ ಬಿಸಿಲಿನ ಸಮಯದಲ್ಲಿ ಜನರು ಸುಖವಾಗಿ ನಡೆದುಕೊಂಡು ಹೋಗಲಿಕ್ಕೆ ಹೇಗೆ ಆಗುವುದೋ ಆ ಉಪಾಯವನ್ನು ಯೋಚಿಸು ಎಂದರು. ಆಗ ಸೂರ್ಯದೇವರು ಕೊಡೆಯನ್ನು ಮೆಟ್ಟುಗಳನ್ನೂ ಋಷಿಗಳಿಗೆ ಕೊಟ್ಟರು. 'ಋಷಿಗಳೇ! ಈ ಕೊಡೆಯನ್ನು ತಲೆಗೆ ಹಿಡಿದುಕೊಂಡು ಪಾದಗಳಲ್ಲಿ ಈ ಮೆಟ್ಟುಗಳನ್ನು ಧರಿಸಿದರೆ ಬಿಸಿಲಿನ ತಾಪವು ಉಂಟಾಗಲಾರದು. ಇನ್ನು ಮುಂದೆ

ಸಮಸ್ತ ಪುಣ್ಯಕಾರ್ಯಗಳಲ್ಲಿ ಕೊಡೆ ಮೆಟ್ಟುಗಳ ದಾನವನ್ನು ಮಾಡುವರು' ಎಂದು ಕೊಡೆಯನ್ನು ಮೆಟ್ಟುಗಳನ್ನೂ ಕೊಟ್ಟು ಹೊರಟುಹೋದರು. ಕೊಡೆಯ ದಾನವನ್ನು ಮಾಡಿದವನು ಇಂದ್ರಲೋಕವನ್ನು ಹೊಂದುವನು. ಮೆಟ್ಟುಗಳ ದಾನಮಾಡಿದವನು ಗೋಲೋಕವನ್ನು ಹೊಂದುವನು.



# ಮಾಸ ಮಹಿಮಾ ಪರಿಚ್ಛೇದ

## ಜ್ಯೇಷ್ಠಮಾಸ ಸ್ನಾನದ ಮಹಿಮೆಯು [1]

ಜ್ಯೇಷ್ಠಮಾಸದಲ್ಲಿ ಸೂರ್ಯೋದಯದ ಮೊದಲೇ ಸ್ನಾನಮಾಡಬೇಕು. ಜ್ಯೇಷ್ಠಮಾಸದಲ್ಲಿ ಪ್ರಾತಃಕಾಲದಲ್ಲಿ ಅರ್ಧಯಾಮದವರೆಗೆ ಎಲ್ಲಾ ನೀರಿನಲ್ಲಿಯೂ ಗಂಗಾದಿ ಸರ್ವತೀರ್ಥಾಭಿಮಾನಿದೇವತೆಗಳೂ ವಾಸಿಸುತ್ತಾರೆ. ಆದುದರಿಂದ ಅಷ್ಟರ ಒಳಗೆ ಪ್ರಾತಃಸ್ನಾವನ್ನು ಮಾಡಬೇಕು. ಇಲ್ಲದಿದ್ದರೆ ಆ ದೇವತೆಗಳು ಶಾಪಕೊಡುತ್ತಾರೆ. ಯಾವ ನೆಪದಿಂದಲಾದರೂ ಪ್ರಾತಃಸ್ನಾವನ್ನು ಮಾಡಬೇಕು. ಕಲಿಯುಗದಲ್ಲಿ ಪಾಪವು ಬಹಳವಾಗಿ ಇರುವುದರಿಂದ ಜ್ಯೇಷ್ಠಸ್ನಾನ ಮಾಡುವವರು ಬಹಳ ಕಡಿಮೆ. ಯಮದೇವರೂ ಕೂಡ ತ್ರಿವಿಕ್ರಮ ರೂಪಿಯಾದ ಪರಮಾತ್ಮನನ್ನು ಪ್ರಾರ್ಥಿಸಿ ಅದರ ಮಹಿಮೆಯು ಮರೆಯಾಗಿರುವಂತೆ ಮಾಡಿರುವರು.

ಪೂರ್ವದಲ್ಲಿ ಮಾಹಿಷ್ಮತೀ ನಗರದಲ್ಲಿ ಕನಕ ಎಂಬ ಬ್ರಾಹ್ಮಣನಿದ್ದನು. ಅವನು ವಿದ್ಯಾಹೀನನಾಗಿದ್ದನು. ಮೂರ್ಖನಾಗಿದ್ದನು. ಇನ್ನೊಬ್ಬರ ನಿಂದೆಯನ್ನು ಮಾಡುತ್ತಿದ್ದನು. ಕೃಷಿಕರ್ಮವನ್ನು ಮಾಡುತ್ತಿದ್ದನು. ಕ್ರಯವಿಕ್ರಯವನ್ನು ಮಾಡುತ್ತಿದ್ದನು. ಹೀಗೆ ಅನೇಕ ವಿಧವಾಗಿ ಕುಟುಂಬವನ್ನು ರಕ್ಷಿಸುತ್ತಿದ್ದನು. ಆದರೂ ಸಾಕಾಗಲಿಲ್ಲ. ಕೊನೆಗೆ ದಾರಿಯಲ್ಲಿ ಹೋಗುವವರನ್ನು ಹಿಂಸಿಸಲಿಕ್ಕೆ ಆರಂಭಿಸಿದನು. ಆಮೇಲೆ ಕಳ್ಳತನವನ್ನು ಮಾಡಲು ಆರಂಭಿಸಿದನು. ಹೀಗೆಯೇ ಪ್ರತಿದಿನವೂ ಮಾಡುವವನಾಗಿ ಇರುತ್ತಿರಲು ಒಂದು ದಿವಸದಲ್ಲಿ ಗ್ರಾಮವಾಸಿಗಳು ಅವನನ್ನು ನೋಡಿದರು. ಅವನನ್ನು ಹಿಡಿದು ಕಟ್ಟಿಹಾಕಿ ಬಡಿದು ಗ್ರಾಮದಿಂದ ಹೊರಗೆ ಹಾಕಿದರು. ಕೆಲವು ಸಮಯ ಗ್ರಾಮದ ಹತ್ತಿರವೇ ವನದಲ್ಲಿ ವಾಸಮಾಡಿದನು. ರಾತ್ರಿಯಲ್ಲಿ ಮನೆಗೆ

1. ಭ.ಪು.ಜ್ಯೇ.ಮಾ.ಮಾ. ಅ.29

ಬಂದು ಬೆಳಗಾಗುವ ಮೊದಲು ವನಕ್ಕೆ ಹೋಗುತ್ತಾ ಇದ್ದನು. ಕಾಡಿನಲ್ಲಿ ಮೃಗಗಳನ್ನು ಸಂಹರಿಸಿ ತಿನ್ನುತ್ತಿದ್ದನು. ಹೀಗೆಯೇ ಬಹಳ ಸಮಯವು ಕಳೆದುಹೋಯಿತು. ಜ್ಯೇಷ್ಠಮಾಸವು ಬಂದಿತು. ಮಧ್ಯರಾತ್ರಿಯಲ್ಲಿ ಕನಕನು ಕಾಡಿನಿಂದ ಮನೆಗೆ ಬಂದನು. ವಸ್ತ್ರಾದಿಗಳನ್ನು ಕದ್ದು ಕೊಂಡು ಪುನಃ ಕಾಡಿಗೆ ಹೋದನು. ದಾರಿಯಲ್ಲಿ ಒಂದು ನದಿಯನ್ನು ಹೊಂದಿದನು. ಆ ನದಿಯನ್ನು ದಾಟಿ ಹೋದನು. ಹೀಗೆ ಅವನಿಗೆ ಜ್ಯೇಷ್ಠಮಾಸವೆಂದು ತಿಳಿಯದೆಯೇ ನದಿಯಲ್ಲಿ ಸ್ನಾನವಾಯಿತು. ಹೀಗೆಯೇ ಪ್ರತಿನಿತ್ಯವೂ ಮಾಡುತ್ತಿದ್ದನು. ಪ್ರತಿನಿತ್ಯವೂ ಸ್ನಾನ ಮಾಡುತ್ತಿದ್ದನು. ಹೀಗೆಯೇ ತಿಳಿಯದೆಯೇ ಜ್ಯೇಷ್ಠಮಾಸದಲ್ಲಿ ಸ್ನಾನವಾಯಿತು.

ಜ್ಯೇಷ್ಠ ಶುಕ್ಲ ಚತುರ್ದಶಿಯಲ್ಲಿ ಹಣವನ್ನು ವಸ್ತ್ರಗಳನ್ನು ಕದ್ದುಕೊಂಡು ದೊಡ್ಡ ಬಾರವನ್ನು ಹೊತ್ತುಕೊಂಡು ಹೋಗುತ್ತಾ ಇದ್ದನು. ಅಷ್ಟರಲ್ಲಿಯೇ ಜನರೆಲ್ಲರೂ ಅವನನ್ನು ನೋಡಿಬಿಟ್ಟರು. ಹಿಂದಿನಿಂದ ಬಂದು ಕಟ್ಟಿಗೆಗಳಿಂದ ಕಲ್ಲುಗಳಿಂದ ಅವನಿಗೆ ಬಡಿದರು. ಅವನು ತಲೆಯ ಮೇಲೆ ಮೂಟೆಯನ್ನು ಹೊತ್ತುಕೊಂಡು ನದಿಯ ಮಧ್ಯದಲ್ಲಿ ಹೋಗುತ್ತಿರಲು ಊರಜನರ ಪ್ರಹಾರದಿಂದ ನೀರಿನಲ್ಲಿ ಬಿದ್ದು ಪ್ರಾಣಬಿಟ್ಟನು. ಆಗ ಅವನಿಗೆ ದಿವ್ಯವಿಮಾನವು ಬಂದಿತು. ಜನರೆಲ್ಲರೂ ಇದೇನೆಂದು ನೋಡುತ್ತಾ ಆಶ್ಚರ್ಯಪಡುತ್ತಿದ್ದರು. ಕೆಲವರು ಅವನನ್ನು ನದಿಯಿಂದ ಸೆಳೆದು ಮೇಲಕ್ಕೆ ಹಾಕಿದರು. ತರುವ ಕನಕನು ದಿವ್ಯರೂಪವುಳ್ಳವನಾಗಿ ವಿಮಾನದಲ್ಲಿರುವ ದೂತರೊಡನೆ ನಾನು ಮಾಡಿದ ಯಾವ ಪುಣ್ಯದಿಂದ ನನಗೆ ವಿಮಾನವು ಬಂದಿತು ಎಂದು ಕೇಳಿದನು. ಅದಕ್ಕೆ ದೂತರು ನೀನು ತಿಳಿಯದೆ ಜ್ಯೇಷ್ಠಮಾಸದಲ್ಲಿ ಸ್ನಾನ ಮಾಡಿದ ಕಾರಣ ವಿಮಾನವು ಬಂದಿತು ಎಂದು ಹೇಳಿದರು. ತರುವಾಯ ಕನಕನು ಭಗವಂತನ ಲೋಕಕ್ಕೆ ಹೋದನು. ಅದನ್ನು ಕೇಳಿ ಯಮ ದೇವರು ಭಗವಂತನನ್ನು ಪ್ರಾರ್ಥಿಸಿ ಜ್ಯೇಷ್ಠಸ್ನಾದ ಮಹಿಮೆಯು ಮರೆಯಾಗಿರುವಂತೆ ಪ್ರಾರ್ಥಿಸಿದನು.



# ಆಷಾಢಸ್ನಾನದ ಫಲವು [1]

ಪೂರ್ವದಲ್ಲಿ ಒಬ್ಬ ವೈಶ್ಯನಿದ್ದನು. ಅವನು ಧರ್ಮವನ್ನು ಬಿಟ್ಟವನಾಗಿದ್ದನು. ಜೈನಧರ್ಮದಲ್ಲಿ ಆಸಕ್ತನಾಗಿದ್ದನು. ವೇದದಲ್ಲಿ ಪರಾಙ್ಮುಖನಾಗಿದ್ದನು. ಅವನ ಪಿತೃಪಿತಾಮಹಾದಿಗಳು ಮೂಕರಾದರು. ಅವನ ಪಾಷಂಡ ಆಚಾರದಿಂದ ಅವರು ಬಹಳ ಕಷ್ಟದಿಂದ ಹೊಂದಿದರು. ಒಂದು ದಿವಸದಲ್ಲಿ ಆ ವೈಶ್ಯನು ವ್ಯಾಪಾರ ಮಾಡಿ ಲಾಭವನ್ನು ಸಂಪಾದಿಸುವುದಕ್ಕಾಗಿ ಬಹಳ ವಸ್ತುಗಳನ್ನು ಮಾರಲಿಕ್ಕೆ ತೆಗೆದುಕೊಂಡು ಹೋದನು. ಆಷಾಢಮಾಸದಲ್ಲಿ ತಾಪೀನದಿಯನ್ನು ದಾಟಿಹೋದನು. ಹೋಗುತ್ತಿರುವಾಗ ಪ್ರವಾಹವು ಮೇಲೆ ಬಂದು ವಸ್ತುವೆಲ್ಲವೂ ಪ್ರವಾಹದಲ್ಲಿ ಮುಳುಗಿ ಹೋಯಿತು. ವೈಶ್ಯನೂ ಮುಳುಗಿದನು. ಆಮೇಲೆ ಮೇಲಕ್ಕೆ ಬಂದು ದೋಣಿಯನ್ನು ಹತ್ತಿದನು. ಅವನ ದೇಹದಿಂದ ಸುರಿಯುತ್ತಿದ್ದ ನೀರನ್ನು ಅವನ ಪೂರ್ವಿಕರು ಪಾನಮಾಡುವವರಾದರು. ಆ ತಾಪೀನದಿಯ ನೀರನ್ನು ಪಾನಮಾಡಿದ ಪ್ರಭಾವದಿಂದ ಅವರಿಗೆ ಕೂಡಲೇ ಮೂಕತ್ವವು ಹೊರಟುಹೋಯಿತು.

ಆಮೇಲೆ ಅವರು ಆ ವೈಶ್ಯನನ್ನು ನೋಡಿ ಪುನಃ ಪುನಃ ಸ್ತೋತ್ರಮಾಡಿದರು. 'ವತ್ಸ! ನಾವು ಧನ್ಯರಾಗಿರುವೆವು. ಯಾವ ನಮಗೆ ನೀನು ಸತ್ಪುತ್ರನಾಗಿರುವಿ. ನಿನ್ನಿಂದಾಗಿ ನಾವು ಅನಾಯಾಸದಿಂದ ಮೂಕತ್ವದಿಂದ ರಹಿತರಾಗಿರುವೆವು' ಎಂದು ಹೇಳಿದರು. ಅದನ್ನು ಕೇಳಿ ವೈಶ್ಯನು ಆಶ್ಚರ್ಯವುಳ್ಳವನಾಗಿ ಅವರ ದರ್ಶನದಿಂದ ಭಯವೂ ಉಳ್ಳವನಾಗಿ 'ಯಾರು ನೀವು? ಇಲ್ಲಿ ಹೇಗೆ ಇರುವಿರಿ? ನಿಮ್ಮ ಮೂಕತ್ವವು ಹೇಗೆ ಹೊರಟುಹೋಯಿತು? ಎಲ್ಲವನ್ನೂ ಹೇಳಿರಿ. ನನಗೆ ಬಹಳ ಆಶ್ಚರ್ಯವಾಗುತ್ತಿದೆ' ಎಂದು ಹೇಳಿದನು.

ಅವನ ಮಾತನ್ನು ಕೇಳಿ ಅವರು 'ನಾವು ನಿನ್ನ ಪೂರ್ವಿಕರು. ನೀನು ವೇದಮಾರ್ಗವನ್ನು ಬಿಟ್ಟಕಾರಣ ನಾವು ಮೂಕರಾಗಿಯೂ ಪ್ರೇತಗಳಾಗಿಯೂ ಆದೆವು. ನೀನು ಈ ನದಿಯಲ್ಲಿ ಇಚ್ಛೆಯಿಲ್ಲದೆಯಾದರೂ ಸ್ನಾನ ಮಾಡಿದಿಯಾದ ಕಾರಣ ನಿನ್ನ ದೇಹದಿಂದ ಸುರಿಯುತ್ತಿದ್ದ ನೀರನ್ನು ಕುಡಿದು ನಾವು ದಾಹರಹಿತರಾಗಿಯೂ ಪಾಪರಹಿತರಾಗಿಯೂ ಆಗಿರುವೆವು. ನಮ್ಮ ಮನಸ್ಸೂ ಶುದ್ಧವಾಗಿರುವುದು. ನಾವು ಮೊದಲು ತಾಪೀನದಿಯ ಪ್ರಭಾವವನ್ನು ಕೇಳಿದ್ದೆವು. ಈಗ ಅನುಭವಿಸಿದೆವು. ಈ ನದಿಯ ತೀರದಲ್ಲಿ ನೀರನ್ನು ಕುಡಿಯುವುದರಿಂದ ಸದ್ಗತಿಯುಂಟಾಗು

1. ಸ್ಕ.ಪು. ಆಷಾ.ಮಾ.ಮಾ. ಅ-1,2

ವುದು. ಆಷಾಢಮಾಸದಲ್ಲಿ ಈ ನದಿಯಲ್ಲಿ ಸ್ನಾನವನ್ನು ಬಿಟ್ಟರೆ ದುರ್ಗತಿಗೆ ಓಷಧವೇ ಇರುವುದಿಲ್ಲ.

ವೇದಮಾರ್ಗಕ್ಕಿಂತ ಉತ್ತಮವಾದ ಮಾರ್ಗವು ಇಷ್ಟರವರೆಗೆ ಇಲ್ಲ. ಇನ್ನು ಮುಂದೆ ಬರಲಿಕ್ಕೆ ಹೋಗುವುದಿಲ್ಲ. ಈ ವೇದಮಾರ್ಗ ವನ್ನು ಆಶ್ರಯಿಸದೆ ಜನರು ದುರ್ಗತಿಯನ್ನು ಹೊಂದುವರು. ಯಾರಿಗೆ ಕೊನೆಯ ಕಾಲದಲ್ಲಿ ಶ್ರುತಿಯಲ್ಲಿ ಹೇಳಿ ವೃಷೋತ್ಸರ್ಗಾದಿ ಕಾರ್ಯಗಳು ನಡೆಯುವುವೋ ಅವನಿಗೆ ಹೇಗೆ ದುರ್ಗತಿಯು ಬರಬೇಕು? ಯಾರಿಗೆ ವೇದದಲ್ಲಿ ಹೇಳಿದ ಕ್ರಿಯೆಗಳು ನಡೆಯುವುದಿಲ್ಲವೋ ಅವರು ದುಃಖಪಡುವರು. ಯಾರಿಗೆ ಹದಿನಾರು ಪ್ರೇತಶ್ರಾದ್ಧಗಳನ್ನು ಮಾಡುವುದಿಲ್ಲವೋ ಅವನಿಗೆ ಪ್ರೇತತ್ವವು ನಿಶ್ಚಿತವಾಗಿರುವುದು. ಹನ್ನೊಂದನೇ ದಿವಸದಲ್ಲಿ ವೃಷೋತ್ಸರ್ಗ ವನ್ನು ಮಾಡಿದರೆ ಪ್ರೇತತ್ವವು ಬರಲಾರದು. ಪುಣ್ಯ ಲೋಕಕ್ಕೆ ಹೋಗುವನು. ಯಾರು ಪಾಷಂಡಮತವನ್ನು ಆಶ್ರಯಿಸುವರೋ ವಿಷ್ಣುಭಕ್ತಿಯನ್ನು ಮಾಡುವು ದಿಲ್ಲವೋ ಅವರು ದೇವತೆಗಳಿಂದ ಶಿಕ್ಷೆಯನ್ನು ಅನುಭವಿಸುವರು. ವೇದದಲ್ಲಿ ಹೇಳಿದ ಕ್ರಿಯೆಯಿಲ್ಲದೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿಲ್ಲ. ಆದುದರಿಂದ ಯಾವಾಗಲೂ ವೇದದಲ್ಲಿ ಹೇಳಿದ ಕರ್ಮವನ್ನು ಮಾಡಬೇಕು. ಮಗನೇ! ಆದುದರಿಂದ ನೀನು ಯಾವಾಗಲೂ ವೇದಮಾರ್ಗವನ್ನು ಬಿಡಬಾರದು. ಬದುಕಿರುವಾಗ ಬೇಕಾದಂತೆ ವಾದಗಳನ್ನು ಆಡಬಹುದು. ಸತ್ತಮೇಲೆ ಯಮ ದೂತರ ಕೈಗೆಸಿಕ್ಕಿ ಏನು ಮಾಡಲಿಕ್ಕೂ ಆಗಲಾರದು. ನಿನ್ನ ವಸ್ತುವು ನೀರಿನಲ್ಲಿ ಮುಳುಗಿಹೋದದ್ದು ಹೋಗಲಿ. ಅದಕ್ಕೆ ದುಃಖಪಡಬೇಡ. ಸಂಪತ್ತು ಆಪತ್ತು ಬರುವುದು ದೈವಾಧೀನವಾದದ್ದು. ಆದುದರಿಂದ ಶೋಕಪಡಬೇಡ. ನೀನು ಇಲ್ಲಿಯೇ ಇದ್ದು ಏಕಾದಶಿಯನ್ನು ಆರಂಭಿಸಿ ಹುಣ್ಣಿಮೆಯವರೆಗೆ ಐದು ದಿವಸ ತಾಪೀನದಿಯಲ್ಲಿ ಸ್ನಾನಮಾಡು. ಆಮೇಲೆ ಆ ಪುಣ್ಯವನ್ನು ನಮಗೆ ಕೊಡು. ಅದರಿಂದ ನಾವು ಬಿಡುಗಡೆಯನ್ನು ಹೊಂದುವೆವು. ಹೀಗೆ ಮಾಡಿದರೆ ನಿನಗೂ ಪಾಪ ಪರಿಹಾರವಾಗುವುದು.

ನಾವು ನೋಡುತ್ತಿರುವಾಗಲೇ ಒಬ್ಬ ಬ್ರಾಹ್ಮಣನನ್ನು ಅವನ ಮಗನು ಆಷಾಢ ಮಾಸದಲ್ಲಿ ಐದು ದಿನ ಸ್ನಾನಮಾಡಿದ ಪುಣ್ಯದಿಂದ ಪ್ರೇತತ್ವದಿಂದ ಬಿಡಿಸಿದನು' ಎಂದು ಹೇಳಿ ಆ ಬ್ರಾಹ್ಮಣನ ಚರಿತ್ರೆಯನ್ನು ಅವನನ್ನು ಮಗನು ಬಿಡಿಸಿದ ಪ್ರಕಾರವನ್ನು ತಿಳಿಸಿ 'ನಾವು ನಮ್ಮನ್ನು ಯಾರು ಈ ಪ್ರೇತಜನ್ಮದಿಂದ ಬಿಡಿಸುವರು? ನಮ್ಮ ಮಗನಾದ ನೀನಾದರೋ ಪಾಷಂಡಿಗಳ ಮಾತನ್ನು ಕೇಳಿ ನಮಗೆ ಪುಣ್ಯವನ್ನು

ಕೊಡಲಾರಿ. ನಾವು ಹೇಗೆ ಬಿಡುಗಡೆಯನ್ನು ಹೊಂದಲಿ? ಪಾಷಂಡಿಗಳು ಏನು ಕೊಟ್ಟರೂ ಅದನ್ನು ಅವನ ಪಿತೃಗಳು ಹೊಂದಲಾರರು. ಈರೀತಿಯಾಗಿ ನಾವು ಯೋಚನೆ ಮಾಡುತ್ತಿದ್ದೆವು. ಈಗ ನೀನು ತಾಪೀನದಿಯಲ್ಲಿ ಸ್ನಾನಮಾಡಿದ ಕಾರಣ ನಮ್ಮ ಕುಲವು ಪವಿತ್ರವಾಯಿತು. ನಿನಗೆ ಇಚ್ಛೆಯಿಲ್ಲದೆ ಇದ್ದರೂ ದೈವೇಚ್ಛೆಯಿಂದ ತಾಪೀನದಿಯಲ್ಲಿ ಸ್ನಾನವುಂಟಾಯಿತು. ಶ್ರೀಭಗವಂತನು ಅಸಂಭಾವಿತವಾದದ್ದನ್ನು ಘಟನೆ ಮಾಡುವನು. ಜೈನಾಚಾರವುಳ್ಳವನಾದ ನೀನು ಎಲ್ಲಿ? ಈ ತಾಪೀನದಿಯು ಎಲ್ಲಿ? ನಿನಗೆ ಇಚ್ಛೆಯಿಲ್ಲದಿದ್ದರೂ ಆಷಾಢಮಾಸದಲ್ಲಿ ಈ ತಾಪೀನದಿಯಲ್ಲಿ ಸ್ನಾನವು ಉಂಟಾಗುವುದು ಎಲ್ಲಿ? ಇದರಿಂದ ನಮಗೆ ಅವಶ್ಯವಾಗಿ ಶುಭವುಂಟಾಗುವುದೆಂದು ತಿಳಿದಿರುವೆವು' ಎಂದು ಹೇಳಿದರು.

ಅದನ್ನು ಕೇಳಿ ಆ ವೈಶ್ಯನು ಆಶ್ಚರ್ಯವುಳ್ಳವನಾಗಿ ಜೈನಧರ್ಮವನ್ನು ಪರಿತ್ಯಜಿಸಿ ಏಕಾದಶಿಯನ್ನು ಆರಂಭಿಸಿ ಹುಣ್ಣಿಮೆಯವರೆಗೆ ತಾಪೀನದಿಯಲ್ಲಿ ಪ್ರಾತಃಸ್ನಾನವನ್ನು ಮಾಡಿದನು. ಆ ಪುಣ್ಯವನ್ನು ತನ್ನ ಪೂರ್ವಿಕರಿಗೆ ಕೊಟ್ಟನು. ಆ ಪುಣ್ಯದಿಂದ ಅವರು ಪ್ರೇತದೇಹವನ್ನು ಬಿಟ್ಟು ದಿವ್ಯದೇಹವುಳ್ಳವರಾಗಿ ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕವನ್ನು ಹೊಂದಿದರು. ಆದುದರಿಂದ ಆಷಾಢಮಾಸದಲ್ಲಿ ಏಕಾದಶಿಯಿಂದ ಹುಣ್ಣಿಮೆಯವರೆಗೆ ಐದು ದಿನದಲ್ಲಿ ತಾಪೀನದಿಯಲ್ಲಿ ಪ್ರಾತಃಸ್ನಾನವನ್ನು ಮಾಡುವುದು ಅತ್ಯಂತ ಪ್ರಶಸ್ತವಾಗಿರುವುದು.



## ಕಾರ್ತಿಕಮಾಸದ ಮಹಿಮೆ [1]

ಪೂರ್ವದಲ್ಲಿ ವಿರಾಟದೇಶದಲ್ಲಿ ವಾಸ್ತುಹೋಮ ಎಂದು ಹೆಸರುಳ್ಳ ಒಂದು ಅಗ್ರಹಾರವಿದ್ದಿತು. ಅಲ್ಲಿ ವಿಷ್ಣುಭಕ್ತರಾದ ಪಂಡಿತರಾದ ಅನೇಕ ಜನರು ಇದ್ದರು. ಎಲ್ಲರೂ ದೇವರಪೂಜೆ ಮಾಡುವರು. ಕಾರ್ತಿಕಮಾಸದಲ್ಲಿ ಎಲ್ಲರೂ ಹುಡುಗರೂ ಹೆಂಗಸರೂ ಮುದುಕರೂ ಕೂಡ ಒಂದು ಸರೋವರದಲ್ಲಿ ಸ್ನಾನಮಾಡಿ ನೆಲ್ಲಿಯ ಮರದ ನೆರಳಿನಲ್ಲಿ ಕೂತುಕೊಂಡು ಒಬ್ಬ ಪಂಡಿತನ ಮುಖದಿಂದ ಕಾರ್ತಿಕಮಾಸ ಮಹಿಮೆಯನ್ನು ಕೇಳುತ್ತಿದ್ದರು. ಆ ಸಮಯದಲ್ಲಿ ಒಂದು ಕಾಗೆಯು ಹಸಿವೆಯಿಂದ ಪೀಡಿತವಾಗಿ ಒಂದು ಕಪ್ಪೆಯನ್ನು ಹಿಡಿಯಲಿಕ್ಕೆ ಬಂದಿತು. ಆ ಕಪ್ಪೆಯು ಭಯದಿಂದ

---

1. ಸ್ಕ.ಪು.ಕಾ.ಮಾ.ಮಾ.

ಓಡಿಹೋಗಿ ಪುರಾಣ ಹೇಳುತ್ತಿದ್ದ ಬ್ರಾಹ್ಮಣನ ಕಾಲನ್ನು ಮುಟ್ಟಿ ದುಃಖದಿಂದ ವೇಗದಿಂದ ಓಡಿ ಸರೋವರಕ್ಕೆ ಹಾರಿತು. ಆಗ ಅಲ್ಲಿದ್ದ ಒಂದು ನೀರಿನ ಹಾವು ಆ ಕಪ್ಪೆಯ ಕಾಲನ್ನು ಹಿಡಿದುಬಿಟ್ಟಿತು. ನೀರಿನ ಹಾವು ಕಚ್ಚಲು ಆ ಕಪ್ಪೆಯು ತುಂಬಾ ದುಃಖದಿಂದ ಕೂಗಿತು. ನೀರಿನಲ್ಲಿ ಮುಳುಗುತ್ತಾ ಮೇಲೆ ಬರುತ್ತಾ ಆ ಹಾವಿನ ಬಾಯಿಯಲ್ಲಿ ಸಿಕ್ಕಿಕೊಂಡು ಖಿನ್ನವಾಗಿ ಆಮೇಲೆ ಶತ್ರುವಾದ ಆ ಸರ್ಪವನ್ನು ನೋಡಿ ಮಾತಾಡಿತು.

'ಎಲಾ ನೀಚಹಾವೇ! ನಿನ್ನ ನೀಚವೃತ್ತಾಂತವನ್ನು ತಿಳಿಯದೆ ನನ್ನನ್ನು ಏಕೆ ಪೀಡಿಸುವೆ? ನಾನು ಪೂರ್ವಜನ್ಮದಲ್ಲಿ ಪುಣ್ಯಪಾಪಗಳನ್ನು ಎಣಿಸದೆ ಈ ಜನ್ಮವನ್ನು ಹೊಂದಿರುವೆನು. ನನ್ನನ್ನು ಹಿಂಸಿಸಬೇಡ. ಪರೋಪಕಾರ ಮಾಡುವವನೂ ಸರ್ವಪ್ರಾಣಿಗಳಲ್ಲಿ ದಯೆಯನ್ನು ಮಾಡುವವನೂ ಮಹಾತಪಸ್ಸು ಮಾಡಿದ ಪುಣ್ಯವನ್ನು ಹೊಂದುವನು' ಎಂದು ಹೇಳಿತು.

ಆ ಮಾತನ್ನು ಕೇಳಿ ಆ ನೀರಿನ ಹಾವು ಭಯದಿಂದ ಬೇಗನೆ ಕಪ್ಪೆಯನ್ನು ಬಿಟ್ಟು ಬಿಟ್ಟು ಪುನಃ ಪುನಃ ನೋಡಿತು. ಆಮೇಲೆ ಭಯದಿಂದ 'ನಾನು ಮೂಢನು. ಪುಣ್ಯವೆಂದರೇನು ಪಾಪವೆಂದರೇನು ಎಂಬುದನ್ನು ತಿಳಿಯೆನು. ಆದುದರಿಂದ ನನಗೆ ಉಪದೇಶವನ್ನು ಮಾಡು. ನಿನ್ನ ಜ್ಞಾನವನ್ನು ನೋಡಿ ನನಗೆ ಆಶ್ಚರ್ಯವಾಯಿತು. ನೀನು ಪೂರ್ವದಲ್ಲಿ ಯಾರು? ಯಾರ ಮಗನು? ಎಲ್ಲವನ್ನು ತಿಳಿಸಬೇಕು' ಎಂದಿತು.

ಈರೀತಿಯಾಗಿ ಸರ್ಪದ ಮಾತನ್ನು ಕೇಳಿ ತರುವಾಯ ಕಪ್ಪೆಯು ತನ್ನ ಪೂರ್ವಜನ್ಮ ವೃತ್ತಾಂತವನ್ನು ಹೇಳಿಕೊಂಡಿತು.

'ನಾನು ಪೂರ್ವಜನ್ಮದಲ್ಲಿ ಕಾಂಚೀನಗರದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದೆನು. ನಾಲ್ಕು ವೇದಗಳನ್ನೂ ಓದಿಕೊಂಡವನು. ಆದರೆ ದುರಾಚಾರಿಯಾಗಿದ್ದೆನು. ಚೆನ್ನಾಗಿ ಮಾತಾಡುವೆನು. ಎಂತಹ ಪಂಡಿತರನ್ನು ಜಯಿಸುವೆನು. ಡಾಂಭಿಕನಾಗಿದ್ದೆನು. ಶ್ರುತಿಸ್ಮೃತಿಗಳನ್ನು ತಿಳಿದವನಾಗಿದ್ದೆನು. ಚೆನ್ನಾಗಿ ಉಪನ್ಯಾಸ ಮಾಡುತ್ತಿದ್ದೆನು. ನನಗೆ ಬಹುಬೇಗನೇ ಕೋಪವು ಬರುತ್ತಾ ಇತ್ತು. ನಾನು ಶ್ರೇಷ್ಠಬ್ರಾಹ್ಮಣನೆಂದು ಎಲ್ಲರೂ ನನ್ನನ್ನು ಊಟಕ್ಕೆ ಕರಿಯುತ್ತಿದ್ದರು. ಎಲ್ಲೆಲ್ಲಿಯೂ ಹೋಗಿ ಭೋಜನವನ್ನು ಮಾಡುತ್ತಿದ್ದೆನು. ಬ್ರಾಹ್ಮಣರಿಗೆಲ್ಲಾ ದಕ್ಷಿಣೆಯನ್ನು ನಾನೇ ಕೊಡುತ್ತೇನೆ ಎಂದು ಹೇಳಿ ಯಜಮಾನನ ಕೈಯಿಂದ ಹಣವನ್ನು ತೆಗೆದುಕೊಂಡು ನಾಲ್ಕು ಜನರಿಗೆ ದಕ್ಷಿಣೆಯನ್ನು ಕೊಟ್ಟು ಉಳಿದ ಹಣವನ್ನು ನಾನೇ ಇಟ್ಟುಕೊಳ್ಳುತ್ತಿದ್ದೆನು. ಪರಸ್ತ್ರೀ ಗಮನವನ್ನು ಮಾಡುತ್ತಿದ್ದೆನು. ನಿತ್ಯವೂ ಸ್ನಾನವನ್ನು ಮಾಡಲಾರೆನು. ಒಬ್ಬ ಬ್ರಾಹ್ಮಣರಿಗೂ

ಅನ್ನವನ್ನು ಹಾಕಲಾರೆನು. ಬೆಳಿಗ್ಗೆ ಮಠ ಇತ್ಯಾದಿಗಳಲ್ಲಿ ಹೋಗಿ ಪುರಾಣವನ್ನು ಹೇಳುತ್ತಿದ್ದೆನು. ನಾನು ಧರ್ಮವನ್ನು ಮಾಡುತ್ತಿರಲಿಲ್ಲ. ಎಲ್ಲರಿಗೂ ಧರ್ಮಮಾಡ ಬೇಕೆಂದು ಉಪದೇಶಿಸುತ್ತಿದ್ದೆನು. ಪುರಾಣ ಶ್ರವಣ ಮಾಡುವವರು ನನಗೆ ಕೊಡುವ ಹಣವನ್ನು ನಾನೇ ಸ್ವೀಕರಿಸುತ್ತಿದ್ದೆನು. ಒಬ್ಬರಿಗೂ ಸ್ವಲ್ಪವೂ ಕೊಡುತ್ತಿದ್ದಿಲ್ಲ. ನಾನುಚೆನ್ನಾಗಿ ಮಾತಾಡುತ್ತಿದ್ದೆನು. ನನ್ನನ್ನು ಪತ್ನೀಸಹಿತನನ್ನು ಎಲ್ಲರೂ ಬಹುಮಾನ ಮಾಡುತ್ತಿದ್ದರು. ವಿದ್ಯಾಗರ್ವದಿಂದ ನಾನು ಎಲ್ಲರನ್ನೂ ಅವಮಾನ ಮಾಡುತ್ತಿದ್ದೆನು.

ಒಂದು ಸಮಯದಲ್ಲಿ ಮಾಘಮಾಸದಲ್ಲಿ ಪಯೋಷ್ಣೀನದಿಯಲ್ಲಿ ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಹೆಂಗಸರೂ ಮುದುಕರೂ ಹುಡುಗರೂ ಎಲ್ಲರೂ ಸ್ನಾನ ಮಾಡುತ್ತಿದ್ದರು. ನಾನು ಅವರಿಂದ ಪ್ರಾರ್ಥಿತವಾಗಿ ಮಾಘಮಾಸ ಮಾಹಾತ್ಮ್ಯ ಪುರಾಣವನ್ನು ಹೇಳಿದೆನು. ಮಂಗಳದಿವಸದಲ್ಲಿ ನನ್ನನ್ನು ಊಂಜಲಲ್ಲಿ ಕೂತುಕೊಳ್ಳಿಸಿ ನನಗೆ ಸತ್ಕರಿಸಿದರು. ಬೇಕಾದ ಹಣವನ್ನೂ ದಿವ್ಯವಸ್ತ್ರಾದಿಗಳನ್ನೂ ಕೊಟ್ಟರು. ಅದೆಲ್ಲವನ್ನೂ ತೆಗೆದುಕೊಂಡು ಲೋಭದಿಂದ ಒಬ್ಬ ಬ್ರಾಹ್ಮಣನಿಗೂ ಸ್ವಲ್ಪವೂ ಕೊಡಲಿಲ್ಲ. ನಾನು ನಿತ್ಯವೂ ಬೆಳಗ್ಗೆ ಸ್ನಾನ ಮಾಡುತ್ತಿರಲಿಲ್ಲ. ಜನರೆಲ್ಲರೂ ಬರುವುದಕ್ಕಿಂತ ಮೊದಲೇ ಹೋಗಿ ಬಿಳಿಯಾದ ವಸ್ತ್ರವನ್ನು ಉಟ್ಟುಕೊಂಡು ಜಪ ಮಾಡುವಂತೆ ನಿಂತಿರುವೆನು. ಜಪಮಾಡಲಿಕ್ಕೆ ಆರಂಭಿಸಿದರೆ ನನಗೆ ಸಂಸಾರದ ಯೋಚನೆಯಲ್ಲೇ ಹೋಗುವುದು. ನಾನು ದೇವರ ಧ್ಯಾನವನ್ನು ಮಾಡಲಾರೆನು. ನಾನು ಒಂದು ದಿವಸದಲ್ಲಿಯೂ ವೈಶ್ವದೇವವನ್ನು ಮಾಡಿದವನಲ್ಲ. ಅತಿಥಿಗೆ ಅನ್ನವನ್ನು ಹಾಕಿಲ್ಲ. ಕೋಮಲ ತುಲಸೀದಲಗಳಿಂದ ಒಂದು ದಿವಸವೂ ದೇವರಿಗೆ ಪೂಜೆಯನ್ನು ಮಾಡಿಲ್ಲ. ಯಾವಾಗಲೂ ಶ್ರೋತ್ರಿಯ ಬ್ರಾಹ್ಮಣರನ್ನು ದ್ವೇಷಿಸುತ್ತಾ ಇದ್ದೆನು. ಧರ್ಮ ಉಪದೇಶ ಮಾಡುವವರನ್ನು ನಿಂದಿಸುತ್ತಾ ಇದ್ದೆನು.

ಮಾಘಮಾಸ ಮುಗಿಯುವ ದಿವಸದಲ್ಲಿ ನಾನು ಒಬ್ಬ ಬ್ರಾಹ್ಮಣನಿಗೂ ಭೋಜನ ಮಾಡಿಸಲಿಲ್ಲ. ನಾನೇ ಯಾರೋ ಒಬ್ಬರ ಮನೆಯಲ್ಲಿ ಭೋಜನ ಮಾಡಿದೆನು. ಮಂಗಳಕಾಲದಲ್ಲಿ ಒಬ್ಬ ಬ್ರಾಹ್ಮಣನು ರತ್ನಖಚಿತವಾದ ಉಂಗುರವನ್ನು ಕೊಟ್ಟನು. ಒಬ್ಬನು ಕಟಿಸೂತ್ರವನ್ನು ಮತ್ತೊಬ್ಬನು ಕಿವಿಯ ಆಭರಣವನ್ನು ಕೊಟ್ಟನು. ಬಹುಜನರು ವಸ್ತುಗಳನ್ನು ಕೊಟ್ಟರು. ಬಂಗಾರದ ನಾಣ್ಯಗಳು ಮುನ್ನೂರು ಬಂದವು. ಪಟ್ಟೆಸೀರೆ ಬಂದದ್ದನ್ನೆಲ್ಲಾ ಹೆಂಡತಿಗೆ ಕೊಟ್ಟೆನು. ಉಂಗುರವನ್ನು ಮಗನಿಗೆ ಕೊಟ್ಟೆನು. ಒಬ್ಬ ದರಿದ್ರ ಬ್ರಾಹ್ಮಣನು ಛಳಿಯಿಂದ ನಡುಗುತ್ತಾ ಬಂದು ನನಗೆ ಒಂದು ವಸ್ತ್ರವನ್ನು ಕೊಡಬೇಕೆಂದು ಬೇಡಿಕೊಂಡನು. ಅದಕ್ಕೆ ನಾನು ಹಣವನ್ನು ಕೊಟ್ಟು ವಸ್ತ್ರವನ್ನು ತೆಗೆದುಕೊಂಡು ಹೋಗಿ ಎಂದು ಬಿಟ್ಟೆನು.

ಓಡಿಹೋಗಿ ಪುರಾಣ ಹೇಳುತ್ತಿದ್ದ ಬ್ರಾಹ್ಮಣನ ಕಾಲನ್ನು ಮುಟ್ಟಿ ದುಃಖದಿಂದ ವೇಗದಿಂದ ಓಡಿ ಸರೋವರಕ್ಕೆ ಹಾರಿತು. ಆಗ ಅಲ್ಲಿದ್ದ ಒಂದು ನೀರಿನ ಹಾವು ಆ ಕಪ್ಪೆಯ ಕಾಲನ್ನು ಹಿಡಿದುಬಿಟ್ಟಿತು. ನೀರಿನ ಹಾವು ಕಚ್ಚಲು ಆ ಕಪ್ಪೆಯು ತುಂಬಾ ದುಃಖದಿಂದ ಕೂಗಿತು. ನೀರಿನಲ್ಲಿ ಮುಳುಗುತ್ತಾ ಮೇಲೆ ಬರುತ್ತಾ ಆ ಹಾವಿನ ಬಾಯಿಯಲ್ಲಿ ಸಿಕ್ಕಿಕೊಂಡು ಖಿನ್ನವಾಗಿ ಆಮೇಲೆ ಶತ್ರುವಾದ ಆ ಸರ್ಪವನ್ನು ನೋಡಿ ಮಾತಾಡಿತು.

'ಎಲಾ ನೀಚಹಾವೇ! ನಿನ್ನ ನೀಚವೃತ್ತಾಂತವನ್ನು ತಿಳಿಯದೆ ನನ್ನನ್ನು ಏಕೆ ಪೀಡಿಸುವೆ? ನಾನು ಪೂರ್ವಜನ್ಮದಲ್ಲಿ ಪುಣ್ಯಾಪಾಪಗಳನ್ನು ಎಣಿಸದೆ ಈ ಜನ್ಮವನ್ನು ಹೊಂದಿರುವೆನು. ನನ್ನನ್ನು ಹಿಂಸಿಸಬೇಡ. ಪರೋಪಕಾರ ಮಾಡುವವನೂ ಸರ್ವಪ್ರಾಣಿಗಳಲ್ಲಿ ದಯೆಯನ್ನು ಮಾಡುವವನೂ ಮಹಾತಪಸ್ಸು ಮಾಡಿದ ಪುಣ್ಯವನ್ನು ಹೊಂದುವನು' ಎಂದು ಹೇಳಿತು.

ಆ ಮಾತನ್ನು ಕೇಳಿ ಆ ನೀರಿನ ಹಾವು ಭಯದಿಂದ ಬೇಗನೆ ಕಪ್ಪೆಯನ್ನು ಬಿಟ್ಟು ಬಿಟ್ಟು ಪುನಃ ಪುನಃ ನೋಡಿತು. ಆಮೇಲೆ ಭಯದಿಂದ 'ನಾನು ಮೂಢನು. ಪುಣ್ಯವೆಂದರೇನು ಪಾಪವೆಂದರೇನು ಎಂಬುದನ್ನು ತಿಳಿಯೆನು. ಆದುದರಿಂದ ನನಗೆ ಉಪದೇಶವನ್ನು ಮಾಡು. ನಿನ್ನ ಜ್ಞಾನವನ್ನು ನೋಡಿ ನನಗೆ ಆಶ್ಚರ್ಯವಾಯಿತು. ನೀನು ಪೂರ್ವದಲ್ಲಿ ಯಾರು? ಯಾರ ಮಗನು? ಎಲ್ಲವನ್ನು ತಿಳಿಸಬೇಕು' ಎಂದಿತು.

ಈರೀತಿಯಾಗಿ ಸರ್ಪದ ಮಾತನ್ನು ಕೇಳಿ ತರುವಾಯ ಕಪ್ಪೆಯು ತನ್ನ ಪೂರ್ವಜನ್ಮ ವೃತ್ತಾಂತವನ್ನು ಹೇಳಿಕೊಂಡಿತು.

'ನಾನು ಪೂರ್ವಜನ್ಮದಲ್ಲಿ ಕಾಂಚೀನಗರದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದೆನು. ನಾಲ್ಕು ವೇದಗಳನ್ನೂ ಓದಿಕೊಂಡವನು. ಆದರೆ ದುರಾಚಾರಿಯಾಗಿದ್ದೆನು. ಚೆನ್ನಾಗಿ ಮಾತಾಡುವೆನು. ಎಂತಹ ಪಂಡಿತರನ್ನು ಜಯಿಸುವೆನು. ಡಾಂಭಿಕನಾಗಿದ್ದೆನು. ಶೃತಿಸ್ಮೃತಿಗಳನ್ನು ತಿಳಿದವನಾಗಿದ್ದೆನು. ಚೆನ್ನಾಗಿ ಉಪನ್ಯಾಸ ಮಾಡುತ್ತಿದ್ದೆನು. ನನಗೆ ಬಹುಬೇಗನೇ ಕೋಪವು ಬರುತ್ತಾ ಇತ್ತು. ನಾನು ಶ್ರೇಷ್ಠಬ್ರಾಹ್ಮಣನೆಂದು ಎಲ್ಲರೂ ನನ್ನನ್ನು ಊಟಕ್ಕೆ ಕರಿಯುತ್ತಿದ್ದರು. ಎಲ್ಲೆಲ್ಲಿಯೂ ಹೋಗಿ ಭೋಜನವನ್ನು ಮಾಡುತ್ತಿದ್ದೆನು. ಬ್ರಾಹ್ಮಣರಿಗೆಲ್ಲಾ ದಕ್ಷಿಣೆಯನ್ನು ನಾನೇ ಕೊಡುತ್ತೇನೆ ಎಂದು ಹೇಳಿ ಯಜಮಾನನ ಕೈಯಿಂದ ಹಣವನ್ನು ತೆಗೆದುಕೊಂಡು ನಾಲ್ಕು ಜನರಿಗೆ ದಕ್ಷಿಣೆಯನ್ನು ಕೊಟ್ಟು ಉಳಿದ ಹಣವನ್ನು ನಾನೇ ಇಟ್ಟುಕೊಳ್ಳುತ್ತಿದ್ದೆನು. ಪರಸ್ತ್ರೀ ಗಮನವನ್ನು ಮಾಡುತ್ತಿದ್ದೆನು. ನಿತ್ಯವೂ ಸ್ನಾನವನ್ನು ಮಾಡಲಾರೆನು. ಒಬ್ಬ ಬ್ರಾಹ್ಮಣರಿಗೂ

ಅನ್ನವನ್ನು ಹಾಕಲಾರೆನು. ಬೆಳಿಗ್ಗೆ ಮಠ ಇತ್ಯಾದಿಗಳಲ್ಲಿ ಹೋಗಿ ಪುರಾಣವನ್ನು ಹೇಳುತ್ತಿದ್ದೆನು. ನಾನು ಧರ್ಮವನ್ನು ಮಾಡುತ್ತಿರಲಿಲ್ಲ. ಎಲ್ಲರಿಗೂ ಧರ್ಮಮಾಡ ಬೇಕೆಂದು ಉಪದೇಶಿಸುತ್ತಿದ್ದೆನು. ಪುರಾಣ ಶ್ರವಣ ಮಾಡುವವರು ನನಗೆ ಕೊಡುವ ಹಣವನ್ನು ನಾನೇ ಸ್ವೀಕರಿಸುತ್ತಿದ್ದೆನು. ಒಬ್ಬರಿಗೂ ಸ್ವಲ್ಪವೂ ಕೊಡುತ್ತಿದ್ದಿಲ್ಲ. ನಾನುಚೆನ್ನಾಗಿ ಮಾತಾಡುತ್ತಿದ್ದೆನು. ನನ್ನನ್ನು ಪತ್ನೀಸಹಿತನನ್ನು ಎಲ್ಲರೂ ಬಹುಮಾನ ಮಾಡುತ್ತಿದ್ದರು. ವಿದ್ಯಾಗರ್ವದಿಂದ ನಾನು ಎಲ್ಲರನ್ನೂ ಅವಮಾನ ಮಾಡುತ್ತಿದ್ದೆನು.

ಒಂದು ಸಮಯದಲ್ಲಿ ಮಾಘಮಾಸದಲ್ಲಿ ಪಯೋಷ್ಣೀನದಿಯಲ್ಲಿ ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಹೆಂಗಸರೂ ಮುದುಕರೂ ಹುಡುಗರೂ ಎಲ್ಲರೂ ಸ್ನಾನ ಮಾಡುತ್ತಿದ್ದರು. ನಾನು ಅವರಿಂದ ಪ್ರಾರ್ಥಿತವಾಗಿ ಮಾಘಮಾಸ ಮಾಹಾತ್ಮ್ಯ ಪುರಾಣವನ್ನು ಹೇಳಿದೆನು. ಮಂಗಳದಿವಸದಲ್ಲಿ ನನ್ನನ್ನು ಊಂಜಲಲ್ಲಿ ಕೂತುಕೊಳ್ಳಿಸಿ ನನಗೆ ಸತ್ಕರಿಸಿದರು. ಬೇಕಾದ ಹಣವನ್ನೂ ದಿವ್ಯವಸ್ತ್ರಾದಿಗಳನ್ನೂ ಕೊಟ್ಟರು. ಅದೆಲ್ಲವನ್ನೂ ತೆಗೆದುಕೊಂಡು ಲೋಭದಿಂದ ಒಬ್ಬ ಬ್ರಾಹ್ಮಣನಿಗೂ ಸ್ವಲ್ಪವೂ ಕೊಡಲಿಲ್ಲ. ನಾನು ನಿತ್ಯವೂ ಬೆಳಗ್ಗೆ ಸ್ನಾನ ಮಾಡುತ್ತಿರಲಿಲ್ಲ. ಜನರೆಲ್ಲರೂ ಬರುವುದಕ್ಕಿಂತ ಮೊದಲೇ ಹೋಗಿ ಬಿಳಿಯಾದ ವಸ್ತ್ರವನ್ನು ಉಟ್ಟುಕೊಂಡು ಜಪ ಮಾಡುವಂತೆ ನಿಂತಿರುವೆನು. ಜಪಮಾಡಲಿಕ್ಕೆ ಆರಂಭಿಸಿದರೆ ನನಗೆ ಸಂಸಾರದ ಯೋಚನೆಯಲ್ಲೇ ಹೋಗುವುದು. ನಾನು ದೇವರ ಧ್ಯಾನವನ್ನು ಮಾಡಲಾರೆನು. ನಾನು ಒಂದು ದಿವಸದಲ್ಲಿಯೂ ವೈಶ್ವದೇವವನ್ನು ಮಾಡಿದವನಲ್ಲ. ಅತಿಥಿಗೆ ಅನ್ನವನ್ನು ಹಾಕಿಲ್ಲ. ಕೋಮಲ ತುಲಸೀದಲಗಳಿಂದ ಒಂದು ದಿವಸವೂ ದೇವರಿಗೆ ಪೂಜೆಯನ್ನು ಮಾಡಿಲ್ಲ. ಯಾವಾಗಲೂ ಶ್ರೋತ್ರಿಯ ಬ್ರಾಹ್ಮಣರನ್ನು ದ್ವೇಷಿಸುತ್ತಾ ಇದ್ದೆನು. ಧರ್ಮ ಉಪದೇಶ ಮಾಡುವವರನ್ನು ನಿಂದಿಸುತ್ತಾ ಇದ್ದೆನು.

ಮಾಘಮಾಸ ಮುಗಿಯುವ ದಿವಸದಲ್ಲಿ ನಾನು ಒಬ್ಬ ಬ್ರಾಹ್ಮಣನಿಗೂ ಭೋಜನ ಮಾಡಿಸಲಿಲ್ಲ. ನಾನೇ ಯಾರೋ ಒಬ್ಬರ ಮನೆಯಲ್ಲಿ ಭೋಜನ ಮಾಡಿದೆನು. ಮಂಗಳಕಾಲದಲ್ಲಿ ಒಬ್ಬ ಬ್ರಾಹ್ಮಣನು ರತ್ನಖಚಿತವಾದ ಉಂಗುರವನ್ನು ಕೊಟ್ಟನು. ಒಬ್ಬನು ಕಟಿಸೂತ್ರವನ್ನು ಮತ್ತೊಬ್ಬನು ಕಿವಿಯ ಆಭರಣವನ್ನು ಕೊಟ್ಟನು. ಬಹುಜನರು ವಸ್ತುಗಳನ್ನು ಕೊಟ್ಟರು. ಬಂಗಾರದ ನಾಣ್ಯಗಳು ಮುನ್ನೂರು ಬಂದವು. ಪಟ್ಟೆಸೀರೆ ಬಂದದ್ದನ್ನೆಲ್ಲಾ ಹೆಂಡತಿಗೆ ಕೊಟ್ಟೆನು. ಉಂಗುರವನ್ನು ಮಗನಿಗೆ ಕೊಟ್ಟೆನು. ಒಬ್ಬ ದರಿದ್ರ ಬ್ರಾಹ್ಮಣನು ಛಳಿಯಿಂದ ನಡುಗುತ್ತಾ ಬಂದು ನನಗೆ ಒಂದು ವಸ್ತ್ರವನ್ನು ಕೊಡಬೇಕೆಂದು ಬೇಡಿಕೊಂಡನು. ಅದಕ್ಕೆ ನಾನು ಹಣವನ್ನು ಕೊಟ್ಟು ವಸ್ತ್ರವನ್ನು ತೆಗೆದುಕೊಂಡು ಹೋಗಿ ಎಂದು ಬಿಟ್ಟೆನು.

ಹೀಗಿರುತ್ತಿದ್ದ ನನಗೆ ಒಂದು ದಿವಸದಲ್ಲಿ ಅತಿಸಾರ ರೋಗವು ಬಂದಿತು. ನಾನು ಸಾಯುತ್ತೇನೆ ಸಾಯುತ್ತೇನೆ ಎಂದು ಅಳಲಿಕ್ಕೆ ಆರಂಭಿಸಿದೆನು. ಆಗ ನನ್ನ ಮಗನು ಬಂದು 'ತಂದೆಯೇ! ಬಂಧುಗಳನ್ನು ಸ್ಮರಿಸಿಕೊಂಡು ಯಾಕೆ ಅಳುವಿರಿ? ಬಂಧುಗಳಿಂದ ನಿಮಗೆ ಏನು ಪ್ರಯೋಜನವಿದೆ? ಬಂಧುಗಳೆಲ್ಲಾ ಹಣವನ್ನು ಅಪಹರಿಸುವ ಶತ್ರುಗಳು. ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಏನು ಮಾಡುವಿರಿ? ಸ್ನೇಹವನ್ನು ಬಿಡಿರಿ. ಪರಲೋಕದ ಬುತ್ತಿಯಾದ ದಾನವನ್ನು ಮಾಡಿರಿ. ಗೀತಾಪಾರಾಯಣವನ್ನು ಮಾಡಿರಿ. ಒಂದು ಶ್ಲೋಕವಾದ ಗೀತೆಯನ್ನು ಹೇಳಿರಿ. ಇಚ್ಛಾನುಸಾರವಾಗಿ ದಾನಮಾಡಿರಿ. ದುರ್ಬುದ್ಧಿಯಿಂದ ನಮ್ಮನ್ನು ಸ್ಮರಿಸಬೇಡಿರಿ. ನೀವು ಬದುಕಿರುವಾಗ ಒಂದು ಪುಣ್ಯಕಾರ್ಯವನ್ನು ಮಾಡಿಲ್ಲ. ಸಂಸಾರದಲ್ಲಿ ಭ್ರಮದಿಂದ ಒಬ್ಬ ಬ್ರಾಹ್ಮಣನಿಗೂ ಅನ್ನವನ್ನು ಹಾಕಲಿಲ್ಲ. ಹಣ ಸಂಪಾದಿಸಬೇಕೆಂದು ಒಂದೇ ಯೋಚನೆಯಿಂದ ಪುರಾಣವನ್ನು ಹೇಳಿದಿರಿ. ಶಾಸ್ತ್ರಾರ್ಥವನ್ನು ತಿಳಿದವನಾದರೂ ಪರಲೋಕದ ಹಿತವನ್ನು ಮಾಡಿಕೊಳ್ಳಲಿಲ್ಲ. ನೀವು ಯಾರು? ನಾನು ಯಾರು? ನಿಮಗೆ ಬಂಧುಗಳು ಏಕೆ? ಇಷ್ಟು ಓದಿಕೊಂಡ ನೀವೂ ಹೀಗೆ ಮೋಹಿತರಾಗಿರುವಿರಲ್ಲಾ' ಎಂದು ಹೇಳಿದನು.

ತರುವಾಯ ನನ್ನ ಪರಮಸುಂದರಿಯಾದ ಹೆಂಡತಿಯು ದುಃಖವುಳ್ಳವಳಾಗಿ ಸಾವಿರ ಬಂಗಾರದ ನಾಣ್ಯಗಳನ್ನು ನನ್ನ ಮುಂದೆ ಇಟ್ಟು ಈ ಹಣವನ್ನು ನೀವು ಬ್ರಾಹ್ಮಣರಿಗೆ ದಾನ ಮಾಡಿರಿ. ಸಮಸ್ತ ಪಾಪಪರಿಹಾರಕ್ಕೋಸ್ಕರ ಗೋದಾನಗಳನ್ನು ಮಾಡಿರಿ. ಸಾಲಿಗ್ರಾಮ ದಾನವನ್ನು ಮಾಡಿರಿ. ಭೂದಾನವನ್ನು ಮಾಡಿರಿ. ಯಾವ ದಾನವನ್ನು ಬೇಕಾದರೂ ಮಾಡಿರಿ. ಸ್ಮಶಾನದಂತೆ ಇರುವ ಮನೆಯನ್ನು ಏಕೆ ಸ್ಮರಿಸುವಿರಿ? ನಾವೂ ನೀವೂ ದಾರಿಯಲ್ಲಿ ಹೋಗುವ ಜನರು. ಒಂದು ಸ್ಥಳದಲ್ಲಿ ಸೇರಿ ಆಮೇಲೆ ಒಬ್ಬರನ್ನೊಬ್ಬರು ಬಿಟ್ಟು ಹೋಗುವಂತೆ ಇರುವೆವು. ನೀವೇ ಪುರಾಣ ಹೇಳುವಾಗ ಯಮದೂತರು ಭಯಂಕರರಾಗಿರುವರು. ನರಕವನ್ನು ಸಹಿಸಲಿಕ್ಕೆ ಆಗಲಾರದು. ಎಂದು ಹೇಳಿರುವಿರಲ್ಲಾ! ಎಲ್ಲವನ್ನೂ ಮರೆತುಬಿಟ್ಟಿರಾ? ನಿಶ್ಚಯ ವಾಗಿಯೂ ನೀವು ನರಕಕ್ಕೇ ಹೋಗುವಿರೆಂದು ಕಾಣುತ್ತದಲ್ಲಾ? ಸಾಯುವಾಗ ಹಣವೆಲ್ಲಾ ಮನೆಯಲ್ಲಿಯೇ ಉಳಿಯುವುದು. ಮಿತ್ರರೂ ಬಂಧುಗಳೂ ಸ್ಮಶಾನದ ವರೆಗೆ ಬಂದು ನಿಲ್ಲುವರು. ಅವರವರು ಮಾಡಿದ ಪುಣ್ಯವೂ ಪಾಪವೂ ಅವರ ಹಿಂದೆಯೇ ಹೋಗುವುದು. ಇತ್ಯಾದಿ ರೀತಿಯಾಗಿ ಉಪದೇಶ ಮಾಡಿದಳು.

ಹೀಗೆಲ್ಲರೂ ಹೇಳಿದರೂ ನನಗೆ ದಾನಮಾಡಲಿಕ್ಕೆ ಮನಸ್ಸು ಬರಲಿಲ್ಲ. ನಾನು

ಹೇಗಾದರೂ ಬದುಕಬೇಕು ಎಂದು ಹೇಳಿ ಕಣ್ಣೀರನ್ನು ಸುರಿಸಿದೆನು. ಆ ಸಮಯದಲ್ಲಿ ಕ್ರೂರರಾದ ಯಮದೂತರು ಸೀಳು ಕಡಿ ಎನ್ನುತ್ತಾ ಬಂದರು. ಕೈಯಲ್ಲಿ ಶೂಲ ಗದಾ ಕತ್ತಿ ಇವುಗಳನ್ನೆಲ್ಲಾ ಹಿಡಿದುಕೊಂಡಿದ್ದರು. ನನ್ನ ಎರಡು ಕಾಲುಗಳನ್ನೂ ಕಬ್ಬಿಣ ಸರಪಳಿಗಳನ್ನು ಗಟ್ಟಿಯಾಗಿ ಕಟ್ಟಿ ತಲೆಕೆಳಗಾಗಿ ಎಳೆದುಕೊಂಡುಹೋದರು. ಒಂದೊಂದು ಹೆಜ್ಜೆಗೂ ಬಡಿಯುತ್ತಿದ್ದರು. ನಾಯಿಗಳಿಂದ ಕಚ್ಚಿಸುತ್ತಿದ್ದರು. ಕಲ್ಲಿನಲ್ಲಿ ಹಾಕಿ ಪುಡಿ ಮಾಡುತ್ತಿದ್ದರು. ಗರಗಸದಿಂದಲೇ ಸೀಳಿದರು. ಬಿಸಿಯಾದ ಉಸುಬಿನ ಮೇಲೆ ಎಳೆದುಕೊಂಡು ಹೋದರು. ಸೊಳ್ಳೆಗಳು ಚೇಳುಗಳು ಇರುವಲ್ಲಿ ಎಳೆದು ಕೊಂಡು ಹೋದರು. ಇನ್ನು ಅನೇಕ ವಿಧವಾಗಿ ಕಷ್ಟಪಡಿಸುತ್ತಾ ಎಳೆದುಕೊಂಡು ಹೋಗಿ ಮಹಾರೌರವ ಎಂಬ ನರಕದಲ್ಲಿ ಹಾಕಿದರು. ಕತ್ತಲೆಯಿಂದ ಕೂಡಿದ ದುರ್ಗಂಧದಿಂದ ಕೂಡಿದ ನರಕದಲ್ಲಿ ತಲೆಕೆಳಗೆ ಕಾಲುಮೇಲಾಗಿ ಜೋಲುತ್ತಾ ಇದ್ದೆನು. ಅಲ್ಲಿ ನನ್ನನ್ನು ಸರ್ಪಗಳೂ ಚೇಳುಗಳೂ ಕಚ್ಚುತ್ತಿದ್ದವು. ಹಾಹಾಕಾರವನ್ನು ಮಾಡುತ್ತಾ ಬಹುಕಾಲವಿದ್ದೆನು. ಆಮೇಲೆ ಬೆಂಕಿಯ ಕೆಂಡದ ಮೇಲೆ ಮಲಗಿಸಿದರು. ಹೀಗೇ ಅನೇಕ ನರಕಗಳಲ್ಲಿ ಅನುಭವಿಸಿ ಕೊನೆಗೆ ಮಲದಲ್ಲಿ ಕ್ರಿಮಿಯಾಗಿ ಹುಟ್ಟಿದನು. ಆಮೇಲೆ ನೂರು ಜನ್ಮಗಳಲ್ಲಿ ಹಂದಿಯಾಗಿಯೂ ಐದು ಜನ್ಮಗಳಲ್ಲಿ ಹದ್ದುಪಕ್ಷಿಯಾಗಿಯೂ ಹತ್ತು ಜನ್ಮಗಳಲ್ಲಿ ಕತ್ತೆಯಾಗಿಯೂ ಆಮೇಲೆ ಪುನಃ ಹಂದಿಯಾಗಿಯೂ ಹುಟ್ಟಿ ಆಮೇಲೆ ಕಪ್ಪೆಯಾಗಿ ಹುಟ್ಟಿರುವೆನು.

ನಾನು ಪೂರ್ವದಲ್ಲಿ ಒಂದು ಸಮಯ ಕಾರ್ತಿಕಮಾಸದಲ್ಲಿ ನೆಲ್ಲಿಯ ಮರದ ಬುಡದಲ್ಲಿ ಕಾರ್ತಿಕಮಾಸ ಮಹಾತ್ಮ್ಯೆಯನ್ನು ಹೇಳಿ ಹತ್ತು ಬ್ರಾಹ್ಮಣರಿಗೆ ಭೋಜನ ಮಾಡಿಸಿದ್ದೆನು. ಭಕ್ತಿಯಿಂದ ಭೋಜನ ಮಾಡಿಸಿದ್ದಲ್ಲ. ನನಗೆ ಅದರಲ್ಲಿ ನಂಬಿಕೆ ಯಿರಲಿಲ್ಲ. ಆದರೂ ಜನರು ಏನಾದರೂ ಹೇಳುವರು ಎಂದು ಹಾಗೆ ಮಾಡಿದೆನು. ಒಂದು ಸಾಲಿಗ್ರಾಮ ದಾನವನ್ನೂ ತನ್ನೆರಡು ಬಂಗಾರದ ನಾಣ್ಯಗಳ ದಾನವನ್ನೂ ಮಾಡಿದ್ದೆನು. ಪೂರ್ವದಲ್ಲಿ ಅನ್ನದಾನ ಮಾಡಿದ ಪುಣ್ಯದಿಂದ ಈಗ ಕಾರ್ತಿಕ ಮಾಸದಲ್ಲಿ ನೆಲ್ಲಿಯ ಮರದ ಬುಡದಲ್ಲಿ ನೀರಿನ ಸ್ಪರ್ಶವಾಯಿತು. ಬ್ರಾಹ್ಮಣರ ಪಾದಸ್ಪರ್ಶದಿಂದ ನನಗೆ ಪೂರ್ವಸ್ಮರಣೆಯೆಲ್ಲಾ ಉಂಟಾಯಿತು. ಸಾಲಿಗ್ರಾಮ ದಾನದಿಂದ ನನ್ನ ಪಾಪವೆಲ್ಲ ನಷ್ಟವಾಯಿತು. ಇನ್ನು ನಾನು ಸ್ವರ್ಗಲೋಕದಲ್ಲಿ ಬಹುಕಾಲವಿದ್ದು ಆ ಮೇಲೆ ಭೂಮಿಯಲ್ಲಿ ವಿಷ್ಣುಭಕ್ತನಾದ ಬ್ರಾಹ್ಮಣನಿನಾಗಿ ಹುಟ್ಟಿ ತುಲಾಮಾಸದಲ್ಲಿ ಕಾವೇರಿ ಸ್ನಾನವನ್ನು ಮಾಡಿ ವಿಷ್ಣುಲೋಕಕ್ಕೆ ಹೋಗುವೆನು. ನೀನು ಸುಖವಾಗಿ ಇರು.

ನೀನು ಪೂರ್ವದಲ್ಲಿ ಕಾಂಚೀಪುರದಲ್ಲಿ ಹಣವಂತನಾದ ವೈಶ್ಯನಾಗಿದ್ದಿ. ಪಯೋಷ್ಣೀ ನದಿಯಲ್ಲಿ ಕಾರ್ತಿಕಮಾಸದಲ್ಲಿ ಒಂದು ತಿಂಗಳು ಸ್ನಾನಮಾಡಿದಿ. ಪುರಾಣವನ್ನು ಕೇಳಿದಿ. ಆದರೆ ಹಣವಂತನಾಗಿದ್ದರೂ ಲೋಭದಿಂದ ಪುರಾಣ ಮಂಗಲಕಾಲದಲ್ಲಿ ದಕ್ಷಿಣೆಯನ್ನು ಕೊಡಲಿಲ್ಲ. ಒಂದು ಬ್ರಾಹ್ಮಣನಿಗೂ ಅನ್ನವನ್ನು ಹಾಕಲಿಲ್ಲ. ಸ್ನಾನದಿಂದ ಪುಣ್ಯಬಂತು. ಆದರೂ ಶಕ್ತನಾಗಿದ್ದುಕೊಂಡು ಒಬ್ಬ ಬ್ರಾಹ್ಮಣನಿಗೂ ಅನ್ನವನ್ನು ಹಾಕದ ಕಾರಣ ನರಕವನ್ನು ಅನುಭವಿಸಿ ನೀರಿನ ಹಾವಾಗಿ ಹುಟ್ಟಿರುವಿ. ಇನ್ನು ನೀಚಜಾತಿಯಲ್ಲಿ ಹುಟ್ಟುವಿ. ಕೊನೆಯ ಜನ್ಮದಲ್ಲಿ ನಿನ್ನನ್ನು ಒಂದು ಆನೆಯು ಅಟ್ಟಿಸಿಕೊಂಡು ಬರುವುದು. ಸೋಮವಾರ ಕಾರ್ತಿಕಮಾಸದಲ್ಲಿ ನೆಲ್ಲಿಮರದ ಬುಡದಲ್ಲಿ ರುದ್ರದೇವರ ಸಮೀಪದಲ್ಲಿ ಮರಣವನ್ನು ಹೊಂದುವಿ. ಕೊನೆಗೆ ರುದ್ರಲೋಕಕ್ಕೆ ಹೋಗುವಿ. ಕಾರ್ತಿಕಮಾಸದಲ್ಲಿ ಪಯೋಷ್ಣೀನದಿಯಲ್ಲಿ ಸ್ನಾನ ಮಾಡಿದ ಕಾರಣ ಬಹುಜನ್ಮಗಳು ಆದ ಮೇಲಾದರೂ ಒಳ್ಳೇ ಗತಿಯನ್ನು ಹೊಂದುವಿ. ಇನ್ನು ಮುಂದೆ ಒಬ್ಬರಿಗೂ ದ್ರೋಹವನ್ನು ಮಾಡಬೇಡ. ಒಂದು ಜನ್ಮದಲ್ಲಿ ಮಾಡಿದ ಪಾಪವು ಮತ್ತೊಂದು ಜನ್ಮದಲ್ಲಿ ಫಲಕಾರಿಯಾಗುವುದು. ನಿನ್ನ ಹಲ್ಲಿನ ಗಾಯದಿಂದ ನನ್ನ ಪ್ರಾಣವು ಹೋಗುತ್ತಾ ಇದೆ' ಈರೀತಿಯಾಗಿ ಹೇಳುತ್ತಾ ಆ ಕಪ್ಪೆಯು ದೇಹವನ್ನು ಪರಿತ್ಯಾಗ ಮಾಡಿ ಪ್ರಕಾಶಮಾನವಾದ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಯಿತು.



## ದೀಪದ ಮಹಿಮೆಯು [1]

ತುಪ್ಪದಿಂದಲೋ ಅಥವಾ ಎಣ್ಣೆಯಿಂದಲೋ ಯಾರು ಶ್ರೀಭಗವಂತನ ಮುಂದೆ ಭಕ್ತಿಯಿಂದ ದೀಪವನ್ನು ಉರಿಸುವನೋ ಅವನು ಸಕಲ ಪಾಪಗಳಿಂದ ರಹಿತನಾಗಿ ಸಾವಿರಸೂರ್ಯರಂತೆ ಪ್ರಕಾಶಮಾನವಾಗಿ ಪ್ರಕಾಶಮಾನವಾದ ವಿಮಾನದಲ್ಲಿ ಕೂತುಕೊಂಡು ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಪೂಜಿಸಲ್ಪಡುವನು. ಯಾರು ಭಗವಂತನ ಮುಂಭಾಗದಲ್ಲಿ ಒಂದು ನಿಮಿಷವೋ ಅರ್ಧನಿಮಿಷವೋ ತುಪ್ಪದ ದೀಪವನ್ನು ಇಡುವನೋ ಅವನು ಕೋಟಿ ಸಾವಿರ ಕಲ್ಪ ವಿಷ್ಣುಲೋಕದಲ್ಲಿ ಸತ್ಕೃತನಾಗುವನು. ಯಾರು ಯಾಚನೆ ಮಾಡಿಯಾದರೂ ಪರಮಾತ್ಮನ ಮಂದಿರ

1. ಸ್ಕ.ಪು.ಕಾ.ಮಾ.ಮ. ಅ-6,7,8.

ದಲ್ಲಿ ದೀಪವನ್ನು ಇಡುವನೋ ಮತ್ತು ದೇವರ ಮನೆಯನ್ನು ಸಾರಿಸುವನೋ ಅವನಲ್ಲಿ ಪರಮಾತ್ಮನು ಅನುಗ್ರಹವನ್ನು ಮಾಡುವನು. ದೇವರ ಮುಂಭಾಗದಲ್ಲಿ ಒಂದು ದೀಪವನ್ನು ಇಟ್ಟರೆ ಭೂಮಿಯಲ್ಲಿ ರಾಜ್ಯವು ಉಂಟಾಗುವುದು. ಬಹುದೀಪಗಳನ್ನು ಇಟ್ಟರೆ ಇಷ್ಟೇ ಫಲವೆಂದು ಹೇಳಲಿಕ್ಕೇ ಆಗದು. ದೇವರ ಮನೆಯಲ್ಲಿ ಬಳಿದರೆ ನೂರು ಪುಣ್ಯವುಂಟಾಗುವುದು. ಗೋಮಯ ಸಾರಿಸಿದರೆ ಸಾವಿರ ಪುಣ್ಯವುಂಟಾಗುವುದು. ದೇವರಿಗೆ ಮಾಲೆಯನ್ನು ಕಟ್ಟಿಹಾಕಿದರ ನೂರುಸಾವಿರ ಪುಣ್ಯವು ಬರುವುದು. ದೀಪವನ್ನು ಇಟ್ಟರೆ ಅನಂತಪುಣ್ಯವು ಬರುವುದು. ಮೇರುಮಂದರ ಪರ್ವತಗಳನ್ನು ಮಾಡಿದ ಪಾಪವೂ ಕೂಡ ಕಾರ್ತಿಕ ಮಾಸದಲ್ಲಿ ದೀಪವನ್ನು ಇಡುವುದರಿಂದ ಪರಿಹೃತವಾಗುವುದು.

ವಿಷ್ಣ್ವಾಲಯದಲ್ಲಿ ಕಾರ್ತಿಕಮಾಸದಲ್ಲಿ ದೀಪವನ್ನು ಇಡುವುದಾದರೆ ಅವನು ಏಳುಕುಲದವರಿಂದ ಕೂಡಿಕೊಂಡು ವಿಷ್ಣುಲೋಕದಲ್ಲಿ ಸತ್ಕೃತನಾಗಿರುವನು. ಕಾರ್ತಿಕಮಾಸದಲ್ಲಿ ವಿಷ್ಣುದೇವಾಲಯದಲ್ಲಿ ದೀಪವನ್ನು ಇಟ್ಟರೆ ಜನ್ಮವನ್ನು ಆರಂಭಿಸಿ ಮಾಡಿದ ಪಾಪವು ಪರಿಹೃತವಾಗುವುದು. ವಿಷ್ಣುಮಂದಿರದಲ್ಲಿ ಇಟ್ಟಿರುವ ದೀಪವನ್ನು ನೋಡಿ ಅನುಮೋದನೆ ಮಾಡುವವನೇ ಉತ್ತಮವಾದ ಫಲವನ್ನು ಹೊಂದುವನು. ದೀಪದಾನವನ್ನೇ ಮಾಡಿದವನಿಗೆ ಏನು ಹೇಳಬೇಕು.

ಭಗವಂತನ ಮುಂಭಾಗದಲ್ಲಿ ಇಟ್ಟ ದೀಪಗಳನ್ನು ಆರಿಸಬಾರದು. ದೀಪದ ಎಣ್ಣೆಯನ್ನು ತೆಗೆಯಬಾರದು. ದೇವರ ಮನೆಯಿಂದ ದೀಪವನ್ನು ಬೇರೆ ಸ್ಥಳಕ್ಕೆ ತೆಗೆದುಕೊಂಡು ಹೋದರೆ ಮುಂದೆ ಇಟ್ಟದೀಪವನ್ನು ಆರಿಸಿದರೆ ಮೂಕನಾಗಿಯೂ ಆಗುತ್ತಾರೆ. ದೇವರ ಮುಂದೆ ಇಟ್ಟ ದೀಪವನ್ನು ಆರಿಸಿದರೆ ಮೂಕನಾಗಿಯೂ ಕುರುಡನಾಗಿಯೂ ಮೂರ್ಖನಾಗಿಯೂ ಆಗುವನು. ಯಾರು ಅನೇಕ ದೀಪ ಗಳಿಂದ ಮಂಗಳಾರತಿಯನ್ನು ಮಾಡುವನೋ ಅವನು ಅಜ್ಞಾನದಿಂದ ರಹಿತನಾಗು ವನು. ತುಪ್ಪವಿಲ್ಲದಿದ್ದರೆ ಎಣ್ಣೆಯನ್ನೇ ಎಣ್ಣೆಯಿಲ್ಲದಿದ್ದರೆ ಬರೇ ಬತ್ತಿಯನ್ನೋ ಅಥವಾ ದೀಪವಿಡಲಿಕ್ಕೆ ಪಾತ್ರೆಯನ್ನೋ ಯಾರು ದಾನಮಾಡುವನೋ ಅವನೂ ದೀಪದಾನ ಮಾಡಿದ ಫಲವನ್ನು ಹೊಂದುವನು. ಎಲ್ಲಾ ದಾನಗಳಿಗಿಂತ ದೀಪದಾನವು ಶ್ರೇಷ್ಠವಾದದ್ದು. ಕಾರ್ತಿಕಮಾಸದಲ್ಲಿ ದೀಪದಾನವು ಕೋಟಿಪಾಲು ಅಧಿಕಪುಣ್ಯವನ್ನು ಉಂಟುಮಾಡುವುದು.



# ಭೃಗುಋಷಿಗಳು ಹೇಳಿದ ಮಾಘಸ್ನಾನದ ಮಹಿಮೆ [1]

ಪೂರ್ವದಲ್ಲಿ ಒಂದು ಸಮಯದಲ್ಲಿ ಹನ್ನೆರಡು ವರ್ಷ ಮಳೆಯು ಬರಲಿಲ್ಲ. ಆದರಿಂದ ಪ್ರಜೆಗಳೆಲ್ಲರೂ ದುಃಖವುಳ್ಳವರಾಗಿ ಕ್ಷೀಣರಾಗಿ ಹತ್ತುದಿಕ್ಕುಗಳಿಗೆ ಓಡಿದರು. ಹಿಮವತ್ತರ್ವತ ಸಹ್ಯಪರ್ವತಗಳ ಮಧ್ಯದಲ್ಲಿ ವೇದಾಧ್ಯಯನಾದಿ ಗಳೆಲ್ಲವೂ ನಿಂತುಹೋಗಲು ಧರ್ಮಕ್ಕೆ ಲೋಪಬರಲು ಹಣ್ಣುಗಳೂ ಗೆಡ್ಡೆಗಳೂ ನೀರು ಇಲ್ಲದಂತಾಗಲು ನಾನಾವಿಧ ಮರಗಳಿಂದ ಕೂಡಿದ ಮನೋಹರವಾದ ರೇವಾನದಿಯ ತೀರದಲ್ಲಿದ್ದ ತನ್ನ ಆಶ್ರಮದಿಂದ ಭೃಗುಋಷಿಗಳು ಶಿಷ್ಯರಿಂದ ಕೂಡಿಕೊಂಡು ಸಹ್ಯಪರ್ವತಕ್ಕೆ ಹೋಗಿ ಅಲ್ಲಿ ಇದ್ದರು. ಅಲ್ಲಿ ಕೈಲಾಸಪರ್ವತದ ಪಶ್ಚಿಮದಲ್ಲಿ ಮಣಿಕೂಟವೆಂದು ಪ್ರಸಿದ್ಧವಾದ ಬಂಗಾರರತ್ನಗಳ ಪರ್ವತವಿದೆ. ಅದು ಮೂವತ್ತೆರಡು ಸಾವಿರಯೋಜನ ವಿಸ್ತಾರವಾಗಿದ್ದಿತು. ಅದರ ಶಿರಸ್ಸು ಹತ್ತು ಯೋಜನ ವಿಸ್ತಾರವಾಗಿತ್ತು. ಬುಡದಲ್ಲಿ ಹದಿನಾರು ಯೋಜನವಿದ್ದಿತು. ಅದು ಅನೇಕ ಮರಗಳಿಂದ ಶೋಭಿಸುತ್ತಿತ್ತು. ದುರ್ಭಿಕ್ಷೆಯಿಂದ ಪೀಡಿತರಾದ ಭೃಗುಋಷಿ ಗಳು ಅದನ್ನು ನೋಡಿ ಸಂತೋಷವುಳ್ಳವರಾಗಿ ಅಲ್ಲಿಯೇ ವಾಸಮಾಡಿದರು. ಆ ಮನೋಹರವಾದ ಪರ್ವತಗಳಲ್ಲಿ ವನಉಪವನಗಳಲ್ಲಿ ಸಂಚರಿಸುತ್ತಾ ಭೃಗುಋಷಿ ಗಳು ತಪಸ್ಸು ಮಾಡಿದರು.

ಹೀಗೆ ಆ ಪರ್ವತದಲ್ಲಿ ಭೃಗುಋಷಿಗಳು ತನ್ನ ಆಶ್ರಮದಲ್ಲಿ ಇರುತ್ತಿರಲು ಅಲ್ಲಿಗೆ ಒಬ್ಬರು ಕಿನ್ನರ ದಂಪತಿಗಳು ಇಳಿದು ಬಂದರು. ಅವರು ಭೃಗುಋಷಿಗಳ ಬಳಿಗೆ ಬಂದು ನಮಸ್ಕರಿಸಿ ದುಃಖದಿಂದ ನಿಂತುಕೊಂಡರು. ಅವರನ್ನು ನೋಡಿ ಭೃಗುಋಷಿಗಳು 'ನೀವು ಯಾಕೆ ದುಃಖವುಳ್ಳವರಾಗಿರುವಿರಿ?' ಎಂದು ಕೇಳಿದರು ಅದಕ್ಕೆ ವಿದ್ಯಾಧರನು 'ಮುನಿಗಳೇ! ನಮ್ಮ ದುಃಖದ ಕಾರಣವನ್ನು ಕೇಳಬೇಕು. ನಾನು ಪುಣ್ಯದ ಫಲವನ್ನು ಹೊಂದಿ ಸ್ವರ್ಗವನ್ನು ಹೊಂದಿದೆನು. ದೇವತಾದೇಹವನ್ನೂ ದಿವ್ಯಸ್ತ್ರೀಸುಖವನ್ನೂ ಇತರ ದಿವ್ಯಸುಖವನ್ನು ಹೊಂದಿಯೂ ನನಗೆ ಮುಖವು ಮಾತ್ರ ಹುಲಿಯ ಮುಖದಂತೆ ಆಗಿದೆ. ಇದು ಯಾವ ಕರ್ಮದ ಫಲವೆಂದು ತಿಳಿಯಲಿಲ್ಲ. ಇದನ್ನೇ ಸ್ಮರಿಸಿಕೊಂಡು ನನ್ನ ಮನಸ್ಸಿಗೆ ಸುಖವಿಲ್ಲದಾಗಿದೆ. ಇನ್ನೊಂದು ವಿಷಯವನ್ನು ಹೇಳುತ್ತೇನೆ. ನನ್ನ ಈ ಹೆಂಡತಿಯು ರೂಪವತಿಯಾಗಿದ್ದಾಳೆ. ಮಧುರವಾದ ವಾಣಿಯುಳ್ಳವಳಾಗಿದ್ದಾಳೆ. ನರ್ತನಗಾನವಿದ್ಯೆಯನ್ನು ತಿಳಿದವಳಾಗಿದ್ದಾಳೆ. ಇವಳು ಚಿಕ್ಕವಳಾಗಿರುವಾಗಲೇ ವೀಣಾಬಾರಿಸುವುದನ್ನು ನೋಡಿ ನಾರದರು ಸಂತೋಷ ಪಟ್ಟಿದ್ದಾರೆ. ಇವಳ ಹಾಡನ್ನು ಕೇಳಿ ಇಂದ್ರದೇವರೂ ಸಂತೋಷಪಟ್ಟಿದ್ದಾರೆ.

ರುದ್ರದೇವರು ಸಂತೋಷಪಟ್ಟಿದ್ದಾರೆ. ಸೌಂದರ್ಯಾದಿಗಳಿಂದ ಇವಳಿಗೆ ಸಮಾನಳಾದ ಸ್ತ್ರೀಯೇ ಸ್ವರ್ಗದಲ್ಲಿ ಇಲ್ಲವೆನ್ನಬಹುದು. ದೇವತಾಮುಖವುಳ್ಳ ಇವಳು ಎಲ್ಲಿ? ಹುಲಿಯ ಮುಖವುಳ್ಳ ನಾನು ಎಲ್ಲಿ? ಎಂದು ಯೋಚನೆ ಮಾಡಿ ಯಾವಾಗಲೂ ಮನಸ್ಸಿನಲ್ಲಿಯೇ ದುಃಖಪಡುತ್ತಿರುವೆನು' ಎಂದು ಹೇಳಿದನು.

ವಿದ್ಯಾಧರನು ಹೇಳಿದ ಮಾತನ್ನು ಕೇಳಿ ಮೂರು ಕಾಲದಲ್ಲಿ ನಡೆಯುವುದನ್ನು ತಿಳಿದವರಾದ ಭೃಗುಋಷಿಗಳು 'ವಿದ್ಯಾಧರ ಶ್ರೇಷ್ಠನೇ! ನೀನು ಪೂರ್ವಜನ್ಮದ್ಲಲಿ ಮಾಡಿದುದನ್ನು ಕೇಳು. ಅಲ್ಪವಾದ ಕರ್ಮವಾದರೂ ಪರಿಣಾಮದಲ್ಲಿ ಭಯಂಕರವಾಗುವುದು. ನೀನು ಪೂರ್ವಜನ್ಮದಲ್ಲಿ ಮಾಘಮಾಸದಲ್ಲಿ ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯಲ್ಲಿ ತೈಲಾಭ್ಯಂಗ ಮಾಡಿರುವಿ. ಆದರಿಂದ ನಿನಗೆ ಹುಲಿಯ ಮುಖವಾಯಿತು. ನೀನು ಏಕಾದಶಿ ಉಪವಾಸಮಾಡಿ ಮರುದಿನದಲ್ಲಿ ಅಲ್ಪದ್ವಾದಶಿಯಲ್ಲಿ ಪಾರಣಮಾಡಿ ಆಮೇಲೆ ತ್ರಯೋದಶಿ ಬಂದಿತೆಂದು ತೈಲಾಭ್ಯಂಗವನ್ನು ಮಾಡಿದಿ. ಆದರಿಂದ ಹುಲಿಯ ಮುಖಮಾತ್ರ ಉಂಟಾಯಿತು. ದ್ವಾದಶಿಯಿರುವಾಗಲೇ ಅಭ್ಯಂಗಮಾಡಿದ್ದರೆ ಸಂಪೂರ್ಣ ಹುಲಿಯೇ ಆಗುತ್ತಿದ್ದಿ.

ಪೂರ್ವದಲ್ಲಿ ಪುರೂರವ ರಾಜನು ದ್ವಾದಶಿಯಲ್ಲಿ ಅಭ್ಯಂಗಮಾಡಿ ಆದರಿಂದ ಕುರೂಪಿಯಾಗಿ ತನ್ನ ಕುರೂಪವನ್ನು ನೋಡಿಕೊಂಡು ದುಃಖಪಟ್ಟವನಾಗಿ ಪರ್ವತ ಶ್ರೇಷ್ಠವನ್ನು ಹೊಂದಿ ದೇವತಾಸರೋವರದ ತೀರದಲ್ಲಿ ಇದ್ದುಕೊಂಡು ಆ ಸರೋವರದಲ್ಲಿ ಸ್ನಾನಮಾಡಿ ಶುದ್ಧನಾಗಿ ಶ್ರೀಪರಮಾತ್ಮನನ್ನು ಸ್ಮರಿಸುತ್ತಾ ಒಂದು ತಿಂಗಳು ಆಹಾರಹೀನನಾಗಿ ತಪಸ್ಸನ್ನು ಮಾಡಿದನು. ಅವನು ಮಾಡಿದ ಅಲ್ಪತಪಸ್ಸಿನಿಂದಲೇ ಸಂತುಷ್ಟನಾಗಿ ಅವನು ಏಳು ಜನ್ಮಗಳಲ್ಲಿ ಮಾಡಿರುವ ಪೂಜೆಯನ್ನು ತಿಳಿದುಕೊಂಡು ಪರಮಾತ್ಮನು ಅವನಿಗೆ ಪ್ರತ್ಯಕ್ಷನಾದನು. ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಪರಮಾತ್ಮನು ಅವನಿಗೆ ಶಂಖದ ಜಲದಿಂದ ಅಭೀಷೇಕಮಾಡಿ ಅವನು ಪೂರ್ವದಲ್ಲಿ ದ್ವಾದಶಿಯಲ್ಲಿ ಮಾಡಿದ ಅಭ್ಯಂಗವನ್ನು ಜ್ಞಾಪಕಪಡಿಸಿ ಅತ್ಯಂತ ಸುಂದರರೂಪವು ಉಂಟಾಗುವಂತೆ ಮಾಡಿದನು. ಆದರಿಂದ ದೇವಲೋಕದ ಊರ್ವಶಿಯೂ ಅವನನ್ನು ಕಾಮಿಸಿದಳು.

ಈರೀತಿಯಾಗಿ ವರವನ್ನು ಪಡೆದು ಕೃತಾರ್ಥನಾಗಿ ತನ್ನ ಊರಿಗೆ ಹೋದನು. ವಿದ್ಯಾಧರನೇ! ನೀನೂ ಮುಖದ ವೈರೂಪ್ಯವನ್ನು ಪರಿಹಾರ ಮಾಡಿಕೊಳ್ಳಬೇಕೆಂಬ ಅಭಿಪ್ರಾಯವಿರುವುದಾದರೆ ಬೇಗನೇ ನನ್ನ ಮಾತಿನಿಂದ ಮಣಿಕೂಟ ನದಿಯ ನೀರಿನಲ್ಲಿ ಮಾಘಸ್ನಾನವನ್ನು ಮಾಡು. ಆದರ ವಿಧಿಯನ್ನು ನಿನಗೆ ಹೇಳುತ್ತೇನೆ. ನಿನ್ನ

ಭಾಗ್ಯೋದಯದಿಂದ ಐದನೇ ದಿವಸದಲ್ಲಿಯೇ ಮಾಘಮಾಸವು ಆರಂಭಿಸುವುದು. ಪುಷ್ಯಶುಕ್ಲ ಏಕಾದಶಿಯನ್ನು ಆರಂಭಿಸಿ ಬರೇ ನೆಲದ ಮೇಲೆಯೇ ಮಲಗುವವನಾಗಿ ಒಂದು ತಿಂಗಳು ಆಹಾರವಿಲ್ಲದೆ ಮೂರುಹೊತ್ತು ಸ್ನಾನವನ್ನು ಮಾಡು. ಮೂರು ಹೊತ್ತು ದೇವರನ್ನು ಪೂಜಿಸು. ಭೋಗವನ್ನು ಪರಿತ್ಯಜಿಸು. ಮಾಘಶುಕ್ಲ ಏಕಾದಶಿಯಲ್ಲಿ ಉಪವಾಸಮಾಡಿ ಶುದ್ಧನಾದ ನಿನ್ನನ್ನು ನಾನು ದ್ವಾದಶೀದಿನದಲ್ಲಿ ಮಂತ್ರದಿಂದ ಪವಿತ್ರವಾದ ನೀರಿನಿಂದ ಅಭಿಷೇಕ ಮಾಡಿ ಮನ್ಮಥನಂತೆ ಮುಖ ವುಳ್ಳವನನ್ನಾಗಿ ಮಾಡುವೆನು. ಆಮೇಲೆ ದೇವತೆಗಳ ಮುಖದಂತೆ ಮುಖವುಳ್ಳವ ನಾಗಿ ಈ ಸುಂದರಿಯೊಡನೆ ಸುಖದಿಂದ ಇರುವವನಾಗು. ಮಾಘಮಾಸದ ಪ್ರಭಾವವನ್ನು ತಿಳಿದವನಾಗಿ ಯಾವಾಗಲೂ ಮಾಘಸ್ನಾನವನ್ನು ಮಾಡು' ಎಂದು ಹೇಳಿ ಮಾಘಸ್ನಾನವನ್ನು ಪರಮಪ್ರಶಸ್ತವೆಂದು ಬಹಳವಾಗಿ ವರ್ಣನಮಾಡಿದರು.

ತರುವಾಯ ವಿದ್ಯಾಧರನು ಅಲ್ಲಿಯೇ ಇದ್ದುಕೊಂಡು ಭೃಗುಋಷಿಗಳೊಡನೆ ಮಾಘಮಾಸದಲ್ಲಿ ಪತ್ನಿಯಿಂದ ಸಹಿತನಾಗಿ ನದಿಯಲ್ಲಿ ಸ್ನಾನಮಾಡಿದನು. ಭೃಗುಋಷಿ ಗಳು ಅನುಗ್ರಹದಿಂದ ಅವನು ತನ್ನ ಮನಸ್ಸಿನ ಅಭೀಷ್ಟವನ್ನು ಹೊಂದಿದನು. ದೇವತೆಯಂತೆ ಮುಖವುಳ್ಳವನಾಗಿ ಮಣಿಪರ್ವತದಲ್ಲಿ ಸಂತೋಷವನ್ನು ಹೊಂದಿ ದನು. ಭೃಗುಋಷಿಗಳು ಅವನಿಗೆ ಅನುಗ್ರಹ ಮಾಡಿ ವಿಂಧ್ಯಪರ್ವತಕ್ಕೆ ಹೋದರು. ಆಮೇಲೆ ಶಿಷ್ಯರಿಂದ ಕೂಡಿಕೊಂಡು ರೇವಾನದಿಯ ತೀರಕ್ಕೆ ಹೋದರು.



## ದೃಢಧನ್ವನ ಕಥೆ [1]

### (ಬೃಹನ್ನಾರದೀಯ ಪುರಾಣ ಪುರುಷೋತ್ತಮಮಾಸ ಮಾಹಾತ್ಮ್ಯ)

ಹೈಹಯದೇಶದಲ್ಲಿ ದೃಢದನ್ವ ಎಂಬ ಪ್ರಸಿದ್ಧವಾದ ಒಬ್ಬ ರಾಜನಿದ್ದನು. ಅವನಿಗೆ ಗುಣಸುಂದರಿಯೆಂದು ಹೆಸರುಳ್ಳ ಹೆಂಡತಿಯಿದ್ದಳು. ಆ ದಂಪತಿಗಳಿಗೆ ನಾಲ್ಕು ಜನ ಗಂಡುಮಕ್ಕಳೂ ಒಬ್ಬಳು ಹೆಣ್ಣುಮಗಳೂ ಇದ್ದಳು. ರಾಜನು ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತಾ ಸುಖದಿಂದ ಇದ್ದನು. ಒಂದುದಿನ ರಾಜನು ಮೃಗಬೇಟೆಗೆ ಹೋದನು. ಅಲ್ಲಿ ಮೃಗಗಳನ್ನು ಸಂಹರಿಸಿ ಒಂದು ಮೃಗಕ್ಕೆ ಬಾಣವನ್ನು ಬಿಟ್ಟನು. ಆ ಮೃಗವು ಬಾಣಸಹಿತವಾಗಿಯೇ ಓಡತೊಡಗಿತು. ರಾಜನೊಬ್ಬನೇ ಸೇನೆಯನ್ನು

1. ಬೃ.ನಾ.ಪು.ಅ.ಮಾ.ಮಾ. ಅ-13 ರಿಂದ 19

ಬಿಟ್ಟು ಅದನ್ನು ಅಟ್ಟಿಸಿಕೊಂಡು ಹೋದನು. ಮೃಗವು ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೀಗೆ ಬಹುದೂರ ಕರೆದುಕೊಂಡು ಹೋಗಿ ಮರೆಯಾಯಿತು. ಆಗ ಮಧ್ಯಾಹ್ನ ಕಾಲವಾಗಿತ್ತು. ರಾಜನಿಗೆ ಸರೋವರದಲ್ಲಿ ಇಳಿದು ನೀರನ್ನು ಕುಡಿದು ಹತ್ತಿರದಲ್ಲಿಯೇ ಇದ್ದ ಒಂದು ದೊಡ್ಡ ಆಲದಮರವನ್ನು ನೋಡಿ ಅದರ ಬುಡಕ್ಕೆ ಬಂದು ಕುದುರೆಯನ್ನು ಅದರ ಬುಡಕ್ಕೆ ಕಟ್ಟಿಹಾಕಿ ನೆರಳಲ್ಲಿ ಅಲ್ಲಿಯೇ ಕೂತುಕೊಂಡನು.

ರಾಜನು ಹಾಗೆಯೇ ಕೂತುಕೊಂಡು ಇರುವ ಸಮಯದಲ್ಲಿ ಒಂದು ಗಿಳಿಯು ಅಲ್ಲಿಗೆ ಬಂದು 'ಈಗಿರುವ ಸಂಸಾರಸುಖದಲ್ಲಿಯೇ ಆಸಕ್ತನಾಗಿದ್ದು ಕೊಂಡು ತತ್ವವಿಚಾರವನ್ನು ಮಾಡದೆ ಇದ್ದ ಪಕ್ಷದಲ್ಲಿ ಪರಲೋಕಸುಖವನ್ನು ಹೇಗೆ ಹೊಂದುವಿ?' ಎಂಬ ಅರ್ಥವುಳ್ಳ ಒಂದು ಶ್ಲೋಕವನ್ನು ಆ ರಾಜನನ್ನೇ ನೋಡುತ್ತಾ ಪುನಃಪುನಃ ಹೇಳುತ್ತಾ ಹೊರಟುಹೋಯಿತು. ರಾಜನಿಗೆ ಆ ಶ್ಲೋಕದ ಅಭಿಪ್ರಾಯ ವಾಗಿಲ್ಲ. ಯೋಚನೆಮಾಡುತ್ತಾ ಕೂತುಕೊಂಡನು. ಆಗ ಸರಿಯಾಗಿ ಸೇನೆಯೂ ರಾಜನನ್ನು ಹುಡುಕುತ್ತಾ ಅಲ್ಲಿಗೆ ಬಂದು ಸೇರಿತು. ತರುವಾಯ ರಾಜನು ಸೇನೆ ಯೊಡನೆ ರಾಜ್ಯಕ್ಕೆ ಹೋಗಿ ಸೇರಿದನು.

ರಾಜನು ಮನೆಯಲ್ಲಿಯೂ ಆ ಶ್ಲೋಕದ ಅಭಿಪ್ರಾಯವನ್ನೇ ಯೋಚಿಸು ತ್ತಿದ್ದನು. ಊಟವನ್ನು ಕೂಡ ಮಾಡಲಿಲ್ಲ. ರಾಣಿಯೇ ಬಂದು ರಾಜನಹತ್ತಿರ ಪ್ರಶ್ನೆ ಮಾಡಿದಳು. ರಾಜನು ಒಂದು ಉತ್ತರವನ್ನೂ ಕೊಡದೆ ಯೋಚಿಸುತ್ತಿದ್ದನು. ಸ್ವಲ್ಪ ದಿವಸದಲ್ಲೇ ರಾಜನ ಮನೆಗೆ ವಾಲ್ಮೀಕಿಋಷಿಗಳು ಬಂದರು– ರಾಜನು ವಾಲ್ಮೀಕಿಋಷಿಗಳಿಗೆ ಬೇಕಾದ ಆತಿಥ್ಯೋಪಚಾರವನ್ನು ಮಾಡಿ ಆಸನದಲ್ಲಿ ಕೂಡಿಸಿ ಅವರೊಡನೆ ನನಗೆ ಈರೀತಿ ಹೆಂಡತಿ ಮಕ್ಕಳು ರಾಜ್ಯ ಇತ್ಯಾದಿ ಸೌಕರ್ಯಗಳು ಏರ್ಪಡಲು ಕಾರಣವೇನೆಂದೂ ಆ ಗಿಳಿಯು ಹೇಳಿದ ಶ್ಲೋಕದ ಅರ್ಥವೇನೆಂದೂ ಕೇಳಿದನು.

ಅದಕ್ಕೆ ವಾಲ್ಮೀಕಿಋಷಿಗಳು ಹೇಳಿದರು. 'ರಾಜನೇ! ಪೂರ್ವದಲ್ಲಿ ಸುದೇವ ಎಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಗೌತಮಿ ಎಂದು ಹೆಸರುಳ್ಳ ಹೆಂಡತಿ ಯಿದ್ದಳು. ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಇದರಿಂದ ಅವರು ಬಹಳ ನೊಂದುಕೊಂಡು ದೇವರನ್ನು ಕುರಿತು ತಪಸ್ಸು ಮಾಡಿ ಮಕ್ಕಳನ್ನು ಪಡೆಯಬೇಕು ಎಂದು ಯೋಚಿಸಿದರು. ತರುವಾಯ ನಿಯಮದಿಂದ ಹತ್ತುಸಾವಿರ ವರ್ಷ ತಪಸ್ಸು ಮಾಡಿದರು. ಭಗವಂತನು ಗರುಡದೇವರ ಮೇಲೆ ಕೂತುಕೊಂಡು ಬಂದನು.

ಪರಮಾತ್ಮನನ್ನು ನೋಡಿ ದಂಪತಿಗಳು ಸಂತೋಷದಿಂದ ನಮಸ್ಕರಿಸಿದರು. ಸುದೇವನು ಪರಮಾತ್ಮನನ್ನು ವಿಶೇಷವಾಗಿ ಸ್ತೋತ್ರಮಾಡಿದನು. ತರುವಾಯ ಪರಮಾತ್ಮನು ಬೇಕಾದ ವರವನ್ನು ಕೇಳಿಕೊ ಎಂದನು. ಆಗ ಬ್ರಾಹ್ಮಣನು ತನಗೆ ಮಕ್ಕಳನ್ನು ಕೊಡುವಂತೆ ಕೇಳಿಕೊಂಡನು. ಆದಕ್ಕೆ ಪರಮಾತ್ಮನು ಬ್ರಾಹ್ಮಣ! ನೀನು ಮಕ್ಕಳನ್ನು ಹೊರತು ಮತ್ತೆ ಯಾವ ವರವನ್ನು ಬೇಕಾದರೂ ಕೇಳು. ಕೊಡುತ್ತೇನೆ. ವಿಧಿಯು ನಿನಗೆ ಏಳು ಜನ್ಮದಲ್ಲಿಯೂ ಮಕ್ಕಳ ಸುಖವನ್ನು ನಿನ್ನ ಹಣೆಯಲ್ಲಿ ಬರೆಯಲಿಲ್ಲ. ನಿನ್ನ ಹಣೆಯನ್ನು ನಾನು ನೋಡಿದೆನು ಎಂದು ಹೇಳಿದನು. ಆಗ ಬ್ರಾಹ್ಮಣನಿಗೆ ಬಹು ದುಃಖವು ಉಂಟಾಯಿತು. ತುಂಬಾ ಆಳತಕ್ಕವನಾದನು. ಆವನ ಹೆಂಡತಿಯೂ ನಮ್ಮ ಹಣೆಬರಹವು ಅಷ್ಟೇ ಇದ್ದರೆ ದೇವರು ಏನು ಮಾಡುವನು? ಯಾಕೆ ಅಳುವಿರಿ? ಎಂದು ಸಮಾಧಾನಪಡಿಸಿದಳು. ತರುವಾಯ ಗರುಡದೇವರು ದಂಪತಿಗಳ ದುಃಖವನ್ನು ನೋಡಿ ಕರುಣೆಯುಳ್ಳವರಾಗಿ ಪರಮಾತ್ಮನೇ! ನೀನು ಇವರಿಗೆ ವರವನ್ನು ಕೊಡಬೇಕು. ಇಲ್ಲದಿದ್ದರೆ ಇನ್ನು ಮುಂದೆ ಜನರು ನಮ್ಮ ಕರ್ಮದಂತೆ ಆಗುತ್ತದೆ ಎಂದು ತಿಳಿದುಕೊಂಡು ನಿನ್ನನ್ನು ಭಜಿಸಲಾರರು. ಇವರ ದುಃಖವನ್ನು ನೋಡಿ ನನಗೆ ಕೃಪೆಯುಂಟಾಗುತ್ತದೆ ಎಂದರು. ಆಗ ಪರಮಾತ್ಮನು ಗರುಡದೇವರೊಡನೆ ಹಾಗಾದರೆ ನೀನೇ ಈ ಬ್ರಾಹ್ಮಣನಿಗೆ ಪುತ್ರನನ್ನು ಕೊಡು ಎಂದು ಹೇಳಿದರು.

ಆಗ ಗರುಡದೇವರು 'ಬ್ರಾಹ್ಮಣ! ನಿನಗೆ ನಾನು ದೇವರ ಆಜ್ಞೆಯಿಂದ ದೇವರ ಅನುಗ್ರಹದಿಂದ ಒಬ್ಬ ಮಗನನ್ನು ಕೊಡುತ್ತೇನೆ. ನನ್ನ ಆವೇಶವುಳ್ಳ ಒಬ್ಬ ಮಗನು ಹುಟ್ಟುವನು. ಅವನು ನಿನಗೆ ಸುಖವನ್ನು ದುಃಖವನ್ನು ಉಂಟುಮಾಡುವನು' ಎಂದು ಹೇಳಿದರು. ತರುವಾಯ ಪರಮಾತ್ಮನು ಗರುಡಾರೂಢನಾಗಿ ಹೊರಟುಹೋದನು. ಬ್ರಾಹ್ಮಣನು ಪತ್ನೀಸಹಿತನಾಗಿ ಮನೆಗೆ ಬಂದನು. ಕ್ರಮದಿಂದ ಗೌತಮಿಯು ಗರ್ಭಿಣಿಯಾದ ಸುಂದರವಾದ ಗಂಡುಮಗುವನ್ನು ಹಡೆದಳು. ಮಗುವು ಪರಮಸುಂದರವಾಗಿತ್ತು. ಶುಕ್ಲಪಕ್ಷದ ಚಂದ್ರನಂತೆ ಬೆಳೆಯಿತು. ಆದಕ್ಕೆ ಶುಕದೇವ ಎಂದು ನಾಮಕರಣ ಮಾಡಿದರು.

ಒಂದು ದಿನ ಗಾಲವ ಮುನಿಗಳು ಸುದೇವನ ಮನೆಗೆ ಬಂದಿದ್ದರು. ಸುದೇವನ ಮಗನನ್ನು ನೋಡಿದರು. ಸುದೇವನು ತನ್ನ ಮಗನ ಲಕ್ಷಣಗಳನ್ನು ನೋಡಿ ಫಲವನ್ನು ಹೇಳಬೇಕೆಂದು ಕೇಳಿಕೊಂಡನು. ಆಗ ಗಾಲವರು ಆ ಬಾಲಕನ ಲಕ್ಷಣಗಳನ್ನು ನೋಡಿ ಸಂತೋಷಪಟ್ಟು ಕೊನೆಗೆ ಸುದೇವ! ಏನು ಲಕ್ಷಣಗಳಿದ್ದರೇನು?

ಆಯುಷ್ಯವನ್ನು ನೋಡಬೇಕು. ಆಯುಷ್ಯವಿಲ್ಲದಿದ್ದರೆ ಏನು ಲಕ್ಷಣವಿದ್ದರೇನು ಏನು ಪ್ರಯೋಜನ? ನಿನ್ನ ಮಗನಿಗೆ ಹನ್ನೆರಡೇ ವರ್ಷ ಆಯುಷ್ಯವು ಎಂದು ಹೇಳಿ ಗಾಲವರು ಹೊರಟುಹೋದರು. ಸುದೇವನೂ ಗೌತಮಿಯೂ ಅತ್ಯಂತ ದುಃಖವನ್ನು ಹೊಂದಿದರು. ಕೊನೆಗೆ ದೈವೇಚ್ಛೆಯೆಂದುಕೊಂಡರು. ಹೀಗೆಯೇ ಸ್ವಲ್ಪ ಸಮಯವು ಕಳೆದುಹೋಯಿತು.

ಒಂದು ದಿವಸದಲ್ಲಿ ಸುದೇವನು ಸುಮಿಧೆ ಪುಷ್ಪಗಳನ್ನು ತರಲಿಕ್ಕೆ ಹೋಗಿದ್ದನು. ಗೌತಮಿಯು ಮನೆಯಲ್ಲಿ ಕೆಲಸದಲ್ಲಿ ಇದ್ದಳು. ಆಗ ಶುಕದೇವನು ಮಿತ್ರರೊಡನೆ ಇಳಿಭಾವಿಯಲ್ಲಿ ಆಡಲಿಕ್ಕೆ ಹೋದನು. ಬಹುಹೊತ್ತು ಹುಡುಗರೊಡನೆ ಆಡುತ್ತಾ ಇದ್ದನು. ತರುವಾಯ ಎಲ್ಲರಿಗೂ ತಿಳಿಯದಂತೆ ಬರಬೇಕೆಂದು ಬಹು ಆಳವಾದ ಸ್ಥಳದಲ್ಲಿ ಮುಳುಗಿದನು. ಅಲ್ಲಿಯೇ ಶ್ವಾಸಕಟ್ಟಿಹೋಗಿ ಪ್ರಾಣಬಿಟ್ಟನು. ಬಹುಹೊತ್ತು ಮೇಲಕ್ಕೆ ಬರಲೇ ಇಲ್ಲ. ಹುಡುಗರೆಲ್ಲರೂ ಹೋಗಿ ಗೌತಮಿಯೊಡನೆ ತಿಳಿಸಿದರು. ಗೌತಮಿಯು ಓಡಿಬಂದಳು. ಆಗ ಸರಿಯಾಗಿ ಸುದೇವನೂ ಬಂದನು. ಇಬ್ಬರೂ ಇಳಿಭಾವಿಯ ಹತ್ತಿರ ಓಡಿದರು. ಮಗನ ದೇಹವನ್ನು ತೊಡೆಯಲ್ಲಿ ಇಟ್ಟುಕೊಂಡು ಸುದೇವನು ಅಳುತ್ತಾ ಕೂತುಕೊಂಡನು. ಗೌತಮಿಯೂ ಅಳುತ್ತಾ ಕೂತುಕೊಂಡಳು. ದಂಪತಿಗಳಿಗೆ ಮಗನ ಮೇಲಿನ ದುಃಖದಿಂದ ಒಂದೂ ತಿಳಿಯಲಿಲ್ಲ. ಅಲ್ಲಿಯೇ ಅಳುತ್ತಾ ಕೂತುಕೊಂಡು ಬಿಟ್ಟರು. ಅಷ್ಟು ಸಮಯದಲ್ಲಿ ಆಕಾಶದಲ್ಲಿ ಮೇಘಗಳು ಬಂದವು. ಮಿಂಚು ಬಂದು ಗುಡುಗು ಬಂದಿತು. ಮಳೆಯು ಬಂದಿತು. ದಂಪತಿಗಳಿಗೆ ಒಂದೂ ತಿಳಿಯಲಿಲ್ಲ. ಕೇವಲ ದುಃಖದಲ್ಲಿಯೇ ಮುಳುಗಿದ್ದರು. ಆಹಾರ ನಿದ್ರೆಯನ್ನು ಬಿಟ್ಟು ಮಳೆಯ ನೀರಿನಲ್ಲಿ ನೆನೆಯುತ್ತಾ ಇದ್ದರು.

ದೈವೇಚ್ಛೆಯಿಂದ ಆಗ ಪುರುಷೋತ್ತಮ ಮಾಸ(ಅಧಿಕಮಾಸ)ವಾಗಿತ್ತು. ಒಂದು ತಿಂಗಳು ದಂಪತಿಗಳು ಮಳೆಯಲ್ಲಿ ನೆನೆಯುತ್ತಾ ಇದ್ದರು. ತರುವಾಯ ಶ್ರೀಪರಮಾತ್ಮನು ಗರುಡಾರೂಢನಾಗಿ ಅವರು ಕೂತಿರುವಲ್ಲಿಗೆ ಬಂದನು. ಆಗ ಸುದೇವನು ಮಗನ ದೇಹವನ್ನು ಕೆಳಗೆ ಇಟ್ಟು ನಮಸ್ಕರಿಸಿದನು. ಗೌತಮಿಯೂ ನಮಸ್ಕರಿಸಿದಳು. ಪರಮಾತ್ಮನು 'ಸುದೇವ! ನೀನು ಪರಮಧನ್ಯನು. ನಿನ್ನ ಭಾಗ್ಯವನ್ನು ಹೇಳಲಿಕ್ಕೆ ಯಾರು ಸಮರ್ಥರು? ನಿನ್ನ ಮಗನು ಹನ್ನೆರಡುಸಾವಿರ ವರ್ಷ ಆಯುಷ್ಯವುಳ್ಳವನಾಗುವನು. ನಿನ್ನ ಪುತ್ರ ಸುಖವನ್ನು ನೋಡಿ ದೇವತೆಗಳೂ ಆಸೆಪಡುವರು. ಪುರುಷೋತ್ತಮಮಾಸದ ಮಹಾತ್ಮ್ಯದಿಂದ ನಿನಗೆ ನಾನು ಪ್ರಸನ್ನನಾಗಿ ನಿನ್ನ ಮಗನು ಬಹುಕಾಲ ಬದುಕುವಂತೆ ಮಾಡಿರುವೆನು. ನೀನು

ಭೂಮಿಯಲ್ಲಿ ಮಗನೊಡನೆ ಬಹುಕಾಲವಿದ್ದು ಆಮೇಲೆ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ದೇವತೆಗಳ ಪರಿಮಾಣದಿಂದ ಸಾವಿರವರ್ಷ ಸುಖವನ್ನು ಅನುಭವಿಸಿ ಆಮೇಲೆ ಭೂಮಿಯಲ್ಲಿ ದೃಢಧನ್ವ ಎಂದು ಪ್ರಸಿದ್ಧನಾದ ಚಕ್ರವರ್ತಿಯಾಗಿ ಹುಟ್ಟುವಿ. ಹತ್ತುಸಾವಿರ ವರ್ಷ ರಾಜ್ಯವನ್ನು ಆಳುವಿ. ನಿನ್ನ ಹೆಂಡತಿಯಾದ ಈ ಗೌತಮಿಯೇ ನಿನಗೆ ಗುಣಸುಂದರಿ ಎಂಬ ಹೆಸರಿನಿಂದ ರಾಣಿಯಾಗುವಳು. ನಾಲ್ಕು ಜನ ಗಂಡುಮಕ್ಕಳೂ ಒಂದು ಹೆಣ್ಣುಮಗುವೂ ಆಗುವರು. ನೀನು ಸಂಸಾರಸುಖದಲ್ಲಿ ಆಸಕ್ತನಾಗಿ ಭಗವಂತನನ್ನು ಮರೆತ ಸಮಯದಲ್ಲಿ ನಿನ್ನ ಮಗನು ಗಿಳಿಯರೂಪದಿಂದ ಬಂದು ನಿನಗೆ ವೈರಾಗ್ಯಕ್ಕೆ ಕಾರಣವಾದ ಪದ್ಯವನ್ನು ಪುನಃ ಪುನಃ ಹೇಳುವನು. ಗಿಳಿಯು ಹೇಳಿದ ಮಾತನ್ನು ಕೇಳಿ ದುಃಖವುಳ್ಳವನಾಗಿ ಮನೆಗೆ ಬಂದು ಯೋಚಿಸುತ್ತಿರುವಾಗ ವಾಲ್ಮೀಕಿ ಋಷಿಗಳು ಬಂದು ನಿನಗೆ ಉಪದೇಶಿಸುವರು. ಅವರ ಉಪದೇಶದಿಂದ ನೀನು ಪತ್ನೀ ಸಹಿತನಾಗಿ ಪುನರಾವೃತ್ತಿರಹಿತವಾದ ಲೋಕವನ್ನು ಹೊಂದುವಿ' ಎಂದು ಹೇಳಿದನು. ಭಗವಂತನು ಹೀಗೆ ಹೇಳುತ್ತಿರುವಾಗಲೇ ಬ್ರಾಹ್ಮಣನ ಮಗನು ಎದ್ದುನಿಂತನು. ಭಗವಂತನಿಗೆ ನಮಸ್ಕರಿಸಿದನು. ದಂಪತಿಗಳು ಮಗನನ್ನು ನೋಡಿ ಸಂತೋಷಪಟ್ಟರು. ಗರುಡದೇವರು ಪುತ್ರನಿಂದ ಸಹಿತನಾದ ಸುದೇವ ಎಂಬ ಬ್ರಾಹ್ಮಣನನ್ನು ನೋಡಿ ಸಂತೋಷದಿಂದ ಪರಮಾತ್ಮನನ್ನು ನಮಸ್ಕಾರ ಮಾಡಿದರು.

ತರುವಾಯ ಆ ಸುದೇವನು ತನ್ನ ಮನಸ್ಸಿನ ಸಂಶಯವನ್ನು ಪರಿಹಾರಮಾಡಿಕೊಳ್ಳುವುದಕ್ಕೋಸ್ಕರ ಕೈಮುಗಿದುಕೊಂಡು 'ಭಗವಂತನೇ! ಪೂರ್ವದಲ್ಲಿ ನಾನು ನಾಲ್ಕು ಸಾವಿರವರ್ಷ ಕಠಿನವಾದಿ ತಪಸ್ಸು ಮಾಡಿದರೂ ಪುತ್ರಸುಖವೇ ಇಲ್ಲ ಎಂದು ಹೇಳಿದ ನೀವು ಈಗ ಮಾತ್ರ ಮೃತನಾದ ನನ್ನ ಮಗನನ್ನು ಎಬ್ಬಿಸಲು ಕಾರಣವನ್ನು ತಿಳಿಸಬೇಕು' ಎಂದು ಪ್ರಾರ್ಥಿಸಿಕೊಂಡನು.

ಅದಕ್ಕೆ ಭಗವಂತನು 'ಸುದೇವ! ಇದು ನನಗೆ ಪ್ರಿಯವಾದ ಪುರುಷೋತ್ತಮ ಮಾಸವು. ಪತ್ನೀಸಹಿತನಾದ ನಿನಗೆ ಈ ಮಾಸದಲ್ಲಿ ಸರಿಯಾದ ಸಾಧನೆಯು ನಡೆಯಿತು. ಈ ಮಾಸಲ್ಲಿ ಒಂದು ದಿನವಾದರೂ ಉಪವಾಸ ಮಾಡಿದರೆ ಸಮಸ್ತ ಪಾಪರಹಿತನಾಗಿ ವಿಮಾನವನ್ನು ಏರಿ ವೈಕುಂಠಲೋಕಕ್ಕೆ ಹೋಗುವನು. ಇಂತಹ ಮಾಸದಲ್ಲಿ ಸಂಪೂರ್ಣ ಉಪವಾಸವನ್ನು ಮಾಡಿದಿ. ಅಕಾಲದಲ್ಲಿ ಮೇಘಗಳು ಬಂದು ಮಳೆ ಸುರಿದ ಪ್ರಯುಕ್ತ ನಿನಗೆ ಪ್ರತಿನಿತ್ಯವೂ ಮೂರು ಹೊತ್ತು ಸ್ನಾನವಾಯಿತು. ಈರೀತಿಯಾಗಿ ನಿನಗೆ ತಿಳಿಯದ ಹಾಗೆಯೇ ಮಹಾಸಾಧನವು

ಏರ್ಪಟ್ಟಿತು' ಎಂದು ಹೇಳಿ ಗರುಡದೇವರ ಮೇಲೆ ಕೂತುಕೊಂಡು ಹೊರಟುಹೋದನು.

ತರುವಾಯ ಸುದೇವನು ಸಾವಿರವರ್ಷ ಸಂಸಾರ ಸುಖವನ್ನು ಅನುಭವಿಸಿ ಉತ್ತಮಲೋಕವನ್ನು ಹೊಂದಿ ಅಲ್ಲಿಯ ಸುಖವನ್ನು ಅನುಭವಿಸಿ ಪತ್ನೀಸಹಿತನಾಗಿ ಭೂಮಿಯಲ್ಲಿ ಹುಟ್ಟಿದನು. ರಾಜನೇ! ಆ ಸುದೇವನೇ ಈಗ ದೃಢಧನ್ವನೆಂದು ಪ್ರಸಿದ್ಧನಾದ ನೀನು. ಪೂರ್ವದ ಗೌತಮಿಯೇ ಈಗ ನಿನಗೆ ಗುಣಸುಂದರಿಯೆಂಬ ಹೆಂಡತಿಯು. ಪೂರ್ವಜನ್ಮದಲ್ಲಿ ಮಗನಾದ ಶುಕದೇವನೇ ಹನ್ನೆರಡು ಸಾವಿರ ವರ್ಷ ಆಯುಷ್ಯವುಳ್ಳವನಾಗಿ ವೈಕುಂಠಲೋಕಕ್ಕೆ ಹೋದನು. ಅವನೇ ಈಗ ಸಂಸಾರದಲ್ಲಿ ಮುಳುಗಿದ ಪೂರ್ವಜನ್ಮದ ತಂದೆಯಾದ ನಿನ್ನನ್ನು ಉದ್ಧಾರಮಾಡುವುದಕ್ಕಾಗಿ ಗಿಳಿಯ ರೂಪದಿಂದ ಬಂದು ನಿನಗೆ ಆ ಶ್ಲೋಕವನ್ನು ಹೇಳಿಹೋದನು''.

ಈ ಪ್ರಕಾರವಾಗಿ ವಾಲ್ಮೀಕಿ ಋಷಿಗಳು ದೃಢಧನ್ವರಾಜನೊಡನೆ ಅವನ ಪೂರ್ವಜನ್ಮದ ಚರಿತ್ರೆಯನ್ನು ಹೇಳಿದ. ಪುರುಷೋತ್ತಮಮಾಸವೆಂದು ಹೆಸರುಳ್ಳ ಅಧಿಕಮಾಸದಲ್ಲಿ ಮಾಡಬೇಕಾದ ಸಾಧನೆಗಳನ್ನು ಹೇಳಿ, ರಾಜನಿಂದ ಅತ್ಯಂತ ಸತ್ಕೃತರಾಗಿ ಆಶೀರ್ವಾದ ಮಾಡಿ ಸರಯೂನದಿಗೆ ಹೊರಟುಹೋದರು.

ತರುವಾಯ ದೃಢಧನ್ವರಾಜನು ವೈರಾಗ್ಯವುಳ್ಳವನಾಗಿ ಪತ್ನಿಯಿಂದ ಸಹಿತನಾಗಿ ಕಾಡಿಗೆ ಹೋದನು. ಕಾಡಿನಲ್ಲಿ ಪುರುಷೋತ್ತಮಮಾಸದಲ್ಲಿ ಉಪವಾಸದಿಂದ ಕೈಯನ್ನು ಮೇಲೆ ಮಾಡಿಕೊಂಡು ಒಂದು ಆಶ್ರಯವೂ ಇಲ್ಲದೆ ಪಾದಾಂಗುಷ್ಠದಿಂದ ನಿಂತುಕೊಂಡು ತಪಸ್ಸು ಮಾಡಿದನು. ಅವನ ಪತ್ನಿಯು ಆ ಸಮಯದಲ್ಲಿ ಅವನ ಸೇವಾ ಮಾಡುತ್ತಿದ್ದಳು. ಈರೀತಿ ಒಂದು ತಿಂಗಳು ತಪಸ್ಸು ಮಾಡಲು ವಿಮಾನವು ಬಂದಿತು. ತರುವಾಯ ರಾಜನು ರಾಜಪತ್ನಿಯೂ ದಿವ್ಯ ದೇಹವುಳ್ಳವರಾಗಿ ವಿಮಾನ ದಲ್ಲಿ ಕೂತುಕೊಂಡು ಗೋಲೋಕಕ್ಕೆ ಹೋದರು. ಅಲ್ಲಿ ಭಗವಂತನ ಸನ್ನಿಧಾನದಲ್ಲಿ ಸುಖವಾಗಿ ಇದ್ದರು.



# ತೀರ್ಥಕ್ಷೇತ್ರ ಪರಿಚ್ಛೇದ

## ಬದರಿಕಾಶ್ರಮದ ಮಹಿಮೆಯು [1]

ಮಧುವನದಿಂದ ಹನ್ನೊಂದು ಧನುಸ್ಸಿನಷ್ಟು ದೂರದಲ್ಲಿ ಬದರಿಕಾಶ್ರಮ ವಿರುವುದು. ಅದರ ಅತ್ಯದ್ಭುತವಾದ ಮಹಿಮೆಯು ಪ್ರಸಿದ್ಧವಾಗಿರುವುದು. ಪೂರ್ವದಲ್ಲಿ ಮಗಧದೇಶದಲ್ಲಿ ದೇವದಾಸನೆಂಬ ಧರ್ಮಿಷ್ಠನಾದ ಬ್ರಾಹ್ಮಣನಿದ್ದನು. ಅವನು ಪರಮಾತ್ಮನ ಭಕ್ತನಾಗಿದ್ದನು. ಸದಾಚಾರವಂತನಾಗಿದ್ದನು. ಅವನಿಗೆ ಉತ್ತಮಾ ಎಂದು ಹೆಸರುಳ್ಳ ಪತಿವ್ರತೆಯಾದ ಹೆಂಡತಿಯಿದ್ದಳು. ಆ ದಂಪತಿಗಳಿಗೆ ಅಂಗದನೆಂಬ ಮಗನಿದ್ದನು. ವಲಯಾ ಎಂದು ಹೆಸರುಳ್ಳ ಮಗಳೂ ಇದ್ದಳು. ಮಗನು ದೊಡ್ಡವನು. ಮಗಳು ಚಿಕ್ಕವಳು. ದೇವದಾಸನು ಇಬ್ಬರಿಗೂ ಮದುವೆ ಮಾಡಿದನು. ಮದುವೆಯಾದ ಮಗಳು ಸ್ವಲ್ಪ ಸಮಯದಲ್ಲಿಯೇ ಮಾವನ ಮನೆಗೆ ಹೋಗಿ ಇದ್ದಳು. ಮಗನೂ ತಂದೆಯಂತೆ ಸರ್ವಶಾಸ್ತ್ರಗಳನ್ನೂ ತಿಳಿದವನಾಗಿ ಮನೆಯ ಭಾರವನ್ನು ಧರಿಸಿದ್ದನು. ಒಂದು ದಿವಸದಲ್ಲಿ ದೇವದಾಸನು ಮಗನು ಮನೆಯ ಭಾರವನ್ನು ವಹಿಸಲಿಕ್ಕೆ ಸಮರ್ಥನಾಗಿರುವುದನ್ನು ನೋಡಿ ಪತ್ನಿಯೊಡನೆ 'ಸಾಧ್ವಿ! ನಾನು ಹೇಳುವ ಮಾತನ್ನು ಕೇಳು. ತರುವಾಯ ಯೋಗ್ಯವಾದ ಕಾರ್ಯವನ್ನು ಬೇಗನೇ ಮಾಡಬೇಕು. ನಮಗೆ ಮುದಿತನವು ಬರುತ್ತಿದೆ. ಕ್ರಮದಿಂದ ಕಣ್ಣು ಕಾಣಿಸದೆ ಹೋಗುವುದು. ಕಾಲುಗಳಿಂದ ನಡೆಯಲಿಕ್ಕೆ ಆಗದಂತೆ ಆಗುವುದು. ಆದುದರಿಂದ ಅದಕ್ಕಿಂತ ಮೊದಲೇ ನಮ್ಮ ಹಿತವನ್ನು ನಾವು ಮಾಡಿಕೊಳ್ಳಬೇಕು. ಮಿತ್ರರು ಮಕ್ಕಳು ಬಂಧುಗಳು ಹಣಗಳು ಎಲ್ಲವೂ ನಶ್ವರವಾದವುಗಳು. ಜ್ಞಾನಿಯಾದವನು ಅವುಗಳಲ್ಲಿ ಆಸಕ್ತನಾಗಬಾರದು. ಆದುದರಿಂದ ನಾನು ವಾನಪ್ರಸ್ಥಧರ್ಮದಿಂದ ಸರ್ವತೀರ್ಥಗಳಲ್ಲಿ ಸಂಚರಿಸುತ್ತಾ ಇದ್ದು ಭಗವಂತನ ಜ್ಞಾನವನ್ನು ಸಂಪಾದಿಸಿ, ಸನ್ಯಾಸಿಯಾಗಿ ಒಂದು ತೀರ್ಥದ ತೀರದಲ್ಲಿ ದೇಹವನ್ನು ಬಿಡುವೆನು. ಹಾಗೆ ಮಾಡಿದರೆ ಸದ್ಗತಿಯಾಗುವುದು' ಎಂದು ಹೇಳಿದನು.

ಆಗ ಉತ್ತಮಾ ಎಂದು ಹೆಸರುಳ್ಳ ಹೆಂಡತಿಯು 'ಹೆಂಗಸೋ ಗಂಡಸೋ ಯಾರು ಪರಮಾತ್ಮನನ್ನು ಬಿಟ್ಟು ಸಂಸಾರದಲ್ಲಿ ಆಸಕ್ತನಾಗುವನು? ಆದುದರಿಂದ ನಿಮ್ಮ ಪಾದಸೇವಕಿಯಾದ ನನ್ನನ್ನೂ ಕೂಡ ಕರಕೊಂಡು ಹೋಗಿ ಉದ್ಧಾರ ಮಾಡಿರಿ. ಮಗನಾದ ಅಂಗದನು ಮನೆಯ ಭಾರವನ್ನು ವಹಿಸಲಿಕ್ಕೆ ಸಮರ್ಥನಾಗಿರುವನು.

1. ಮ.ಭಾ.ವ.ಪ. ಮತ್ತು ಪ.ಪು. ಅ-198 ವರಾಹ ಪುರಾಣಗಳಲ್ಲಿ ವರ್ಣನೆ ಇದೆ.

ಸೊಸೆಯೂ ಅವನಿಗೆ ಸಹಾಯಕಳಾಗಿರುವಳು. ಮಗನು ಸಮರ್ಥನಾಗಿರುವಾಗ ಯಾರು ಸ್ತ್ರೀಯೋ ಪುರುಷನೋ ವೈರಾಗ್ಯವನ್ನು ಹೊಂದುವುದಿಲ್ಲವೋ ಅವರು ಶ್ರೇಯಸ್ಸಿನಿಂದ ವಂಚಿತರಾದವರು' ಎಂದು ಹೇಳಿದಳು.

ಈರೀತಿಯಾಗಿ ದಂಪತಿಗಳು ಪರಸ್ಪರವಾಗಿ ಮಾತಾಡಿಕೊಂಡು ಮಗನನ್ನು ಕೂಗಿ 'ಮಗ! ನನಗೆ ವಯಸ್ಸಾಯಿತು. ನಾವು ಯಾವುದಾದರೂ ಪುಣ್ಯಕ್ಷೇತ್ರಕ್ಕೆ ಹೋಗಿ ಪುಣ್ಯವನ್ನು ಸಂಪಾದಿಸುವೆವು. ನೀನು ಮನೆಯ ಭಾರವನ್ನು ಒಪ್ಪಿಕೊಂಡು ನಮ್ಮನ್ನು ತೀರ್ಥಯಾತ್ರೆಗೆ ಹೋಗಲಿಕ್ಕೆ ಬಿಟ್ಟುಬಿಡು. ತೀರ್ಥಯಾತ್ರೆಯ ನಿಮಿತ್ತದಿಂದ ನಮಗೆ ಸಜ್ಜನರ ದರ್ಶನವಾದರೆ ನಾವು ಕೃತಾರ್ಥರಾಗುವೆವು' ಎಂದು ಹೇಳಿದರು.

ಅದನ್ನು ಕೇಳಿ ಮಗನು 'ಪೂಜ್ಯಪಾದರಾದ ನಿಮ್ಮಿಬ್ಬರ ಆಜ್ಞೆಯಂತೆ ನಡೆಯು ವವನು ನಾನು. ಪುಣ್ಯತೀರ್ಥಗಳಲ್ಲಿ ದಾನಮಾಡಲಿಕ್ಕೆ ಬೇಕಾದಷ್ಟು ಹಣವನ್ನು ತೆಗೆದುಕೊಂಡು ಹೋಗಿರಿ. ನನ್ನನ್ನು ಸೇವೆಗಾಗಿ ಸ್ವಲ್ಪದೂರ ಕರೆದುಕೊಂಡು ಹೋಗಿರಿ' ಎಂದು ಹೇಳಿ ಹಣವನ್ನು ಹಿಡಿದುಕೊಂಡು ನಾಲ್ಕುಮೈಲು ಅವರೊಟ್ಟಿಗೆ ಹೋದನು. ತರುವಾಯ ಅವರು ಸಮಾಧಾನಹೇಳಿ ಮಗನನ್ನು ಕಳುಹಿಸಿ ಹಣವನ್ನು ಹಿಡಿದುಕೊಂಡು ಹೋದರು. ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಾ ಮೂರು ದಿವಸಗಳನ್ನು ಕಳೆದರು. ತರುವಾಯ ಮುಂದೆ ಹೋಗುತ್ತಿರಲು ದಾರಿಯಲ್ಲಿ ಒಬ್ಬ ಸಿದ್ಧಪುರುಷನು ಸಿಕ್ಕಿದನು. ಅವರಿಬ್ಬರೂ ಅವನಿಗೆ ಶಿರಸಾ ನಮಸ್ಕರಿಸಿದರು. ಆಮೇಲೆ ಎಲ್ಲರೂ ಕೂತುಕೊಂಡರು. ದೇವದಾಸನು ಅವನೊಡನೆ 'ನೀನು ಯಾರು? ಎಲ್ಲಿಂದ ಬರುತ್ತಿರುವಿ? ಏನನ್ನು ಮಾಡುವ ಅಭಿಪ್ರಾಯವುಳ್ಳವ ನಾಗಿರುವಿ?' ಎಂದು ಕೇಳಿದನು.

ಆದಕ್ಕೆ ಅವನು 'ನಾನೊಬ್ಬ ಸಿದ್ಧನು. ಕಲ್ಪಗ್ರಾಮದಲ್ಲಿ ನನ್ನ ಮನೆಯಿರುವುದು. ಇಂದ್ರಪ್ರಸ್ಥದಿಂದ ಬರುತ್ತಿದ್ದೇನೆ. ಅಲ್ಲಿ ಒಂದು ಆಶ್ಚರ್ಯವನ್ನು ನೋಡಿದೆನು. ಅಲ್ಲಿ ಕಪಿಲದೇವರು ವಾಸಿಸುತ್ತಿರುವರು. ಅವರ ಆಶ್ರಮದಲ್ಲಿ ಅವರಿಂದ ಸಾಂಖ್ಯಶಾಸ್ತ್ರ ವನ್ನು ಅಭ್ಯಾಸಮಾಡುತ್ತಾ ಇದ್ದೆನು. ಒಂದುದಿವಸದಲ್ಲಿ ನನ್ನ ಗುರುಗಳಾದ ಕಪಿಲದೇವರು ಯಮುನಾಜಲದಲ್ಲಿ ಸ್ನಾನ ಮಾಡಬೇಕೆಂದು ಬದರಿಗೆ ಹೋದರು. ಅಲ್ಲಿ ಒಂದು ಕಾಡಿನ ಕೋಣವು ನೀರಡಿಕೆಯಿಂದ ಬಂದು ಯಮುನೆಯ ನೀರಿನಲ್ಲಿ ಪ್ರವೇಶಿಸಿ ನೀರನ್ನು ಕುಡಿದು ಪೂರ್ವಜನ್ಮವನ್ನು ಸ್ಮರಿಸಿಕೊಂಡಿತು. ಪೂರ್ವಜನ್ಮವನ್ನು ಪೂರ್ವದಲ್ಲಿ ಮಾಡಿದ್ದ ಕರ್ಮಗಳನ್ನು ಸ್ಮರಿಸಿಕೊಂಡು ನೀರಿನಿಂದ ಮೇಲಕ್ಕೆ ಬಂದು

ಕಪಿಲದೇವರಿಗೆ ನಮಸ್ಕರಿಸಿತು. ನಾನು ಕೇಳುವಂತೆ ಮನುಷ್ಯರ ಮಾತಿನಿಂದ 'ಭಗವದವತಾರಭೂತರಾದ ಕಪಿಲದೇವರೇ! ಇದು ಯಾವ ಮಹಾತೀರ್ಥವೆಂದು ನನಗೆ ಹೇಳಬೇಕು. ಈ ತೀರ್ಥದ ಸ್ಪರ್ಶದಿಂದ ನನಗೆ ಪೂರ್ವಜನ್ಮದ ಮತ್ತು ಪೂರ್ವಜನ್ಮದಲ್ಲಿ ಮಾಡಿದ ಪಾಪದ ಸ್ಮರಣೆಯು ಉಂಟಾಗಿರುವುದು' ಎಂದು ಹೇಳಿತು. ಅದನ್ನು ಕೇಳಿ ನನ್ನ ಗುರುಗಳಾದ ಕಪಿಲದೇವರು ಎಲ್ಲವನ್ನೂ ತಿಳಿದವರಾದರೂ ನಗುತ್ತಾ 'ನೀನು ಪೂರ್ವಜನ್ಮದಲ್ಲಿ ಯಾರಾಗಿದ್ದಿ? ಯಾವ ಪಾಪವನ್ನು ಮಾಡಿದಿ?' ಎಂದು ಕೇಳಿದರು.

ಅದಕ್ಕೆ ಕಾಡುಕೋಣವು 'ನಾನು ಪೂರ್ವದಲ್ಲಿ ಬಲಿಷ್ಠನಾದ ಕಲಿಂಗದೇಶದ ರಾಜ ನಾಗಿದ್ದೆನು. ನಾನು ಕಾಮಮೋಹಿತನಾಗಿ ಪರಸ್ತ್ರೀ ತನ್ನ ಸ್ತ್ರೀಯೆಂಬ ವಿವೇಕವುಳ್ಳವ ನಾಗಿರಲಿಲ್ಲ. ನಿರಪರಾಧಿಗಳಾದ ವ್ಯಾಪಾರಿಗಳ ಹಣವೆಲ್ಲವನ್ನು ಅಪಹರಿಸುತ್ತಿದ್ದೆನು. ನಗರದಲ್ಲಿ ಮಧ್ಯರಾತ್ರಿಕಾಲದಲ್ಲಿ ಭಯವಿಲ್ಲದೆ ಸಂಚರಿಸು ತ್ತಿದ್ದೆನು. ಸುಂದರಿಯಾದ ಸ್ತ್ರೀಯರೊಡನೆ ವಿಹರಿಸಲಿಕ್ಕೆ ಹಾಗೆ ಸಂಚರಿಸುತ್ತಿದ್ದೆನು. ಯಾರ ಮನೆಯಲ್ಲಿ ಸುಂದರಿಯಾದ ಸ್ತ್ರೀಯು ಕಾಣಿಸುವಳೋ ಆ ಮನೆಯಲ್ಲಿಯೇ ಆ ರಾತ್ರಿ ವಾಸಮಾಡುತ್ತಿದ್ದೆನು. ಅಲ್ಲಿ ಇಚ್ಛಾನುಸಾರವಾಗಿ ಆ ಸ್ತ್ರೀಯೊಡನೆ ವಿಹರಿಸಿ ಅಲ್ಲಿ ಇದ್ದ ಹಣವೆಲ್ಲವನ್ನೂ ತೆಗೆದುಕೊಂಡು ಕೆಲವು ದಿವಸಗಳಲ್ಲಿ ಮನೆಗೆ ಬಂದು ಸೇರುತ್ತಿದ್ದೆನು. ಹಗಲಿನಲ್ಲಿ ಸಭಾಮಧ್ಯದಲ್ಲಿ ಕೂತುಕೊಂಡು ಇಬ್ಬರು ಹುಡುಗರನ್ನು ತರಿಸಿ ಅವರಿಂದ ದ್ವಂದ್ವಯುದ್ಧವನ್ನು ಮಾಡಿಸುತ್ತಿದ್ದೆನು. ಅವರಲ್ಲಿ ಯಾರು ಸರಿಯಾಗಿ ಜಗಳವಾಡುವನೋ ಅವನು ಹಣವಂತನೆಂದು ತಿಳಿದು ಅವನ ತಂದೆಯ ಬಳಿಯಲ್ಲಿ ಇದ್ದ ಸ್ವಲ್ಪವೋ ಬಹಳವೋ ಆದ ಹಣವನ್ನು ಅಪಹರಿಸುತ್ತಿದ್ದನು. ಯಾವ ಹುಡುಗನು ಜಗಳಾಡದೆ ಭಯದಿಂದ ಓಡುವನೋ ಅವನನ್ನು ಹಿಡಿದು ತರಿಸಿ ನನ್ನ ರಾಜ್ಯದಲ್ಲಿ ಇರಲಿಕ್ಕೆ ಅರ್ಹನಲ್ಲವೆಂದು ಹೇಳಿ ಕೊಲ್ಲಿಸುತ್ತಿದ್ದೆನು. ಈರೀತಿಯಾಗಿ ರಾಜನಾದ ನಾನು ಅನ್ಯಾಯವನ್ನು ಮಾಡುತ್ತಿರಲು ಊರಿನ ಜನರೆಲ್ಲರೂ ಊರನ್ನು ಬಿಟ್ಟು ಬೇರೆ ರಾಜ್ಯಕ್ಕೆ ಹೊರಟುಹೋದರು.

ಒಂದು ಸಮಯದಲ್ಲಿ ರುದ್ರದೇವರ ಅವತಾರಭೂತರಾದ ದುರ್ವಾಸರು ಭೂಮಿಯಲ್ಲಿ ಸಂಚರಿಸುತ್ತಾ ನನ್ನ ರಾಜ್ಯಕ್ಕೆ ಬಂದರು. ಆಗ ಊರ ಜನರೆಲ್ಲರೂ ಅವರ ಬಳಿಗೆ ಹೋಗಿ ನಮಸ್ಕರಿಸಿ 'ಪೂಜ್ಯರೇ! ನಮ್ಮ ಮೇಲೆ ದಯೆಯನ್ನು ಮಾಡಬೇಕು. ಅಧರ್ಮದಲ್ಲಿ ಆಸಕ್ತನಾದ ಈ ರಾಜ್ಯದ ರಾಜನನ್ನು ಧರ್ಮದಲ್ಲಿ ಆಸಕ್ತನಾಗುವಂತೆ ಮಾಡಿ. ನಾವು ಮಾಡಿದ ಪುಣ್ಯದಿಂದಲೇ ತಾವು ಇಲ್ಲಿಗೆ

ಬಂದಿರುವಿರಿ. ಈ ರಾಜನು ಲೋಭದಿಂದ ನಮ್ಮ ಹಣವೆಲ್ಲವನ್ನೂ ಅಪಹರಿಸಿರುವನು. ಪತಿವ್ರತಾಸ್ತ್ರೀಯರೆಲ್ಲರನ್ನು ಕೆಡಿಸಿರುವನು. ಹತ್ತು ವರ್ಷದ ಅನೇಕ ಬಾಲಕರನ್ನು ಕೊಲ್ಲಿಸಿರುವನು. ಇವನು ಬಹು ದೋಷಿಯಾಗಿರುವನು' ಎಂದು ಹೇಳಿಕೊಂಡರು. ಈರೀತಿಯಾಗಿ ಊರವರ ಮಾತನ್ನು ಕೇಳಿ ದುರ್ವಾಸರು ನನ್ನನ್ನು ಶಿಕ್ಷಿಸಬೇಕೆಂದು ಮನಸ್ಸಿನಲ್ಲಿ ಯೋಚಿಸಿಕೊಂಡು ಸಭೆಯಲ್ಲಿ ಕೂತಿದ್ದ ನನ್ನ ಬಳಿಗೆ ಬಂದರು. ದಿಗಂಬರನಾದ ಅವಧೂತವೇಷವುಳ್ಳವರಾದ ಅವರನ್ನು ನೋಡಿ 'ಇವನು ಮೈಯೆಲ್ಲಾ ಧೂಳಿಯಿಂದ ಕೋಣದಂತೆ ಇರುವನು. ಇವನು ನೋಡಲಿಕ್ಕೆ ಅರ್ಹನಲ್ಲ. ತಡೆಯಿರಿ' ಎಂದು ಹೇಳಿ ಭೃತ್ಯರಿಂದ ತಡೆ ಮಾಡಿಸಿದೆನು. ತರುವಾಯ ನನ್ನ ಭೃತ್ಯರು ಬೇಗನೇ ಅವರನ್ನು ತಡೆದು ನಿಲ್ಲಿಸಲಿಕ್ಕೆ ಓಡಿದರು. ದುರ್ವಾಸರು ಹುಂಕಾರದಿಂದಲೇ ಅವರೆಲ್ಲರನ್ನೂ ಭಸ್ಮವನ್ನಾಗಿ ಮಾಡಿದರು. ಅವರ ತೇಜಸ್ಸಿನಿಂದ ಭೃತ್ಯರೆಲ್ಲರೂ ಭಸ್ಮವಾದದ್ದನ್ನು ನೋಡಿ ನಾನು ಬೇಗನೇ ಎದ್ದು ಮನೆಯೊಳಗೆ ಓಡಲಿಕ್ಕೆ ಉದ್ಯುಕ್ತನಾದೆನು. ಆಗ ಮುನಿಗಳು 'ಎಲಾ ಪಾಪಿಯೇ!' ಎಂದು ನನ್ನನ್ನು ಕೂಗಿ 'ನೀನು ಅರಣ್ಯದಲ್ಲಿ ಕೋಣವಾಗು' ಎಂದು ಶಾಪವನ್ನು ಕೊಟ್ಟರು.

ಮರುದೇಶದಲ್ಲಿ ಮಹಾರಮ್ಯದಲ್ಲಿ ಕೋಣವಾಗಿ ನಾನು ಬಹಳ ಸಮಯ ವಾಸಮಾಡುತ್ತಿರುವೆನು. ನಾನು ಪೂರ್ವದ ಪುಣ್ಯದಿಂದ ಇಲ್ಲಿಗೆ ಬಂದಿರುವೆನು. ನಾನು ಪೂರ್ವದಲ್ಲಿ ಭಾವಿ ಇಳಿಭಾವಿ ಸರೋವರಗಳನ್ನು ಮಾಡಿಸಿರುವೆನು. ಮಾರ್ಗದಲ್ಲಿ ಸಾಲುಮರಗಳನ್ನು ಇಡಿಸಿರುವೆನು. ಈ ಪುಣ್ಯದಿಂದ ನನಗೆ ನರಕ ವಾಗಲಿಲ್ಲ. ಈ ಪವಿತ್ರವಾದ ತೀರ್ಥದ ಬಳಿಗೆ ಬಂದಿರುವೆನು. ಈ ತೀರ್ಥಶ್ರೇಷ್ಠದ ಜಲಸ್ಪರ್ಶದಿಂದ ಪೂರ್ವಜನ್ಮಸ್ಮರಣೆಯುಂಟಾಯಿತು. ಈ ನೀಚದೇಹದಿಂದ ಬಿಡುಗಡೆಯು ಹೇಗೆ ಆಗುವುದೆಂದು ತಿಳಿಸಬೇಕು' ಎಂದು ಕೇಳಿದನು. ಅದಕ್ಕೆ ಕಪಿಲದೇವರು, 'ಈ ಬದರಿಯೆಂಬ ಮಹಾತೀರ್ಥದಲ್ಲಿ ಸ್ನಾನಮಾಡು. ನಿನ್ನ ಮನಸ್ಸಿನ ಅಭೀಷ್ಟವನ್ನು ಹೊಂದುವಿ' ಎಂದು ಹೇಳಿದರು. ಆ ಮಾತನ್ನು ಕೇಳಿ ಆ ಕೋಣವು ತಾನು ಸ್ವರ್ಗವನ್ನು ಹೊಂದುವ ಇಚ್ಛೆಯಿಂದ ಆ ತೀರ್ಥದಲ್ಲಿ ಸ್ನಾನಮಾಡಲಿಕ್ಕೆ ಇಚ್ಛಿಸಿತು. ಸ್ವರ್ಗೇಚ್ಛೆಯಿಂದ ಸ್ನಾನಮಾಡಿ ನೀರಿನಿಂದ ತೀರಕ್ಕೆ ಬರಲು ಆ ಕ್ಷಣದಲ್ಲಿಯೇ ಇಂದ್ರದೇವರು ಐರಾವತದ ಮೇಲೆ ಕೂತುಕೊಂಡು ಬಂದು 'ಕಲಿಂಗರಾಜನೇ! ನೀನು ಈ ಕೋಣದೇಹವನ್ನು ಬಿಡು. ದಿವ್ಯದೇಹವನ್ನು ಹೊಂದಿ ನನ್ನ ಸ್ವರ್ಗಕ್ಕೆ ಬರುವವನಾಗಿ ನೀನು ಸ್ವರ್ಗವನ್ನು ಹೊಂದುವ ಇಚ್ಛೆಯಿಂದ ಈ ತೀರ್ಥದಲ್ಲಿ ಸ್ನಾನ ಮಾಡಿದೆಯಲ್ಲಾ!' ಎಂದು ಹೇಳಿದರು.

ತರುವಾಯ ಕಲಿಂಗರಾಜನು ಕೋಣದ ದೇಹವನ್ನು ಬಿಟ್ಟು ದಿವ್ಯದೇಹವನ್ನು ಹೊಂದಿ ಪರಮಾತ್ಮನನ್ನು ಸ್ತೋತ್ರ ಮಾಡಿ ಇಂದ್ರಲೋಕಕ್ಕೆ ಹೋದನು. ಈರೀತಿಯಾಗಿ ನಾನು ಗುರುಗಳನ್ನು ಸೇವಾಮಾಡುತ್ತಾ ಇದ್ದವನು ಬದರಿಕಾಶ್ರಮದಲ್ಲಿ ಆಶ್ಚರ್ಯವನ್ನು ನೋಡಿದೆನು. ಭೂಮಿಯಲ್ಲಿ ಬದರಿಕಾಶ್ರಮದಿಂದ ಶ್ರೇಷ್ಠವಾದ ಸರ್ವಾಭೀಷ್ಟಪ್ರದವಾದ ತೀರ್ಥವು ಇರುವುದಿಲ್ಲ. ನಿನಗೆ ಶ್ರೇಯಸ್ಸಾಗಬೇಕೆಂದು ಅಭಿಪ್ರಾಯವಿದ್ದರೆ ಪತ್ನೀಸಹಿತನಾಗಿ ಅಲ್ಲಿಗೇ ಹೋಗು. ನಾನು ವಯಸ್ಸಾದ ತಂದೆಯನ್ನು ಅಲ್ಲಿಗೆ ಕರೆದುಕೊಂಡು ಬರುವುದಕ್ಕಾಗಿ ಹೋಗುತ್ತಿರುವೆನು' ಎಂದು ಬದರಿಯ ಮಹಿಮೆಯನ್ನು ಹೇಳಿ (ಸಿದ್ಧಪುರುಷನು) ತನ್ನ ಮನೆಗೆ ಹೋದನು. ತರುವಾಯ ದೇವದಾಸನು ಪತ್ನಿಯಿಂದ ಸಹಿತನಾಗಿ ಬದರಿಕಾಶ್ರಮಕ್ಕೆ ಹೋಗಿ ಸ್ನಾನಮಾಡಿ ಪತ್ನಿಯಿಂದ ಸಹಿತನಾಗಿ ಸಿದ್ಧಿಯನ್ನು ಹೊಂದಿ ಉತ್ತಮಲೋಕವನ್ನು ಹೊಂದಿದನು. ಆ ಸಿದ್ಧಪುರುಷನೂ ತನ್ನ ತಂದೆಯನ್ನು ಕರೆದುಕೊಂಡು ಸ್ನಾನಮಾಡಿಸಿ ತಾನೂ ತಂದೆಯಿಂದ ಸಹಿತನಾಗಿ ಉತ್ತಮಲೋಕವನ್ನು ಹೊಂದಿದನು.



## ಹರಿದ್ವಾರದ ಮಹಿಮೆಯು[1]

ಕುರುಕ್ಷೇತ್ರದಲ್ಲಿ ಕಾಲಿಂಗ ಎಂದು ಪ್ರಸಿದ್ಧನಾದ ಚಂಡಾಲನಿದ್ದನು. ಅವನು ಊರಿನ ಹೊರಗೆ ವಾಸಮಾಡುತ್ತಿದ್ದನು. ಅವನು ಊರಲ್ಲಿ ಇರುವ ಐದಾರು ವರ್ಷದ ಬಾಲಕರನ್ನು ಮೋಸಮಾಡಿ ಬಲಾತ್ಕಾರವಾಗಿ ಕಾಡಿಗೆ ಕರೆದುಕೊಂಡು ಹೋಗಿ ಕೊಂದು ಹಾಕುತ್ತಿದ್ದನು. ಅವರ ದೇಹದಲ್ಲಿರುವ ಬೆಳ್ಳಿ ಬಂಗಾರವನ್ನು ತೆಗೆದು ಕೊಂಡು ಹೋಗುತ್ತಿದ್ದನು. ರಾತ್ರಿಯಲ್ಲಿ ಅಡಗಿಕೂತುಕೊಂಡಿದ್ದು ದಾರಿಯಲ್ಲಿ ಹೋಗುವವರನ್ನು ನೋಡಿ ಕೊಂದು ಹಾಕುತ್ತಿದ್ದನು. ಅವರ ಹಣವನ್ನು ಅಪಹರಿಸು ತ್ತಿದ್ದನು. ಒಂದು ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರಕ್ಕೆ ನಾನಾ ದಿಕ್ಕಿನ ಜನರು ನಾನಾ ದಾನ ಕೊಡುವುದಕ್ಕಾಗಿ ಬಂದಿದ್ದರು. ಅಲ್ಲಿ ಸೂರ್ಯಗ್ರಹಣಕಾಲದಲ್ಲಿ ಎಲ್ಲರೂ ವಿಧಿಪ್ರಕಾರವಾಗಿ ಸ್ನಾನಮಾಡಿ ದಾನವನ್ನು ಮಾಡಿ ತಮ್ಮ ತಮ್ಮ ಮನೆಗಳಿಗೆ ಹೋದರು. ಒಬ್ಬ ಬಹಳ ಹಣವಂತನಾದ ವೈಶ್ಯನು ಬಹುಹಣದಿಂದ ಯುಕ್ತನಾಗಿ ಎಲ್ಲಾ ಜನರ ಹಿಂದಿನಿಂದ ತನ್ನ ಮನೆಗೆ ಹೋಗುತ್ತಿದ್ದನು. ಕುದುರೆಯ ಮೇಲೆ ಕೂತುಕೊಂಡು ಹೋಗುತ್ತಿದ್ದನು. ಇಪ್ಪತ್ತು ಜನ ಪದಾತಿಗಳನ್ನು ಕರೆದುಕೊಂಡು ಹೋಗಿದ್ದನು. ಅವನನ್ನು ನೋಡಿ ಕಾಲಿಂಗನು ಹಣವನ್ನು ಅಪಹರಿಸಬೇಕೆಂದು

1. ಪ.ಪು. ಅ.21 ಪ.ಪು.ಉ.ಖಂ.199

ಅವನ ಹಿಂದೆಯೇ ಬಹುದೂರ ಹೋದನು. ಆದರೆ ಹಣವನ್ನು ಅಪಹರಿಸಲು ಅವಕಾಶವನ್ನು ಹೊಂದಲಿಲ್ಲ. ಇಪ್ಪತ್ತು ಜನ ಆಳುಗಳು ರಕ್ಷಕರಾಗಿದ್ದ ಕಾರಣ ಒಬ್ಬನಾಗಿ ಇದ್ದ ಕಾಲಿಂಗನು ಬಲಾತ್ಕಾರ ಮಾಡುವಂತೆಯೂ ಇರಲಿಲ್ಲ.

ಒಂದು ದಿವಸ ರಾತ್ರಿಯಲ್ಲಿ ಮಾತ್ರ ಎಲ್ಲರೂ ಮಲಗಿರಲು ಚಂಡಾಲನು ಹಣವನ್ನು ಅಪಹರಿಸುವುದಕ್ಕಾಗಿ ಡೇರೆಯ ಒಳಗೆ ಬಂದನು. ಆಗ ಹಣವನ್ನು ಕಾಯುತ್ತಿದ್ದ ಒಬ್ಬ ಭೃತ್ಯನು ಅವನನ್ನು ನೋಡಿದನು. ನೋಡಿದ ಕೂಡಲೇ ಅವನು ಕಾಲಿಂಗನ ಎರಡು ಕಾಲುಗಳನ್ನು ಹಿಡಿದುಕೊಂಡು ಇತರ ಆಳುಗಳನ್ನು ಎಬ್ಬಿಸಿದನು. ಆಗ ಕಾಲಿಂಗನು ತನ್ನ ಕಾಲನ್ನು ಹಿಡಿದ ಆಳನ್ನು ಕೊಂದು ಹಾಕಿ ಓಡಿಹೋದನು. ಓಡಿಹೋಗುತ್ತಿರುವ ಅವನನ್ನು ಹೋಗಿ ಮತ್ತೊಬ್ಬನು ಹಿಡಿದನು. ಕಾಲಿಂಗನು ಅವನನ್ನು ಕೊಂದು ಓಡಿದನು. ಅದನ್ನು ನೋಡಿ ಮತ್ತೊಬ್ಬ ಧನುರ್ವಿದ್ಯೆಯನ್ನು ತಿಳಿದ ಭೃತ್ಯನು ಓಡುತ್ತಿದ್ದ ಕಾಲಿಂಗನಿಗೆ ಬಾಣವನ್ನು ಬಿಟ್ಟು ಕೊಂದು ಹಾಕಿದನು. ಈರೀತಿಯಾಗಿ ವೈಶ್ಯನ ಇಬ್ಬರು ಭೃತ್ಯರೂ ಕಾಲಿಂಗನೂ ಮೂರು ಜನರೂ ಮೃತರಾದರು. ಆಗ ಅವರು ದಿವ್ಯದೇಹವುಳ್ಳವರಾಗಿ ಮೂರು ವಿಮಾನಗಳಲ್ಲಿ ಕೂತುಕೊಂಡವರಾಗಿ ಆಕಾಶದಲ್ಲಿ ಇದ್ದುಕೊಂಡು 'ವೈಶ್ಯಶ್ರೇಷ್ಠನೇ! ಇಂದ್ರಪ್ರಸ್ಥದಲ್ಲಿ ಇರುವ ಹರಿದ್ವಾರವೆಂದು ಹೆಸರುಳ್ಳ ಈ ತೀರ್ಥವು ಶ್ರೇಷ್ಠವಾದದ್ದು. ನಾವು ಮೂರು ಜನರು ಈ ತೀರ್ಥದ ಬಳಿಯಲ್ಲಿ ಅಪಮೃತ್ಯುವನ್ನು ಹೊಂದಿದವರಾಗಿದ್ದರೂ ಸ್ವರ್ಗಕ್ಕೆ ಹೋಗುತ್ತಿರುವೆವು. ನಿನಗೆ ಕ್ಷೇಮವಾಗಲಿ' ಎಂದು ಹೇಳಿ ಸ್ವರ್ಗಕ್ಕೆ ಹೊರಟುಹೋದರು.

ತರುವಾಯ ರಾತ್ರಿಯು ಕಳೆದು ಬೆಳಗೆ ಆಗಲು ವೈಶ್ಯನು ಮೃತರಾದ ತನ್ನ ಭೃತ್ಯರ ದೇಹಗಳಿಗೆ ಸಂಸ್ಕಾರ ಮಾಡಿಸಿ ಎಲುಬನ್ನು ಆ ಹರಿದ್ವಾರತೀರ್ಥದಲ್ಲಿ ಹಾಕಿಸಿದನು. ಆಗಲೇ ಆ ಇಬ್ಬರೂ ಸ್ವರ್ಗದಿಂದ ಪುನಃ ಬಂದವರಾಗಿ 'ವೈಶ್ಯ ಶ್ರೇಷ್ಠನೇ! ಈ ತೀರ್ಥದಲ್ಲಿ ಮೃತರಾದ ಪಾಪಿಗಳಿಗೂ ಸ್ವರ್ಗವು ಉಂಟಾಗುವುದು. ಸ್ಥಳದಲ್ಲಿ ಮೃತನಾದವನ ಎಲುಬುಗಳನ್ನು ತೀರ್ಥದ ನೀರಿನಲ್ಲಿ ಹಾಕಿದರೆ ಮೃತನಾದವನಿಗೆ ಸತ್ಯಲೋಕ ಪ್ರಾಪ್ತಿಯಾಗುವುದು. ಸ್ಥಳದಲ್ಲಿ ಮೃತರಾದ ನಮ್ಮ ಎಲುಬು ನೀರಿನಲ್ಲಿ ಬಿದ್ದಕಾರಣ ನಮಗೆ ಬ್ರಹ್ಮಲೋಕದಲ್ಲಿ ಸ್ಥಿತಿಯು ಲಭಿಸಿತು. ಸ್ಥಳದಲ್ಲಿ ಮೃತನಾದ ಕಳ್ಳನ ಎಲುಬು ಮಾತ್ರ ಜಲದಲ್ಲಿ ಬೀಳದ ಕಾರಣ ಅವನು ಸ್ವರ್ಗದಲ್ಲಿಯೇ ಇರುವನು. ಸತ್ಯಲೋಕಕ್ಕೆ ಬಂದಿಲ್ಲ. ಅವನ ದೇಹವನ್ನು ಹುಡುಕಿಸಿ ಅವನ ಎಲುಬನ್ನು ತೀರ್ಥದ ಜಲದಲ್ಲಿ ಹಾಕಿಸು. ಅವನೂ ನಮ್ಮ ಗತಿಯನ್ನು

ಹೊಂದಲಿ. ಸಜ್ಜನರು ಇನ್ನೊಬ್ಬರಿಗೆ ಉಪಕಾರವನ್ನು ಮಾಡಬೇಕು' ಎಂದು ಹೇಳಿ ಉತ್ತಮಲೋಕಕ್ಕೆ ಹೋದರು.

ವೈಶ್ಯನು ಕಳ್ಳನ ದೇಹವನ್ನು ಸಂಸ್ಕಾರ ಮಾಡಿಸುವುದಕ್ಕಾಗಿ ಅದನ್ನು ಹುಡುಕಿಸಿದನು. ಅದು ಸಿಕ್ಕಲೇ ಇಲ್ಲ. ಆಮೇಲೆ ಆ ವೈಶ್ಯನು ಪುನಃ ಹಿಂದೆ ಬಂದು ಹರಿದ್ವಾರದಲ್ಲಿ ಸ್ನಾನಮಾಡಿದನು. 'ತೀರ್ಥದೇವತೆಯೇ! ನಾನು ಸತ್ಪುತ್ರರನ್ನು ಪಡೆದು ಧರ್ಮದಿಂದ ಸಂಪಾದಿಸಿದ ಹಣದಿಂದ ಬ್ರಾಹ್ಮಣರನ್ನು ಬಂಧುಗಳನ್ನು ಸಂತೋಷಪಡಿಸಿ ಪರಮಾತ್ಮನನ್ನು ಆರಾಧಿಸಿ ನಿನ್ನಲ್ಲಿಯೇ ಮರಣವನ್ನು ಹೊಂದಿ ಪರಮಾತ್ಮನ ಮಂದಿರವನ್ನು ಹೊಂದುವೆನು. ತೀರ್ಥರಾಜನೇ! ನಿನಗೆ ನಮಸ್ಕಾರವು' ಎಂದು ಪ್ರಾರ್ಥಿಸಿ ಆ ತೀರ್ಥದಲ್ಲಿ ಸ್ನಾನಮಾಡಿ ಎಲ್ಲಾ ಭೃತ್ಯರಿಂದ ಕೂಡಿಕೊಂಡು ಮನೆಗೆ ಹೋದನು. ಮನೆಯಲ್ಲಿ ಹೆಂಡತಿಯಲ್ಲಿ ಮಕ್ಕಳನ್ನು ಪಡೆದು ಧರ್ಮದಿಂದ ಸಂಪಾದಿಸಿದ ಹಣದಿಂದ ಬಂಧುಗಳನ್ನು ಸಂತೋಷಪಡಿಸಿದನು. ಭಕ್ತಿಯಿಂದ ಪರಮಾತ್ಮನನ್ನು ಆರಾಧಿಸಿ ಆ ತೀರ್ಥಕ್ಕೆ ಹೋಗಿ ಅಲ್ಲಿ ಮರಣವನ್ನು ಹೊಂದಿ ಉತ್ತಮಲೋಕವನ್ನು ಹೊಂದಿದನು. ಈ ಮಹಿಮೆಯನ್ನು ಕೇಳಿದರೆ ಗೋಪೀ ಚಂದನದಾನದಿಂದಲೂ ಬ್ರಹ್ಮಪತ್ರದಲ್ಲಿ ಭೋಜನದಿಂದಲೂ ಉಂಟಾ ಗುವ ಫಲವನ್ನು ಹೊಂದುವನು. ಕಾರ್ತಿಕಮಾಸದಲ್ಲಿ ಇದರ ಮಹಿಮೆಯನ್ನು ಕೇಳಿದರೆ ಜಾಗರ ಮಾಡಿದ ಫಲವು ಬರುವುದು. ಇಂದ್ರಪ್ರಸ್ಥದಲ್ಲಿ ಇರುವ ಹರಿದ್ವಾರಕ್ಕೆ ಸಮಾನವಾದ ತೀರ್ಥವೇ ಇಲ್ಲ.



## ಪುಷ್ಕರ ತೀರ್ಥದ ಮಹಿಮೆ [1]

ವಿದರ್ಭನಗರದಲ್ಲಿ ಬ್ರಹ್ಮಜ್ಞಾನಿಯಾದ ಮಹಾಯಶಸ್ವಿಯಾಧ ಮಾಲವ ಎಂದು ಹೆಸರುಳ್ಳ ಬ್ರಾಹ್ಮಣನು ಇದ್ದನು. ಅವನು ಒಂದು ಸಮಯದಲ್ಲಿ ಸಿಂಹರಾಶಿಯಲ್ಲಿ ಬೃಹಸ್ಪತ್ಯಾಚಾರ್ಯರು ಇರುತ್ತಿರಲು ಗೋದಾವರಿಯಲ್ಲಿ ಸ್ನಾನಮಾಡಬೇಕೆಂದು ಹೋದನು. ಹತ್ತುಸಾವಿರ ಪಲತೂಕ ಬಂಗಾರವನ್ನು ದಾನ ಮಾಡಲಿಕ್ಕಾಗಿ ತೆಗೆದುಕೊಂಡು ಹೋದನು. ಅವನು ಹೋಗುವಾಗ 'ಬಂಗಾರವನ್ನು ಯಾರು ಯಾರಿಗೋ ದಾನ ಮಾಡಬಾರದು. ದರಿದ್ರನಾದ ನನಗೆ ಇಷ್ಟರವರೆಗೆ

---

1. ಮ.ಭಾ.ವ.ಪ. ಹಾಗೂ ಪ.ಪುಗಳಲ್ಲಿ ವಿವರಗಳಿವೆ.

ಉಪಕಾರವನ್ನು ಮಾಡದೆ ಇರುವ ಪೂಜ್ಯನಾದ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನ ಮಾಡಿದರೆ ಅಕ್ಷಯಫಲವುಂಟಾಗುವುದು. ಉಂಛವೃತ್ತಿಯ ಬ್ರಾಹ್ಮಣನು ತನ್ನ ವೃತ್ತಿಯಿಂದ ಬಂದ ದ್ರವ್ಯದಿಂದ ದುರ್ವಾಸರನ್ನು ಸಂತೋಷಪಡಿಸಿದನು. ಮತ್ತು ಬಲಿಯ ಪಾತ್ರನೆಂದು ತಿಳಿದು ವಾಮನದೇವರಿಗೆ ಮೂರುಲೋಕಗಳನ್ನು ದಾನ ಮಾಡಿದನು. ಆದುದರಿಂದ ನಾನು ಧರ್ಮದಿಂದ ಸಂಪಾದಿಸಿದ ಹಣವನ್ನು ಭಗವಂತನ ಪ್ರೀತಿಗಾಗಿ ಸತ್ಪಾತ್ರರಲ್ಲಿ ದಾನಮಾಡಬೇಕು. ಅದರ ಫಲವನ್ನು ಅಪೇಕ್ಷಿಸಬಾರದು. ನನ್ನ ಸಹೋದರಿಯ ಮಗನಾದ ಪುಂಡರೀಕನು ಮಹಾಪಾತ್ರನು ಹಸ್ತಿನಾವತಿಯಲ್ಲಿ ಇರುವನು. ಅವನನ್ನು ಕರೆಸಿದರೆ ಬಂದು ಸೇರುವನು. ನಾನು ತಂದಿರುವ ಹಣದಲ್ಲಿ ಅರ್ಧವನ್ನು ಆ ಸಹೋದರಿಯ ಮಗನಾದ ಪುಂಡರೀಕನಿಗೆ ದಾನ ಮಾಡುವೆನು. ಉಳಿದದ್ದನ್ನು ಇತರ ಶ್ರೋತ್ರಿಯರಿಗೆ ದಾನಮಾಡುವೆನು' ಎಂದು ಯೋಚಿಸುತ್ತಾ ಕೆಲವು ದಿವಸಗಳಲ್ಲಿಯೇ ಪವಿತ್ರವಾದ ಗೋದಾವರಿಗೆ ಹೋಗಿ ಸೇರಿದನು. ಅಲ್ಲಿ ಮೊದಲೇ ಅವನ ಸಹೋದರಿಯ ಮಗನಾದ ಪುಂಡರೀಕನು ಬಂದಿದ್ದನು. ಮಾಲವನು ಸಿಂಹಸಂಕ್ರಾತಿಯ ದಿವಸದಲ್ಲಿ ಸ್ನಾನಮಾಡಿ ಭಗವಂತನು ಸಂತುಷ್ಟನಾಗಲಿ ಎಂದು ಹೇಳಿ ತನ್ನ ದ್ರವ್ಯದಲ್ಲಿ ಅರ್ಧವನ್ನು ಪುಂಡರೀಕನಿಗೆ ದಾನ ಮಾಡಿದನು. ಧರ್ಮಿಷ್ಠನಾದ ಪುಂಡರೀಕನೂ ಗೋದಾವರಿಯಲ್ಲಿ ಸ್ನಾನಮಾಡಿ ತನ್ನ ಹಣದಲ್ಲಿ ನಾಲ್ಕನೇ ಒಂದು ಭಾಗವನ್ನು ಶ್ರೋತ್ರಿಯರಿಗೆ ಕೊಟ್ಟನು.

ತರುವಾಯ ಮಾಲವನು ತನ್ನ ಮನೆಗೆ ಹೋಗುತ್ತಿದ್ದ ಪುಂಡರೀಕನೊಡನೆ 'ನೀನು ಹೋಗಿ ದೊಡ್ಡವರಿಗೆ ನನ್ನ ನಮಸ್ಕಾರವನ್ನು ಚಿಕ್ಕವರಿಗೆ ಆಶೀರ್ವಾದವನ್ನು ಹೇಳು. ಇಲ್ಲಿ ನಡೆದ ವಿಷಯವನ್ನು ಹೇಳು. ಹೀಗೆಯೇ ಸಂಸಾರದಲ್ಲಿ ಎಲ್ಲಾ ಜನರಿಗೂ ಹೆಂಡತಿ ಮಕ್ಕಳ ಸಂಬಂಧವೂ ಸ್ವಲ್ಪ ಸಮಯ ಮಾತ್ರ ಇರತಕ್ಕದ್ದು. ಯಾರು ಇಂತಹ ಸಂಸಾರದಿಂದ ವೈರಾಗ್ಯವನ್ನು ಹೊಂದುವನೋ ಅವನು ಪರಮಾತ್ಮನಿಗೆ ಕೃಪೆಗೆ ವಿಷಯನಾಗುವನು. ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕು' ಇತ್ಯಾದಿ ರೀತಿಯಾಗಿ ಹೇಳಿ ಕಣ್ಣಿನಲ್ಲಿ ನೀರು ತುಂಬಿಸಿಕೊಂಡು ಹೋದನು. ಧರ್ಮಿಷ್ಠನಾದ ಪುಂಡರೀಕನು ಕೆಲವು ದಿವಸಗಳಲ್ಲಿ ಮನೆಗೆ ಬಂದು ಪುಷ್ಕರವೆಂಬ ತೀರ್ಥದ ಬಳಿಗೆ ಬಂದನು. ಆಗ ಭರತನೆಂದು ಹೆಸರುಳ್ಳ ತನ್ನ ತಮ್ಮನು ನೆಲದಲ್ಲಿ ಬಿದ್ದುಕೊಂಡು ದೀರ್ಘಶ್ವಾಸವನ್ನು ಸೆಳೆಯುವುದನ್ನು ನೋಡಿದನು. ಅವನನ್ನು ನೋಡಿ ಪುಂಡರೀಕನು ಅಳುತ್ತಾ 'ತಮ್ಮ! ನಿನಗೆ ಈ ಅವಸ್ಥೆಯು ಏಕೆ ಉಂಟಾಯಿತು?

ನೀನು ಯಾಕೆ ಇಲ್ಲಿಗೆ ಬಂದಿರುವಿ?' ಎಂದು ಕೇಳಿದನು. ಆಗಲೇ ಭರತನು ಮಹಾವೇದನೆಯಿಂದ ಪೀಡಿತನಾಗಿ ಮರಣವನ್ನು ಹೊಂದಿದನು. ಅಷ್ಟರಲ್ಲಿ ಎಲ್ಲರೂ ನೋಡುತ್ತಿರುವಂತೆ ಅದ್ಭುತವಾದ ಒಂದು ವಿಮಾನವು ಆಕಾಶದಿಂದ ಕೆಳಗೆ ಇಳಿದು ಬಂದಿತು. ಭರತನು ದಿವ್ಯದೇಹವುಳ್ಳವನಾಗಿ ಅಣ್ಣನಿಗೆ ನಮಸ್ಕರಿಸಿ ವಿಮಾನದಲ್ಲಿ ಕೂತುಕೊಂಡು 'ಮಹಾಬುದ್ಧಿವಂತನಾದ ಪುಂಡರೀಕನೇ! ಈ ಪುಷ್ಕರ ಎಂಬ ತೀರ್ಥದ ಪ್ರಭಾವದಿಂದ ಪಾಪಿಯಾಗಿದ್ದರೂ ನಾನು ಸ್ವರ್ಗದಲ್ಲಿ ಸ್ಥಿತಿಯನ್ನು ಹೊಂದಿರುವೆನು.

ಸಹೋದರನೇ! ನನ್ನ ಭಯಂಕರವಾದ ಕರ್ಮವನ್ನು ನೀನು ತಿಳಿದಿರುವಿ. ಆದರೂ ನಿನಗೆ ನಾನು ಹೇಳುವೆನು. ನಾನು ಪ್ರಭಾವತಿಯೆಂದು ಹೆಸರುಳ್ಳ ವೇಶ್ಯೆಯಲ್ಲಿ ಆಸಕ್ತನಾಗಿದ್ದೆನು. ಅವಳ ಮನೆಯಲ್ಲಿಯೇ ಇದ್ದುಕೊಂಡು ಮದ್ಯಪಾನ ಮಾಡಿ ಹಣವೆಲ್ಲವನ್ನೂ ಹಾಳು ಮಾಡಿರುವೆನು. ಜೀಟಾಟದಿಂದ ಹಣವನ್ನು ಕಳಕೊಂಡಿರುವೆನು. ಕಳವು ಮಾಡಿ ಹಣವನ್ನು ಸಂಪಾದಿಸಿರುವೆನು. ನೀನು ಗೋದಾವರಿಗೆ ಹೋದಮೇಲೆ ನಾನು ಮಾಡಿದ ಕಾರ್ಯವು ನಿನಗೆ ತಿಳಿಯದು. ನೀನು ಹೋಗಿ ಒಂದು ಪಕ್ಷವಾದ ಮೇಲೆ ಪುಂಡರೀಕನಿಗೆ ಅವನ ಸೋದರ ಮಾವನಾದ ಮೂಲವನ್ನು ತುಂಬಾ ಹಣವನ್ನು ಕೊಡಲಿಕ್ಕೆ ಕರೆದಿರುವನು ಎಂದು ಜನರ ಮಾತನ್ನು ಕೇಳಿದೆನು.

ಪುಂಡರೀಕನು ಬಂದ ಮೇಲೆ ಅವನನ್ನು ಕೊಂದು ಅವನು ಮೂಲದಿಂದ ತಂದ ಹಣವನ್ನು ಅಪಹರಿಸಿ ಆದರಿಂದ ಪ್ರಭಾವತಿಯನ್ನು ತೃಪ್ತಿಪಡಿಸಬೇಕು ಎಂದು ಯೋಚಿಸಿದ್ದೆನು. ಜೀಟಾಟ ತಿಳಿದವರಿಂದ ಸಹಿತನಾಗಿ ಮೊದಲು ಪುಂಡರೀಕ ನೊಡನೆ ಜೀಟಾಟವಾಡಬೇಕು ಎಂದು ಯೋಚಿಸಿ ನಿನ್ನನ್ನು ಸಂಹರಿಸಿ ಹಣವನ್ನು ಅಪಹರಿಸಬೇಕೆಂದು ಇಲ್ಲಿ ದಾರಿಯಲ್ಲಿ ಇದ್ದೆನು. ನೀನು ಹೊರಟುಹೋದ ಮೇಲೆ ಇಲ್ಲಿಗೆ ಒಂದು ವರ್ತಕರ ಗುಂಪು ಬಂದಿತು. ನಾನು ರಾತ್ರಿಯಲ್ಲಿ ಇಲ್ಲಿಯೇ ಮಲಗಿದ್ದೆನು. ಮಧ್ಯರಾತ್ರಿಯಾಗಲು ಒಬ್ಬ ಕಳ್ಳನು ಅವರ ಹಣವನ್ನು ಅಪಹರಿಸಲಿಕ್ಕೆ ಬಂದವನಾಗಿ ಸ್ವಲ್ಪ ಹಣವನ್ನು ಹಿಡಿದುಕೊಂಡು ಓಡಿದನು. ಆಗ ಸೇವಕರು ಕೂಗುತ್ತಾ ಅವನನ್ನು ಅಟ್ಟಿಸಿಕೊಂಡು ಓಡಿದರು. 'ಆ ಕಳ್ಳನನ್ನು ಹಿಡಿಯಿರಿ. ಹಿಡಿಯಿರಿ. ನಮ್ಮ ಮಧ್ಯದಿಂದ ಬಹು ಹಣವನ್ನು ಹಿಡಿದುಕೊಂಡು ಓಡುತ್ತಿರುವನು' ಎಂದು ಕೂಗುತ್ತಾ ಓಡಿಬಂದರು. ಅವರ ಮಾತನ್ನು ಕೇಳಿ ಅವನನ್ನು ಹಿಡಿಯಬೇಕೆಂದು ಮುಂದೆ ನಾನು ಓಡಿದೆನು.

ತರುವಾಯ ಆ ವರ್ತಕರ ಭೃತ್ಯರು ಖಡ್ಗಹಿಡಿದುಕೊಂಡು ಓಡುತ್ತಿರುವ ನನ್ನನ್ನು ನೋಡಿ ನಾನು ಕಳ್ಳನ ರಕ್ಷಕನೆಂದು ತಿಳಿದುಕೊಂಡು ಬೇಗನೇ ಹಿಡಿದು ಬಿಟ್ಟರು. ಅವರಲ್ಲಿ ಒಬ್ಬ ಬ್ರಾಹ್ಮಣನು ತಾನು ಬ್ರಾಹ್ಮಣನೆಂದು ಹೇಳುತ್ತಿರುವಾಗಲೇ ನಾನು ಅವನನ್ನು ಖಡ್ಗದಿಂದ ಕೊಂದೆನು. ವರ್ತಕರ ಸೇವಕರು ನನ್ನನ್ನು ಖಡ್ಗದಿಂದ ಬಡೆದರು. ತರುವಾಯ ವರ್ತಕರು ತಮ್ಮ ಮಾರ್ಗವನ್ನು ಹಿಡಿದು ಹೋದರು. ಆಮೇಲೆ ನಾನು ಶ್ರಮದಿಂದ ಬಿದ್ದಿರುವಾಗ ನೀನು ಬಂದು ನೋಡಿದೆ. ಹೀಗೆ ನಾನು ಇಲ್ಲಿಗೆ ಏಕೆ ಬಂದೆನು? ಹೇಗೆ ಅಪಮೃತ್ಯುವನ್ನು ಹೊಂದಿದೆನು ಎಂಬ ವಿಷಯವನ್ನು ತಿಳಿಸಿರುವೆನು' ಎಂದು ಹೇಳಿದನು.

ಈರೀತಿಯಾಗಿ ಅವನ ಮಾತನ್ನು ಕೇಳಿ ಪುಂಡರೀಕನು 'ಯಾವ ಪುಣ್ಯದಿಂದ ನಿನಗೆ ಈ ಪುಣ್ಯತೀರ್ಥದಲ್ಲಿ ಮೃತ್ಯುವು ಉಂಟಾಯಿತೆಂಬುದು ತಿಳಿದಿದ್ದರೆ ಹೇಳು' ಎಂದು ಕೇಳಿದನು.

ಅದಕ್ಕೆ ಭರತನು 'ಅದನ್ನು ನಿನ್ನ ಮುಂಭಾಗದಲ್ಲಿ ಹೇಳುವೆನು. ಕೇಳು. ಒಂದು ದಿನದಲ್ಲಿ ನಾನು ಹಣವನ್ನು ಜಯಿಸಿಕೊಂಡು ಮನೆಗೆ ಬರುತ್ತಾ ಮೃತನಾದ ಒಬ್ಬ ಬಾಲಕನನ್ನು ನೋಡಿದೆನು. ಅವನ ದೇಹವನ್ನು ಹೊತ್ತುಕೊಂಡು ಗಂಗಾತೀರಕ್ಕೆ ತೆಗೆದುಕೊಂಡು ಹೋಗಿ ವಸ್ತ್ರಾದಿಗಳಿಂದ ಅಲಂಕರಿಸಿ ದಹನ ಮಾಡಿದೆನು. ದಿವಸದಲ್ಲಿ ಚೀಟಾಟದಲ್ಲಿ ಸಿಕ್ಕಿದ ಹಣವೆಲ್ಲವನ್ನು ಅದಕ್ಕಾಗಿ ಉಪಯೋಗಿಸಿದೆನು. ಆ ಪುಣ್ಯದಿಂದ ನನಗೆ ಈ ತೀರ್ಥದಲ್ಲಿ ಮರಣವು ಉಂಟಾಯಿತು' ಎಂದು ಹೇಳಿದನು.

ತರುವಾಯ ಪುಂಡರೀಕನು ಭರತನ ದೇಹಕ್ಕೆ ಸಂಸ್ಕಾರವನ್ನು ಮಾಡಲು ಆ ತೀರ್ಥದ ಮಹಿಮೆಯಿಂದ ಆ ಭರತನು ಪಾಪಿಯಾಗಿದ್ದರೂ ಸ್ವರ್ಗವನ್ನು ಹೊಂದಿದನು. ಧರ್ಮಿಷ್ಠನಾದ ಪುಂಡರೀಕನು ಆ ತೀರ್ಥದಲ್ಲಿ ಭರತನಿಗೂ ಸದ್ಗತಿಯಾದದ್ದನ್ನು ನೋಡಿ ಮನಸ್ಸಿನಲ್ಲಿಯೇ ಈ ತೀರ್ಥವು ಅಭೀಷ್ಟಪ್ರದವೆಂದು ತಿಳಿದುಕೊಂಡನು. ಭಗವಂತನು ತನ್ನ ಮನೆಯಲ್ಲಿ ವಾಸಮಾಡಲಿ ಎಂದು ಅಭಿಲಾಷೆಯುಳ್ಳವನಾಗಿ ಮಾಘಮಾಸದಲ್ಲಿ ಆ ತೀರ್ಥದಲ್ಲಿ ಸ್ನಾನಮಾಡಿದನು. ಆಮೇಲೆ ಮನೆಗೆ ಹೋಗಿ ಬಂಧುಗಳೊಡನೆ ಭರತನ ಮರಣವನ್ನು ತಿಳಿಸಿದನು. ಅದನ್ನು ಕೇಳಿ ಅವರೆಲ್ಲರೂ ದುಃಖಪಟ್ಟರು. ಪುಂಡರೀಕನು ತನ್ನ ಮನೆಯಲ್ಲಿ ತನ್ನ ಕಾರ್ಯವನ್ನು ಮಾಡುತ್ತಾ ಪರಮಾತ್ಮನು ತನ್ನ ಮನೆಗೆ ಬರುವನೆಂದು ಸಂತೋಷ ದಿಂದ ಇದ್ದನು. ಮರುದಿನದಲ್ಲಿ ಪರಮಾತ್ಮನು ತನ್ನ ಮನೆಗೆ ಬರುವನೆಂದು ತಿಳಿದುಕೊಂಡು ಪುಷ್ಯ ಹುಣ್ಣಿಮೆ ದಿನದಲ್ಲಿ ಪರಮ ಉತ್ಸವವನ್ನು ಮಾಡಿದನು.

ಮನೆಯನ್ನು ಅಲಂಕರಿಸಿದನು. ನೂರುಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಅವರಿಗೆ ಬಹುದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸಿದನು. ನಾನಾ ವಾದ್ಯವನ್ನು ತಿಳಿದವರಿಂದ ಕೂಡಿಕೊಂಡು ಸ್ವಕೀಯರಿಂದ ಸಹಿತನಾಗಿ ರಾತ್ರಿಯಲ್ಲಿ ಜಾಗರವನ್ನು ಮಾಡಿದನು. ಬೆಳಗಾಗಲು ಎಲ್ಲರನ್ನೂ ಕೊಟ್ಟುಕಳುಹಿಸಿ ಪರಮಾತ್ಮನ ಆಗಮನವನ್ನು ನಿರೀಕ್ಷಿಸುತ್ತಾ ಮನೆಯ ಮದ್ಯದಲ್ಲಿ ಕುಳಿತುಕೊಂಡನು.

ತರುವಾಯ ಪರಮಾತ್ಮನು ಅವನ ಮನೆಯ ಹತ್ತಿರದಲ್ಲಿ ತನ್ನ ವಾಹನವನ್ನು ನಿಲ್ಲಿಸಿ ಭಕ್ತನ ಅಭೀಷ್ಟವನ್ನು ಕೊಡುವುದಕ್ಕಾಗಿ ಮನೆಯ ಒಳಗೆ ಪ್ರವೇಶಿಸಿದನು. ಪುಂಡರೀಕನು ಪರಮಾತ್ಮನು ಬಂದದ್ದನ್ನು ನೋಡಿ ಬೇಗನೇ ಆಸನದಿಂದ ಎದ್ದು ಉದ್ದಕ್ಕೆ ನಮಸ್ಕರಿಸಿದನು. ಪರಮಾತ್ಮನ ದರ್ಶನದಿಂದ ಸಂತೋಷವುಳ್ಳವನಾಗಿ ಆಸನದಲ್ಲಿ ಕೂತುಕೊಳ್ಳಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಪರಮಾತ್ಮನನ್ನು ಸ್ತೋತ್ರ ಮಾಡಿ ಮಾಘಮಾಸದಲ್ಲಿ ತನ್ನ ಮನೆಯಲ್ಲಿ ವಾಸಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಪರಮಾತ್ಮನು 'ನೀನು ಭೂಮಿಯಲ್ಲಿ ಉತ್ತಮರಲ್ಲಿ ಉತ್ತಮನಾಗಿರುವಿ. ನನ್ನ ಸಹವಾಸವಾಗಬೇಕೆಂದು ನೀನು ಪುಷ್ಕರದಲ್ಲಿ ಸ್ನಾನವನ್ನು ಮಾಡಿರುವಿ. ಏಳು. ಗಂಗಾಜಲದಲ್ಲಿ ಮಾಘಸ್ನಾನವನ್ನು ಮಾಡು. ಮಾಘಮಾಸದ ಕೊನೆಗೆ ಹುಣ್ಣಿಮೆದಿನದಲ್ಲಿ ಪುಷ್ಕರದಲ್ಲಿ ಸ್ನಾನ ಮಾಡಿಸುವೆನು. ಪ್ರಯಾಗದಲ್ಲಿ ಮಾಘಮಾಸದಲ್ಲಿ ಸಂಪೂರ್ಣವಾಗಿ ಸ್ನಾನಮಾಡಿದ ಫಲವು ಪುಷ್ಕರದಲ್ಲಿ ಒಂದುದಿನ ಸ್ನಾನಮಾಡುವುದರಿಂದ ಬರುವುದು' ಎಂದು ಹೇಳಿದನು.

ತರುವಾಯ ಸೂರ್ಯೋದಯವಾದ ಮೇಲೆ ಗಂಗೆಯಲ್ಲಿ ಸ್ನಾನವನ್ನು ಮಾಡಿದನು. ಆಮೇಲೆ ಪ್ರತ್ಯಕ್ಷವಾಗಿ ಪರಮಾತ್ಮನನ್ನು ಗಂಧ ತುಲಸೀ ಪುಷ್ಪ ಇತ್ಯಾದಿಗಳಿಂದ ಪೂಜಿಸಿದನು. ನಾನಾ ಭಕ್ಷ್ಯಭೋಜ್ಯಗಳನ್ನು ಸಮರ್ಪಿಸಿದನು. ಮಂಗಳಾರತಿಯನ್ನು ಮಾಡಿದನು. ಮಣಿಮಯವಾದ ಮಂಚದಲ್ಲಿ ಮಲಗಿಸಿ ಚಾಮರಬೀಸಿದನು. ಕಾಲನ್ನು ಒತ್ತಿದನು. ಪಚ್ಚಕರ್ಪೂರದಿಂದ ಸಹಿತವಾದ ತಾಂಬೂಲವನ್ನು ಕೊಟ್ಟನು. ಪರಮಾತ್ಮನು ತಲೆಗೆ ರುಮಾಲನ್ನು ಕಟ್ಟುವಾಗ ಕನ್ನಡಿಯನ್ನು ತೋರಿಸುತ್ತಾ ನಿಂತುಕೊಂಡನು. ಈರೀತಿಯಾಗಿ ಪರಮಾತ್ಮನು ತನ್ನ ಮನೆಯಲ್ಲಿ ಮಾಘಮಾಸದಲ್ಲಿ ವಾಸಮಾಡಲು ತಾನು ಸೇವೆಯನ್ನು ಮಾಡುತ್ತಿದ್ದನು. ಮಾಘಮಾಸದ ಹುಣ್ಣಿಮೆಯಲ್ಲಿ ಭಗವಂತನು ಸ್ಮರಣೆ ಮಾಡುವ ಮಾತ್ರದಿಂದ ಗರುಡದೇವರನ್ನು ನೋಡಿದನು. ಆಗ ಪರಮಾತ್ಮನು ಪುಂಡರೀಕನೊಡನೆ 'ಬ್ರಾಹ್ಮಣ ಶ್ರೇಷ್ಠನೇ! ನೀನು ಇಂದ್ರಪ್ರಸ್ಥದಲ್ಲಿರುವ ಪುಷ್ಕರತೀರ್ಥದಲ್ಲಿ ದೈವೇಚ್ಛೆಯಿಂದ ಸ್ನಾನ

ಮಾಡಿದ ಕಾರಣ ನಿನ್ನ ಮನೆಯಲ್ಲಿ ಒಂದು ತಿಂಗಳು ನಾನು ವಾಸಮಾಡುವೆನು. ಈಗ ಗರುಡನನ್ನು ಏರಿಕೊಂಡು ನನ್ನಿಂದ ಸಹಿತನಾಗಿ ಅದೇ ಪುಷ್ಕರಕ್ಕೆ ಹೋಗು. ಅಲ್ಲಿ ಸ್ನಾನ ಮಾಡು. ನಿನಗೆ ಅಭೀಷ್ಟವನ್ನು ಕೊಡುತ್ತೇನೆ. ಪಾಪಿಯಾದ ನಿನ್ನ ತಮ್ಮನಾದ ಭರತನೂ ಉತ್ತಮ ಲೋಕವನ್ನು ಹೊಂದಿರುವನು' ಎಂದು ಹೇಳಿ ಅವನನ್ನು ಗರುಡನ ಮೇಲೆ ಕೂತುಕೊಳ್ಳಿಸಿ ಪುಷ್ಕರಕ್ಕೆ ಬಂದನು. ತರುವಾಯ ಪುಂಡರೀಕನ ದೇಹದಿಂದ ಒಂದು ತೇಜಸ್ಸು ಬಂದು ಪರಮಾತ್ಮನ ಪಾದವನ್ನು ಪ್ರವೇಶಿಸಿತು. ಈರೀತಿಯಾಗಿ ಪುಷ್ಕರತೀರ್ಥದ ಮಹಿಮೆಯು ಅತ್ಯದ್ಭುತವಾದದ್ದು.



# ಮಧುವನದ ಮಹಿಮೆ [1]

ಯಮುನಾತೀರದಲ್ಲಿ ಮಧುವನವಿರುವುದು. ಇಲ್ಲಿ ಭಗವಂತನಿಂದ ರಚಿತವಾದ ಪವಿತ್ರವಾದ ವಿಶ್ರಾಂತಿ ತೀರ್ಥವಿರುವುದು. ಬಹುಜನ್ಮಗಳಲ್ಲಿ ಪರಮಾತ್ಮನನ್ನು ಆರಾಧಿಸಿದವನಿಗೆ ಮಾತ್ರ ಈ ತೀರ್ಥದಲ್ಲಿ ಮರಣವು ಏರ್ಪಡುವುದು. ಇಲ್ಲಿಯೇ ಕಂಸನು ಮೃತನಾದನು. ಈ ತೀರ್ಥದ ಮಹಿಮೆಯನ್ನು ಹೇಳುವೆನು. ಅದನ್ನು ಕೇಳಿದರೆ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವು ಬರುವುದು.

ಹಿಮವತ್ಪರ್ವತದ ಬಳಿಯ ಪ್ರದೇಶದಲ್ಲಿ ಕಿರಾತನಗರದಲ್ಲಿ ಕುಶಲ ಎಂದು ಹೆಸರುಳ್ಳ ಒಬ್ಬ ದರಿದ್ರ ಬ್ರಾಹ್ಮಣನಿದ್ದನು. ಅವನ ಹೆಂಡತಿಯು ದುರಾಚಾರದಲ್ಲಿ ಆಸಕ್ತಳಾಗಿದ್ದಳು. ವ್ಯಭಿಚಾರಿಣಿಯಾದ ಅವಳು ಮಂತ್ರಬಲದಿಂದ ಗಂಡನನ್ನು ವಶಮಾಡಿಕೊಂಡಳು. ಆದುದರಿಂದ ಅವಳು ಏನು ಮಾಡಿದರೂ ಅದನ್ನು ತಡೆಯಲಿಕ್ಕೆ ಅವನು ಸಮರ್ಥನಾಗಿರಲಿಲ್ಲ. ಭೃತ್ಯನಂತೆ ಅವಳು ಹೇಳಿದಂತೆ ನಡೆಯುತ್ತಿದ್ದನು. ಜನರೆಲ್ಲರೂ ಅವನನ್ನು ನೋಡಿ ವ್ಯಭಿಚಾರಿಣಿಯ ಗಂಡನೆಂದು ಅಪಹಾಸ ಮಾಡುತ್ತಿದ್ದರು. ಜನರೆಲ್ಲರೂ ತನ್ನನ್ನು ನೋಡಿ ನಗುತ್ತಾರೆಂದು ಅವನು ಮನೆಯನ್ನು ಬಿಟ್ಟು ಹೋಗುತ್ತಲೇ ಇರಲಿಲ್ಲ. ಅವಳು ತನಗೆ ವಿಟಪುರುಷರು ಕೊಟ್ಟ ಬೆಲೆಬಾಳುವ ಸೀರೆಗಳನ್ನು ಆಭರಣಗಳನ್ನು ಧರಿಸುತ್ತಿದ್ದಳು. ಯಾರಾದರೂ ಅಪಹಾಸ ಮಾಡಿದರೂ ಅವಳಿಗೆ ಮಾನವಿರಲಿಲ್ಲ. ತಾನು ಉಟ್ಟುಕೊಂಡಿದ್ದ ಹಳೆಯ ವಸ್ತ್ರವನ್ನು ತಿರಸ್ಕಾರ ಮಾಡಿ ಗಂಡನಿಗೆ ಕೊಡುತ್ತಿದ್ದಳು. ಈರೀತಿಯಿಂದ ಹೆಂಡತಿಯಿಂದ ತಿರಸ್ಕೃತನಾದ ಆ ಪುರುಷನು ತುಂಬಾ ದುಃಖವುಳ್ಳವನಾಗಿ ರಾತ್ರಿಯಲ್ಲಿ ವಿಷವನ್ನು ತಿಂದು ಸತ್ತನು.

ವ್ಯಭಿಚಾರಿಣಿಯಾದ ಅವಳು ರಾಜನಿಂದ ಭಯವುಳ್ಳವಳಾಗಿ ಮನಸ್ಸಿನಲ್ಲಿ ಅಭಿಪ್ರಾಯವಿಲ್ಲದಿದ್ದರೂ ಜನರೆಲ್ಲರನ್ನು ಮೆಚ್ಚಿಸುವುದಕ್ಕಾಗಿ ನಾನು ಸಹಗಮವನ್ನು ಮಾಡುವೆನೆಂದು ಹೇಳಿದಳು. ಆಗ ಅವಳ ಸಖಿಯರಾದ ಅನೇಕ ಹೆಂಗಸರು ಬಂದು ಸಹಗಮವನ್ನು ಮಾಡಬಾರದೆಂದು ಬಹಳವಾಗಿ ನಿರ್ಬಂಧ ಮಾಡಿದರು. ತರುವಾಯ ಅವಳು ಸಮಗಮನವನ್ನು ಮಾಡದೆ ಮಗನಿಂದ ಮೃತನಾದವನಿಗೆ ಉತ್ತರಕ್ರಿಯೆಯನ್ನು ಮಾಡಿಸಿದಳು. ಸ್ವಲ್ಪ ವಯಸ್ಸಾದ ಮೇಲೆ ವಿಟಪುರುಷನು ಕೊಟ್ಟ ಹಣದಿಂದ ಮಗನಿಗೆ ಬ್ರಾಹ್ಮಣರಿಂದ ಉಪನಯನವನ್ನು ಮಾಡಿಸಿದಳು. ಗಂಡನಿರುವಾಗಲೇ ಪರಪುರುಷನಿಂದ ಹುಟ್ಟಿದವನಾದ ಆ ಮಗನು ಬಾಲ್ಯದಲ್ಲಿಯೇ ತತ್ವಜ್ಞಾನವುಳ್ಳವನಾಗಿ ಮನೆಯಿಂದ ಹೊರಟುಹೋದನು. ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿದ್ದನು. ಅವನು ಸಜ್ಜನರ ಸಹವಾಸವನ್ನು ಹೊಂದಿ ಉತ್ತಮಲೋಕವನ್ನು ಹೊಂದಿದನು. ತಾಯಿಯು ಮಗನು ಹೊರಟುಹೋದ ಮೇಲೆ ಸ್ವಲ್ಪ ದುಃಖಪಟ್ಟಳು. ಅದೇ ದಿವಸವೇ ಮತ್ತು ವಿಟಪುರುಷನ ಸಂಬಂಧವನ್ನು ಮಾಡಿದಳು. ಹೀಗೆಯೇ ಅವಳು ಕ್ರಮದಿಂದ ಮುದುಕಿಯಾದಳು. ಆಗ ಅವಳನ್ನು ವಿಟಪುರುಷರೆಲ್ಲರೂ ಬಿಟ್ಟುಬಿಟ್ಟರು. ಆಮೇಲೆ ಇನ್ನೊಬ್ಬರಿಗೆ ದಾಸಿಯಾದಳು. ಒಬ್ಬ ಬ್ರಾಹ್ಮಣನ ಗೋವನ್ನು ಕರುವನ್ನು ಅಪಹರಿಸಿದಳು. ಅದನ್ನು ಸ್ವಲ್ಪ ಹಣಕ್ಕೆ ಮಾರಿದಳು. ಹೀಗೆಯೇ ಸ್ವಲ್ಪ ಕಾಲವನ್ನು ಕಳೆದಳು. ಆಮೇಲೆ ಅವಳ ಮೈಯಲ್ಲಿ ಎಲ್ಲಾ ಕುಷ್ಠರೋಗವು ಬಂದಿತು. ಅದರಿಂದ ಕೈಕಾಲು ಮೂಗೂ ಬಿದ್ದು ಹೋಯಿತು. ತರುವಾಯ ಒಬ್ಬಳು ದಾಸಿಯು ಅಂಗಡಿಬೀದಿಯಲ್ಲಿ ತಂದುಕೂತುಕೊಳ್ಳಿಸಿದಳು. ಅಲ್ಲಿ ಎಲ್ಲರೂ ಅವಳನ್ನು ನೋಡಿ ಧಿಕ್ಕಾರ ಮಾಡುತ್ತಿದ್ದರು. ಅವಳು ಹಾಗೆಯೇ ಬೇಡಿ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದಳು. ಒಂದು ದಿವಸದಲ್ಲಿ ಒಬ್ಬ ಬ್ರಾಹ್ಮಣನು ಅವಳಿದ್ದಲ್ಲಿಗೆ ಬಂದು ಅವಳನ್ನು ನೋಡಿ 'ಜನರಿಗೆ ಪಾಪವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ದುಃಖಕ್ಕೆ ಕಾರಣವಾಗುವುದು. ಆದುದರಿಂದ ದುಃಖದ ಭಯವುಳ್ಳ ಯಾರೊಬ್ಬರೂ ಪಾಪವನ್ನು ಮಾಡಬಾರದು. ಯಾರು ಪಾಪವನ್ನು ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವನೋ ಆಮೇಲೆ ಆ ಪಾಪವನ್ನು ಮಾಡಲಾರನೋ ಅವನು ಪಾಪದ ಫಲವನ್ನು ಹೊಂದುವುದಿಲ್ಲ. ಯಾರು ಪಾಪವನ್ನು ಮಾಡಿ ಪ್ರಾಯಶ್ಚಿತ್ತವನ್ನೇ ಮಾಡಿಕೊಳ್ಳುವುದಿಲ್ಲವೋ ಅವನಿಗೆ, ಇವಳಿಗೆ ಆದಂತೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಆಗುವುದು. ಸರ್ವಶಾಸ್ತ್ರಗಳಲ್ಲಿ ಸರ್ವಪಾಪಗಳಿಗೆ ಪ್ರಾಯಶ್ಚಿತ್ತವನ್ನು ಹೇಳಿರುವರು. ತಮ್ಮ ಧರ್ಮವನ್ನು ಬಿಟ್ಟ ಹೆಂಗಸರಿಗೆ ಮಾತ್ರ

ಪ್ರಾಯಶ್ಚಿತ್ತವಿರುವುದಿಲ್ಲ! ಎಂದು ಹೇಳಿ ಅವಳನ್ನು ನೋಡಿದ್ದಕ್ಕೆ ಸೂರ್ಯನನ್ನು ನೋಡಿ ನಮಸ್ಕರಿಸಿ ಭಗವಂತನನ್ನು ಸ್ಮರಿಸುತ್ತಾ ಹೋದನು.

ಈರೀತಿಯಾಗಿ ಅವಳು ತಾನು ಸಂಪಾದಿಸಿದ ಕರ್ಮದ ಫಲವನ್ನು ಅನುಭವಿಸುತ್ತಾ ಕೆಲವು ದಿವಸಗಳಲ್ಲಿಯೇ ಮೃತಳಾದಳು. ಅವಳ ಹೆಣಕ್ಕೆ ಸಂಸ್ಕಾರವನ್ನು ಒಬ್ಬರೂ ಮಾಡಲಿಲ್ಲ. ಚಂಡಾಲರು ಅವಳ ಹೆಣದ ತಲೆಕೂದಲು ಹಿಡಿದುಕೊಂಡು ಸೆಳೆದುಕೊಂಡು ಹೋಗಿ ಊರಿನ ಹೊರಗೆ ಹಾಕಿದರು. ಅವಳ ಮರಣಸಮಯದಲ್ಲಿ ಯಮದೂತರು ಬಂದು ಅವಳನ್ನು ಯಾತನಾದೇಹದಲ್ಲಿ ಪ್ರವೇಶ ಮಾಡಿಸಿ ಯಮದೇವರ ಬಳಿಗೆ ಕರಕೊಂಡು ಹೋದರು. ಧರ್ಮಿಷ್ಠರಿಗೆ ಶಾಂತವಾಗಿಯೂ ಪಾಪಿಗಳಿಗೆ ಉಗ್ರರಾಗಿಯೂ ಇರುವ ಯಮದೇವರು ಅವಳನ್ನು ನೋಡಿ ತುಂಬಾ ಉಗ್ರ ರಾದರು. ಭೃತ್ಯರೊಡನೆ 'ಇವಳನ್ನು ಎಳೆದುಕೊಂಡು ಹೋಗಿ ರೌರವನರಕದಲ್ಲಿ ಹಾಕಿರಿ' ಎನ್ನಲು ಅವರು ಹಾಗೆಯೇ ಅವಳನ್ನು ರೌರವ ನರಕದಲ್ಲಿ ಹಾಕಿದರು. ತಲೆಕೆಳಗಾಗಿ ಅವಳನ್ನು ತಳ್ಳಿದರು. ಅವಳು ಒಂದು ಮನ್ವಂತರ ರೌರವನರಕದಲ್ಲಿ ಇದ್ದು ತರುವಾಯ ಸ್ಮಶಾನದಲ್ಲಿ ಹೆಣದ ಮಾಂಸವನ್ನು ತಿನ್ನುವ ಒಂದು ಹಲ್ಲಿಯಾಗಿ ಹುಟ್ಟಿದಳು.

ಅಲ್ಲಿಯೂ ನೂರು ವರ್ಷಕಾಲ ತನ್ನ ಪಾಪದ ಫಲವಾದ ದುಃಖವನ್ನು ಹೊಂದಿದಳು. ಒಂದು ಸಮಯದಲ್ಲಿ ಪೂರ್ವದಲ್ಲಿ ಆ ವ್ಯಭಿಚಾರಿಣಿಯ ಮಗನಾಗಿ ಹುಟ್ಟಿದವನು ಬ್ರಾಹ್ಮಣನಾಗಿ ಹುಟ್ಟಿದನು. ಅವನು ಆ ಸ್ಮಶಾನದಲ್ಲಿ ಸಂಚರಿಸುತ್ತಾ ಹೆಣದ ಮಾಂಸವನ್ನು ತಿನ್ನುತ್ತಿದ್ದ ಆ ಹಲ್ಲಿಯನ್ನು ನೋಡಿ ಸ್ವಲ್ಪ ಹೊತ್ತು ಧ್ಯಾನಮಾಡಿ ಅದು ತನ್ನ ಪೂರ್ವಜನ್ಮದ ತಾಯಿಯೆಂದು ತಿಳಿದು, ಅವಳು ಅನುಭವಿಸಿದ ದುಃಖಗಳನ್ನು ತಿಳಿದುಕೊಂಡು ಇನ್ನು ಮೇಲೆ ಅವಳಿಗೆ ಉತ್ತಮತೀರ್ಥದಲ್ಲಿ ಮರಣದಿಂದಲೋ ಪರಮಾತ್ಮನನ್ನು ಮರೆ ಹೊಂದುವುದರಿಂದಲೋ ತಾನು ಗಯೆಯಲ್ಲಿ ಪಿಂಡಪ್ರದಾನವನ್ನು ಮಾಡುವುದರಿಂದಲೋ ಹೊರತು ಎಷ್ಟು ಕಲ್ಪಗಳಾದರೂ ಪಾಪವು ಪರಿಹೃತವಾಗಲಾರದೆಂದು ತಿಳಿದುಕೊಂಡು ಇವಳಿಗೆ ಉತ್ತಮ ತೀರ್ಥದಲ್ಲಿ ಮರಣವಾಗಲೀ, ಪರಮಾತ್ಮನನ್ನು ಮರೆಹೊಂದುವುದಾಗಲೀ ಆಗಲಾರದು. ಆದುದರಿಂದ ನಾನು ಗಯೆಯಲ್ಲಿ ಶ್ರಾದ್ಧವನ್ನು ಮಾಡುವೆನು' ಎಂದು ಯೋಚಿಸಿದನು.

ತರುವಾಯ ಅವನು ತನ್ನ ಆ ಜನ್ಮದ ತಂದೆಯ ಆಶ್ರಮಕ್ಕೆ ಹೋಗಿ ಸಮಸ್ತವಾದ ತನ್ನ ಪೂರ್ವಜನ್ಮದ ತಾಯಿಯ ದುಃಖವನ್ನು ತಿಳಿಸಿದನು. ಅದನ್ನು ಕೇಳಿ

ತಂದೆಯು 'ಮಗ! ನೀನು ನಿನ್ನ ತಾಯಿಯನ್ನು ದುರ್ಗತಿಯಿಂದ ಬಿಡಿಸು. ಮಗನು ತಾಯಿಯನ್ನು ತಂದೆಯನ್ನು ನರಕದಿಂದ ಬಿಡಿಸಲಿಕ್ಕೆ ಸಮರ್ಥನಾಗಿದ್ದುಕೊಂಡು ಬಿಡಿಸುವುದಿಲ್ಲವೋ ಅವನು ನರಕವನ್ನು ಹೊಂದುವನು. ಪಿತೃಗಳು ಮಗನಿಂದ ಪಿಂಡವನ್ನೂ ಜಲವನ್ನೂ ತೀರ್ಥಶ್ರೇಷ್ಠದಲ್ಲಿ ಹೊಂದಿ ನರಕದಿಂದ ಸ್ವರ್ಗವನ್ನು ಹೊಂದುವರು. ಸ್ವರ್ಗದಿಂದ ಉತ್ತಮಲೋಕವನ್ನು ಹೊಂದುವರು. ಆದುದರಿಂದ ನೀನು ಬೇಗನೇ ಹೋಗು. ಖಾಂಡವವನದಲ್ಲಿ ಯಮುನಾನದಿಯು ಹರಿಯುತ್ತಿರುವುದು. ಅದರ ತೀರದಲ್ಲಿ ಸರ್ವತೀರ್ಥಮಯವಾದ ಇಂದ್ರಪ್ರಸ್ಥವಿರುವುದು. ಅಲ್ಲಿ ಪರಮಾತ್ಮನಿಂದ ಸ್ಥಾಪಿತವಾದ ಪವಿತ್ರವಾದ ಮಧುವನವಿರುವುದು. ಅಲ್ಲಿ ವಿಧಿ ಪ್ರಕಾರವಾಗಿ ಸ್ನಾನ ಮಾಡಿ ನಿನ್ನ ತಾಯಿಯನ್ನು ಕುರಿತು ಶ್ರಾದ್ಧವನ್ನು ಮಾಡು. ನೀನು ಅಲ್ಲಿ ಶ್ರಾದ್ಧವನ್ನು ಮಾಡಿದರೆ ನಿನ್ನ ತಾಯಿಯು ಹಲ್ಲಿಯ ಜನ್ಮವನ್ನು ಬಿಟ್ಟು ಉತ್ತಮಲೋಕವನ್ನು ಹೊಂದುವಳು. ಗಯೆಯಲ್ಲಿ ಪಿಂಡಪ್ರದಾನ ಮಾಡಿದರೆ ಏನು ಪುಣ್ಯವು ಬರುವುದೋ ಅದಕ್ಕಿಂತ ನೂರುಪಾಲು ಅಧಿಕವಾದ ಪುಣ್ಯವು ಮಧುವನದಲ್ಲಿ ಸಿಗುವುದು. ಈಗ ಕನ್ಯಾರಾಶಿಯಲ್ಲಿ ಬೃಹಸ್ಪತ್ಯಾಚಾರ್ಯರು ಇರುವರು. ಮಗನೇ! ನೀನು ಹೇಗಿ ನಿನ್ನ ಪೂರ್ವಬಂಧುಗಳನ್ನು ಕುರಿತು ಶ್ರಾದ್ಧವನ್ನು ಮಾಡು' ಎಂದು ಹೇಳಿದನು.

ತರುವಾಯ ಅವನು ಮಧುವನಕ್ಕೆ ಹೋಗಿ ಅಲ್ಲಿದ್ದ ಬ್ರಾಹ್ಮಣರನ್ನು ಕೂಗಿ ವಿಧಿ ಪ್ರಕಾರವಾಗಿ ಶ್ರಾದ್ಧವನ್ನು ಮಾಡಿ ತಂದೆಯ ಆಶ್ರಮಕ್ಕೆ ಹೊರಟುಹೋದನು. ಆಗ ದಾರಿಯಲ್ಲಿ ಅವನ ಪೂರ್ವಪಿತೃಗಳು ಆರುಜನರು ದಿವ್ಯಾಭರಣಗಳಿಂದ ಅಲಂಕೃತರಾಗಿ ಆರು ವಿಮಾನದಲ್ಲಿ ಕೂತುಕೊಂಡು ದಿವ್ಯವಸ್ತ್ರವನ್ನು ಧರಿಸಿಕೊಂಡವರಾಗಿ ಬಂದು ಅವನೊಡನೆ 'ಮಗ! ನೀನು ತೀರ್ಥದಲ್ಲಿ ಶ್ರಾದ್ಧವನ್ನು ಮಾಡಿದ್ದರಿಂದ ನಾವು ಉದ್ಧೃತರಾಗಿರುವೆವು. ನಾವು ಪರಮಾತ್ಮನ ಅನುಗ್ರಹದಿಂದ ಉತ್ತಮಲೋಕವನ್ನು ಹೊಂದಿರುವೆವು. ನಿನಗೆ ಬೇಕಾದ ಇಷ್ಟವನ್ನು ಕೇಳಿಕೊ' ಎಂದು ಕೇಳಿದನು. ಅದನ್ನು ಕೇಳಿ ವಿಷವನ್ನು ತಿಂದು ಮರಣವನ್ನು ಹೊಂದಿದ್ದ ಪೂರ್ವಜನ್ಮದ ತಂದೆಯು 'ನಾನು ಪೂರ್ವಜನ್ಮದಲ್ಲಿ ನಿನ್ನ ತಂದೆಯಾಗಿದ್ದ ಬ್ರಾಹ್ಮಣನು. ವ್ಯಭಿಚಾರಿಣಿಯಾದ ನಿನ್ನ ತಾಯಿಯಿಂದ ತುಂಬಾ ಪೀಡಿತನಾಗಿ ಅತ್ಯಂತ ದುಃಖವುಳ್ಳವನಾಗಿ ರಾತ್ರಿಯಲ್ಲಿ ವಿಷವನ್ನು ತಿಂದು ಅಪಮೃತ್ಯುವನ್ನು ಹೊಂದಿದೆನು. ಆದರಿಂದ ರಾಕ್ಷಸನಾದೆನು. ರಾಕ್ಷಸ ಜನ್ಮದಲ್ಲಿ ಒಂದು ಮನ್ವಂತರವೂ ನೂರ ಹದಿನೈದು ವರ್ಷಗಳೂ ಕಳೆದುಹೋದವು. ಈಗ ನೂರಹದಿನಾರನೇ ವರ್ಷದಲ್ಲಿ ಪವಿತ್ರವಾದ ಮಧುವನ

ದಲ್ಲಿ ನೀನು ಶ್ರಾದ್ಧಮಾಡಿದೆ. ಇದರಿಂದ ನಾನು ದಿವ್ಯದೇಹವುಳ್ಳವನಾಗಿರುವೆನು. ಇಂದ್ರದೇವರು ಕಳುಹಿಸಿದ ಈ ವಿಮಾನವು ನನಗಾಗಿ ಸ್ವರ್ಗದಿಂದ ಬಂದಿರುವುದು. ನಾನು ಅಪ್ಸರಸ್ತ್ರೀಯರಿಂದ ಸಹಿತನಾಗಿ ವಿಮಾನವನ್ನು ಏರಿ ಸ್ವರ್ಗಕ್ಕೆ ಹೋಗುವೆನು. ನಿನಗೆ ವರವನ್ನು ಕೊಡಲಿಕ್ಕಾಗಿ ಇಲ್ಲಿಗೆ ಬಂದಿರುವೆನು. ಬೇಗನೇ ವರವನ್ನು ಕೇಳು. ನಾವು ಬೇಗನೇ ಹೋಗಬೇಕು. ಇಂದ್ರದೇವರು ಐರಾವತದಲ್ಲಿ ಕೂತುಕೊಂಡು ನಮ್ಮನ್ನು ಎದುರು ನೋಡುತ್ತಿದ್ದಾರೆ' ಎಂದು ಹೇಳಿದನು. ಆಗ ಮುನಿಪುತ್ರನು ತನಗೆ ಪರಮಾತ್ಮನಲ್ಲಿ ಭಕ್ತಿಯನ್ನು ಕೊಡಿ' ಎಂದು ಹೇಳಲು ಅವನು ಹಾಗೆಯೇ ಆಗಲಿ ಎಂದು ಹೇಳಿ ಸ್ವರ್ಗಕ್ಕೆ ಹೊರಟುಹೋದನು.

ತರುವಾಯ ಪೂರ್ವಜನ್ಮದ ತಾಯಿಯು 'ನಿನ್ನ ಅನುಗ್ರಹದಿಂದ ನಾನು ಪಾಪದಿಂದ ರಹಿತಳಾಗಿರುವೆನು. ನಾನೀಗ ಶಚೀದೇವಿಯ ಸಖಿತ್ವವನ್ನು ಹೊಂದಿರು ವೆನು. ನೀನು ಬೇಕಾದ ವರವನ್ನು ಕೇಳು. ಈಗ ನಮ್ಮ ಮಾತು ಸುಳ್ಳಾಗುವುದಿಲ್ಲ. ನಾನು ಯಾವ ಪಾಪದಿಂದ ಹಲ್ಲಿಯಾಗಿ ಹುಟ್ಟಿದೆನೋ ಬಹುಕಾಲ ನರಕದಲ್ಲಿ ಇದ್ದೆನೋ ಅದೆಲ್ಲವನ್ನು ನೀನು ತಿಳಿದಿರುವವನಾಗಿರುವಿ. ನನಗೆ ಅನುಜ್ಞೆಯನ್ನು ಕೊಡು. ನನ್ನನ್ನೂ ಶಚೀದೇವಿಯರು ಎದುರು ನೋಡುತ್ತಿರುವರು' ಎಂದು ಹೇಳಿದಳು. ಯಾವ ಫಲವನ್ನು ಅಪೇಕ್ಷಿಸದ ಮಗನಿಗೆ ಆಶೀರ್ವಾದ ಮಾಡಿ ಹೊರಟುಹೋದಳು.

ಅವರಿಬ್ಬರೂ ಹೊರಟುಹೋದಮೇಲೆ ಪಿತಾಮಹನು 'ಮಗು! ಬಹುಕಾಲ ಸುಖವಾಗಿರು. ನಿನ್ನ ಅನುಗ್ರಹದಿಂದ ನಾವು ಸಂಸಾರಸಮುದ್ರವನ್ನು ದಾಟಿದೆವು. ನಾನು ನಿನ್ನ ಪಿತಾಮಹನು. ಇವಳು ನಿನ್ನ ಪಿತಾಮಹಿಯು. ನಾನು ಮೃತನಾಗಲು ಇವಳು ಸಹಗಮನವನ್ನು ಮಾಡಿರುವಳು. ನೀನು ವಿಶ್ರಾಂತಿತೀರ್ಥದಲ್ಲಿ ಶ್ರಾದ್ಧವನ್ನು ಮಾಡಿದ ಕಾರಣ ಉತ್ತಮಲೋಕವನ್ನು ಹೊಂದಿದೆವು' ಎಂದು ಹೇಳಿ ಪತ್ನೀಸಹಿತನಾಗಿ ಉತ್ತಮವಾದ ಲೋಕವನ್ನು ಹೊಂದಿದನು.

ಆಮೇಲೆ ಅವನ ಪ್ರಪಿತಾಮಹನು 'ವತ್ಸ! ನಾನು ನಿನ್ನ ಪ್ರಪಿತಾಮಹನು. ಭ್ರೂಣಹತ್ಯಾದೋಷದಿಂದ ಹಂದಿಯಾಗಿ ಹುಟ್ಟಿದೆನು. ಆಮೇಲೆ ನಾಯಿಯಾದೆನು. ಆಮೇಲೆ ವಿಂಧ್ಯಪರ್ವತದಲ್ಲಿ ಮರವಾಗಿ ಹುಟ್ಟಿದೆನು. ಬಹಳ ಸಮಯ ಮರವಾಗಿ ಇದ್ದೆನು. ಆಮೇಲೆ ಒಂದು ಆನೆಯು ನನ್ನನ್ನು ಬೇರು ಸಹಿತವಾಗಿ ಕಿತ್ತು ಹಾಕಿತು. ಆ ಸಮಯದಲ್ಲಿಯೇ ನೀನು ಶ್ರಾದ್ಧವನ್ನು ಮಾಡಿದಿ. ಆದರಿಂದ ನನಗೆ ಮರದ ಜನ್ಮವು ಹೋಯಿತು. ನನಗೆ ಕುಬೇರನ ನಗರದಲ್ಲಿ ವಾಸವು ಲಭಿಸಿರುವುದು. ನಾನು

ಹೋಗುತ್ತೇನೆ. ಅನುಜ್ಞೆಯನ್ನು ಕೊಡು. ನಿನ್ನನ್ನು ನೋಡುವುದಕ್ಕಾಗಿಯೇ ಇಲ್ಲಿಗೆ ಬಂದೆನು. ಪವಿತ್ರವಾದ ನಿನ್ನನ್ನು ನೋಡಿದೆನು. ಶ್ರೇಷ್ಠವಾದ ಮಧುವನವನ್ನು ನೋಡಿದೆನು' ಎಂದು ಹೇಳಿದನು.

ಮುನಿಪುತ್ರನು 'ಬ್ರಾಹ್ಮಣಕುಲದಲ್ಲಿ ಹುಟ್ಟಿದ ನಿಮಗೆ ಭ್ರೂಣಹತ್ಯೆಯು ಹೇಗೆ ಸಂಭವಿಸಿತು?' ಎಂದು ಕೇಳಿದನು. ಅದಕ್ಕೆ ಪ್ರಪಿತಾಮಹನು 'ನಾನು ಬ್ರಾಹ್ಮಣನಾಗಿರುವಾಗ ಮಂತ್ರಯಂತ್ರಗಳಿಂದ ಜೀವನವನ್ನು ಮಾಡುತ್ತಿದ್ದೆನು. ನಾನು ಹಣದ ಆಸೆಯಿಂದ ಹೆಂಗಸರಿಗೆ ಗರ್ಭನಾಶಕ್ಕೆ ಬೇಕಾದ ಔಷಧವನ್ನು ಕೊಡುತ್ತಿದ್ದೆನು. ಹಣದ ಲೋಭವುಂಟಾದರೆ ಎಲ್ಲಾ ಜ್ಞಾನವೂ ಹೋಗುವುದು. ಜ್ಞಾನವು ಹೋದರೆ ಜನರು ಪಾಪವನ್ನು ಮಾಡುವರು. ಪಾಪದಿಂದ ನರಕವನ್ನು ಹೊಂದಿ ಹೀನಯೋನಿಯನ್ನು ಹೊಂದುವನು. ಹಾಗೆಯೇ ನನ್ನ ಗತಿಯಾಯಿತು.

ಒಬ್ಬಳು ಗರ್ಭಿಣಿಯು ಬಂದು ನಾನು ಗಂಡನನ್ನು ಹಡೆಯುವೆನೋ? ಹೆಣ್ಣನ್ನು ಹಡೆಯುವೆನೋ ಎಂದು ಕೇಳಿದಳು. ಅದಕ್ಕೆ ನಾನು 'ನೀನು ಹೆಣ್ಣನ್ನು ಹಡೆಯುವಿ. ಬೇಕಾದರೆ ನಿನಗೆ ಗಂಡುಕೂಸಾಗುವಂತೆ ಮಹಾಔಷಧವನ್ನು ಕೊಡುವೆನು' ಎಂದು ಹೇಳಿದೆನು. ಆಗ ಅವಳು ನನ್ನ ಕಾಲನ್ನು ಹಿಡಿದು ನಮಸ್ಕರಿಸಿ ಒಂದು ಪಲತೂಕ ಬಂಗಾರವನ್ನು ಕೊಟ್ಟು 'ನನಗೆ ಆರು ಹೆಣ್ಣುಮಕ್ಕಳು ಹುಟ್ಟಿರುವುವು. ಈ ಏಳನೆಯದೂ ಹೆಣ್ಣಾದರೆ ನಾನು ಬದುಕಲಾರೆನು. ಆದುದರಿಂದ ನನಗೆ ಹೆಣ್ಣು ಹುಟ್ಟದಂತೆ ಮಾಡಬೇಕು' ಎಂದು ಹೇಳಿದಳು. ಅದಕ್ಕೆ ನಾನು 'ನೀನು ಮಗುವನ್ನು ಹಡೆಯುವ ಸಮಯದಲ್ಲಿ ಔಷಧವನ್ನು ಕೊಡುವೆನು' ಎಂದು ಹೇಳಿದೆನು. ಅವಳು ಹಾಗೆಯೇ ಆಗಲಿ ಎಂದು ಹೇಳಿ ನನ್ನ ಮಾತಿನಲ್ಲಿ ವಿಶ್ವಾಸವುಳ್ಳವಳಾಗಿ ಹೊರಟುಹೋದಳು. 'ಗಂಡು ಕೂಸನ್ನು ಹಡೆಯುವಂತೆ ಮಾಡಬೇಕೆಂದು ಇವಳು ನನಗೆ ಬಂಗಾರವನ್ನು ಕೊಟ್ಟಿರುವಳು. ನಾನು ಏನು ಮಾಡಲಿ? ಈ ಬಂಗಾರವು ನನಗೇ ಹೇಗೆ ಉಳಿಯುವುದು?' ಎಂದು ಯೋಚಿಸಿ ದಾಸಿಯ ಕೈಯಿಂದ ಗರ್ಭಸ್ರಾವವಾಗುವ ಔಷಧವನ್ನು ಕೊಟ್ಟು ಕಳುಹಿಸಿದೆನು. ಆ ಔಷಧದಿಂದ ಮೂರನೇ ತಿಂಗಳಲ್ಲಿಯೇ ಅವಳಿಗೆ ಗರ್ಭಸ್ರಾವವಾಯಿತು. ಕೂಸುಗಂಡೋ ಹೆಣ್ಣೋ ತಿಳಿಯಲಿಲ್ಲ.

ತರುವಾಯ ಗರ್ಭಸ್ರಾವದಿಂದ ವಿಷಾದವನ್ನು ಹೊಂದಿದ ಅವಳು ನನ್ನ ಬಳಿಗೆ ಬಂದು ಆ ಬಂಗಾರವನ್ನು ನನಗೆ ಕೊಟ್ಟುಬಿಡಿ ಎಂದು ಹೇಳಿದಳು. ಆಗ ನಾನು ಒಂದಿಷ್ಟು ಇಟ್ಟಿಗೆ ಕಲ್ಲಿನ ಪುಡಿಗೆ ಬೂದಿಯನ್ನು ಸೇರಿಸಿ ಅರಸಿನಪುಡಿಯನ್ನು ನೀರನ್ನೂ

ಹಾಕಿ 'ನೋಡು. ನಿನಗೆ ಮಗನಾಗುವಂತೆ ಮಾಡಲಿಕ್ಕೆ ಈ ಚೂರ್ಣವನ್ನು ಮಾಡಿರುವೆನು. ನೀನು ಕೊಟ್ಟ ಬಂಗಾರಕ್ಕಿಂತ ಎರಡುಪಾಲು ಅಧಿಕವಾಗಿ ಹಣವು ಈ ಚೂರ್ಣವನ್ನು ಮಾಡಲಿಕ್ಕೆ ವೆಚ್ಚವಾಗಿರುವುದು' ಎಂದು ಹೇಳಲು ಅವಳು ಕಾಲಾಂತರದಲ್ಲಿ ಈ ಚೂರ್ಣವನ್ನು ತೆಗೆದುಕೊಳ್ಳುವೆನು' ಎಂದು ಹೇಳಿ ಹೊರಟು ಹೋದಳು. ಈರೀತಿಯಾಗಿ ನಾನು ಭ್ರೂಣಹತ್ಯೆಯನ್ನು ಮಾಡಿರುವೆನು. ಆದರಿಂದ ದುಃಖಪಟ್ಟೆನು. ನನಗೆ ಅನುಜ್ಞೆಯನ್ನು ಕೊಡು. ಅಲಕಾಪಟ್ಟಣಕ್ಕೆ ಹೋಗುವೆನು' ಎಂದು ಹೇಳಿ ವಿಮಾನದಲ್ಲಿ ಕೂತುಕೊಂಡು ಉತ್ತರದಿಕ್ಕಿಗೆ ಹೋದನು.

ತರುವಾಯ ಪ್ರಪಿತಾಮಹಿಯೂ 'ವತ್ಸ! ನಿನ್ನ ಈ ಪ್ರಪಿತಾಮಹನು ನಾನು ಬೇಡವೆಂದರೂ ಪಾಪವನ್ನು ಮಾಡಿದ್ದರು. ನಿನ್ನಿಂದ ಉದ್ಧೃತರಾದರು. ನಿನ್ನ ಗುಣಗಳನ್ನು ವರ್ಣಿಸಲಿಕ್ಕೇ ಆಗಲಾರದು' ಎಂದು ಹೇಳಿ ಪತಿಯೊಡನೆ ಹೊರಟುಹೋದಳು. ಈರೀತಿಯಾಗಿ ಅವರೆಲ್ಲರೂ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋದರು.

ತರುವಾಯ ಆ ಮುನಿಪುತ್ರನು ತನ್ನ ಆ ಜನ್ಮದ ತಂದೆಯ ಆಶ್ರಮಕ್ಕೆ ಹೋಗಿ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ಆಗ ಅವನೂ ತನ್ನ ಕುಟುಂಬ ಸಹಿತವಾಗಿ ಮಧುವನಕ್ಕೆ ಬಂದು ವಿಶ್ರಾಂತಿತೀರ್ಥದ ಬಳಿಯಲ್ಲಿಯೇ ಪರ್ಣಶಾಲೆಯನ್ನು ಮಾಡಿಕೊಂಡನು. ಅವನು ಮೂರು ಹೊತ್ತಿನಲ್ಲಿಯೂ ವಿಶ್ರಾಂತಿತೀರ್ಥದಲ್ಲಿ ಸ್ನಾನವನ್ನು ಮಾಡುತ್ತಾ ವಿಷ್ಣುಲೋಕದಲ್ಲಿಯೂ ಆಸೆಪಡಲಿಲ್ಲ. ಒಂದು ದಿವಸದಲ್ಲಿ ನೀರಿನ ಮಧ್ಯದಲ್ಲಿ ಸ್ನಾನ ಮಾಡುತ್ತಿರುವಾಗ ಅವನು ತನಗೆ ದೇವರ ದರ್ಶನವು ಯಾವಾಗ ಆಗುವುದು? ಎಂದು ಯೋಚಿಸಿದನು. ಆಗಲೇ ಗರುಡಾರೂಢನಾಗಿ ಸರ್ವಾಭರಣಗಳಿಂದ ಅಲಂಕೃತನಾದ ಆಯುಧಗಳನ್ನು ಧರಿಸಿದ ಪರಮಾತ್ಮನು ಬಂದನು. ಪರಮಾತ್ಮನು 'ಬ್ರಾಹ್ಮಣನೇ! ನನಗೆ ಪ್ರಿಯವಾದ ಈ ಮಧುವನದಲ್ಲಿರುವ ಈ ವಿಶ್ರಾಂತಿತೀರ್ಥದಲ್ಲಿ ಸ್ನಾನಮಾಡುವಾಗ ನನ್ನ ದರ್ಶನವನ್ನು ಅಪೇಕ್ಷಿಸಿ. ಹಾಗೆಯೇ ನಾನು ನನ್ನ ದರ್ಶನವನ್ನು ಕೊಟ್ಟಿರುವೆನು. ಈ ಮನುಷ್ಯ ದೇಹವನ್ನು ಪರಿತ್ಯಜಿಸು. ದಿವ್ಯದೇಹವುಳ್ಳವನಾಗಿ ನನ್ನೊಡನೆ ನನ್ನ ಲೋಕಕ್ಕೆ ಬಾ' ಎಂದು ಹೇಳಿದನು. ಆಗ ಆ ಮುನಿಯು ಪರಮಾತ್ಮನನ್ನು ಸ್ತೋತ್ರ ಮಾಡಿ ಉದ್ದಕ್ಕೆ ನಮಸ್ಕಾರ ಮಾಡಿದನು. ಪರಮಾತ್ಮನು ಅವನನ್ನು ಕೈಗಳಿಂದ ಎಬ್ಬಿಸಿ ಕುಟುಂಬ ಸಹಿತನಾದ ಅವನನ್ನು ಕರಕೊಂಡು ವೈಕುಂಠಲೋಕಕ್ಕೆ ಹೋದನು. ಈರೀತಿಯಾಗಿ ಮಧುವನದ ಮಹಿಮೆಯು ಇರುವುದು.

# ಇಂದ್ರಪ್ರಸ್ಥದ ಮಹಿಮೆ[1]

ಒಂದು ಸಮಯದಲ್ಲಿ ವಿಶ್ವಾವಸು ಎಂಬ ಗಂಧರ್ವನು ಮೇರು ಪರ್ವತದಲ್ಲಿ ಇರುವ ಬ್ರಹ್ಮದೇವರ ಸಭೆಗೆ ಹೋದನು. ಅಲ್ಲಿ ಎಲ್ಲಾ ದೇವತೆಗಳ ಮಧ್ಯದಲ್ಲಿ ಉತ್ತಮವಾದ ಆಸನದಲ್ಲಿ ಕೂತಿದ್ದ ಬ್ರಹ್ಮದೇವರನ್ನು ನೋಡಿದನು. ಹಾಗೆಯೇ ಬ್ರಹ್ಮದೇವರ ಆಸನದ ಸಮೀಪದಲ್ಲಿಯೇ ಇದ್ದ ಎರಡನೇ ಬ್ರಹ್ಮದೇವರಂತೆ ಶೋಭಿಸುತ್ತಿದ್ದ ಇಂದ್ರಪ್ರಸ್ಥದ ಅಭಿಮಾನಿಯನ್ನು ನೋಡಿದನು. ಅವರಿಬ್ಬರಿಗೂ ಚಾಮರದಿಂದ ಬೀಸುತ್ತಿದ್ದರು. ಇತರ ತೀರ್ಥಾಭಿಮಾನಿಗಳೆಲ್ಲರೂ ಅವರ ದೂರದಲ್ಲಿ ಕೈಮುಗಿದುಕೊಂಡು ಇರುವುದನ್ನು ನೋಡಿದನು. ಬ್ರಹ್ಮದೇವರ ಮತ್ತು ಇಂದ್ರಪ್ರಸ್ಥಾಭಿಮಾನಿಗಳ ಮುಂದೆ ಚೆನ್ನಾಗಿ ಗಾನ ಮಾಡಿದನು. ಆಮೇಲೆ ಅಲ್ಲಿಂದ ಸತ್ಯಲೋಕಕ್ಕೆ ಹೋದವನಾಗಿ ಹಾಹಾ ಗಂಧರ್ವನೊಡನೆ 'ಗಂಧರ್ವಶ್ರೇಷ್ಠನೇ! ತೀರ್ಥಗಳಲ್ಲಿ ಇಂದ್ರಪ್ರಸ್ಥವು ಪರಮಶ್ರೇಷ್ಠವಾದದ್ದು. ಆ ತೀರ್ಥಾಭಿಮಾನಿಯು ಬ್ರಹ್ಮದೇವರ ಸಮೀಪದಲ್ಲಿ ಕೂತಿರುವುದನ್ನು ನೋಡಿರುವೆನು. ಭೂಮಿಯಲ್ಲಿ ಇರುವ ಎಲ್ಲಾ ತೀರ್ಥಗಳೂ ಧರ್ಮ ಅರ್ಥ ಕಾಮ ಎಂಬ ಮೂರು ಪುರುಷಾರ್ಥಗಳನ್ನೇ ಕೊಡುವುವು. ಇಂದ್ರಪ್ರಸ್ಥವು ಮಾತ್ರ ಮೋಕ್ಷಸಹಿತ ನಾಲ್ಕು ಪುರುಷಾರ್ಥಗಳನ್ನು ಕೊಡುವುದು. ಅಲ್ಲಿ ಇರುವ ತೀರ್ಥಗಳನ್ನು ಸ್ತೋತ್ರ ಮಾಡಲಿಕ್ಕೆ ಸಾಧ್ಯವಾಗಲಾರದು' ಎಂದು ಹೇಳಿದನು. ಆದುದರಿಂದ ಇಂದ್ರಪ್ರಸ್ಥವು ಅತ್ಯಂತ ಶ್ರೇಷ್ಠವಾದದ್ದು.

ಇದರ ಮಧ್ಯದಲ್ಲಿ ಇರುವ ಪ್ರಯಾಗವು ಅತ್ಯಂತ ಶ್ರೇಷ್ಠವಾದದ್ದು. ಅಲ್ಲಿ ಮೋಹಿನಿಯೆಂಬ ವೇಶ್ಯಾಸ್ತ್ರೀಗೆ ನಡೆದ ಮಹಿಮೆಯು ಅದ್ಭುತವಾಗಿರುವುದು. ನರ್ಮದಾನದಿಯ ತೀರದಲ್ಲಿ ಇರುವ ಮಾಹಿಷ್ಮತೀ ನಗರದಲ್ಲಿ ಮೋಹಿನಿಯೆಂದು ಹೆಸರುಳ್ಳ ವೇಶ್ಯೆಯಿದ್ದಳು. ಅವಳು ಬಹು ಹಣವಂತಳಾಗಿದ್ದಳು. ರೂಪ ಯೌವನವುಳ್ಳವಳಾಗಿದ್ದಳು. ನರ್ತನಗಾನಗಳಲ್ಲಿ ಆಸಕ್ತಳಾಗಿದ್ದಳು. ಅವಳು ಹಣದ ಆಸೆಯಿಂದ ಬಹುಪಾಪಗಳನ್ನು ಮಾಡಿದ್ದಳು. ಏಳು ಬ್ರಹ್ಮಹತ್ಯೆಯನ್ನು ಮಾಡಿದ್ದಳು. ಅನೇಕ ದಾಸಿಯರನ್ನು ಕೊಂದಿದ್ದಳು. ದಾಸಿಯರ ಗರ್ಭಪಾತವನ್ನು ಮಾಡಿಸಿದ್ದಳು. ಹೀಗೆಯೇ ಪಾಪಕರ್ಮಗಳಿಂದ ತನ್ನ ತಾರುಣ್ಯವನ್ನು ಕಳೆದಳು. ಆಮೇಲೆ ಮುದುಕಿಯಾದಳು. ಆಗ ಅವಳಿಗೆ ವಿಷಯದಲ್ಲಿ ವೈರಾಗ್ಯವುಂಟಾಯಿತು. ಅವಳು

1. ಪಾಂಡವರ ರಾಜಧಾನಿ (ಈಗಿನ ನವದೆಹಲಿ). ಪ.ಪು.ಉ.ಖಂ. ಅ-202

ಪುರುಷರ ಮೇಲೆ ಮನಸ್ಸಿಡಲಿಲ್ಲ. ಪುರುಷರೂ ಇವಳನ್ನು ಅಪೇಕ್ಷಿಸಲಿಲ್ಲ. ಪಾಪದಿಂದ ತಾನು ಸಂಪಾದಿಸಿದ ಹಣದಲ್ಲಿ ವಿಶ್ವಾಸವನ್ನು ಇಡಲಿಲ್ಲ.

ಒಂದು ದಿವಸದಲ್ಲಿ ರಾತ್ರಿಯಲ್ಲಿ ಎದ್ದು 'ನಾನು ಬಹುಪಾಪ ಮಾಡಿ ಸಂಪಾದಿಸಿರುವ ಈ ಹಣವನ್ನು ನಾನು ಮೃತಳಾದ ಮೇಲೆ ಯಾರು ಅಪಹರಿಸು ವರೋ ಈ ಹಣದಿಂದಾಗಿ ನಾನು ಘೋರವಾದ ನರಕವನ್ನು ಹೊಂದುವೆನು. ದಾಸಿಯರೂ ಅವರ ಪತಿಗಳು ಈ ಹಣವನ್ನು ಅನುಭವಿಸುವರು. ಆದುದರಿಂದ ನಾನೇ ಈಗ ಆ ಹಣವನ್ನು ಸರಿಯಾಗಿ ಉಪಯೋಗಿಸುವೆನು'. ಈರೀತಿಯಾಗಿ ಯೋಚಿಸಿ ಧರ್ಮಮಾಡುವ ಬುದ್ಧಿಯುಳ್ಳವಳಾಗಿ ಧರ್ಮಕ್ಕೆ ಬಾವಿ ಸರೋವರ ದೇವಾಲಯ ಮೊದಲಾದವುಗಳನ್ನು ಮಾಡಿಸಿದಳು–ಬೇಸಿಗೆ ಕಾಲದಲ್ಲಿ ಎಲ್ಲಿ ನೋಡಿದರೂ ದಾರಿಯಲ್ಲಿ ಹೋಗುವವರಿಗೆ ನೀರು ಕೊಡುವಂತೆ ವ್ಯವಸ್ಥೆಯನ್ನು ಮಾಡಿದಳು. ಅಲ್ಲಲ್ಲಿ ಅನ್ನದ ಛತ್ರಗಳನ್ನು ಇಟ್ಟಳು. ಪರಸ್ಥಳದವರು ವಾಸಮಾಡಲಿಕ್ಕೆ ಧರ್ಮಶಾಲೆಯನ್ನು ಕಟ್ಟಿಸಿದಳು. ಈಪ್ರಕಾರವಾಗಿ ಮಾಡಿದ ಮೋಹಿನಿಗೆ ಜ್ವರವು ಬಂದಿತು. ಆಗ ಅವಳು 'ತಾನು ಇಷ್ಟು ಧರ್ಮಕಾರ್ಯಗಳನ್ನು ಮಾಡಿದರೂ ಇನ್ನು ನನ್ನ ಕೈಯಲ್ಲಿ ಬಹಳವಾದ ಬಂಗಾರ ಬೆಳ್ಳಿಗಳು ಇವೆ. ಅವುಗಳನ್ನು ಬ್ರಾಹ್ಮಣರಿಗೆ ಕೊಡುವೆನು' ಎಂದು ಯೋಚಿಸಿ ಊರಲ್ಲಿ ಇದ್ದ ಬ್ರಾಹ್ಮಣರೆಲ್ಲರನ್ನೂ ಕೂಗಿದಳು. ಆದರೆ ಅವರೆಲ್ಲರೂ ವೇಶ್ಯೆಯ ಕೈಯಿಂದ ದಾನವನ್ನು ಪಡೆಯುವುದು ಮಹಾಪಾಪಕರವೆಂದು ತಿಳಿದುಕೊಂಡು ಒಬ್ಬರೂ ಬರಲಿಲ್ಲ.

ತರುವಾಯ ಅವಳು ಇದ್ದ ಹಣವೆಲ್ಲವನ್ನು ಎರಡು ಭಾಗಮಾಡಿ ಒಂದು ಭಾಗವನ್ನು ತನ್ನ ದಾಸಿಯರಿಗೆ ಕೊಟ್ಟಳು. ಮತ್ತೊಂದು ಭಾಗವನ್ನು ಪರಸ್ಥಳದವರಿಗೆ ಕೊಟ್ಟಳು. ಹೀಗೆ ಮಾಡಿ ಅವಳು ದರಿದ್ರಳಾದಳು. ಆಗ ಹಣವನ್ನು ಪಡೆದ ದಾಸಿಯರು ಇವಳು ಜ್ವರದಿಂದ ಬದುಕಿದರೆ ತಮ್ಮ ಹಣವನ್ನು ಕೇಳುವಳೋ ಏನೋ ಎಂದು ಸಂದೇಹವುಳ್ಳವರಾಗಿ ಎಲ್ಲರೂ ಅವಳನ್ನು ಬಿಟ್ಟುಹೋದರು. ಮೋಹಿನಿಯು ಜ್ವರದಿಂದ ಹದಿನೆಂಟು ದಿವಸ ಮಲಗಿದ್ದಳು. ಆಮೇಲೆ ಜ್ವರವು ಪರಿಹೃತವಾಯಿತು. ಜರದ್ಗವಾ ಎಂಬ ದಾಸಿಯು ಮಾತ್ರ ಅವಳಿಗೆ ಪಥ್ಯವನ್ನು ಹಾಕುತ್ತಾ ರಕ್ಷಣೆ ಮಾಡುತ್ತಾ ಬಂದಳು.

ಸ್ವಲ್ಪ ದಿವಸವಾಗಲು ಮೋಹಿನಿಯು ಸ್ವಸ್ಥಳಾದಳು. ಲಜ್ಜೆಯುಳ್ಳವಳಾಗಿ ಆ ದಾಸಿಯ ಮನೆಯಲ್ಲಿಯೇ ಭೋಜನ ಮಾಡುತ್ತಿದ್ದಳು. 'ನಾನು ಸುಖದಿಂದ ಇದ್ದವಳು. ಈಗ ದುಃಖವನ್ನು ಹೊಂದಿದೆನು. ದರಿದ್ರಳಾಗಿ ನಾನು ಇಲ್ಲಿ ಇರಬಾರದು'

ಎಂದು ಯೋಚಿಸಿಕೊಂಡು ಅಲ್ಲಿಂದ ಬೇರೆ ಸ್ಥಳಕ್ಕೆ ಹೋದಳು. ಅವಳು ಕಾಡಿನಲ್ಲಿ ಹೋಗುತ್ತಿರಲು ಇವಳ ಕೈಯಲ್ಲಿ ಹಣವಿರುವುದೆಂದು ತಿಳಿದುಕೊಂಡು ಕಳ್ಳರು ಬಂದು ಅವಳನ್ನು ಚೆನ್ನಾಗಿ ಬಡಿದು ಹಾಕಿದರು. ಅವಳ ಕೈಯಲ್ಲಿ ಹಣವು ಸಿಗದೆ ಇರಲು ಚೆನ್ನಾಗಿ ಪೆಟ್ಟು ತಿಂದು ಶ್ವಾಸಬಿಡುತ್ತಿರುವ ಅವಳನ್ನು ಆ ಕಾಡಿನಲ್ಲಿಯೇ ಬಿಟ್ಟು ಹೊರಟುಹೋದರು. ತರುವಾಯ ಒಬ್ಬ ಬ್ರಾಹ್ಮಣನು ಪ್ರಯಾಗದ ನೀರನ್ನು ಕಮಂಡಲುವಿನಲ್ಲಿ ಇಟ್ಟುಕೊಂಡು ಆ ಅರಣ್ಯದಲ್ಲಿ ಬಂದನು. ಅಲ್ಲಿ ಮೈಯೆಲ್ಲಾ ಗಾಯವಾಗಿ ಬಿದ್ದಿದ್ದ ಅವಳನ್ನು ನೋಡಿದನು. ಕೈಯ ಸಂಜ್ಞೆಯಿಂದ ನೀರು ಬೇಕೆಂದು ಅವಳು ಯಾಚಿಸಿದಳು. 'ನಿನ್ನನ್ನು ಯಾರು ಬಡೆದುಹಾಕಿದರು? ಒಬ್ಬಳೇ ಜನಸಂಚಾರ ರಹಿತವಾದ ಈ ಅರಣ್ಯಕ್ಕೆ ಯಾಕೆ ಬಂದಿರುವಿ? ನಿನ್ನ ಯಾವುದೋ ಪುಣ್ಯದಿಂದ ಇಂದ್ರಪ್ರಸ್ಥದಲ್ಲಿರುವ ಪ್ರಯಾಗದ ನೀರನ್ನು ತಂದಿರುವೆನು. ನಿನ್ನ ಬಾಯಿಗೆ ಹಾಕುವೆನು' ಎಂದು ಹೇಳಲು ಅವಳು ಮಾತಾಡಲಿಕ್ಕೆ ಅಸಮರ್ಥಳಾಗಿ ನೀರನ್ನು ಕುಡಿಯುವುದಕ್ಕಾಗಿ ಬಾಯಿಯನ್ನು ತೆರೆದಳು. ಮನಸ್ಸಿನಲ್ಲಿ ತಾನು ರಾಜಪತ್ನಿಯಾಗಬೇಕೆಂದು ಭಾವಿಸಿದಳು. ಅವಳ ಬಾಯಿಯಲ್ಲಿ ಪ್ರಯಾಗದ ನೀರು ಬೀಳಲು ಅವಳು ಪ್ರಾಣಗಳನ್ನು ಬಿಟ್ಟಳು.

ಪ್ರಾಣಹೋಗುವ ಕಾಲದಲ್ಲಿ ತಾನು ರಾಜಪತ್ನಿಯಾಗಬೇಕೆಂದು ಆಸೆಪಟ್ಟಳಾದ ಕಾರಣ ಅವಳು ದ್ರಾವಿಡದೇಶದಲ್ಲಿ ವೀರವರ್ಮರಾಜನ ಪತ್ನಿಯಾಗಿ ಹುಟ್ಟಿದಳು. ಪರಮಸುಂದರಿಯಾಗಿದ್ದಳು. ತಂದೆಯು ಅವಳಿಗೆ ಹೇಮಾಂಗಿಯೆಂದು ಹೆಸರನ್ನು ಇಟ್ಟಿದ್ದನು. ಒಂದು ದಿವಸದಲ್ಲಿ ಅವಳು ತನ್ನ ಸಖಿಯಾದ ಕಲಾ ಎಂದು ಹೆಸರುಳ್ಳ ಮಂತ್ರಿಪುತ್ರಿಯ ಮನೆಗೆ ಹೋದಳು. ಅವಳಿಗೆ ಸಖಿಯು ಮಂಗಳಸ್ನಾನ ಮಾಡಿಸಿ ಭೋಜನ ಮಾಡಿಸಿದಳು. ತರುವಾಯ ಅವಳು ಉತ್ತಮ ಹೂಗಳನ್ನು ಮುಡಿದುಕೊಂಡು ಒಳ್ಳೇ ಸೀರೆಯನ್ನು ಧರಿಸಿಕೊಂಡು ತಾಂಬೂಲವನ್ನು ಭಕ್ಷಿಸುತ್ತಾ ಉತ್ತಮವಾದ ಆಸನದಲ್ಲಿ ಕೂತುಕೊಂಡು ಕಲೆಯೊಡನೆ ನಿನ್ನ ಮನೆಯಲ್ಲಿ ಇರುವ ಅದ್ಭುತವಾದ ವಸ್ತುವನ್ನು ತೋರಿಸಬೇಕೆಂದು ಹೇಳಿದಳು.

ಆಗ ಕಲೆಯು ಒಂದು ಬಂಗಾರದ ಪೆಟ್ಟಿಗೆಯನ್ನು ತಂದಳು. 'ಇದರಲ್ಲಿ ಒಂದು ಪುಸ್ತಕವಿದೆ. ಆ ಪುಸ್ತಕದಲ್ಲಿ ನಾನಾ ಚಿತ್ರಗಳಿವೆ ನೋಡು' ಎಂದು ಹೇಳಿದಳು. ಆಗ ರಾಜಪತ್ನಿಯು ದಾಸಿಯಿಂದ ಆ ಪೆಟ್ಟಿಗೆಯ ಬಾಗಿಲನ್ನು ತೆಗೆಸಿ ಪುಸ್ತಕವನ್ನು ಕೈಯಿಂದ ತೆಗೆದುಕೊಂಡಳು. ಪುಸ್ತಕದ ಒಳಗೆ ನೋಡಿದಳು. ಕ್ರಮದಿಂದ ಪರಮಾತ್ಮನ ಅವತಾರಚಿತ್ರಗಳನ್ನು ನೋಡಿದಳು. ಆಮೇಲೆ ಐವತ್ತುಕೋಟಿ ಯೋಜನ

ವಿಸ್ತಾರವುಳ್ಳ ಭೂಗೋಲವನ್ನು ಅದರಲ್ಲಿ ಅಂಧಂತಮಸ್ಸನ್ನು ಕಾಂಚನ ಭೂಮಿಯನ್ನು ಮಧ್ಯದಲ್ಲಿ ಲೋಕಾಲೋಕಪರ್ವತವನ್ನು ಏಳು ಸಮುದ್ರಗಳನ್ನು ಏಳು ದ್ವೀಪಗಳನ್ನು ನೋಡಿ ಭಾರತಖಂಡವನ್ನು ನೋಡುತ್ತಾ ಗಂಗಾಯಮುನಾ ಮೊದಲಾದ ನದಿಗಳನ್ನು ನೋಡಿದಳು. ಯಮುನಾತೀರದಲ್ಲಿರುವ ಇಂದ್ರಪ್ರಸ್ಥವನ್ನು ನೋಡಿದಳು. ಅಲ್ಲಿರುವ ಪ್ರಯಾಗವನ್ನು ನೋಡಲು ಅವಳಿಗೆ ಪೂರ್ವಜನ್ಮದ ಸ್ಮರಣೆಯೆಲ್ಲವೂ ಬಂದಿತು.

ತರುವಾಯ ಅಲ್ಲಿಂದ ಎದ್ದು ಸುಮ್ಮನೆ ಮನೆಗೆ ಹೋದಳು. ತನ್ನ ಪತಿಯಾದ ವೀರವರ್ಮರಾಜನೊಡನೆ 'ಪ್ರಾಣಪ್ರಿಯ! ನಾನು ಹೇಳಿದ ರೀತಿಯಾಗಿ ಧರ್ಮ ಕಾರ್ಯವನ್ನು ಮಾಡಿರಿ. ನಾನು ಪೂರ್ವಜನ್ಮದಲ್ಲಿ ಬಹುಪಾಪ ಮಾಡಿದವಳಾದ ಮೋಹಿನಿಯೆಂದು ಹೆಸರುಳ್ಳ ವೇಶ್ಯೆಯು. ಮದುಕಿಯಾದ ಮೇಲೆ ನನಗೆ ಸ್ವಲ್ಪ ಧರ್ಮವನ್ನು ಮಾಡಲಿಕ್ಕೆ ಮನಸ್ಸು ಉಂಟಾಯಿತು. ಪಾಪದಿಂದ ಸಂಪಾದಿಸಿದ ಹಣವೆಲ್ಲವನ್ನೂ ಧರ್ಮಕಾರ್ಯಕ್ಕೆ ಉಪಯೋಗಿಸಿ ದರಿದ್ರಳಾದೆನು. ತರುವಾಯ ನಾನು ಊರನ್ನು ಬಿಟ್ಟು ಕಾಡಿನಲ್ಲಿ ಹೋಗುತ್ತಿರುವಾಗ ಕಳ್ಳರು ಬಂದು ನನ್ನಲ್ಲಿ ಹಣವಿರುವುದೆಂಬ ಭ್ರಾಂತಿಯಿಂದ ಬಡಿದು ಹಾಕಿದರು. ಮೈಯೆಲ್ಲಾ ಗಾಯಮಾಡಿ ದೀರ್ಘಶ್ವಾಸ ಬಿಡುತ್ತಾ ಬಿದ್ದಿದ್ದ ನನ್ನನ್ನು ಬಿಟ್ಟುಹೋದರು.

ಆಗ ಒಬ್ಬ ಬ್ರಾಹ್ಮಣನು ಪ್ರಯಾಗದ ನೀರನ್ನು ಕಮಂಡಲುವಿನಲ್ಲಿ ಇಟ್ಟು ಕೊಂಡು ಆ ಮಾರ್ಗದಿಂದ ಬರುತ್ತಿದ್ದವನು ನನ್ನನ್ನು ನೋಡ ನೀರನ್ನು ಅಪೇಕ್ಷಿಸಿದ ನನ್ನ ಬಾಯಿಗೆ ಆ ಪ್ರಯಾಗದ ನೀರನ್ನು ಹಾಕಿದನು. ನಾನು ಆಗಲೇ ಪ್ರಾಣವನ್ನು ಬಿಟ್ಟೆನು. ಪ್ರಾಣಬಿಡುವ ಸಮಯದಲ್ಲಿ ರಾಜನ ಪತ್ನಿಯಾಗಬೇಕೆಂದು ಆಸೆಪಟ್ಟೆನು. ಆ ತೀರ್ಥದ ಜಲದ ಪ್ರಭಾವದಿಂದ ನಾನೀಗ ತಮ್ಮ ಪ್ರಾಣಪ್ರಿಯೆಯಾಗಿ ಹುಟ್ಟಿರುವೆನು. ಈಗ ನಾನು ತಮ್ಮಿಂದ ಸಹಿತಳಾಗಿ ಇಂದ್ರಪ್ರಸ್ಥದಲ್ಲಿ ಇರುವ ಪ್ರಯಾಗವನ್ನು ನೋಡಬೇಕೆಂದು ಬಯಸುವೆನು. ಆ ತೀರ್ಥಕ್ಕೆ ಹೋಗುವವರೆಗೆ ನಾನು ಭೋಜನ ಮಾಡುವುದಿಲ್ಲ ವೆಂದು ಸಂಕಲ್ಪವನ್ನು ಮಾಡಿರುವೆನು' ಎಂದು ಹೇಳಿದಳು. ಆಗ ರಾಜನು 'ಸುಂದರಿ ನಿನ್ನ ಮಾತನ್ನು ನಾನು ಹೇಗೆ ನಂಬಲಿ?' ಎಂದು ಕೇಳಿದನು. ಆಗ 'ರಾಜನೇ! ನಿನ್ನ ಪತ್ನಿಯು ಹೇಳಿದ ಮಾತು ಸತ್ಯವಾದದ್ದು. ಪವಿತ್ರವಾದ ಇಂದ್ರಪ್ರಸ್ಥದಲ್ಲಿ ಇರುವ ಪ್ರಯಾಗಕ್ಕೆ ಹೋಗಿ ಸ್ನಾನ ಮಾಡು. ಅಭೀಷ್ಟವನ್ನು ಹೊಂದುವಿ' ಎಂದು ಅಶರೀರವಾಣಿಯು ಆಯಿತು. ಆಗ ರಾಜನು 'ಹೀಗೆ ಹೇಳಿದವರಿಗೆ ನಮಸ್ಕರಿಸುವೆನು' ಎಂದು ಹೇಳಿ ಉದ್ದಕ್ಕೆ ನಮಸ್ಕರಿಸಿದೆನು.

ತರುವಾಯ ರಾಜ್ಯವನ್ನು ಮಂತ್ರಿಯಲ್ಲಿ ಒಪ್ಪಿಸಿ ತಾನು ಪತ್ನಿಯಿಂದ ಸಹಿತನಾಗಿ ಕೆಲವು ದಿವಸಗಳಲ್ಲಿಯೇ ಪ್ರಯಾಗಕ್ಕೆ ಹೋಗಿ ಸೇರಿದನು. ಪರಮಾತ್ಮನು ಪ್ರೀತನಾಗಲಿ ಎಂದು ಭಾವಿಸಿಕೊಂಡು ಪ್ರಯಾಗದಲ್ಲಿ ಆ ದಂಪತಿಗಳು ಸ್ನಾನ ಮಾಡಿದರು. ಆಗ ಅಲ್ಲಿಗೆ ಬ್ರಹ್ಮದೇವರೂ ಪರಮಾತ್ಮನೂ ಬಂದರು. ಅವರಿಬ್ಬರನ್ನು ನೋಡಿ ವೀರವರ್ಮರಾಜನು ಉದ್ದಕ್ಕೆ ನಮಸ್ಕಾರವನ್ನು ಮಾಡಿ ಸ್ತೋತ್ರ ಮಾಡಿದನು.

ತರುವಾಯ ಹೇಮಾಂಗಿಯೂ ಸ್ತೋತ್ರ ಮಾಡಿದಳು. ತಮಗಿಬ್ಬರಿಗೂ ಮನೋಭೀಷ್ಟವನ್ನು ಕೊಡಬೇಕೆಂದು ಕೇಳಿಕೊಂಡಳು. ಆಗ ಬ್ರಹ್ಮದೇವರೂ ಪರಮಾತ್ಮನೂ 'ಹೇಮಾಂಗಿ! ನೀನು ಧನ್ಯಳಾಗಿರುವಿ. ನಿನ್ನ ಗಂಡನನ್ನು ಉದ್ಧಾರ ಮಾಡಿರಿ. ನಿನ್ನ ಗಂಡನು ರಾಜ್ಯಸುಖದಲ್ಲಿ ಆಸಕ್ತನಾಗಿದ್ದರೂ ನಿನ್ನ ಸಹವಾಸದಿಂದ ಇಂತಹ ಪುಣ್ಯವನ್ನು ಹೊಂದಿದನು. ನಿನ್ನ ಗಂಡನಿಗೆ ಈ ತೀರ್ಥದ ಪ್ರಭಾವದಿಂದ ಆದಂತೆ ಇತರ ವಿಷಯಾಸಕ್ತರಾದ ರಾಜರಿಗೆ ಮೋಕ್ಷವಾಗುವುದು. ಅತ್ಯಂತ ದುರ್ಲಭವಾದದ್ದು' ಎಂದು ಹೇಳಿ ಆ ದಂಪತಿಗಳನ್ನು ಗರುಡದೇವರ ಮೇಲೆ ಕೂತುಕೊಳ್ಳಿಸಿಕೊಂಡು ಸತ್ಯಲೋಕಕ್ಕೆ ಹೋದರು. ಅಲ್ಲಿ ಬ್ರಹ್ಮದೇವರಿಂದ ಸತ್ಕೃತರಾಗಿ ಅವರ ಅಭಿಪ್ರಾಯದಂತೆ ಒಂದು ಮುಹೂರ್ತವಿದ್ದರು. ಆಮೇಲೆ ಭಗವಂತನು ಆ ದಂಪತಿಗಳಿಂದ ಸಹಿತನಾಗಿ ಗರುಡದೇವರ ಮೇಲೆ ಕೂತುಕೊಂಡು ವೈಕುಂಠಲೋಕಕ್ಕೆ ಹೋದನು. ಈರೀತಿಯಾಗಿ ಪ್ರಯಾಗದ ಮಹಿಮೆಯು ಅತ್ಯದ್ಭುತವಾದದ್ದು.



## ದ್ವಾರಕಾಮಹಿಮೆಯು [1]

ನಾರದರು ಶಿಬಿರಾಜನೊಡನೆ ಹೇಳಿದರು—ಇಂದ್ರಪ್ರಸ್ಥದ ಮಧ್ಯದಲ್ಲಿಯೇ ದ್ವಾರಕಾ ಎಂಬ ತೀರ್ಥವಿದೆ. ಅದರ ಮಹಿಮೆಯನ್ನು ಹೇಳುತ್ತೇನೆ. ಕೇಳು. ಕಾಂಪಿಲ್ಯನಗರದಲ್ಲಿ ಮನ್ಮಥನಂತೆ ಸುಂದರನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ತನ್ನ ವಿಲಾಸಗಳಿಂದ ಎಲ್ಲಾ ಹೆಂಗಸರ ಮನಸ್ಸನ್ನು ಅಪಹರಿಸುತ್ತಿದ್ದನು. ಸಂಗೀತ ವಿದ್ಯೆಯನ್ನು ಪಂಡಿತನಾಗಿದ್ದನು. ಕೋಗಿಲೆಯಂತೆ ಮಧುರವಾದ ಧ್ವನಿಯುಳ್ಳವನಾಗಿದ್ದನು. ಅವನು ಒಂದು ದಿನದಲ್ಲಿ ಕೈಯಲ್ಲಿ ವೀಣೆಯನ್ನು ಹಿಡಿದುಕೊಂಡು ಬಾರಿಸುತ್ತಾ ಕೋಗಿಲೆಯ ಸ್ವರದಂತೆ ಮಧುರವಾದ ಸ್ವರದಿಂದ ಹಾಡುತ್ತಾ

1. ಸ್ಕ.ಪು. ಪ್ರಭಾಸಖಂಡದಲ್ಲಿದೆ. ಸಪ್ತ ಮೋಕ್ಷದಾಯಕ ಕ್ಷೇತ್ರಗಳಲ್ಲಿ ಒಂದು.

ಪ್ರತಿಯೊಂದು ರಸ್ತೆಯಲ್ಲಿಯೂ ಸಂಚರಿಸುತ್ತಿದ್ದನು. ಅವನ ಹಾಡಿನ ಶಬ್ದವನ್ನು ಕೇಳಿ ಊರಿನ ಹೆಂಗಸರು ತಮ್ಮ ಮನೆಯ ಕೆಲಸವನ್ನು ಬಿಟ್ಟು ಅವನಿದ್ದಲ್ಲಿಗೆ ಹೋದರು. ಅವನ ರೂಪದಿಂದ ಮೋಹಿತರಾಗಿ ಕಾಮವೇಗವನ್ನು ಸಹಿಸಲಿಲ್ಲ. ಅವನು ಹಾಡನ್ನು ಹೇಳುತ್ತಾ ಎಲ್ಲೆಲ್ಲಿಗೆ ಹೋಗುವನೋ ಅಲ್ಲಿ ಎಲ್ಲಾ ಆ ಹೆಂಗಸರು ಹೋಗುತ್ತಿದ್ದರು. ಆಗ ಅವರು ಗಂಡಂದಿರೂ ಮಕ್ಕಳೂ ಸಹೋದರರೂ ಹೆಂಗಸರನ್ನು ಬೆದರಿಸಿ ತಮ್ಮ ತಮ್ಮ ಮನೆಗೆ ಕರೆದುಕೊಂಡು ಹೋದರು. ಪುನಃ ಹೆಂಗಸರು ಅವನನ್ನೇ ಹುಡುಕುತ್ತಾ ಹೋದರು. ಆಗ ಊರಿನ ಜನರೆಲ್ಲರೂ ಅವನ ವಿಷಯವನ್ನು ರಾಜನ ಬಳಿಗೆ ಹೋಗಿ ದೂರಿಕೊಂಡರು. ಆಗ ರಾಜನು ಏಕಾಂತದಲ್ಲಿ ಆ ಬ್ರಾಹ್ಮಣನನ್ನು ಕರೆದು 'ಬ್ರಾಹ್ಮಣನೇ! ಯಾವ ಮಂತ್ರದಿಂದ ಊರಿನ ಹೆಂಗಸರು ನಿನ್ನನ್ನು ನೋಡಿ ಮೋಹಿತರಾಗಿರುವರು. ಆ ಮಂತ್ರವನ್ನು ನನಗೆ ಹೇಳು. ಹಾಗೆ ಮಾಡಿದರೆ ನಿನಗೆ ಬೇಕಾದಷ್ಟು ಹಣವನ್ನು ಕೊಡುವೆನು. ಇಲ್ಲದಿದ್ದರೆ ನಿನ್ನನ್ನು ರಾಜ್ಯದಿಂದ ಹೊರಗೆ ಮಾಡುವೆನು' ಎಂದು ಹೇಳಿದನು.

ಆಗ ಬ್ರಾಹ್ಮಣನು 'ರಾಜನೇ! ಭಿಕ್ಷುಕನಾದ ನನ್ನಲ್ಲಿ ಮಾತ್ರವಾಗಲೀ ಔಷಧ ವಾಗಲೀ ಇರುವುದಿಲ್ಲ. ನಿನ್ನ ಊರಲ್ಲಿ ಇರುವ ಹೆಂಗಸರೆಲ್ಲರೂ ಇಂದ್ರಿಯ ನಿಗ್ರಹವಿಲ್ಲದವರು. ಅವರು ನನ್ನ ರೂಪವನ್ನು ನನ್ನ ಮಧುರವಾದ ಧ್ವನಿಯನ್ನು ಕೇಳಿ ಕಾಮವೇಗವನ್ನು ಸಹಿಸುವುದಿಲ್ಲ. ನಾನು ಏನು ಮಾಡಲಿ? ನನ್ನ ಅಪರಾಧವೇನಿದೆ?' ಎಂದು ಹೇಳಿದನು.

ಬ್ರಾಹ್ಮಣನು ಇಷ್ಟು ಹೇಳುತ್ತಿರಲು ಊರಿನ ಗಂಡಸರೆಲ್ಲರೂ ರಾಜನ ಬಳಿಗೆ ಬಂದು 'ಈ ಬ್ರಾಹ್ಮಣನಿಂದ ಮೋಹಿತರಾಗಿ ನಮ್ಮ ಹೆಂಗಸರೆಲ್ಲರೂ ನಾವೆಷ್ಟು ನಿರ್ಬಂಧ ಮಾಡಿದರೂ ಮನೆಯಲ್ಲಿ ನಿಲ್ಲುವುದಿಲ್ಲ. ಹೆಂಗಸರೆಲ್ಲರನ್ನು ಮೋಹ ಗಳಿಸುವ ಇವನು ಊರಲ್ಲಿ ಇರುವುದಾದರೆ ನಾವೀಗ ಊರನ್ನು ಬಿಟ್ಟು ಬೇರೆ ಊರಿಗೆ ಹೋಗುವೆವು' ಎಂದು ಹೇಳಿದರು.

ಅಷ್ಟರಲ್ಲಿಯೇ ಹೆಂಗಸರೆಲ್ಲರೂ ರಾಜನ ಸಮೀಪಕ್ಕೆ ಬಂದವರಾಗಿ 'ಸುಂದರ ವಾದ ರೂಪವುಳ್ಳ ಈ ಬ್ರಾಹ್ಮಣನನ್ನು ಹೊಂದಿ ನಮ್ಮ ಮನಸ್ಸು ಮೋಹಿತವಾಗಿದೆ. ಬನ್ನಿರಿ. ರಾಜನ ಎದುರಲ್ಲಿಯೇ ಈ ಬ್ರಾಹ್ಮಣನನ್ನು ಹೋಗಿ ಹಿಡಿಯುವ. ರಾಜನು ಏನು ಮಾಡುವನು?' ಎಂದು ಹೇಳಿ ಬೇಗನೇ ಬಂದು ರಾಜನೂ ತಮ್ಮ ಪತಿಗಳೂ ನೋಡುತ್ತಿರುವಂತೆ 'ಮನೋನಾಥ! ನಮ್ಮ ಮನೆಗೆ ಬಾ. ನಮ್ಮ ಕಾಮವನ್ನು ಶಾಂತಮಾಡು. ನಿನ್ನನ್ನು ಬಿಟ್ಟು ಇರಲು ನಾವು ಸಮರ್ಥರಾಗಿಲ್ಲ' ಎಂದು ಹೇಳಿದರು.

ಅದನ್ನು ಕೇಳಿ ಆ ಬ್ರಾಹ್ಮಣನು 'ನಾನು ನಿಮಗೆಲ್ಲರಿಗೂ ಮಗನು. ನನಗೆ ನೀವೆಲ್ಲರೂ ತಾಯಿಯರು. ನೀವು ಮನೆಯನ್ನು ಬಿಟ್ಟು ಯಾಕೆ ಬಂದಿರುವಿರಿ? ನಿಮ್ಮ ನಿಮ್ಮ ಪತಿಗಳನ್ನು ಆರಾಧಿಸಿರಿ. ಇದರಿಂದ ಎರಡು ಲೋಕಗಳಲ್ಲಿಯೂ ಸುಖವುಂಟಾಗುವುದು. ಪತಿಗಳನ್ನು ಆರಾಧಿಸಿದರೆ ಭಗವಂತನು ಪ್ರಸನ್ನನಾಗುವನು. ಭಗವಂತನು ಪ್ರಸನ್ನನಾದರೆ ದುರ್ಲಭವಾದದ್ದು ಯಾವುದೂ ಇರುವುದಿಲ್ಲ. ಯಾವ ಸ್ತ್ರೀಯು ತನ್ನ ಗಂಡನನ್ನು ಬಿಟ್ಟು ಸುಖದ ಇಚ್ಛೆಯಿಂದ ಇನ್ನೊಬ್ಬ ಪುರುಷನನ್ನು ಸೇವಿಸುವಳೋ ಅವಳು ಅಪವಾದವನ್ನು ಹೊಂದುವಳು. ಘೋರವಾದ ದುರ್ಗತಿಯನ್ನು ಹೊಂದುವಳು. ಆಮೇಲೆ ಮರಗಿಡವಾಗಿ ಹುಟ್ಟುವಳು. ಆಮೇಲೆ ಬಹುಜನ್ಮಗಳಲ್ಲಿ ಪಶುವಾಗುವಳು. ಆಮೇಲೆ ಮನುಷ್ಯಳಾಗಿ ಹುಟ್ಟುವಾಗಲೂ ಅಂಗಹೀನಳಾಗುವಳು. ಈ ರೀತಿಯಾಗಿ ಪಾಪವನ್ನು ತಿಳಿದು ಬೇಗನೇ ಮನೆಗೆ ಹಿಂದಿರುಗಿ ಹೋಗಿರಿ' ಇತ್ಯಾದಿ ಮಾತುಗಳನ್ನು ಆಡಿದನು.

ಈರೀತಿಯಾಗಿ ಅವನು ಹೇಳಿದ ಮಾತನ್ನು ಕೇಳಿ ಆ ಹೆಂಗಸರು ಗಂಡಂದಿರ ಮುಖವನ್ನು ನೋಡಿ ಲಜ್ಜೆಯುಳ್ಳವರಾಗಿ ಮನ್ಮಥನನ್ನು ನಿಂದಿಸುವವರಾಗಿ ಆ ಬ್ರಾಹ್ಮಣನನ್ನು ಸ್ತುತಿಸಿದರು—'ಯಾರು ತನ್ನ ಮತ್ತು ಎಲ್ಲಾ ಸ್ತ್ರೀಯರ ಶೀಲವನ್ನು ರಕ್ಷಿಸಿದನೋ ಅವನ ತಾಯಿಯು ಪರಮಧನ್ಯಳು. ನಮಗೆ ಕಾಮಪರವಶ ರಾದವರಿಗೆ ಧಿಕ್ಕಾರವಿರಲಿ' ಎಂದು ಹೇಳುತ್ತಾ ಒಂದೇ ಮನಸ್ಸುಳ್ಳವರಾಗಿ ಆ ಬ್ರಾಹ್ಮಣನು ಹೇಳಿದಂತೆ ತಮ್ಮ ತಮ್ಮ ಮನೆಗೆ ಹೋದರು. ಆ ಕಾಂಪಿಲ್ಯರಾಜನು ಆ ಬ್ರಾಹ್ಮಣನನ್ನು ವಸ್ತ್ರಾಭರಣಾದಿಗಳಿಂದ ಸತ್ಕರಿಸಿ ಅವನ ಮನೆಗೆ ಕಳುಹಿಸಿದನು. ತರುವಾಯ ಸ್ವಲ್ಪ ಕಾಲವಾಗಲು ಕಾರೂಷದೇಶದ ರಾಜನು ಯುದ್ಧಕ್ಕೆ ಬಂದನು. ಭಯಂಕರವಾದ ಯುದ್ಧವು ನಡೆದು ಕಾಂಪಿಲ್ಯರಾಜನು ಮೃತನಾದನು. ಶತ್ರುಪಕ್ಷದಲ್ಲಿ ನಗರದಲ್ಲಿ ಲೂಟಿ ಮಾಡಿದರು. ಪರಾಕ್ರಮಶಾಲಿಗಳೆಲ್ಲರೂ ಸತ್ತರು. ಹೆಂಗಸರೆಲ್ಲರೂ ವಿಷವನ್ನು ಕುಡಿದು ಸತ್ತರು. ಅವರು ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಇದ್ದ ಕಾರಣ ಭೀಷಣ ಎಂದು ಹೆಸರುಳ್ಳ ರಾಕ್ಷಸನ ನಗರದಲ್ಲಿ ದೊಡ್ಡ ಶರೀರವುಳ್ಳ ರಾಕ್ಷಸಿಯರಾದರು. ಅವರನ್ನು ಅರ್ಜುನನ ಧ್ವಜದಲ್ಲಿ ಇದ್ದ ಹನುಮಂತ ದೇವರು ಸಂಹರಿಸಿದರು. ಮತ್ತು ಅವರು ಮರುಪ್ರದೇಶದಲ್ಲಿ ರಾಕ್ಷಸಿಯರಾಗಿ ಹುಟ್ಟಿದ್ದರು. ಹಸಿವೆದಾಹದಿಂದ ಪೀಡಿತರಾಗಿದ್ದರು. ನೋಡಲಿಕ್ಕೇ ಭಯವನ್ನು ಉಂಟುಮಾಡುತ್ತಿದ್ದರು. ಈರೀತಿಯಾಗಿ ಆ ಹೆಂಗಸರು ಮನಸ್ಸಿನಲ್ಲಿ ಪರಪುರುಷನನ್ನು ಅಪೇಕ್ಷಿಸಿ ಬಾಯಿಯಿಂದಲೂ ಅದಕ್ಕೆ ಅನುಸಾರವಾಗಿ ಮಾತಾಡಿದ ಕಾರಣ

ಎರಡುಬಾರಿ ರಾಕ್ಷಸಿಯರಾಗಿ ಹುಟ್ಟಿದರು. ಅವರ ಪಾಪದಿಂದಲೇ ಮೊದಲು ಕಾಂಪಿಲ್ಯನಗರವೂ ಆಮೇಲೆ ಭೀಷಣನ ನಗರವೂ ಈರೀತಿಯಾಗಿ ಎರಡು ನಗರವೂ ರಾಜನಿಂದ ಸಹಿತನಾಗಿ ನಾಶವನ್ನು ಹೊಂದಿತು. ಆದುದರಿಂದ ಹೆಂಗಸರು ಪರಪುರುಷರನ್ನು ಅಪೇಕ್ಷಿಸಬಾರದು. ಗಂಡನು ರೋಗಿಯಾಗಿರಲಿ, ಮಡ್ಡನಾಗಿರಲಿ, ದರಿದ್ರನಾಗಿರಲಿ, ಕುರುಡನಾಗಿರಲಿ, ಅವನನ್ನು ಸದ್ಗತಿಯನ್ನು ಅಪೇಕ್ಷಿಸುವ ಹೆಂಗಸರು ಪರಿತ್ಯಾಗ ಮಾಡಬಾರದು.

ಮರುಪ್ರದೇಶದಲ್ಲಿ ರಾಕ್ಷಸಿಯರಾಗಿ ಇದ್ದವರು ತಮ್ಮ ಮೈಯಮೇಲೆ ದ್ವಾರಕೆಯ ನೀರು ಬೀಳಲು ಸ್ವರ್ಗವನ್ನು ಹೊಂದಿ ಸುಖವಾಗಿ ಇದ್ದರು.



# ಧವಲೇಶ್ವರ ಮಾಹಾತ್ಮ್ಯವು

ಪೂರ್ವದಲ್ಲಿ ಇಂದ್ರದೇವರೂ ನಮುಚಿಯೆಂಬ ಅಸುರನೂ ಇಬ್ಬರೂ ಪರಸ್ಪರವಾಗಿ ಶಸ್ತ್ರದಿಂದ ಕೊಲ್ಲಬಾರದು ಎಂದು ಪ್ರತಿಜ್ಞಾ ಮಾಡಿಕೊಂಡರು. ಇಂದ್ರದೇವರು ಆಮೇಲೆ ಅಶರೀರವಾಣಿಯಾದಂತೆ ನಮುಚಿಯನ್ನು ನೀರಿನ ನೊರೆಯನ್ನು ಬಡಿದು ಸಂಹರಿಸಿದರು. ಆಗ ಅವರಿಗೆ ಬ್ರಹ್ಮಹತ್ಯೆಯು ಬಂದಿತು. ಆಗ ಅವರು ಬೃಹಸ್ಪತ್ಯಾಚಾರ್ಯರೊಡನೆ ಆ ಪಾಪಪರಿಹೃತವಾಗುವ ಉಪಾಯವನ್ನು ಕೇಳಿದರು. ಆಮೇಲೆ ಬೃಹಸ್ಪತ್ಯಾಚಾರ್ಯರ ಮಾತಿನಂತೆ ಸಾಭ್ರಮತಿಯೆಂಬ ನದಿಯ ಉತ್ತರತೀರದಲ್ಲಿ ಇಂದ್ರಗ್ರಾಮ ಎಂಬ ತೀರ್ಥಕ್ಕೆ ಬಂದು ಸ್ನಾನಮಾಡಿದರು. ಅಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ಇಂದ್ರದೇವರ ಪಾಪವು ಪರಿಹೃತವಾಯಿತು. ಪೂರ್ಣಚಂದ್ರನಂತೆ ಬಿಳಿಯಾದ ಕಾಂತಿಯು ಅವರ ದೇಹದಲ್ಲಿ ಉಂಟಾಯಿತು. ಆಮೇಲೆ ಇಂದ್ರದೇವರು ಅಲ್ಲಿ ಧವಲೇಶ್ವರ ಎಂಬ ಹೆಸರುಳ್ಳ ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಿಸಿದರು. ಅದು ಇಂದ್ರದೇವರ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿತು.

ಅಲ್ಲಿ ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ ಗ್ರಹಣಕಾಲಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಹನ್ನೆರಡುವರ್ಷ ಶ್ರಾದ್ಧಮಾಡಿದ ಫಲವು ಬರುವುದು. ಅಲ್ಲಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಸಾವಿರ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಫಲವು ಬರುವುದು. ಅಲ್ಲಿ ಶಕ್ತಿಯನ್ನು ಅನುಸರಿಸಿ, ಬಂಗಾರ ಭೂಮಿ

ವಸ್ತುಗಳನ್ನು ದಾನಮಾಡಬೇಕು. ಬಿಳಿಯಾದ ಗೋವನ್ನು ದಾನಮಾಡಬೇಕು. ಇಲ್ಲಿ ಉಪವಾಸಾದಿಗಳನ್ನು ಮಾಡಿದರೆ ಮಹಾಫಲವುಂಟಾಗುವುದು. ಇಲ್ಲಿ ಪೂಜೆಯನ್ನು ಮಾಡಿದರೆ ಬೇಕಾದ ಫಲವುಂಟಾಗುವುದು. ರೋಗಾದಿ ಅನಿಷ್ಟ ಪರಿಹಾರ ವಾಗುವುದು. ರುದ್ರದೇವರಿಗೆ ಕೃತಯುಗದಲ್ಲಿ ನೀಲಕಂಠ ಎಂದೂ, ತ್ರೇತಾಯುಗ ದಲ್ಲಿ ಹರ ಎಂದೂ ದ್ವಾಪರಯುಗದಲ್ಲಿ ಶರ್ವ ಎಂದೂ, ಕಲಿಯುಗದಲ್ಲಿ ಧವಲೇಶ್ವರ ಎಂದೂ ಪ್ರಸಿದ್ಧಿಯನ್ನು ಹೊಂದಿರುವರು. ಇಲ್ಲಿಯ ವಿಷಯದಲ್ಲಿ ಒಂದು ಪೂರ್ವದಲ್ಲಿ ನಡೆದ ಇತಿಹಾಸವಿರುವುದು.

ಪೂರ್ವದಲ್ಲಿ ನಂದಿಯೆಂದು ಹೆಸರುಳ್ಳ ವೈಶ್ಯನು ಇಂದ್ರಗ್ರಾಮದಲ್ಲಿ ವಾಸಮಾಡಿಕೊಂಡಿದ್ದನು. ಅವನು ಯಾವಾಗಲೂ ಶಿವಧ್ಯಾನವನ್ನು ಮಾಡುತ್ತಿದ್ದನು. ಮತ್ತು ನಂದಿಯು ನಿತ್ಯವೂ ಉಷಃಕಾಲದಲ್ಲಿ ಎದ್ದು ತಪೋವನದಲ್ಲಿ ಇದ್ದ ಧವಲ ಎಂದು ಹೆಸರುಳ್ಳ ಶಿವಲಿಂಗವನ್ನು ಪೂಜಿಸುತ್ತಿದ್ದನು. ಶಾಸ್ತ್ರದಲ್ಲಿ ಹೇಳಿದಂತೆ ಪುಷ್ಪಗಳಿಂದ ಅರ್ಚನ ಮಾಡುತ್ತಿದ್ದನು. ಒಂದು ದಿನದಲ್ಲಿ ಒಬ್ಬ ಬೇಡನು ಸಾಭ್ರಮತೀನದಿಯ ತೀರದಲ್ಲಿ ಮೃಗಬೇಟೆಯಾಡುತ್ತಾ ದೈವೇಚ್ಛೆಯಿಂದ ಅಲ್ಲಿಗೆ ಬಂದನು. ಅವನು ಅಲ್ಲಿ ಪುಷ್ಪಗಳಿಂದ ಪೂಜಿಸಲ್ಪಟ್ಟಿದ್ದ ಧವಲೇಶ್ವರ ಎಂದು ಪ್ರಸಿದ್ಧವಾದ ಲಿಂಗವನ್ನು ನೋಡಿದನು. ಅವನು ಬಾಯಿಯಲ್ಲಿ ನೀರನ್ನು ತುಂಬಿಕೊಂಡು ಒಂದು ಕೈಯಲ್ಲಿ ಮೃಗಮಾಂಸವನ್ನೂ ಮತ್ತೊಂದು ಕೈಯಲ್ಲಿ ಬಿಲ್ವಪತ್ರವನ್ನೂ ಹಿಡಿದುಕೊಂಡು ಒಂದು ಬಾಯಿಯಲ್ಲಿ ಇದ್ದ ನೀರನ್ನು ಉಗುಳಿ ಲಿಂಗಕ್ಕೆ ಅಭಿಷೇಕ ಮಾಡಿದನು. ಒಂದು ಕೈಯಲ್ಲಿ ಇದ್ದ ಬಿಲ್ವಪತ್ರಗಳನ್ನು ಲಿಂಗದ ಮೇಲೆ ಹಾಕಿ ಮೃಗಮಾಂಸವನ್ನು ಸಮರ್ಪಿಸಿದನು. ಉದ್ದಕ್ಕೆ ನಮಸ್ಕರಿಸಿದನು. ಇನ್ನು ಯಾವಾಗಲೂ ಹೀಗೆಯೇ ಪೂಜೆಯನ್ನು ಮಾಡುವೆನೆಂದು ಸಂಕಲ್ಪ ಮಾಡಿದನು. 'ಶಂಕರ! ನೀನು ಸ್ವಾಮಿಯು. ನಾನು ಭೃತ್ಯನು' ಎಂದು ಹೇಳಿ ಅವನು ಮನೆಗೆ ಹೋದನು. ಮರುದಿನ ಬೆಳಿಗ್ಗೆ ನಂದಿಯು ಅಲ್ಲಿಗೆ ಬಂದನು. ತಾನು ಪುಷ್ಪಗಳಿಂದ ಅರ್ಚನೆ ಮಾಡಿದ್ದು ಅಸ್ತವ್ಯಸ್ತವಾಗಿ ಇರುವುದನ್ನು ನೋಡಿದನು. 'ಯಾರು ಹೀಗೆಲ್ಲಾ ಮಾಡಿದರು? ನಾನು ಮಾಡುವ ಪೂಜೆಗೆ ವಿಘ್ನವು ಬಂದಿತಲ್ಲಾ!' ಎಂದು ದುಃಖಪಟ್ಟು ಆ ಶಿವಮಂದಿರವನ್ನು ಚೆನ್ನಾಗಿ ತೊಳೆದು ತನ್ನ ಮನೆಗೆ ಬಂದನು. ಅವನನ್ನು ನೋಡಿ ಪುರೋಹಿತನು 'ಯಾಕೆ ಮನಸ್ಸು ಅಸ್ವಸ್ಥವಾಗಿದೆ? ಎಂದು ಕೇಳಿದನು. ಅದಕ್ಕೆ ಅವನು 'ಶಿವಲಿಂಗದ ಬಳಿಯಲ್ಲಿ ಅಪವಿತ್ರ ವಸ್ತುವಿರುವುದನ್ನು ಕಂಡೆನು. ಯಾರು ಹೀಗೆ ಮಾಡಿದರೆಂದು ತಿಳಿಯಲಿಲ್ಲ' ಎಂದನು. ಅದಕ್ಕೆ

ಪುರೋಹಿತನು 'ಯಾರೋ ಮೂರ್ಖನು ಮಾಡಿರಬೇಕು. ನಾಳೆ ಬೆಳಿಗ್ಗೆ ನೋಡಲಿಕ್ಕೆ ನಾನೂ ಬರುವೆನು. ಹಾಗೆ ಮಾಡಿದ ದುಷ್ಟನಿಗೆ ಶಿಕ್ಷೆಯನ್ನು ಮಾಡುವೆನು' ಎಂದು ಹೇಳಿದನು. ನಂದಿಯು ಹಾಗೆಯೇ ಆಗಲಿ ಎಂದು ಹೇಳಿ ರಾತ್ರಿಯೆಲ್ಲಾ ದುಃಖದಿಂದ ತನ್ನ ಮನೆಯಲ್ಲಿಯೇ ಇದ್ದನು. ಆ ರಾತ್ರಿಯು ಕಳೆಯಲು ಪುರೋಹಿತನನ್ನು ಕರೆದುಕೊಂಡು ನಂದಿಯು ಶಿವಾಲಯಕ್ಕೆ ಹೋಗಿ ಅಲ್ಲಿ ಚೆನ್ನಾಗಿ ತೊಳೆದು ನಾನಾರತ್ನಗಳಿಂದ ಪಂಚೋಪಚಾರ ಪೂಜೆಯನ್ನು ಬ್ರಾಹ್ಮಣರಿಂದ ಸಹಿತನಾಗಿ ಮಾಡಿದನು. ಸ್ತೋತ್ರಮಾಡುತ್ತಾ ಎರಡು ಝಾಮಗಳು ಕಳೆದವು. ತರುವಾಯ ಕಪ್ಪಾಗಿದ್ದ ಬಲಿಷ್ಠನಾದ ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡಿದ್ದ ಪ್ರತಾಪಶಾಲಿಯಾದ ಮಹಾಕಾಲನೆಂಬ ಬೇಡನು ಅಲ್ಲಿಗೆ ಬಂದನು. ಅವನನ್ನು ನೋಡಿ ನಂದಿಯು ಭಯದಿಂದ ಅಡಗಿಕೂತುಕೊಂಡನು. ಪುರೋಹಿತನೂ ಅಂಜಿಕೆಯಿಂದ ಮರೆಯಾದನು. ಬೇಡನು ತಾನು ಪೂರ್ವದಿನದಲ್ಲಿ ಮಾಡಿದಂತೆಯೇ ಪೂಜೆಯನ್ನು ಮಾಡಿದನು. ಉದ್ದಕ್ಕೆ ನಮಸ್ಕರಿಸಿ ಎದ್ದು ಹೊರಟುಹೋದನು.

ಆ ಆಶ್ಚರ್ಯವನ್ನು ನೋಡಿ ನಂದಿಯು ಪುರೋಹಿತನೊಡನೆ ಬಹುಹೊತ್ತು ಯೋಚನೆ ಮಾಡಿದನು. ಅನೇಕ ಬ್ರಾಹ್ಮಣರನ್ನು ಕೂಗಿ ಅವರೊಡನೆ ಬೇಡನು ಮಾಡಿದ ವ್ಯಾಪಾರವನ್ನು ಹೇಳಿಕೊಂಡನು. 'ಬ್ರಾಹ್ಮಣರೇ! ಈ ಸಂದರ್ಭದಲ್ಲಿ ನಾವು ಏನು ಮಾಡಬೇಕು?' ಎಂದು ಕೇಳಿದನು. ಬ್ರಾಹ್ಮಣರೆಲ್ಲರೂ ಧರ್ಮಶಾಸ್ತ್ರವನ್ನು ನೋಡಿ ಯೋಚನೆ ಮಾಡುವವರಾಗಿ ನಂದಿಯೊಡನೆ 'ಪೂಜೆಗೆ ವಿಘ್ನವು ಉಂಟಾಗಿರುವುದು. ಆದುದರಿಂದ ಈ ಲಿಂಗವನ್ನು ಮನೆಗೇ ತೆಗೆದುಕೊಂಡು ಬಂದುಬಿಡು' ಎಂದು ಹೇಳಿದರು. ನಂದಿಯು ಹಾಗೆಯೇ ಆಗಲಿ ಎಂದು ಹೇಳಿ ಆ ಲಿಂಗವನ್ನು ಮನೆಗೆ ತೆಗೆದುಕೊಂಡು ಹೋಗಿ ಚೆನ್ನಾಗಿ ತೊಳೆದು ಬಾಳೆಯ ಕಂಬವನ್ನು ಕಟ್ಟಿ ಅಲಂಕರಿಸಿ ವೈಭವದಿಂದ ಲಿಂಗಕ್ಕೆ ಪೂಜೆಯನ್ನು ಮಾಡಿದನು. ಮರುದಿನದಲ್ಲಿ ಬೇಡನು ಶಿವಾಲಯಕ್ಕೆ ಬಂದವನು ಶಿವಲಿಂಗವನ್ನು ನೋಡಲಿಲ್ಲ. ಆಗ ಅವನು ಮೌನವನ್ನು ಬಿಟ್ಟು, ಗಟ್ಟಿಯಾ 'ಶಂಭೋ! ಎಲ್ಲಿಗೆ ಹೋಗಿರುವಿ? ನನಗೆ ದರ್ಶನವನ್ನು ಕೊಡು. ನನಗೆ ದರ್ಶನವನ್ನು ಕೊಡದಿದ್ದರೆ ನಾನು ದೇಹವನ್ನೇ ಪರಿತ್ಯಜಿಸುವೆನು. ಹೇ ಶಂಭೋ! ಶಂಕರ! ನನಗೆ ದರ್ಶನವನ್ನು ಕೊಡು' ಎಂದು ಹೇಳುತ್ತಾ ಕತ್ತಿಯಿಂದ ತನ್ನ ಹೊಟ್ಟೆಯನ್ನು ಸೀಳಿಕೊಂಡನು. ಬಾಹುವನ್ನು ಬಡಿದು ರೋಷದಿಂದ 'ಶಂಭೋ! ನಿನ್ನ ದರ್ಶನವನ್ನು ಕೊಡು. ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿರುವೆ?' ಎಂದು ಹೇಳಿ ಆ ಲಿಂಗವನ್ನು ತೆಗೆದ ತಗ್ಗುಪ್ರದೇಶದಲ್ಲಿ ತನ್ನ ಕರಳನ್ನೂ ಮಾಂಸವನ್ನೂ ಹಾಕಿದನು.

ಮನಸ್ಸನ್ನು ನಿರ್ಮಲವಾಗಿ ಮಾಡಿಕೊಂಡು ಸಾಭ್ರಮತೀನದಿಯಲ್ಲಿ ಮುಳುಗಿದನು. ಹಾಗೆಯೇ ಬಾಯಿಯಲ್ಲಿ ನೀರನ್ನು ಹಿಡಿದುಕೊಂಡು ಬಿಲ್ವಪತ್ರವನ್ನು ಹಿಡಿದುಕೊಂಡು ಬಂದು ಆ ತಗ್ಗಾಗಿದ್ದ ಸ್ಥಳದಲ್ಲಿ ಪೂಜೆ ಮಾಡಿ ಉದ್ದಕ್ಕೆ ನಮಸ್ಕರಿಸಿ ರುದ್ರದೇವರನ್ನು ಧ್ಯಾನಮಾಡಿದನು. ಆಗ ಬೆಳ್ಳಗೆ ಬಣ್ಣವುಳ್ಳ ಪ್ರಕಾಶಮಾನರಾದ ರುದ್ರದೇವರು ಪ್ರಮಥಗಣಗಳಿಂದ ಕೂಡಿಕೊಂಡು ಪ್ರತ್ಯಕ್ಷರಾದರು. ರುದ್ರದೇವರು ಬೇಡನ ಕೈಯಲ್ಲಿ ಹಿಡಿದು ಸಮಾಧಾನಪಡಿಸುತ್ತಾ 'ಎಲಾ ವೀರನೇ! ನನ್ನ ಭಕ್ತನಾಗಿರುವಿ. ನಿನಗೆ ಬೇಕಾದ ವರವನ್ನು ಕೇಳಿಕೋ' ಎಂದು ಹೇಳಿದರು. ಆಗ ಆ ಮಹಾಕಾಲನೆಂಬ ಬೇಡನು ಪುನಃ ಭಕ್ತಿಯಿಂದ ಉದ್ದಕ್ಕೆ ನಮಸ್ಕರಿಸಿದನು. ತರುವಾಯ ರುದ್ರದೇವರೊಡನೆ 'ನಾನು ವರವನ್ನು ಕೇಳುವುದಿಲ್ಲ, ನಾನು ನಿನ್ನ ದಾಸನಾಗಿರುವೆನು. ನೀನು ನನ್ನ ಸ್ವಾಮಿಯಾಗಿರುವಿ. ಇದೇ ರೀತಿಯಾಗಿ ನನಗೆ ಜನ್ಮಜನ್ಮದಲ್ಲಿಯೂ ಜ್ಞಾನವನ್ನು ಕೊಡು. ನೀನೇ ನನಗೆ ತಂದೆಯು, ತಾಯಿಯು, ಬಂಧುವು. ಮಿತ್ರನು, ಗುರುವು' ಎಂದು ಹೇಳಿದನು. ರುದ್ರದೇವರು ಯಾವ ಫಲವನ್ನು ಅಪೇಕ್ಷಿಸದೆ ಇದ್ದ ಅವನಿಗೆ ದ್ವಾರಪಾಲಕನಾಗಿರುವಂತೆ ಅನುಗ್ರಹಿಸಿದನು.

ಆಗ ರುದ್ರದೇವರು ಡಮರುವನ್ನು ಬಾರಿಸಿ ಮೂರುಲೋಕದಲ್ಲಿಯೂ ಶಬ್ದವನ್ನು ಮಾಡಿದರು. ಭೇರೀಶಂಖ ದುಂದುಭಿ ಪಟಹ ಎಂಬ ವಾದ್ಯಗಳ ಶಬ್ದವು ಆಯಿತು. ನಂದಿಯು ಆ ಮಹಾಶಬ್ದವನ್ನು ಕೇಳಿ ಆಶ್ಚರ್ಯದಿಂದ ಆ ವನಕ್ಕೆ ಬಂದನು. ಅಲ್ಲಿ ರುದ್ರದೇವರು ಪ್ರಮಥಗಣಗಳಿಂದ ಸಹಿತರಾಗಿ ನಿಂತಿದ್ದರು. ಅಲ್ಲಿ ಆ ಬೇಡನೂ ನಂದಿಗೆ ಕಾಣಿಸಿದನು.

ತರುವಾಯ ನಂದಿಯು ಆ ಬೇಡನನ್ನು ಸ್ತೋತ್ರ ಮಾಡಬೇಕೆಂಬ ಇಚ್ಛೆಯುಳ್ಳವನಾಗಿ ಅವನ ಸಮೀಪಕ್ಕೆ ಬಂದು 'ನೀನು ರುದ್ರದೇವರನ್ನು ಇಲ್ಲಿಗೆ ತರಿಸಿದಿ. ನೀನು ಭಕ್ತನಾಗಿರುವಿ. ನಾನು ನಿನ್ನ ಭಕ್ತನಾಗಿರುವೆನು. ನನ್ನನ್ನು ರುದ್ರದೇವರೊಡನೆ ತಿಳಿಸು' ಎಂದು ಹೇಳಿದನು. ಅದನ್ನು ಕೇಳಿ ಆ ಬೇಡನು ಬೇಗನೆ ನಂದಿಯ ಕೈಯಲ್ಲಿ ಹಿಡಿದುಕೊಂಡು ರುದ್ರದೇವರ ಬಳಿಗೆ ಕರೆದುಕೊಂಡು ಬಂದನು. ಆಗ ರುದ್ರದೇವರು ನಗುತ್ತಾ 'ಇವನು ಯಾರು?' ಎಂದು ಕೇಳಿದರು. ಬೇಡನು 'ದೇವ! ಇವನು ನಿನ್ನ ಭಕ್ತನು. ಯವಾಗಲೂ ನಿನ್ನನ್ನು ಪೂಜಿಸುತ್ತಾ ಇದ್ದವನು. ನಿತ್ಯವೂ ರತ್ನಮಾಣಿಕ್ಯಪುಷ್ಪಗಳಿಂದ ಪೂಜಿಸುತ್ತಿದ್ದನು. ಜೀವಿತದಿಂದಲೂ ಧನದಿಂದಲೂ ಪೂಜಿಸಿರುವನು. ಆದುದರಿಂದ ಈ ನಂದಿಗೆ ಅನುಗ್ರಹಿಸಬೇಕು' ಎಂದು ಹೇಳಿದನು.

ರುದ್ರದೇವರು 'ಮಹಾನುಭಾವನೇ! ಈ ವೈಶ್ಯನಾದ ನಂದಿಯನ್ನು ನಾನು ತಿಳಿದಿರುವೆನು. ಮಹಾಕಾಲನೇ! ನೀನು ನನ್ನ ಭಕ್ತನಾಗಿರುವಿ. ಮಿತ್ರನಾಗಿರುವಿ. ಯಾವ ಫಲವನ್ನು ಅಪೇಕ್ಷಿಸದೆ ಇರುವ ನಿಷ್ಕಪಟ ಮನಸ್ಸುಳ್ಳ ಭಕ್ತರು ನನಗೆ ಪ್ರಿಯರು. ಅವರೇ ಉತ್ತಮರು' ಎಂದು ಹೇಳಿ ಇಬ್ಬರನ್ನೂ ದ್ವಾರಪಾಲಕರನ್ನಾಗಿ ಅಂಗೀಕರಿಸಿದರು. ಆಗ ಅಲ್ಲಿಗೆ ಅನೇಕ ವಿಮಾನಗಳು ಬಂದವು. ಆ ಬೇಡನು ಆ ವೈಶ್ಯನನ್ನು ಉದ್ಧಾರ ಮಾಡಿದನು. ಅವರಿಬ್ಬರಿಗೂ ವೇಗವುಳ್ಳ ವಿಮಾನಗಳಿಂದ ಕೈಲಾಸವನ್ನು ಹೊಂದಿದರು. ರುದ್ರದೇವರ ಸಾರೂಪ್ಯವನ್ನು ಹೊಂದಿದರು. ಪಾರ್ವತಿದೇವಿಯರು ಮಕ್ಕಳಿಗೆ ಆರತಿ ಮಾಡುವಂತೆ ಅವರಿಬ್ಬರೂ ಆರತಿಯನ್ನು ಎತ್ತಿದರು. 'ಇವರಿಬ್ಬರೂ ನಿಮ್ಮಂತೆಯೇ ರೂಪವುಳ್ಳವರಾಗಿರುವರು' ಎಂದು ರುದ್ರದೇವರೊಡನೆ ಹೇಳಿದರು. ಅದನ್ನು ಕೇಳಿ ಅವರಿಬ್ಬರೂ ರುದ್ರದೇವರೊಡನೆ 'ನಾವು ನಿತ್ಯವೂ ನಿಮ್ಮ ದ್ವಾರವನ್ನು ಕಾಯುತ್ತಿರುವೆವು. ನಿಮಗೆ ನಮಸ್ಕಾರವು' ಎಂದು ಹೇಳಿದರು. ರುದ್ರದೇವರು ನಗುತ್ತಾ 'ನಿನ್ನ ಇಷ್ಟದಂತೆಯೇ ಆಗಲಿ' ಎಂದು ಹೇಳಿದರು. ಆ ಸಮಯವನ್ನು ಆರಂಭಿಸಿ ಅವರಿಬ್ಬರೂ ರುದ್ರದೇವರಿಗೆ ದ್ವಾರಪಾಲಕರಾಗಿದ್ದರು. ಹೀಗೆಯೇ ಧವಲೇಶ್ವರನನ್ನು ಪೂಜಿಸಿದವರೆಲ್ಲರೂ ತಮ್ಮ ಅಭೀಷ್ಟವನ್ನು ಹೊಂದಿರುವರು.



## ಗಂಗಾಮಾಹಾತ್ಮೆಯು [1]

ಸರಳಮಂಚದಲ್ಲಿ ಮಲಗಿದ್ದ ಭೀಷ್ಮಾಚಾರ್ಯರು ಧರ್ಮರಾಜನಿಗೆ ಒಬ್ಬ ಸಿದ್ಧಪುರುಷನು ಉಂಛವೃತ್ತಿಯ ಬ್ರಾಹ್ಮಣನಿಗೆ ಹೇಳಿದ ಗಂಗಾಮಾಹಾತ್ಮೆಯನ್ನು ಹೇಳಿದರು.

'ಗಂಗೆಯು ಪರಮಪವಿತ್ರವಾದ ನದಿಯು. ಗಂಗೆಯನ್ನು ಸೇವಿಸಿದರೆ ಯಾವ ಗತಿಯಾಗುವುದೋ ಅಂತಹ ಉತ್ತಮ ಗತಿಯು ತಪಸ್ಸಿನಿಂದಲೂ, ಬ್ರಹ್ಮಚರ್ಯ ದಿಂದಲೂ, ಯಜ್ಞಗಳಿಂದಲೂ, ತ್ಯಾಗದಿಂದಲೂ ಉಂಟಾಗಲಾರದು. ಗಂಗಾ ನದಿಯ ಜಲದಲ್ಲಿ ಸ್ನಾನಮಾಡಿದವರಿಗೆ ಆಗುವ ಸಂತೋಷವು ನೂರಾರು ಯಾಗಗಳಿಂದಲೂ ಆಗಲಾರದು. ಸೂರ್ಯನು ಕತ್ತಲೆಯನ್ನು ಪರಿಹರಿಸಿ ಉದಯಿಸುವಂತೆ ಗಂಗೆಯಲ್ಲಿ ಸ್ನಾನಮಾಡಿದ ಪುರುಷನು ಪಾಪವನ್ನು ಪರಿಹಾರ

1. ಮ.ಭಾ.ಅ.ಪ.ಅ-26

ಮಾಡಿಕೊಂಡು ಪ್ರಕಾಶಿಸುವನು. ಅಗ್ನಿಯನ್ನು ಹೊಂದಿ ಹೇಗೆ ಹತ್ತಿಯರಾಶಿಯು ಸುಟ್ಟುಹೋಗುವುದೋ ಹಾಗೆಯೇ ಗಂಗಾಸ್ನಾನವು ಸರ್ವಪಾಪವನ್ನು ಪರಿಹರಿಸು ವುದು. ಯಾರು ಸೂರ್ಯನ ಕಿರಣಗಳಿಂದ ಕಾದುಹೋದ ಗಂಗಾಜಲವನ್ನು ಕುಡಿಯುವನೋ ಅವನು ಅಗ್ನಿಯಿಂದಲೂ ತೇಜಸ್ವಿಯಾಗುವನು. ಗಂಗೆಯಲ್ಲಿ ಸ್ನಾನ ಮಾಡಿದವನು ಸಾವಿರ ಚಾಂದ್ರಾಯಣವ್ರತವನ್ನು ಮಾಡಿದವನಿಗಿಂತಲೂ ಶ್ರೇಷ್ಠನಾಗುವನು. ಯಾರು ತಲೆಕೆಳಗೆ ಮಾಡಿಕೊಂಡು ಹತ್ತುಸಾವಿರ ವರ್ಷ ತಪಸ್ಸು ಮಾಡುವನೋ, ಯಾರು ಒಂದು ತಿಂಗಳು ಗಂಗಾಜಲವನ್ನು ಸೇವಿಸುವನೋ ಅವರಲ್ಲಿ ಗಂಗಾಜಲ ವನ್ನು ಸೇವಿಸುವವನೇ ಶ್ರೇಷ್ಠನಾಗುವನು. ಅವನು ಬ್ರಹ್ಮಹತ್ಯಾದಿ ದೋಷ ಗಳಿಂದಲೂ ರಹಿತನಾಗಿ ವಿಷ್ಣುಲೋಕವನ್ನು ಹೊಂದುವನು.

ಗಂಗೆಯ ಸ್ಮರಣೆಯಿಂದಲೂ ಬಾಲಹತ್ಯಾದಿ ಪಾಪವೂ ಪರಿಹೃತವಾಗುವುದು. ಗಂಗೆಯಲ್ಲಿರುವ ಪ್ರಯಾಗವು ಅತಿಶ್ರೇಷ್ಠವಾದ ತೀರ್ಥವು. ವೈಷ್ಣವರಿಗೆ ದುರ್ಲಭವಾದದ್ದು. ಅಲ್ಲಿ ಸ್ನಾನ ಮಾಡಿದ ಪುರುಷನು ಕ್ರಮದಿಂದ ವೈಕುಂಠಕ್ಕೆ ಹೋಗುವನು. ಪ್ರಿಯವನ್ನು, ಅಪ್ರಿಯವನ್ನು, ಧರ್ಮವನ್ನು. ಅಧರ್ಮವನ್ನು, ತಿಳಿಯದೆ ಇರುವವನೂ ಗಂಗೆಯಲ್ಲಿ ಸ್ನಾನ ಮಾಡಿದರೆ ಮಹಾಪಾಪದಿಂದ ರಹಿತನಾಗುವನು. ಯಾರು ಗಂಗೆಯಿಂದ ನೂರಾರು ಯೋಜನದೂರದಲ್ಲಿ ಇದ್ದು ಕೊಂಡರೂ ಗಂಗಾ ಗಂಗಾ ಎಂದು ಹೇಳುವನೋ ಅವನು ಸರ್ವಪಾಪ ರಹಿತನಾಗಿ ಕ್ರಮದಿಂದ ವಿಷ್ಣುಲೋಕಕ್ಕೆ ಹೋಗು ವನು. ಬ್ರಹ್ಮಹತ್ಯಾಮಾಡಿದವನು ಗೋಹತ್ಯಾ ಮಾಡಿದವನೂ ಮದ್ಯಪಾನ ಮಾಡಿದವನೂ ಬಾಲಹತ್ಯಾ ಮಾಡಿದವನೂ ಸರ್ವಪಾಪಗಳಿಂದ ರಹಿತನಾಗಿ ಸ್ವರ್ಗಕ್ಕೆ ಹೋಗುವನು. ಬಿಂದುಮಾಧವನ ದರ್ಶನವನ್ನು ಮಾಡಿ ತ್ರಿವೇಣಿಯಲ್ಲಿ ಸ್ನಾನ ಮಾಡುವವನು ಕ್ರಮದಿಂದ ವೈಕುಂಠವನ್ನು ಹೊಂದುವನು. ಸೂರ್ಯೋದಯವಾಗಲು ಕತ್ತಲೆಯು ಹೇಗೆ ನಾಶವನ್ನು ಹೊಂದುವುದೋ ಹಾಗೆಯೇ ಗಂಗೆಯಲ್ಲಿ ಸ್ನಾನ ಮಾಡುವುದ ರಿಂದ ಸರ್ವಪಾಪಗಳೂ ನಾಶವನ್ನು ಹೊಂದುವುವು. ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ, ಕನಖಲ ಎಂಬ ತೀರ್ಥಗಳಲ್ಲಿ ಸ್ನಾನಮಾಡಿದರೆ ಕ್ರಮದಿಂದ ಪುನಃ ಜನ್ಮವು ಪರಿಹೃತವಾಗುವುದು. ಈರೀತಿಯಾಗಿ ಮಹಿಮೆಯನ್ನು ತಿಳಿದು ಕೊಂಡು ಗಂಗಾಸ್ನಾನ ಮಾಡುವವನು ಪಾಪದಿಂದ ರಹಿತನಾಗುವನು. ಹೇಗೆ ದೇವತೆಗಳಲ್ಲಿ ವಿಷ್ಣುವು ಶ್ರೇಷ್ಠನೋ ಯಜ್ಞಗಳಲ್ಲಿ ಅಶ್ವಮೇಧವು ಶ್ರೇಷ್ಠವೋ ಮರಗಳಲ್ಲಿ ಅಶ್ವತ್ಥವು ಶ್ರೇಷ್ಠವೋ ಹಾಗೆಯೇ ನದಿಗಳಲ್ಲಿ ಭಾಗೀರಥಿಯು ಶ್ರೇಷ್ಠವು''.

# ಗಂಗಾವತರಣವು [1]

ಬ್ರಹ್ಮಾಂಡದ ಹೊರಗೆ ನೀರಿನ ಧಾರೆಯಿರುವುದು. ಭಗವಂತನು ತ್ರಿವಿಕ್ರಮಾವತಾರ ವನ್ನು ಮಾಡಿರುವಾಗ ಭಗವಂತನ ಎಡಪಾದದ ಹೆಬ್ಬೆರಳಿನ ಉಗುರಿನಿಂದ ಮೇಲೆ ಇರುವ ಬ್ರಹ್ಮಾಂಡದ ಗೋಡೆಯು ಒಡೆದುಹೋಗಿ ಆ ಒಡಕಿ ನಿಂದ ಆ ಹೊರಗಿನ ನೀರು ಬ್ರಹ್ಮಾಂಡದ ಒಳಗೆ ಪ್ರವೇಶಿಸಿತು. ಅದು ಪರಮಾತ್ಮನ ಪಾದವನ್ನು ತೊಳೆದು ನೀರಾದ ಕಾರಣ ಪರಮಾತ್ಮನ ಪಾದಧೂಳಿಯಿಂದ ಕೆಂಪಾಗಿ ಪರಮಾತ್ಮನ ಪಾದದ ಸಂಬಂಧದಿಂದ ಆಚಮನಾದಿಗಳಿಂದಲೇ ಜನರನ್ನು ಪವಿತ್ರರನ್ನಾಗಿ ಮಾಡತಕ್ಕದ್ದು. ಮುಖ್ಯವಾಗಿ ಭಗವತ್ಪದಿಯೆಂದೂ ಭಗವತ್ಪಾದೋದಕವೆಂದೂ ಹೆಸರುಳ್ಳ ಆ ಗಂಗಾನದಿಯು ಬಹುಕಾಲದ ಮೇಲೆ ಅನೇಕ ಸಾವಿರ ಯುಗಗಳ ಮೇಲೆ ಶಿಂಶುಮಾರರೂಪಿಯಾದ ಪರಮಾತ್ಮನ ಲೋಕದಲ್ಲಿ ಧ್ರುವ ಲೋಕದಲ್ಲಿ ಕಾಣಿಸಿಕೊಂಡಿತು. ಆ ಲೋಕದಲ್ಲಿ ಪರಮಭಗವದ್ಭಕ್ತನಾದ ಉತ್ತಾನ ಪಾದರಾಜನ ಮಗನಾದ ಧ್ರುವರಾಯನು ತನ್ನ ಕುಲದೇವತೆಯಾದ ಭಗವಂತನ ಪಾದೋದಕ ವೆಂದು ಅತಿಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ ಕಣ್ಣಿನಲ್ಲಿ ಆನಂದಬಾಷ್ಪವುಳ್ಳವ ನಾಗಿ ದೇಹದಲ್ಲಿ ರೋಮಾಂಚವುಳ್ಳವನಾಗಿ ಈಗಲೂ ಅತಿ ಆದರದಿಂದ ಶಿರಸ್ಸಿನಲ್ಲಿ ಧರಿಸಿಕೊಂಡು ಇರುವನು. ಅಲ್ಲಿಂದ ಸಪ್ತರ್ಷಿಲೋಕಕ್ಕೆ ಬರಲು ಅಲ್ಲಿ ಸಪ್ತಋಷಿಗಳು ಪರಮಾತ್ಮನಲ್ಲಿ ಭಕ್ತಿಯೋಗದ ಲಾಭದಿಂದಲೇ ಸಮಸ್ತವನ್ನೂ ಉಪೇಕ್ಷೆ ಮಾಡಿ ದವರು ತಮ್ಮ ತಪಸ್ಸಿನ ಆತ್ಯಂತಿಕ ಸಿದ್ಧಿಯೆಂದು ತಮ್ಮ ಜಟೆಗಳಿಂದ ಧರಿಸುವರು. ಆಮೇಲೆ ಸಪ್ತರ್ಷಿಲೋಕದಿಂದ ಅನೇಕಸಾವಿರ ಕೋಟಿ ವಿಮಾನ ಸಮೂಹದಿಂದ ಕೂಡಿದ ದೇವಯಾನ ಮಾರ್ಗದಿಂದ ಕೆಳಗೆ ಬರುತ್ತಾ ಚಂದ್ರಮಂಡಲವನ್ನು ತೋಯಿಸಿ ಮೇರುಮಧ್ಯದಲ್ಲಿ ಇರುವ ಶತಕೋಟಿಯೆಂಬ ಬ್ರಹ್ಮದೇವರ ಪುರದ ಮಧ್ಯದಲ್ಲಿ ಬೀಳುತ್ತದೆ. ಅಲ್ಲಿ ನಾಲ್ಕಾಗಿ ವಿಭಾಗವನ್ನು ಹೊಂದಿ ನಾಲ್ಕು ಹೆಸರಿನಿಂದ ನಾಲ್ಕು ದಿಕ್ಕುಗಳಲ್ಲಿ ಹೋಗಿ ಸಮುದ್ರವನ್ನು ಪ್ರವೇಶಿಸುತ್ತದೆ. ಸೀತಾ ಅಲಕನಂದಾ ಚಕ್ಷು ಭದ್ರಾ ಎಂದು ನಾಲ್ಕು ಹೆಸರುಳ್ಳದಾಗುತ್ತದೆ. ಸೀತಾನದಿಯು ಬ್ರಹ್ಮದೇವರ ಪುರದಿಂದ ಕೇಸರಪರ್ವತಗಳ ಶಿಖರಗಳಿಂದ ಕೆಳಗೆ ಕೆಳಗೆ ಬೀಳುತ್ತಾ ಗಂಧಮಾದನ ಪರ್ವತದ ಶಿಖರದಲ್ಲಿ ಬಿದ್ದು ಭದ್ರಾಶ್ವವರ್ಷದ ಮಧ್ಯದಿಂದ ಪೂರ್ವದಿಕ್ಕಿನಲ್ಲಿ ಉಪ್ಪು ನೀರಿನ ಸಮುದ್ರವನ್ನು ಪ್ರವೇಶಿಸುತ್ತದೆ. ಚಕ್ಷುಃ ಎಂಬ ನದಿಯು

1. ಭಾ-5-17

ಮಾಲ್ಯವತ್ಪರ್ವತದ ಶಿಖರದಿಂದ ಕೆಳಗೆ ಬೀಳುತ್ತಾ ಮಹಾವೇಗವುಳ್ಳದ್ದಾಗಿ ಕೇತುಮಾಲವರ್ಷದ ಮಧ್ಯದಲ್ಲಿ ಪಶ್ಚಿಮದಿಕ್ಕಿನಲ್ಲಿ ಉಪ್ಪುನೀರಿನ ಸಮುದ್ರವನ್ನು ಪ್ರವೇಶಿಸುತ್ತದೆ. ಭದ್ರಾನದಿಯು ಮೇರುಪರ್ವತದ ಶಿಖರದಿಂದ ಆಕಾಶಮಾರ್ಗ ದಿಂದ ಬೀಳುತ್ತಾ ನೀಲಪರ್ವತದ ಶಿಖರದಲ್ಲಿ ಬಿದ್ದು ಆ ನೀಲಪರ್ವತದ ಶಿಖರದಿಂದ ಆಕಾಶಮಾರ್ಗದಿಂದ ಶ್ವೇತಗಿರಿಯ ಶಿಖರಕ್ಕೆ ಬಿದ್ದು ಅಲ್ಲಿಂದ ಆಕಾಶಮಾರ್ಗದಿಂದ ಶೃಂಗವಾನ್ ಎಂಬ ಪರ್ವತದ ಶಿಖರವನ್ನು ಹೊಂದಿ ಅಲ್ಲಿಂದ ಹರಿಯುತ್ತಾ ಉತ್ತರಕುರು ವರ್ಷವನ್ನು ಅತಿಕ್ರಮಿಸಿ ಉತ್ತರದಿಕ್ಕಿನಲ್ಲಿ ಉಪ್ಪುನೀರಿನ ಸಮುದ್ರವನ್ನು ಪ್ರವೇಶಿಸುತ್ತದೆ. ಹಾಗೆಯೇ ಅಲಕನಂದಾನದಿಯು ಬ್ರಹ್ಮಪುರದಿಂದ ದಕ್ಷಿಣದಿಕ್ಕಿನಲ್ಲಿ ನಿಷಧಪರ್ವತದ ಬಹುಶಿಖರಗಳನ್ನು ಅತಿಕ್ರಮಿಸಿ ಆಕಾಶಮಾರ್ಗ ದಿಂದ ಹೇಮಕೂಟ ಹಿಮಾಲಯ ಪರ್ವತಗಳ ಮಧ್ಯದಲ್ಲಿ ಆಕಾಶಮಾರ್ಗದಿಂದ ಬೀಳುತ್ತಾ ಭಾರತವರ್ಷದ ಮಧ್ಯದಿಂದ ಉಪ್ಪುನೀರಿನ ಸಮುದ್ರವನ್ನು ಪ್ರವೇಶಿಸು ವುದು. ಭಾರತವರ್ಷದಲ್ಲಿ ಮೇರು ಮೊದಲಾದ ಪರ್ವತಗಳಿಂದ ಹುಟ್ಟಿದ ಇನ್ನೂ ಅನೇಕ ನದೀನದಿಗಳು ಇರುವುವು. ಜಂಬೂದ್ವೀಪದಲ್ಲಿಯೂ ಭಾರತವರ್ಷವೇ ಕರ್ಮಭೂಮಿಯು. ಇತರ ಎಂಟು ವರ್ಷಗಳು ಸ್ವರ್ಗಕ್ಕೆ ಹೋದವರು ಪುಣ್ಯಶೇಷದಿಂದ ಭೋಗವನ್ನು ಅನುಭವಿಸುವ ಭೂಮಿಯ ಸ್ವರ್ಗಪ್ರದೇಶಗಳು. ಅಲ್ಲಿರುವ ಪುರುಷರು ದೇವತೆಗಳಂತೆ ಇರುವರು. ಹತ್ತುಸಾವಿರ ವರ್ಷ ಆಯುಷ್ಯವುಳ್ಳವರಾಗಿರುವರು. ಹತ್ತುಸಾವಿರ ಆನೆಗಳ ಬಲವುಳ್ಳವರಾಗಿರುವರು. ದೃಢವಾದ ಶರೀರವುಳ್ಳವರಾಗಿರುವರು. ಅವರು ಸ್ತ್ರೀಯರಿಂದ ಅತಿಸುಖವನ್ನು ಅನುಭವಿಸುತ್ತಿರುವರು. ಅವರಿಗೆ ಒಂದೇ ಮಗುವು ಉಂಟಾಗುವುದು. ಅವರಿಗೆ ಅಲ್ಲಿ ತ್ರೇತಾಯುಗಕ್ಕೆ ಸಮಾನವಾಗಿ ಕಾಲವು ಕಳೆಯುವುದು. ಅಲ್ಲಿ ದೇವತೆಗಳೂ ದೇವತಾಸ್ತ್ರೀಯರಿಂದ ಸಹಿತರಾಗಿ ವಿಹರಿಸುತ್ತಿರುವರು.



ಭಗೀರಥರಾಜನು ಚಕ್ರವರ್ತಿಯಾಗಿದ್ದನು. ಎಲ್ಲರಿಗೂ ಸಂತೋಷಕರನಾಗಿ ದ್ದನು. ಅವನು ತನ್ನ ಪಿತೃಗಳಿಗೆ ಕಪಿಲದೇವರಿಂದ ಸಂಭವಿಸಿದ ಘೋರವಾದ ಮರಣವನ್ನೂ ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗಿಲ್ಲವೆಂಬ ವಿಷಯವನ್ನು ಕೇಳಿದನು. ಇದರಿಂದ ಅವನು ಮನಸ್ಸಿನಲ್ಲೇ ನೊಂದುಕೊಂಡು ರಾಜ್ಯಭಾರವನ್ನು ಮಂತ್ರಿಗೆ ಒಪ್ಪಿಸಿ ಹಿಮವತ್ಪರ್ವತದ ಸಮೀಪಕ್ಕೆ ತಪಸ್ಸು ಮಾಡಲಿಕ್ಕೆ ಹೋದನು. ತಪಸ್ಸಿನಿಂದ

ಪಾಪವನ್ನು ಕಳೆದುಕೊಂಡು ಗಂಗಾದೇವಿಯನ್ನು ಆರಾಧಿಸಬೇಕೆಂದು ಹೋದನು. ಅತಿಮನೋಹರವಾದ ಹಿಮವತ್ಪರ್ವತವನ್ನು ನೋಡಿದನು. ಅಲ್ಲಿ ಹಣ್ಣುಗಳನ್ನೂ ಗೆಣಸುಗಳನ್ನೂ ತಿನ್ನುತ್ತಾ ನೀರನ್ನು ಕುಡಿಯುತ್ತಾ ಸಾವಿರವ ವರ್ಷ ಭಯಂಕರವಾದ ತಪಸ್ಸನ್ನು ಮಾಡಿದನು. ಸಾವಿರ ವರ್ಷಗಳು ಗಂಗಾದೇವಿಯು ಕಾಣಿಸಿಕೊಂಡರು. 'ಮಹಾರಾಜನೇ! ನೀನು ನನ್ನಿಂದ ಯಾವುದನ್ನು ಅಪೇಕ್ಷಿಸುವಿ? ನಿನಗೆ ಏನನ್ನು ಕೊಡಲಿ? ಅದನ್ನು ಹೇಳು. ನಾನು ಅದನ್ನು ನಿನ್ನ ಮಾತಿನಂತೆ ಮಾಡುತ್ತೇನೆ' ಎಂದು ಹೇಳಿದರು. ಆಗ ಭಗೀರಥನು ನಮಸ್ಕಾರಮಾಡಿ ಕೈಮುಗಿದುಕೊಂಡು 'ವರಪ್ರದೆ ಯಾದ ಮಹಾನದಿಯೇ! ನನ್ನ ಪಿತಾಮಹರು ಯಜ್ಞದ ಕುದುರೆಯನ್ನು ಹುಡುಕುತ್ತಾ ಹೋದವರು ಕಪಿಲನಾಮಕ ಪರಮಾತ್ಮನಿಂದ ನಾಶವನ್ನು ಹೊಂದಿ ದರು. ಅರವತ್ತು ಸಾವಿರ ಜನರೂ ಕಪಿಲದೇವರ ಸಮೀಪಕ್ಕೆ ಒಂದೇಕ್ಷಣದಲ್ಲಿ ಮರಣವನ್ನು ಹೊಂದಿದರು. ಈರೀತಿಯಾಗಿ ನಾಶವನ್ನು ಹೊಂದಿದ ಅವರಿಗೆ ಸ್ವರ್ಗವು ಲಭಿಸ ಲಿಲ್ಲ. ನೀವು ಅವರ ದೇಹಗಳನ್ನು ನಿಮ್ಮ ನೀರಿನಿಂದ ಅಭಿಷೇಕ ಮಾಡುವವರೆಗೆ ಅವರಿಗೆ ಸ್ವರ್ಗವಾಸವಾಗಲಾರದು. ಮಹಾನುಭಾವಳೇ! ಸಗರರಾಜನ ಮಕ್ಕಳಾದ ನನ್ನ ಪಿತೃಗಳನ್ನು ನೀವು ಸ್ವರ್ಗಕ್ಕೆ ಕಳುಹಿಸಬೇಕು. ಅದಕ್ಕಾಗಿ ನಾನು ನಿಮ್ಮನ್ನು ಪ್ರಾರ್ಥಿಸುತ್ತೇನೆ' ಎಂದು ಹೇಳಿದನು.

ಲೋಕನಮಸ್ಕೃತರಾದ ಗಂಗಾದೇವಿಯರು ರಾಜನ ಈ ಮಾತನ್ನು ಕೇಳಿ ಅತ್ಯಂತ ಪ್ರೀತಿಯುಳ್ಳವರಾಗಿ ಭಗೀರಥರಾಜನೊಡನೆ 'ಮಹಾರಾಜನೇ! ನಾನು ನಿನ್ನ ಮಾತಿನಂತೆ ಮಾಡುತ್ತೇನೆ. ಇದಕ್ಕೆ ಸಂಶಯಬೇಡ. ಆದರೆ ಆಕಾಶದಿಂದ ಕೆಳಗೆ ಬೀಳತಕ್ಕ ನನ್ನ ವೇಗವನ್ನು ಸಹಿಸುವವರು ದೇವಶ್ರೇಷ್ಠರಾದ ರುದ್ರದೇವರು ಹೊರತು ಬೇರೊಬ್ಬರಿಲ್ಲ. ಆದುದರಿಂದ ಅವರನ್ನು ತಪಸ್ಸುಮಾಡಿ ಸಂತೋಷ ಪಡಿಸು. ಅವರು ಆಕಾಶದಿಂದ ಕೆಳಗೆ ಹಾರುವ ನನ್ನನ್ನು ಶಿರಸಾ ಧರಿಸುತ್ತಾರೆ. ನಿನ್ನ ಪಿತೃಗಳಿಗೆ ಹಿತವಾಗುವುದಕ್ಕಾಗಿ ಅವರು ನಿನ್ನ ಮಾತಿನಂತೆ ಮಾಡುವರು' ಎಂದು ಹೇಳಿದರು.

ಈಮಾತನ್ನು ಕೇಳಿ ಮಹಾರಾಜನಾದ ಭಗೀರಥನು ಕೈಲಾಸಪರ್ವತಕ್ಕೆ ಹೋಗಿ ರುದ್ರದೇವರನ್ನು ಸಂತೋಷಪಡಿಸಿದನು. ಕೆಲವು ಸಮಯದ ಮೇಲೆ ತನ್ನ ಪಿತೃಗಳ ಸ್ವರ್ಗವಾಸಕ್ಕಾಗಿ ರುದ್ರದೇವರು ಗಂಗೆಯನ್ನು ಶಿರಸ್ಸಿನಲ್ಲಿ ಧರಿಸುವಂತೆ ವರವನ್ನು ಹೊಂದಿದನು.

ಭಗೀರಥನ ಮಾತನ್ನು ಕೇಳಿ ರುದ್ರದೇವರು ದೇವತೆಗಳ ಪ್ರಿಯಕ್ಕಾಗಿ ಎಂದರೆ ಸಮುದ್ರಕ್ಕೆ ನೀರನ್ನು ತುಂಬಿಸಬೇಕೆಂಬ ದೇವತೆಗಳ ಪ್ರಿಯವನ್ನು ಮಾಡುವುದಕ್ಕಾಗಿ ಆಕಾಶದಿಂದ ಕೆಳಗೆ ಹಾರುವ ದಿವ್ಯಳಾದ ಪರಮಪವಿತ್ರೆಯಾದ ಗಂಗೆಯನ್ನು ನಾನು ನಿನಗೋಸ್ಕರ ಶಿರಸ್ಸಿನಲ್ಲಿ ಧರಿಸುವೆನು ಎಂದರು. ಈರೀತಿಯಾಗಿ ಹೇಳಿ ರುದ್ರದೇವರು ಹಿಮವತ್ಪರ್ವತಕ್ಕೆ ನಾನಾ ಆಯುಧಧಾರಿಗಳಾದ ಭಯಂಕರಗಳಾದ ತನ್ನ ಭೂತಗಳಿಂದ ಕೂಡಿಕೊಂಡು ಬಂದರು. ರುದ್ರದೇವರು ಅಲ್ಲಿ ನಿಂತುಕೊಂಡು 'ರಾಜನೇ! ಹಿಮವತ್ಪುತ್ರಿಯಾದ ಗಂಗಾದೇವಿಯನ್ನು ಪ್ರಾರ್ಥಿಸಿಕೊ. ನಿನ್ನ ಪಿತೃಗಳು ಪವಿತ್ರರಾಗುವುದಕ್ಕೋಸ್ಕರ ಸ್ವರ್ಗದಿಂದ ಕೆಳಗೆ ಹಾರುವ ಗಂಗೆಯನ್ನು ನಾನು ಶಿರಸ್ಸಿನಿಂದ ಧರಿಸುವೆನು' ಎಂದು ಹೇಳಿದರು. ರುದ್ರದೇವರು ಹೇಳಿದ ಮಾತನ್ನು ಕೇಳಿ ಭಗೀರಥರಾಜನು ನಮಸ್ಕಾರಮಾಡಿ ಗಂಗಾದೇವಿಯರನ್ನು ಧ್ಯಾನಮಾಡಿದನು. ರಾಜನು ಧ್ಯಾನಮಾಡಲು ಗಂಗಾದೇವಿಯರು ರುದ್ರದೇವರನ್ನು ನಿಂತಿರುವುದನ್ನು ನೋಡಿ ಬೇಗನೇ ಆಕಾಶದಿಂದ ಕೆಳಗೆ ಹಾರಿದರು. ಆಕಾಶದಿಂದ ಕೆಳಗೆ ಇಳಿಯುತ್ತಿದ್ದ ಗಂಗಾನದಿಯನ್ನು ನೋಡಲಿಕ್ಕೆ ದೇತೆಗಳೂ ಋಷಿಗಳು ಗಂಧರ್ವರೂ ಸರ್ಪರೂ (ಗಳೂ) ರಾಕ್ಷಸರೂ ಬಂದು ಸೇರಿದರು. ತರುವಾಯ ಮಹಾಸುಳಿಯುಳ್ಳವರಾಗಿ ಮೀನು ಮೊಸಳೆಗಳಿಂದ ಕೂಡಿಕೊಂಡು ಪ್ರವಾಹರೂಪದಿಂದ ಕೆಳಗೆ ಹಾರಿದರು. ರುದ್ರದೇವರಿಗೆ ತನ್ನ ಹಣೆಯ ಪ್ರದೇಶದಲ್ಲಿ ಬಿದ್ದಿರುವ ಗಂಗಾಪ್ರವಾಹವನ್ನು ಮುತ್ತಿನಸರವನ್ನು ಧರಿಸುವಂತೆ ಧರಿಸಿದರು. ಅಲ್ಲಿಂದ ಗಂಗೆಯು ಕೆಳಗೆ ಹರಿಯುತ್ತಾ ಮೂರು ಭಾಗವಾಗಿ ಹರಿಯುತ್ತಾ ಹೋದರು. ನಾನಾವಿಧವಾಗಿ ಹರಿಯುತ್ತಾ ಭೂಮಿಗೆ ಬಂದು ಗಂಗಾದೇವಿಯು ಭಗೀರಥನೊಡನೆ 'ಮಹಾರಾಜನೇ! ನಾನು ಹೋಗಬೇಕಾದ ಮಾರ್ಗವನ್ನು ತೋರಿಸು. ನಿನಗೋಸ್ಕರವಾಗಿ ನಾನು ಭೂಮಿಗೆ ಬಂದಿರುತ್ತೇನೆ' ಎಂದು ಹೇಳಿದರು.

ಆ ಮಾತನ್ನು ಕೇಳಿ ಭಗೀರಥನು ತನ್ನ ಪೂರ್ವಿಕರಾದ ಅರುವತ್ತು ಸಾವಿರ ಸಾಗರರ ದೇಹಗಳು ಪವಿತ್ರವಾದ ನೀರಿನಿಂದ ಒದ್ದೆಯಾಗುವುದಕ್ಕಾಗಿ ಅಲ್ಲಿಗೆ ಹೋದನು. ಲೋಕನಮಸ್ಕೃತರಾದ ರುದ್ರದೇವರು ಈರೀತಿಯಾಗಿ ಗಂಗೆಯನ್ನು ಧರಿಸಿ ದೇವತೆಗಳಿಂದ ಸಹಿತರಾಗಿ ಕೈಲಾಸಕ್ಕೆ ಹೊರಟುಹೋದರು. ಭಗೀರಥ ರಾಜನು ವೇಗದಿಂದ ಗಂಗೆಯಿಂದ ಸಹಿತನಾಗಿ ಸಮುದ್ರಕ್ಕೆ ಹೋಗಿ ಸಮುದ್ರವು ನೀರಿನಿಂದ ತುಂಬುವಂತೆ ಮಾಡಿದನು. ರಾಜನು ಗಂಗೆಯನ್ನು ತನ್ನ ಪುತ್ರಿಯಂತೆ ಭಾವನೆ ಮಾಡಿದನು. ಪೂರ್ಣವಾದ ಮನೋಭಿಲಾಷೆಯುಳ್ಳವನಾಗಿ ಪಿತೃಗಳಿಗೆ

ಗಂಗಾನದಿಯಲ್ಲಿ ತರ್ಪಣವನ್ನು ಬಿಟ್ಟನು. ಈರೀತಿಯಾಗಿ ಭಗೀರಥನಿಂದಾಗಿ ಗಂಗೆಯು ಭೂಮಿಗೆ ಇಳಿದು ಸಮುದ್ರವು ನೀರಿನಿಂದ ತುಂಬಿತು.



## ತಪತೀನದಿಯ ಮಹಿಮೆಯು [1]

ತಪತೀ ನದಿಯು ಸೂರ್ಯನ ಮಗಳು. ಒಂದು ಸಂದರ್ಭದಲ್ಲಿ ಗಂಗೆಗೆ ತಪತಿಯೊಡನೆ ಸ್ಪರ್ಧೆಯುಂಟಾಯಿತು. ತಪತಿಯು ಗಂಗೆಯಿಂದ ಅಧಿಕವಾಗಿ ಪಾವಿತ್ರ್ಯವನ್ನು ಉಂಟುಮಾಡುತ್ತಿದ್ದಳು. ಒಂದು ಸಮಯದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದ ಒಬ್ಬ ಬ್ರಾಹ್ಮಣನು ಗಂಗೆಗೆ ಬರತಕ್ಕವನಾಗಿ ಕಪ್ಪಾಗಿ ಒಣಗಿಹೋದ ಮುಖವುಳ್ಳವನಾಗಿ ಚಂಡಾಲರಂತೆ ರೂಪವುಳ್ಳವನಾಗಿ ಇದ್ದನು. ಅವನು ತಪತಿಯ ಮಹಿಮೆಯನ್ನು ಕೇಳಿ ಅಲ್ಲಿಗೆ ಹೋದನು. ಅವನು ಅಲ್ಲಿ ಮೂರುದಿನ ಸ್ನಾನಮಾಡಿದ ಮಾತ್ರದಿಂದ ಅವನ ಚಂಡಾಲರೂಪವು ಹೊರಟುಹೋಯಿತು. ತರುವಾಯ ಎಲ್ಲಾ ಮುನಿಗಳು ಗಂಗೆಯನ್ನು ಬಿಟ್ಟು ತಪತಿಯನ್ನೇ ಸ್ತೋತ್ರಮಾಡುತ್ತಾ ಆಶ್ರಯಿಸಿದರು. ಇದರಿಂದ ಗಂಗೆಯು ದುಃಖದಿಂದ ಅಳುತ್ತಾ ಬ್ರಹ್ಮದೇವರ ಬಳಿಗೆ ಹೋದಳು.

ಬ್ರಹ್ಮದೇವರು ಗಂಗೆಯನ್ನು ನೋಡಿ 'ಯಾಕೆ ದೀನಳಾಗಿರುವಿ? ಯಾಕೆ ಅಳುತ್ತಿರುವಿ?' ಎಂದು ಕೇಳಿದರು. ಆಗ ಗಂಗೆಯು 'ಸೂರ್ಯಪುತ್ರಿಯಾದ ತಪತೀ ನದಿಯು ಪ್ರಸಿದ್ಧಳಾಗಿರುವಳು. ಅವಳು ಪವಿತ್ರೀಕರಿಸುವುದರಲ್ಲಿ ಎಲ್ಲಾ ನದಿಗಳನ್ನು ಜಯಿಸಿರುವಳು. ಅವಳಲ್ಲಿ ಭಕ್ತಿಯಿಂದ ಸ್ನಾನಮಾಡುವ ಮಂತ್ರದಿಂದ ಪಾಪಿಷ್ಠ ರಾದವರು ಪಾಪವನ್ನು ಕಳಕೊಂಡು ಉತ್ತಮಲೋಕವನ್ನು ಹೊಂದುತ್ತಿರುವರು. ಅವಳ ಮಹಿಮೆಯಂತೆ ಯಾವ ನದಿಗೂ ಮಹಿಮೆಯು ಕಾಣಿಸುವುದಿಲ್ಲ. ಅವಳ ಮಹಿಮೆಯು ನನ್ನ ಮಹಿಮೆಗಿಂತಲೂ ಹೆಚ್ಚಾಗಿರುವುದು. ನಾನು ಪೂರ್ವದಲ್ಲಿ ನಿಮ್ಮ ಅನುಗ್ರಹದಿಂದ ಎಲ್ಲಾ ನದಿಗಳಿಂದಲೂ ಅಧಿಕಳಾಗಿ ಇದ್ದೆನು. ಈಗ ನನ್ನ ಮಹತ್ವವು ಕಳೆದುಹೋಯಿತು. ತಪತಿಯಿಂದಾಗಿ ನನ್ನ ಮಹಿಮೆಯು ಕಡಿಮೆ ಯಾಯಿತು. ನನಗೆ ಪರಾಜಯವಾಯಿತೆಂದು ನನಗೆ ಅಷ್ಟು ದುಃಖವಾಗುವುದಿಲ್ಲ. ನೀವು ನನ್ನನ್ನು ಅಧಿಕಳನ್ನಾಗಿ ಮಾಡಿದ್ದು ಅನ್ಯಥಾ ಆಯಿತಲ್ಲಾ ಎಂದು ದುಃಖಪಡುತ್ತೇನೆ' ಎಂದು ಹೇಳಿದಳು.

---

1. ಸ್ಕ.ಪು. ಆಷಾ.ಮಾ.ಮಾ. ಅ-1

ಅದನ್ನು ಕೇಳಿ ಬ್ರಹ್ಮದೇವರು ನಾರದರನ್ನು ಕೂಗಿ ತಪತಿಯ ಮಹಿಮೆಯು ನಷ್ಟವಾಗುವಂತೆ ಮಾಡು ಎಂದು ಹೇಳಿದರು. ನಾರದರು ತನ್ನ ಯೋಗಸಾಮರ್ಥ್ಯ ದಿಂದ ತಪತಿಯ ಮಹಿಮೆಯನ್ನು ಅಪಹರಿಸಿ ದರು. ಇದರಿಂದ ನಾರದರಿಗೆ ಅಜ್ಞಾನವು ಬಂದು ಸೇರಿತು. ಅವರು ಬ್ರಹ್ಮದೇವರ ಬಳಿಗೆ ಬಂದು 'ನಾನು ತಮ್ಮ ಆಜ್ಞೆಯಂತೆ ತಪತಿಯ ಮಹಿಮೆಯನ್ನು ಅಪಹರಿಸಿದೆನು. ಇದರಿಂದ ನನಗೆ ಅಜ್ಞಾನವು ಬಂದು ಸೇರಿತು. ನಾನು ಅಜ್ಞಾನಿಯಾಗಿ ಬದುಕಿರಲಾರೆನು. ನನಗೆ ಅಜ್ಞಾನಪರಿಹಾರವಾಗುವ ಉಪಾಯವನ್ನು ಹೇಳಬೇಕು' ಎಂದು ಹೇಳಿಕೊಂಡರು. ಆಗ ಬ್ರಹ್ಮದೇವರು 'ನಾರದ! ನೀನು ತಪತಿಯನ್ನೇ ಮರೆಹೊಂದುವವನಾಗು' ಎಂದು ಹೇಳಿ—

'ತಪತಿಯ ಮಹಿಮೆಯನ್ನು ಯಾರು ಕಡಿಮೆ ಮಾಡಲಿಕ್ಕೆ ಆಗುವುದು? ತಪತಿಯೇ! ನೀನು ಸೂರ್ಯನ ಮಗಳಾಗಿರುವಿ. ಸೂರ್ಯನ ಕಿರಣಗಳಿಂದ ಪವಿತ್ರಳಾಗಿರುವಿ. ನಿನ್ನ ತಂದೆಯಾದ ಸೂರ್ಯನ ಕಿರಣಗಳ ಸ್ಪರ್ಶದಿಂದ ಇತರ ನದಿಗಳು ಪವಿತ್ರಗಳಾಗುವುವು. ಅಂತಹ ಸೂರ್ಯನ ಸಾಕ್ಷಾತ್ ಪುತ್ರಿಯಾದ ನಿನ್ನ ಮಹಿಮೆಯನ್ನು ಏನೆಂದು ಹೇಳಬೇಕು? ಯಾವ ಸೂರ್ಯನು ಜಗತ್ತಿನ ಕತ್ತಲೆಯನ್ನು ಪರಿಹರಿಸುವನು. ಅವನ ಮಗಳಾದ ನೀನು ಸ್ನಾನ ಮಾಡುವವರ ಅಜ್ಞಾನವನ್ನು ಪರಿಹಾರ ಮಾಡುವುದರಲ್ಲಿ ಏನು ಆಶ್ಚರ್ಯವಿದೆ?' ಎಂದು ತಪತಿಯನ್ನು ಪ್ರಶಂಸಿದರು.

ಈರೀತಿಯಾಗಿ ಬ್ರಹ್ಮದೇವರು ಹೊಗಳಿದ್ದನ್ನು ಕೇಳಿ ತಪತಿಯು ಸಂತೋಷ ವುಳ್ಳವಳಾದಳು. ಬ್ರಹ್ಮದೇವರ ಬಳಿಗೆ 'ಪಿತಾಮಹ! ನನ್ನನ್ನು ಯಾಕೆ ಸ್ತೋತ್ರ ಮಾಡಿದಿರಿ? ನೀವು ಸ್ತೋತ್ರ ಮಾಡಿದ್ದು ನನ್ನ ಪ್ರತಿಷ್ಠೆಗೆ ಕಾರಣವಾಯಿತು. ತಮ್ಮಿಂದ ಪ್ರಶಂಸಿಸಲ್ಪಟ್ಟ ಧನ್ಯಳಾಗಿರುವೆನು. ಮೂರುಲೋಕದಲ್ಲಿಯೂ ಪೂಜ್ಯಳಾಗಿರುವೆನು' ಎಂದು ಹೇಳಿದಳು.

ಆಗ ಬ್ರಹ್ಮದೇವರು 'ತಪತಿಯೇ! ನಾನು ಪೂರ್ವದಲ್ಲಿ ಗಂಗೆಯನ್ನು ನದಿಗಳಲ್ಲಿ ಶ್ರೇಷ್ಠಳನ್ನಾಗಿ ಮಾಡಿರುವೆನು. ಅವಳು ನಿನ್ನ ಮಹಿಮೆಯಿಂದ ಪರಾಜಿತಳಾಗಿ ದೀನ ಳಾಗಿ ನನ್ನ ಬಳಿಗೆ ಬಂದಳು. ನಾರದನು ನಿನ್ನ ಮಹಿಮೆಯನ್ನು ಯೋಗಸಾಮರ್ಥ್ಯ ದಿಂದ ಅಪಹರಿಸಿದನು. ಇದರಿಂದ ಅವನಿಗೆ ಅಜ್ಞಾನವು ಬಂದಿತು. ನೀನು ನಿನ್ನ ಮಾತಿನಿಂದ ಅವನಿಗೆ ಅನುಗ್ರಹ ಮಾಡು. ಗಂಗೆಗೆ ಪೂರ್ವದಂತೆಯೇ ಮಹಿಮೆಯಿರುವಂತೆಯೂ ಆಗಬೇಕು' ಎಂದು ಹೇಳಿದರು. ತಪತಿಯು 'ನಾನು ತಮ್ಮ ಆಜ್ಞೆಯನ್ನು ಮೀರಲಾರೆನು. ನಾರದರಿಗೆ ಪೂರ್ವದಂತೆಯೇ ಜ್ಞಾನವು

ಬರುವುದು. ನಾನು ಮಹಿಮೆಯನ್ನು ಕಳೆದುಕೊಂಡು ಹೇಗೆ ಬದುಕಿರಲಿ? ಪ್ರಾಣಗಳು ನಶ್ವರಗಳು. ಮಹಿಮೆಯು ನಿತ್ಯವಾದದ್ದು' ಎಂದು ಹೇಳಿಕೊಂಡಳು.

ಆಗ ಬ್ರಹ್ಮದೇವರು 'ತಪತಿಯೇ! ನಿನಗೆ ಪೂರ್ವದಲ್ಲಿ ಯಾವಾಗಲೂ ಯಾವ ಮಹಿಮೆಯು ಇದ್ದಿತೋ ಅದೇ ಮಹಿಮೆಯು ಆಷಾಢಮಾಸದಲ್ಲಿ ಮಾತ್ರ ಇರುತ್ತದೆ. ಯಾವ ಯಾವ ಅಭೀಷ್ಟವನ್ನು ಅಪೇಕ್ಷಿಸಿಕೊಂಡು ಆಷಾಢಮಾಸದಲ್ಲಿ ನಿನ್ನಲ್ಲಿ ಸ್ನಾನವನ್ನು ಮಾಡುವರೋ ಆವಾವ ಅಭೀಷ್ಟವನ್ನು ಹೊಂದುವರು. ಸ್ವರ್ಗವನ್ನು ಅಪೇಕ್ಷಿಸುವವನು ಸ್ವರ್ಗವನ್ನು ಹೊಂದುವನು. ಮೋಕ್ಷವನ್ನು ಅಪೇಕ್ಷಿಸುವವನು ಕ್ರಮದಿಂದ ಸಾಧನಮಾಡಿ ಮೋಕ್ಷವನ್ನು ಹೊಂದುವನು. ದುರ್ಲಭವಾದ ಎಲ್ಲಾ ಫಲವನ್ನು ಆಷಾಢಮಾಸದಲ್ಲಿ ನಿನ್ನಲ್ಲಿ ಸ್ನಾನದಿಂದ ಹೊಂದುವರು. ಗಂಗೆಯು ಪೂರ್ವದಂತೆಯೇ ಶ್ರೇಷ್ಠಳಾಗಿ ಇರಲಿ. ಇತರ ನದಿಗಳೂ ತಮ್ಮ ಮಹಿಮೆಯನ್ನು ಹೊಂದಲಿ' ಎಂದು ಹೇಳಿದರು. ತಪತಿಯು ಬ್ರಹ್ಮದೇವರ ಆಜ್ಞೆಯನ್ನು ಶಿರಸಾವಹಿಸಿದಳು. ಆ ಕಾಲವನ್ನು ಆರಂಭಿಸಿ ಆಷಾಢಮಾಸದಲ್ಲಿ ತಪತೀನದಿಯಲ್ಲಿ ಸ್ನಾನಮಾಡುವುದು. ಸರ್ವಪಾಪ ಪರಿಹಾರಕವಾಗಿರುವುದು. ಮಾಘಸ್ನಾನಕ್ಕಿಂತ ಆಷಾಢಮಾಸದಲ್ಲಿ ತಪತೀಸ್ನಾನವು ಹತ್ತುಪಾಲು ಅಧಿಕವಾದ ಪುಣ್ಯವನ್ನು ಉಂಟುಮಾಡುವುದು. ಆದುದರಿಂದ ಅದು ಅತಿಪ್ರಶಸ್ತವಾದದ್ದು. (ಭಾಗ.IX-8)



## ಕಾವೇರಿಸ್ನಾನದ ಮಹಿಮೆ [1]

ಸುಶೀಲೆಯು ಬ್ರಹ್ಮದೇವರ ಸಭೆಗೆ ಗಮನಮಾಡಿದ ಮೇಲೆ ಬ್ರಹ್ಮಶರ್ಮನು ಕೆಲವು ದಿವಸ ದುಃಖದಿಂದ ಮನೆಯನ್ನು ಬಿಟ್ಟು ಎಲ್ಲಿಗೂ ಹೋಗದೆ ಮನೆಯಲ್ಲಿಯೇ ಇದ್ದನು. ತರುವಾಯ ಒಂದುದಿನದಲ್ಲಿ ಕಳ್ಳರು ಬಂದು ಮನೆಯಲ್ಲಿದ್ದ ಹಣವನ್ನೆಲ್ಲಾ ತೆಗೆದುಕೊಂಡು ಹೋದರು. ಇದರಿಂದ ದರಿದ್ರನಾಗಿ ಹಸಿವೆಬಾಯಾರಿಕೆಗಳಿಂದ ಪೀಡಿತನಾಗಿ ಮಕ್ಕಳಿಂದ ಪರಿತ್ಯಾಗ ಮಾಡಲ್ಪಟ್ಟವನಾಗಿ ಪೂರ್ವದಂತೆ ಕಂಡ ಕಡೆ ಭೋಜನ ಮಾಡುತ್ತಾ ಸಂಚರಿಸಿದನು. ಬಂಧುಗಳು ಮನೆಗೆ ಹೋಗಲು ಇವನು ಪೂರ್ವದಲ್ಲಿ ಬಂಧುಗಳಿಗೆ ಉಪಕಾರಮಾಡದೆ ಇದ್ದಕಾರಣ ಒಬ್ಬರೂ ತಾವು ತಮ್ಮ ಮನೆಗೆ ಸೇರಿಸಿಕೊಳ್ಳಲಿಲ್ಲ. ಅವನನ್ನು ಶಪಿಸಿದರು. ಅಪಹಾಸ ಮಾಡಿದರು.

1. ಸ್ಕಂ.ಪು.ಕಾ.ಮಾ. ಮಹಾತ್ಮೆಯಲ್ಲೂ ಕಾವೇರಿಸ್ನಾನದ ಮಹಿಮೆ ಇದೆ.

ಇದರಿಂದ ಲಜ್ಜಾಉಳ್ಳವನಾಗಿ ಭೂಮಿಯಲ್ಲಿ ಸಂಚರಿಸುತ್ತಾ ಹೋದನು. ಕೆಲವು ಸ್ಥಳದಲ್ಲಿ ತಂಗಳು ಅನ್ನವನ್ನು ಊಟಮಾಡುವನು. ಕೆಲವು ಸ್ಥಳದಲ್ಲಿ ಎಂಜಲು ಅನ್ನವನ್ನು ಭೋಜನ ಮಾಡುವನು. ಸ್ತ್ರೀಯರು ಊಟಮಾಡಿ ಉಳಿದದ್ದನ್ನು ಶೂದ್ರರು ಊಟ ಮಾಡಿ ಉಳಿದದ್ದನ್ನು ಊಟ ಮಾಡುವನು. ನಿಯಮವಿಲ್ಲ. ಆಚಾರವಿಲ್ಲ. ಸ್ನಾನಮಾಡಲಾರನು. ಹಾಹಾಕಾರವನ್ನು ಮಾಡುತ್ತಾ ಯಾವಾಗಲೂ ಅನ್ನವನ್ನು ತಿನ್ನುವನು.

ಪೂರ್ವಕರ್ಮದಿಂದ ಸುಶೀಲೆಯು ಉಪದೇಶಮಾಡಿದ ತತ್ವವನ್ನು ಮೃತ್ಯು ಪರಿಹಾರಕವಾದ ಚಿತ್ರಗುಪ್ತನು ಉಪದೇಶಿಸಿದ್ದ ಯಮಸ್ತೋತ್ರವನ್ನು ಮರೆತು ಬಿಟ್ಟನು. ಈರೀತಿಯಾಗಿ ದುಷ್ಟರ ಸಹವಾಸದಿಂದ ಜ್ಞಾನಶೂನ್ಯನಾಗಿ ಸಂಚರಿಸುತ್ತಾ ಮಧ್ಯಾಹ್ನಕಾಲದಲ್ಲಿ ಒಬ್ಬ ಗೃಹಸ್ಥನ ಮನೆಗೆ ಹೋದನು. ಆ ಗೃಹಸ್ಥನು ವೈಶ್ವದೇವ ವನ್ನು ಮಾಡಿ ಅತಿಥಿಯನ್ನು ನಿರೀಕ್ಷಣೆ ಮಾಡುವ ಕಾಲದಲ್ಲಿ ಬಂದಿರುವ ಅತಿಥಿಯಾದ ಅವನನ್ನು ಮನೆಯಲ್ಲಿ ಭೋಜನ ಮಾಡಿಸಿದನು. ಬ್ರಹ್ಮಶರ್ಮನು ಆ ಗೃಹಸ್ಥನ ಮನೆಯಲ್ಲಿ ಭೋಜನ ಮಾಡಿ ಕೂತಿರುವಾಗ ತನ್ನ ಪಾಂಡಿತ್ಯವನ್ನು ತಿಳಿಸುವುದಕ್ಕಾಗಿ ವೇದಶಾಸ್ತ್ರದಲ್ಲಿ ಪಂಡಿತನಾಗಿರುವನೆಂದು ತಿಳಿದು, ಮದುಕುನಾದ ಕಾರಣದಿಂದಲೂ ಪಂಡಿತನಾದ ಕಾರಣದಿಂದಲೂ ತನ್ನ ಮನೆಯಲ್ಲಿಯೇ ವಾಸಮಾಡಲಿ ಎಂದು ಮನಸ್ಸಿನಲ್ಲೇ ಹೇಳಿಕೊಂಡು ಆ ಬ್ರಾಹ್ಮಣನೊಡನೆ ತನ್ನ ಮನೆಯಲ್ಲೇ ವಾಸಮಾಡುವಂತೆ ಹೇಳಿದನು. ಆ ಗೃಹಸ್ಥನ ಮನೆಯಲ್ಲಿಯೇ ವಾಸಮಾಡಿಕೊಂಡಿದ್ದು ಒಂದು ದಿನ ಗೃಹಸ್ಥನಿಗೂ ಸೂತಕವು ಬಂದಿರುವ ಸಮಯ ತಾನು ಎಲ್ಲಿಯೋ ಅನ್ನುವನ್ನು ತಿಂದುಬಂದು ದೇವರ ಪೂಜೆಯನ್ನು ಮಾಡಿದನು. ಇದರಿಂದ ಅಜೀರ್ಣದಿಂದಲೇ ಮೃತನಾಗಿ ಬಹುನರಕಗಳನ್ನು ಅನುಭವಿಸಿದನು. ಮೂರು ಮನ್ವಂತರಕಾಲ ಮಲವನ್ನು ತಿನ್ನುವ ಮಲಭೋಜನ ಎಂಬ ನರಕವನ್ನೂ, ಹಣಕ್ಕೆ ದೇವರ ಪೂಜಾಮಾಡಿದ ದೋಷದಿಂದ ಇನ್ನೂ ಮೂರು ಮನ್ವಂತರ ಚೇಳುಗಳಿಂದ ಕಚ್ಚಲ್ಪಡುವ ನರಕವನ್ನು ಅನುಭವಿಸಿ ಐದು ಜನ್ಮದಲ್ಲಿ ತುರುಕನಾಗಿ ಹುಟ್ಟಿದನು. ಅಗ್ನಿಯಲ್ಲಿ ಔಪಾಸನ ಮಾಡಿದ ಕಾರಣ ಒಂಟೆಯಾದನು. ಆಮೇಲೆ ಶ್ರೀಮುಷ್ಣದ ಅರಣ್ಯದಲ್ಲಿ ಒಂದು ಹಂದಿಯಾಗಿ ಹುಟ್ಟಿದನು.

ಆ ಸಮಯದಲ್ಲಿ ಪದ್ಮಗರ್ಭ ಎಂಬ ಒಬ್ಬ ಬ್ರಾಹ್ಮಣನು ವೃದ್ಧಾಚಲದಲ್ಲಿ ವಾಸಿಸುತ್ತಿದ್ದನು. ಅವನು ನಿತ್ಯವೂ ಎರಡು ಹೊತ್ತು ಸ್ನಾನಮಾಡುತ್ತಿದ್ದನು. ಶಿವಭಕ್ತನಾಗಿದ್ದನು. ಪರಮಾತ್ಮನಲ್ಲಿಯೂ ಭಕ್ತನಾಗಿದ್ದನು. ರಾಮಾಯಣವೇ

ಮೊದಲಾದುವನ್ನು ಓದುತ್ತಿದ್ದನು. ನಿತ್ಯವೂ ರಾಮಸಹಸ್ರವನ್ನು ಪಠನ ಮಾಡು ತ್ತಿದ್ದನು. ಅವನು ಇತರ ಬ್ರಾಹ್ಮಣರಿಂದ ಕೂಡಿಕೊಂಡು ತುಲಾಮಾಸದಲ್ಲಿ ಅರುಣೋದಯಕಾಲದಲ್ಲಿ ಸ್ನಾನಮಾಡಬೇಕೆಂದು ಹೊರಟುಹೋದನು. ಅರ್ಧ ರಾತ್ರಿಯಲ್ಲಿಯೇ ಎದ್ದು ಹೊರಟಿದ್ದನು. ಹೀಗೆ ನಡೆದುಕೊಂಡು ಬರುತ್ತಿರುವಾಗ ಗಾಳಿಬಂದು ಮೇಘಗಳು ಬಂದವು. ಮೇಘಗಳ ಗರ್ಜನವು ಕೇಳಿಸಿತು. ಮಿಂಚು ಕಾಣಿಸಿತು. ಮೇಘಗಳಿಂದ ಸರ್ವಸ್ಥಳದಲ್ಲಿ ಕತ್ತಲೆಯಾಗಿ ದಾರಿಯೂ ತಪ್ಪಿಹೋಯಿತು. ದಾರಿತಪ್ಪಿ ಇತರ ಬ್ರಾಹ್ಮಣರೊಡನೆ ಹೋಗುತ್ತಿರಲು ಒಂದು ಕಾಡುಹಂದಿಯು ಮಳೆಯಿಂದ ನೆಲವನ್ನು ಒದ್ದೆಯಾದದ್ದನ್ನು ನೋಡಿ ಗೆಡ್ಡೆಯನ್ನು ತಿನ್ನುವುದಕ್ಕೋಸ್ಕರ ಬಂದಿತ್ತು. ಅಂದರೆ ಬ್ರಹ್ಮಶರ್ಮನು ಹಂದಿಯಾದವನು ಆ ರೀತಿಯಾಗಿ ಬಂದಿದ್ದನು. ಯಮದೇವರ ಕೋಣದಂತೆ ಭಯಂಕರವಾದ ಆ ಹಂದಿಯು ದಾರಿಯಲ್ಲಿ ಬರುತ್ತಾ ಇರುವ ಜನರನ್ನು ನೋಡಿ ಅಟ್ಟಿಸಿಕೊಂಡು ಓಡಿ ಬಂದಿತು. ಎಲ್ಲಾ ಬ್ರಾಹ್ಮಣರೂ ಪ್ರಾಣಭಯದಿಂದ ಉತ್ತರದಿಕ್ಕಿಗೆ ಹೋದರು.

ಪದ್ಮಗರ್ಭನು ಮಾತ್ರ ದಕ್ಷಿಣದಿಕ್ಕಿಗೆ ಹೋದನು. ಆ ಹಂದಿಯು ಎಲ್ಲರನ್ನೂ ಬಿಟ್ಟು ಪದ್ಮಗರ್ಭನನ್ನೇ ಅಟ್ಟಿಸಿಕೊಂಡು ಹೋಯಿತು. ಪದ್ಮಗರ್ಭನು ಭಯದಿಂದ ದೀರ್ಘಶ್ವಾಸ ಬಿಡುತ್ತಾ ಹೋದನು. ಹಿಂದೆಯೇ ಹಂದಿಯು ಬರುತ್ತಾ ಇತ್ತು. ಆ ಹಂದಿಯು ಆ ಬ್ರಾಹ್ಮಣನನ್ನು ಕೊಲ್ಲಬೇಕೆಂದು ವೇಗದಿಂದ ಬರುತ್ತಿತ್ತು. ಅದನ್ನು ನೋಡಿ ಪದ್ಮಗರ್ಭನು ಅತಿವೇಗದಿಂದ ಓಡಿದನು. ದೈವೇಚ್ಛೆಯಿಂದ ಓಡುತ್ತಾ ಪದ್ಮಗರ್ಭನು ಕಾವೇರಿತೀರಕ್ಕೆ ಬಂದು ಸೇರಿದನು. ಅವನ ಹಿಂದೆಯೇ ಆ ಹಂದಿಯು ಬಂದಿತು. ಆ ಸಮಯದಲ್ಲಿ ಸೂರ್ಯೋದಯವಾಗುತ್ತಿತ್ತು. ಆ ಸಮಯದಲ್ಲಿ ಒಬ್ಬ ದಾಸಿಯು ಪರಮಪವಿತ್ರವಾದ ಕಾವೇರಿಯ ನೀರಿನಲ್ಲಿ ಸ್ನಾನಮಾಡಿ ತಲೆಕೂದಲುಗಳನ್ನು ಝಾಡಿಸುತ್ತಿದ್ದಳು. ಆಗ ದೈವೇಚ್ಛೆಯಿಂದ ಅವಳ ತಲೆಕೂದಲಿನ ನೀರು ಆ ಹಂದಿಯ ಮೇಲೆ ಬಿದ್ದಿತು. ಈ ರೀತಿಯಾಗಿ ಕಾವೇರಿಯ ನೀರು ಆ ಹಂದಿಯ ಮೇಲೆ ಬಿದ್ದಿತು. ಈ ರೀತಿಯಾಗಿ ಕಾವೇರಿಯು ನೀರು ಮೈಮೇಲೆ ಬೀಳುವ ಮಾತ್ರದಿಂದ ಶುದ್ಧಮನಸ್ಸುಳ್ಳವನಾದನು ಆ ಬ್ರಹ್ಮಶರ್ಮನು. ಪೂರ್ವದಲ್ಲಿ ಅಶ್ವತ್ಥಸೇವೆಯನ್ನು ಮಾಡಿದ್ದರಿಂದಲೂ ರುದ್ರದೇವರನ್ನು ಪೂಜಿಸಿದ್ದ ರಿಂದಲೂ ಹಂದಿಯ ದೇಹವನ್ನು ಬಿಟ್ಟು ದೇವತೆಯಂತೆ ಪ್ರಕಾಶಿಸುತ್ತಾ ವಿಮಾನವನ್ನು ಏರಿದವನಾಗಿ ಸ್ವರ್ಗವನ್ನು ಹೋಗುವುದನ್ನು ಎಲ್ಲ ಜನರು ನೋಡಿದರು.

ಪದ್ಮಗರ್ಭನು ವಿಮಾನದಲ್ಲಿ ಕೂತಿರುವ ಆ ದಿವ್ಯ ಪುರುಷನನ್ನು ನೋಡಿ

'ನೀನು ಯಾರು ಈರೀತಿಯಾಗಿ ದೇವತೆಯಂತೆ ಪ್ರಕಾಶಿಸುತ್ತಿರುವಿ? ಯಾವ ಪಾಪದಿಂದ ಹಂದಿಯ ದೇಹವುಳ್ಳವನಾಗಿ ನನ್ನನ್ನು ಅಟ್ಟಿಸಿಕೊಂಡು ಬಂದಿರುವಿ? ಈಗ ಯಾವ ಪುಣ್ಯಪ್ರಭಾವದಿಂದ ಹಂದಿಯ ದೇಹವು ಪರಿಹಾರವಾಯಿತು'' ಎಂದು ಕೇಳಲು ಅವನು 'ನಾನು ಬಹುಧಾನ್ಯಗ್ರಾಮದಲ್ಲಿ ಬ್ರಹ್ಮಶರ್ಮ ಎಂಬ ಬ್ರಾಹ್ಮಣನಾಗಿದ್ದೆನು. ನಾನು ನಿತ್ಯಕರ್ಮವನ್ನು ಬಿಟ್ಟು ದುಷ್ಟಭೋಜನ ಮಾಡುತ್ತಾ ಇದ್ದೆನು. ಆ ಪಾಪದಿಂದ ನಾನು ಬಹುಕಾಲ ಬಹುನರಕಗಳನ್ನು ಅನುಭವಿಸಿ ಆಮೇಲೆ ಐದು ಜನ್ಮಗಳಲ್ಲಿ ತುರುಕನಾಗಿ ಹುಟ್ಟಿದೆನು. ಆಮೇಲೆ ಒಂಟೆಯಾಗಿ ಹುಟ್ಟಿದೆನು. ಆಮೇಲೆ ಹಂದಿಯಾಗಿ ಹುಟ್ಟಿದೆನು. ನನಗೆ ನೂರು ವರ್ಷವಾಯಿತು. ರುದ್ರದೇವ ರನ್ನು ಪೂಜಿಸಿದ ಪ್ರಭಾವದಿಂದ ನಿನ್ನ ದರ್ಶನವು ನನಗಾಯಿತು. ಪೂರ್ವದಲ್ಲಿ ನಾನು ಕಾವೇರಿಸ್ನಾನವನ್ನು ಮಾಡಿದ ಪುಣ್ಯದಿಂದ ಈಕಾಲದಲ್ಲಿ ಇಲ್ಲಿಗೆ ಬಂದು ಸೇರಿದೆನು. ಈದಾಸಿಯು ಸ್ನಾನಮಾಡಿ ತಲೆಕೂದಲನ್ನು ಝಾಡಿಸುವಾಗ ಅವಳ ಕೂದಲಿನ ಕಾವೇರಿಯ ನೀರು ನನ್ನ ಮೈಮೇಲೆ ದೈವೇಚ್ಛೆಯಿಂದ ಬಿದ್ದಿತ್ತು. ನಿನ್ನನ್ನು ಸಂಹಾರ ಮಾಡುವ ನೆಪದಿಂದ ಬಂದವನು ಈ ತುಲಾಸ್ನಾನಮಾಡಿದ ದಾಸಿಯಿಂದ ಕೃತಾರ್ಥ ನಾದೆನು. ನಿನ್ನಿಂದಾಗಿ ಹಂದಿಯ ಜನ್ಮವೂ ಹೋಯಿತು. ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಪಾಪವೆಲ್ಲವೂ ನಾಶವನ್ನು ಹೊಂದಿತು. ನನಗೆ ಅನುಜ್ಞೆಯನ್ನು ಕೊಡು' ಎಂದು ಹೇಳಿ ಪದ್ಮಗರ್ಭನಿಗೆ ಪ್ರದಕ್ಷಿಣೆ ಬಂದು ಸ್ವರ್ಗಕ್ಕೆ ಹೊರಟು ಹೋದನು. ಆದುದರಿಂದ ಕಾವೇರಿಸ್ನಾನವು ಪ್ರಶಸ್ತವಾದದ್ದು.



## ಕುಮಾರಧಾರಾನದಿಯ ಮಹಿಮೆ [1]

(ವಾರಾಹ)

ಪೂರ್ವದಲ್ಲಿ ಒಂದು ದಿನದಲ್ಲಿ ಶ್ರೀನಿವಾಸದೇವರು ಕುಮಾರರೂಪದಿಂದ ವೇಂಕಟಾಚಲದಲ್ಲಿ ಸಂಚರಿಸುತ್ತಿದ್ದರು. ಆಗ ಒಬ್ಬ ಮುದುಕನು ಅವರ ದೃಷ್ಟಿಗೆ ಬಿದ್ದನು. ಅವನು ಬಹಳ ಮುದುಕನಾಗಿದ್ದನು. ಮುಖವೂ ಮೊಳಕಾಲೂ ಬಗ್ಗಿ ಹೋಗಿತ್ತು. ಹಸಿವೆ ದಾಹಗಳಿಂದ ಪೀಡಿತನಾಗಿದ್ದನು. ಅಲ್ಲಿ ವನದಲ್ಲಿ ದಾರಿ ತಪ್ಪಿ ಬಂದಿದ್ದನು. 'ಕೌಂಡಿನ್ಯ! ನೂರು ವರ್ಷದ ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿರುವಿ?' ಎಂದು ಹೇಳುತ್ತಾ ನಡೆಯುತ್ತಿದ್ದನು. ಅವನ ಕುತ್ತಿಗೆಯು ಒಣಗಿ ಹೋಗಿತ್ತು. ಆಗ

ಕುಮಾರರೂಪಿಯಾದ ಶ್ರೀನಿವಾಸದೇವರು 'ಇಲ್ಲಿ ಯಾರೊಬ್ಬ ಮನುಷ್ಯರೂ ಇಲ್ಲವಲ್ಲಾ! ಕೌಂಡಿನ್ಯನು ಎಲ್ಲಿ ಇರುವನು?' ಎಂದರು. ಆಗ ಆ ಮುದುಕನು 'ಹಾಗಾದರೆ ನಾನು ಸತ್ತೇ ಹೋದೆನು. ದೂರದಲ್ಲಿರುವ ನನ್ನ ಆಶ್ರಮಕ್ಕೆ ನಾನು ಹೇಗೆ ಹೋಗಲಿ? ಶೌಚಾಚಾರ ಮಾಡಿಕೊಳ್ಳಲಿಕ್ಕೂ ಅಶಕ್ತನಾದ ದರಿದ್ರನಾದ ಬಂಧುಗಳಿಂದ ರಹಿತನಾದ ದುರ್ಬಲನಾದ ನನ್ನನ್ನು ದೇವರು ಯಾಕೆ ಬದುಕಿಸಿದ್ದಾನೋ ತಿಳಿಯಲಿಲ್ಲ' ಎಂದು ಹೇಳಿದನು.

ಆಗ ಶ್ರೀನಿವಾಸದೇವರು ಉಪಹಾಸ ಮಾಡುತ್ತಾ 'ನಿನ್ನ ದೇಹವೆಲ್ಲಾ ಜೀರ್ಣ ವಾಗಿದೆ. ತಲೆಯು ಬೆಳ್ಳಗಾಗಿದೆ. ಕಣ್ಣುರೆಪ್ಪೆಗಳು ಜೋಲುತ್ತಾ ಇವೆ. ಕಣ್ಣುಗಳು ಕಾಣಿಸುವುದಿಲ್ಲ. ಇನ್ನು ಮುಂದೆ ನಿನಗೆ ಬದುಕಲಿಕ್ಕೆ ಇಚ್ಛೆಯಿದೆಯಾ? ಇಲ್ಲವೋ? ನೀನು ಪೂರ್ವದಲ್ಲಿ ಹೇಳಿದ ಮಾತು ಸತ್ಯವೋ?' ಎಂದು ಕೇಳಿದರು. ಆಗ ಬ್ರಾಹ್ಮಣನು 'ನನಗೆ ಬದುಕಲಿಕ್ಕೆ ಇಚ್ಛೆಯಿಲ್ಲ. ಆದರೂ ನಾನು ನಿತ್ಯಕರ್ಮಗಳನ್ನೂ ಜ್ಯೋತಿಷ್ಟೋಮಾದಿಗಳನ್ನು ಮಾಡಲಿಲ್ಲ. ನಾನು ದೇವತೆಗಳ ಋಣಿಯಾಗಿದ್ದು ಕೊಂಡು ಹೇಗೆ ಸಾಯಲಿ?' ಎಂದನು. ಆಗ ಶ್ರೀನಿವಾಸದೇವರು ಕೈಯನ್ನು ಹಿಡಿದುಕೊಂಡು ಮೆಲ್ಲಮೆಲ್ಲನೆ ಹೊರಟುಹೋದರು. ಒಂದು ಸ್ಥಳದಲ್ಲಿ ಒಂದು ನದಿಯನ್ನು ತೋರಿಸಿ 'ಇಲ್ಲಿ ನಾವಿಬ್ಬರೂ ಸ್ನಾನಮಾಡುವ. ಆಮೇಲೆ ನಿನ್ನ ಆಶ್ರಮಕ್ಕೆ ಹೋಗುವ' ಎಂದು ಕುಮಾರರೂಪದಿಂದ ಇದ್ದ ಶ್ರೀನಿವಾಸದೇವರು ಹೇಳಿದರು.

ಹಾಗೆಯೇ ಆ ಮುದುಕನು ಆ ನದಿಯಲ್ಲಿ ಸ್ನಾನ ಮಾಡಿ ಮೇಲೆ ಬಂದನು. ಮೇಲೆ ಬರುವಾಗ ಅವನು ಹದಿನಾರು ವರ್ಷದ ಯುವಕನಾಗಿದ್ದನು. ಆ ಕುಮಾರನು (ಶ್ರೀನಿವಾಸದೇವರು) ಅನಂತ ಶಿರಸ್ಸುಗಳಿಂದಲೂ ಭುಜಗಳಿಂದಲೂ ಆಭರಣಗಳಿಂದಲೂ ಅಲಂಕೃತನಾಗಿದ್ದನು. ಅಲ್ಲಿಗೆ ಬ್ರಹ್ಮಾದಿ ದೇವತೆಗಳು ಬಂದರು. ಪುಷ್ಪದ ಮಳೆಯು ಸುರಿಯಿತು. ಆಕಾಶದಲ್ಲಿ ದುಂದುಭಿವಾದ್ಯವು ಬಾರಿಸಲ್ಪಟ್ಟಿತು. ಎಲ್ಲಾ ದೇವತೆಗಳೂ ಸ್ತೋತ್ರ ಮಾಡಿದರು. ಶ್ರೀನಿವಾಸದೇವರು ಬ್ರಾಹ್ಮಣನೊಡನೆ 'ನೀನು ಎಲ್ಲಾ ವಿಹಿತಕರ್ಮಗಳನ್ನು ಮಾಡು. ಅದಕ್ಕಾಗಿಯೇ ನನಗೆ ಬಹಳ ಹಣವನ್ನು ಕೊಟ್ಟಿರುವೆನು' ಎಂದು ಹೇಳಿ ಮರೆಯಾದರು.

ದೇವತೆಗಳೆಲ್ಲರೂ ಸೇರಿ 'ಈ ಮುದುಕನು ಈ ನದಿಯಲ್ಲಿ ಸ್ನಾನಮಾಡಿ ಕುಮಾರನಾದ ಕಾರಣ ಈ ನದಿಯು ಕುಮಾರಧಾರೆಯೆಂದು ಲೋಕದಲ್ಲಿ ಪ್ರಸಿದ್ಧಿ ಯನ್ನು ಹೊಂದುವುದು. ಇಲ್ಲಿ ಯಾರು ಜಿತೇಂದ್ರಿಯನಾಗಿ ಒಂದು ತಿಂಗಳು ಮೂರು ಹೊತ್ತು ಸ್ನಾನಮಾಡುವನೋ ಅವನು ವಜ್ರದಂತೆ ಗಟ್ಟಿಯಾದ ದೇಹವುಳ್ಳವನಾಗು

ವನು. ಸರ್ವಪಾಪರಹಿತನಾಗಿ ವಿಷ್ಣುಲೋಕವನ್ನು ಹೊಂದುವನು' ಎಂದು ಹೇಳಿ ಆಶ್ಚರ್ಯಪಡುತ್ತಾ ಹೊರಟುಹೋದರು. ಇದೇ ಕಥೆಯು ಮಾರ್ಕಂಡೇಯ ಪುರಾಣದಲ್ಲಿಯೂ ಇರುವುದು.



# ಕುಮಾರಧಾರೆಯ ಇನ್ನೊಂದು ಮಹಿಮೆಯು [1]

**(ಮಾರ್ಕಂಡೇಯ)**

ರುದ್ರದೇವರ ಮಗನಾದ ಸ್ಕಂದನು ತಾರಕಾಸುರನನ್ನು ಸಂಹರಿಸಿ ಬ್ರಹ್ಮಹತ್ಯೆಗೆ ಒಳಗಾದನು. ಅವನು ದುಃಖದಿಂದ ತಂದೆಯಾದ ರುದ್ರದೇವರ ಬಳಿಗೆ ಬಂದು 'ತಂದೆಯೇ! ನಾನು ದೇವತೆಗಳ ಉಪಕಾರಕ್ಕಾಗಿ ತಾರಕಾಸುರನನ್ನು ಕೊಂದೆನು. ಆದರಿಂದ ನನಗೆ ಬ್ರಹ್ಮಹತ್ಯೆಯು ಬಂದು ಪೀಡಿಸುತ್ತಿದೆ. ಅದಕ್ಕೆ ಈಗ ನನಗೆ ಪ್ರಾಯಶ್ಚಿತ್ತವನ್ನು ಹೇಳಬೇಕು' ಎಂದು ಕೇಳಿಕೊಂಡನು. ಅದಕ್ಕೆ ರುದ್ರದೇವರು 'ಮಗನೇ! ಒಂದು ಬಾರಿ ಭಕ್ತಿಯಿಂದ ನಾರಾಯಣ ಎಂದು ಹೇಳಿದರೆ ಮುನ್ನೂರು ಕಲ್ಪ ಗಂಗಾದಿ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಬರುವುದು. ಈ ರಹಸ್ಯವು ಯಾವಾಗಲೂ ನಿನ್ನ ಮನಸ್ಸಿನಲ್ಲೇ ಇರಲಿ.

ಇನ್ನೊಂದು ಉತ್ತಮವಾದ ಪ್ರಾಯಶ್ಚಿತ್ತ ವನ್ನು ಹೇಳುತ್ತೇನೆ. ಸುವರ್ಣ ಮುಖರೀನದಿಯ ತೀರದಲ್ಲಿ ಶ್ರೀನಿವಾಸದೇವರ ವಾಸಸ್ಥಾನವಾದ ವೇಂಕಟಾಚಲ ವಿರುವುದು. ಅಲ್ಲಿ ಅನೇಕ ತೀರ್ಥಗಳಿರುವುವು. ಚಕ್ರತೀರ್ಥ, ಸ್ವಾಮಿ ಪುಷ್ಕರಿಣಿ, ಮತ್ಸ್ಯತೀರ್ಥ ಪಾಂಡವತೀರ್ಥ ನಾಗತೀರ್ಥ, ಬಿಲ್ವತೀರ್ಥ, ಜಾಬಾಲಿ ತೀರ್ಥ, ಆಕಾಶಗಂಗಾ ಪಾಪಾನಾಶತೀರ್ಥ, ತುಂಬುರು ತೀರ್ಥ, ವಾಮನತೀರ್ಥ, ಕುಮಾರತೀರ್ಥ ಇತ್ಯಾದಿ ತೀರ್ಥಗಳಿವೆ. ಇವುಗಳ ಹೆಸರನ್ನು ಹೇಳಿದರೆ ಮಾತ್ರ ಅನೇಕ ಜನ್ಮಗಳಲ್ಲಿ ಮಾಡಿರುವ ಪಾಪಗಳು ನಾಶವನ್ನು ಹೊಂದುವುವು. ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಲೋಕಗಳಿಗೆ ಹಿತವನ್ನು ಮಾಡುವುದಕ್ಕಾಗಿ ಯಾವಾಗಲೂ ಶ್ರೀನಿವಾಸದೇವರು ವಾಸಮಾಡುತ್ತಿರುವರು. ನಿತ್ಯವೂ ಯಾರು ಶ್ರೀನಿವಾಸದೇವರನ್ನು ಸ್ಮರಿಸುವರೋ ಶ್ರೀನಿವಾಸದೇವರು ಅವರಿಗೆ ಪ್ರಸನ್ನನಾಗು ವರು. ನೀನು ಅಲ್ಲಿಗೆ ಹೋಗಿ ಶ್ರೀನಿವಾಸದೇವರಿಗೆ ನಮಸ್ಕರಿಸಿ ಕುಮಾರಧಾರಾ ತೀರ್ಥಕ್ಕೆ ಹೋಗು. ಆ ತೀರ್ಥದಲ್ಲಿ ಮೂರುಹೊತ್ತು ನಿತ್ಯವೂ ಸ್ನಾನ ಮಾಡಿ 'ಶ್ರೀವೇಂಕಟೇಶಾಯನಮಃ'

ಎಂಬ ಮಂತ್ರವನ್ನು ಜಪಿಸುತ್ತಾ ಇರು' ಎಂದು ಹೇಳಿದರು.

ತಂದೆಯ ಮಾತನ್ನು ಕೇಳಿ ಸ್ಕಂದನು ಹಾಗೆಯೇ ಹೋಗಿ ಚಕ್ರತೀರ್ಥದಲ್ಲಿ ಸ್ನಾನಮಾಡಿ ಸ್ವಾಮಿಪುಷ್ಕರಿಣಿಗೆ ಹೋದನು. ಅಲ್ಲಿಗೆ ಹೋಗುವಾಗ ವೇಂಕಟಾಚಲ ದಿಂದ ಒಂದು ಮೈಲುದೂರದಲ್ಲಿ ಬ್ರಹ್ಮಹತ್ಯೆಯು ಕೂಗುತ್ತಾ ನಿಂತುಬಿಟ್ಟಿತು. ಸ್ಕಂದನು ಸ್ವಾಮಿಪುಷ್ಕರಿಣಿಗೆ ಹೋಗಿ ಸ್ನಾನಮಾಡಿ ಶ್ರೀನಿವಾಸದೇವರಿಗೆ ಪ್ರದಕ್ಷಿಣೆ ಬಂದು ನಮಸ್ಕಾರವನ್ನು ಮಾಡಿ ಸ್ತೋತ್ರ ಮಾಡಿ ಪಾಪನಾಶನತೀರ್ಥಕ್ಕೆ ಹೋದನು. ಅಲ್ಲಿ ಸ್ನಾನಮಾಡಿದನು. ಅದರಿಂದ ಎಲ್ಲಾ ಪಾಪಗಳೂ ಪರಿಹೃತಗಳಾದವು. ಅಲ್ಲಿಂದ ವಾಯವ್ಯಭಾಗದಲ್ಲಿ ಧಾರಾರೂಪದಿಂದ ಬೀಳುತ್ತಿರುವ ಕುಮಾರಧಾರಾನದಿಯನ್ನು ನೋಡಿ ಅಲ್ಲಿ ಸ್ನಾನಮಾಡಿ ಪೂರ್ವಕ್ಕೆ ಮುಖಮಾಡಿ ಕೂತುಕೊಂಡು ಶ್ರೀಭೂದೇವಿಯರಿಂದ ಸಹಿತರಾದ ಶ್ರೀನಿವಾಸ ದೇವರನ್ನು ರುದ್ರದೇವರು ಉಪದೇಶಿಸಿದ ಜಪದಿಂದ ಪೂಜಿಸುತ್ತಾ ಮೊದಲು ಫಲಾಹಾರವನ್ನೂ ಆಮೇಲೆ ಜಲಾಹಾರವನ್ನೂ ಆಮೇಲೆ ನಿರಾಹಾರವನ್ನೂ ಮಾಡಿ ತಪಸ್ಸು ಮಾಡಿದನು. ಈರೀತಿಯಾಗಿ ಸ್ಕಂದನು ತಪಸ್ಸು ಮಾಡುತ್ತಿರಲು ಕುಂಭಮಾಸದಲ್ಲಿ ಮಖಾ ನಕ್ಷತ್ರದಿಂದ ಕೂಡಿದ ಹುಣ್ಣಿಮೆಯಲ್ಲಿ ಮಧ್ಯಾಹ್ನಕಾಲದಲ್ಲಿ ಬುಧವಾರದಲ್ಲಿ ಶ್ರೀನಿವಾಸದೇವರು ಪ್ರತ್ಯಕ್ಷರಾದರು. ಗಂಭೀರವಾದ ವಾಣಿಯಿಂದ 'ಕುಮಾರ ಎಂದು ಕೂಗಿದರು. ಆಗ ಸ್ಕಂದನು ಕಣ್ಣುತೆರೆದು ನೋಡಿದನು. ಹತ್ತಿರದಲ್ಲೇ ಬಂದಿದ್ದ ಶ್ರೀಭೂದೇವಿಯರಿಂದ ಸಹಿತರಾದ ಶಂಖಚಕ್ರಾದಿ ಆಯುಧಧಾರಿಗಳಾದ ಶ್ರೀನಿವಾಸದೇವರನ್ನು ನೋಡಿ ಎದ್ದು ಮೂರು ಪ್ರದಕ್ಷಿಣೆ ಬಂದು ಉದ್ದಕ್ಕೆ ನಮಸ್ಕಾರ ಮಾಡಿ ಕೈಮುಗಿದುಕೊಂಡು ಸ್ತೋತ್ರವನ್ನು ಮಾಡಿದನು.

ತರುವಾಯ ಅಲ್ಲಿಗೆ ತುಂಬುರು ನಾರದರೂ ಬ್ರಹ್ಮದೇವರೂ ರುದ್ರದೇವರೂ ಇಂದ್ರಾದಿ ಲೋಕಪಾಲಕರೂ ಋಷಿಗಳೂ ಗಂಧರ್ವರೂ ಅಪ್ಸರ ಸ್ತ್ರೀಯರೂ ಎಲ್ಲರೂ ಬಂದು ಸ್ತೋತ್ರವನ್ನು ಮಾಡಿದರು. ಎಲ್ಲರೂ ಕೇಳುವಂತೆ ಸ್ಕಂದನು ಶ್ರೀನಿವಾಸದೇವರನ್ನು ತುಂಬಾ ಸ್ತೋತ್ರ ಮಾಡಿದನು.

ಆಗ ಶ್ರೀನಿವಾಸದೇವರು ನಗುತ್ತಾ ರುದ್ರದೇವರೊಡನೆ ಎಲ್ಲರೂ ಕೇಳುವಂತೆ 'ಶಂಭೋ! ಇಂತಹ ಸತ್ಪುತ್ರನಿಂದ ಪರಮಧನ್ಯನಾಗಿರುವಿ. ಅನೇಕ ಜನ್ಮಗಳಲ್ಲಿ ಪುಣ್ಯವನ್ನು ಮಾಡಿದ್ದರೆ ಸತ್ಪುತ್ರರು ಹುಟ್ಟುವರು. ಅನೇಕ ಜನ್ಮಗಳಲ್ಲಿ ಪಾಪ ಮಾಡಿದ್ದರೆ ದುಷ್ಪುತ್ರರು ಹುಟ್ಟುವರು' ಎಂದು ಹೇಳಿ ಸ್ಕಂದನೊಡನೆ 'ನೀನು ಪರಮಧನ್ಯನಾಗಿರುವಿ. ನೀನು ಮಾಡಿರುವ ತಪಸ್ಸಿನಿಂದ ಸ್ತೋತ್ರದಿಂದ ನನಗೆ

ಸಂತೋಷವಾಗಿರುವುದು. ತಂದೆಯ ಮಾತನ್ನು ಕೇಳಿ ಹನ್ನೆರಡು ವರ್ಷ ಕಾಲ ಇಲ್ಲಿ ತಪಸ್ಸನ್ನು ಮಾಡಿ ಶ್ರಮವನ್ನು ಹೊಂದಿರುವಿ. ಸುಖವಾಗಿ ಇರು' ಎಂದು ಹೇಳಿದರು. ಸ್ಕಂದನು ತಾನು ಕೃತಾರ್ಥನಾದೆನು ಎಂದು ಕೇಳಿಕೊಂಡನು. ನನ್ನ ಪರ್ವತವಾದ ವೇಂಕಟಾಚಲ ವನ್ನು ಹತ್ತಿ ಬರಲಿಕ್ಕೆ ಇಚ್ಛಿಸುವ ಅವಿವೇಕಿಗೂ ಬ್ರಹ್ಮಹತ್ಯಾದಿ ಪಾಪವು ದೂರಕ್ಕೆ ತೊಲಗಿಹೋಗುವುದು. ನಿನ್ನಂತಹ ವಿವೇಕಿಗೆ ಹೇಳಬೇಕೇ? ಅದರಲ್ಲಿಯೂ ಸ್ವಾಮಿಪುಷ್ಕರಿಣೀಸ್ನಾನವು ಕೋಟಿ ಪಾಪಗಳನ್ನು ನಾಶಮಾಡುವುದು. ದೇವತೆಗಳೆಲ್ಲರೂ ಕೇಳಿರಿ. ಸ್ಕಂದನೂ ಕೇಳು.

ಈ ನದಿಯು ಕುಮಾರಧಾರೆಯೆಂದೇ ಪ್ರಸಿದ್ಧವಾಗಿರುತ್ತದೆ. ಇಲ್ಲಿ ಹೆಂಗಸರಾಗಲೀ ಗಂಡಸರಾಗಲೀ ಯಾರು ಮಾಘ ಮಾಸದಲ್ಲಿ ಸ್ನಾನ ಮಾಡುವರೋ ಅವರು ಎಲ್ಲರಿಂದಲೂ ಸ್ತುತ್ಯರಾಗುವರು. ಅವರಿಗೆ ಬಹುಪುಣ್ಯವು ಬರುವುದು. ಪ್ರತಿವರ್ಷದಲ್ಲಿಯೂ ಈ ದಿವಸದಲ್ಲಿ ಇಲ್ಲಿ ಸ್ನಾನಮಾಡಬೇಕು. ಇಲ್ಲಿ ಬಂಗಾರ ದಾನವನ್ನು ಮಾಡಿದರೆ ಮೇರುದಾನ ಮಾಡಿದ ಫಲವು ಬರುವುದು ವಸ್ತ್ರದಾನ ಭೂದಾನ ಗೋದಾನ ಯಾವ ದಾನವೂ ಮಹಾಫಲಪ್ರದವು. ಅನ್ನದಾನ ಮಾಡಿದರೆ ಸಾವಿರ ಬ್ರಾಹ್ಮಣರಿಗೆ ಅನ್ನದಾನ ಮಾಡಿದ ಫಲವನ್ನು ಹೊಂದುವರು. ಇಲ್ಲಿಗೆ ಬರುವ ದಾರಿಯಲ್ಲಿ ನೀರು ಕೊಡುವ ಸ್ಥಳವನ್ನು (ಅರವಟ್ಟಿಗೆಯನ್ನು) ಮಾಡುವವರ ಸಂತಾನವನ್ನು ನಾನು ಯಾವಾಗಲೂ ರಕ್ಷಿಸುವೆನು. ತಾಂಬೂಲ ಗಂಧಗಳನ್ನು ಇಲ್ಲಿ ಬ್ರಾಹ್ಮಣರಿಗೆ ಕೊಟ್ಟರೆ ಕೊಟ್ಟವರ ಹತ್ತು ತಲೆ ಮೊದಲಿನವರೂ ಹತ್ತು ತಲೆ ಆಮೇಲಿನವರೂ ಪಾಪ ರಹಿತರಾಗುವರು. ನಾನು ಪ್ರತ್ಯಕ್ಷನಾದ ಈ ದಿವಸದಲ್ಲಿ ಸ್ನಾನವು ಕೋಟಿಕುಲವನ್ನು ಉದ್ಧರಿಸುವುದು. ಪುಣ್ಯದೇಶಗಳಲ್ಲಿ ವೇಂಕಟಾಚಲವು ಶ್ರೇಷ್ಠವಾಗಿರುವುದು. ಸರ್ವತೀರ್ಥಗಳಲ್ಲಿ ಸ್ವಾಮಿ ಪುಷ್ಕರಿಣಿಯು ಶ್ರೇಷ್ಠವಾಗಿರುವುದು. **ನಾನು ಅವಿರ್ಭೂತನಾದ ಈ ದಿವಸದಲ್ಲಿ ಅಂದರೆ ಮಾಘಮಾಸದ ಮಖಾನಕ್ಷತ್ರ ಯುಕ್ತವಾದ ಹುಣ್ಣಿಮೆಯಲ್ಲಿ ಸ್ವಾಮಿ ಪುಷ್ಕರಿಣಿಗಿಂತಲೂ ಈ ತೀರ್ಥವು ಶ್ರೇಷ್ಠವಾಗಿರುವುದು.** ಈ ದಿವಸದಲ್ಲಿ ಪ್ರತಿವರ್ಷವೂ ಎಲ್ಲ ದೇವತೆಗಳೂ ಇಲ್ಲಿ ಸ್ನಾನಮಾಡಲಿಕ್ಕೆ ಬರುವರು. ಆದುದರಿಂದ ಸ್ಕಂದನೇ! ನೀನು ಯಾವಾಗಲೂ ಈ ಪರ್ವದಲ್ಲಿಯೇ ವಾಸಮಾಡುತ್ತಿರು' ಎಂದು ಹೇಳಿ ಕೈಯಿಂದ ಸ್ಕಂದನನ್ನು ಸ್ಪರ್ಶ ಮಾಡಿದರು.

ತರುವಾಯ ದೇವತೆಗಳೂ ಋಷಿಗಳೂ ಗಂಧರ್ವರೂ ಎಲ್ಲರೂ ಆಶ್ಚರ್ಯ ಆಶ್ಚರ್ಯ ಎಂದು ಹೇಳುತ್ತಾ ಭಗವಂತನ ದಿವ್ಯವಾದ ನಾಮವನ್ನು ಹೇಳುತ್ತಾ

ಕುಮಾರಧಾರಾದೇವಿಯನ್ನು ಸ್ತೋತ್ರಮಾಡುತ್ತಾ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ಸ್ಕಂದನು ಶ್ರೀನಿವಾಸದೇವರನ್ನು ಭಜನೆ ಮಾಡುತ್ತಾ ಬಹುಕಾಲ ಕುಮಾರಧಾರಿಕಾತೀರ್ಥದ ತೀರದಲ್ಲಿಯೇ ವಾಸಮಾಡುತ್ತಿದ್ದನು. ಪ್ರತಿವರ್ಷವೂ ಸಿದ್ಧಗಂಧರ್ವ ಋಷಿಗಳೇ ಮೊದಲಾದವರು ಸ್ನಾನಕ್ಕೆ ಬರುತ್ತಿದ್ದರು.

ಅಗಸ್ತ್ಯರ ಆಜ್ಞೆಯಿಂದ ಮಾರ್ಕಂಡೇಯರೂ ಅನೇಕ ಋಷಿಗಳಿಂದ ಕೂಡಿ ಕೊಂಡು ವೇಂಕಟಾಚಲಕ್ಕೆ ಹೋಗಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಮಾಘ ಮಾಸದ ಹುಣ್ಣಿಮೆಯಲ್ಲಿ ಪಾಪನಾಶಿನಿಯಲ್ಲಿ ಸ್ನಾನಮಾಡಿ ಎಲ್ಲರೂ ಕುಮಾರ ಧಾರೆಯಲ್ಲಿ ಸ್ನಾನಮಾಡಲಿಕ್ಕೆ ಬಂದರು. ಎಲ್ಲ ದೇಶದ ಜನರೂ ಋಷಿಗಳೂ ಸನಕಾದಿ ಯೋಗಿ ಗಳೂ ಸಿದ್ಧಗಂಧರ್ವಕಿನ್ನರರೂ ಸುವರ್ಣಮುಖರೀತೀರದಲ್ಲಿದ್ದ ಋಷಿಗಳೂ ಅಗಸ್ತ್ಯರ ಶಿಷ್ಯರಾದ ಮಾರ್ಕಂಡೇಯರೂ ಸ್ನಾನಮಾಡಲಿಕ್ಕೆ ಬಂದಿರುವುದನ್ನು ನೋಡಿ ಸ್ಕಂದನು ಸಂತೋಷಪಟ್ಟನು. ಎಲ್ಲರೂ ಸಂಕಲ್ಪಮಾಡಿ ಕುಮಾರಧಾರೆಯಲ್ಲಿ ಸ್ನಾನಮಾಡಿದರು. ವೇಂಕಟೇಶನಿಗೆ ಅರ್ಪಿತವಾಗಲಿ ಎಂದು ದಾನವನ್ನು ಮಾಡಿ ದರು. ಎಲ್ಲರೂ ಸ್ನಾನಮಾಡುತ್ತಿರಲು ಸಂತೋಷದಿಂದ ಸ್ಕಂದನೂ ಸ್ನಾನಮಾಡಿ ದನು. ಸ್ನಾನಮಾಡಿ ಬ್ರಾಹ್ಮಣರಿಗೆ ನಮಸ್ಕರಿಸಿದನು. ಆಗ ಶಂಖಚಕ್ರಗದಾಧಾರಿ ಯಾಗಿ ಶ್ರೀನಿವಾಸದೇವರು ಕಾಣಿಸಿಕೊಂಡರು. ಮಾರ್ಕಂಡೇಯರೂ ಇನ್ನೂ ಇತರರೆಲ್ಲರೂ ನಮಸ್ಕರಿಸಿ ಸ್ತೋತ್ರಮಾಡಿದರು.

ಆಗ ಶ್ರೀನಿವಾಸದೇವರು ಗಂಭೀರವಾದ ವಾಣಿಯಿಂದ 'ಇಲ್ಲಿ ಮಾಡಿದ ಸ್ನಾನವು ಸಕಲ ಪಾಪಪರಿಹಾರಕ್ಕೂ ಕಾರಣವಾಗಿ ಸಕಲ ಸುಖಕ್ಕೂ ಕಾರಣವಾಗಿರು ವುದು. ಮಾರ್ಕಂಡೇಯ! ನಿನಗೆ ಇಲ್ಲಿ ಸ್ನಾನಮಾಡಿದ್ದರಿಂದ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದ್ದ ಪುಣ್ಯವು ಬಂದಿರುವುದು. ಹೋಗಿ ತಂದೆತಾಯಿಗಳ ಸೇವೆಯನ್ನು ಮಾಡುತ್ತಿರು. ಪತ್ನೀಪುತ್ರರಿಂದ ಕೂಡಿದವನಾಗಿ ಸದಾಚಾರವುಳ್ಳವನಾಗಿ ದಾನಗಳನ್ನು ಮಾಡುತ್ತಾ ಸುಖದಿಂದ ಇರು' ಎಂದು ಹೇಳಿ ಅಂತರ್ಧಾನವನ್ನು ಹೊಂದಿದರು. ತರುವಾಯ ಎಲ್ಲರೂ ತಮ್ಮ ಸ್ಥಳಕ್ಕೆ ಹೋದರು. ಮಾರ್ಕಂಡೇಯರು ತಂದೆ ತಾಯಿಗಳ ಸಮೀಪಕ್ಕೆ ಬಂದು ಎಲ್ಲ ವಿಷಯವನ್ನು ತಿಳಿಸಿ ತಂದೆತಾಯಿಗಳ ಸೇವೆಯನ್ನು ಮಾಡುತ್ತಾ ಸುಖದಿಂದ ಇದ್ದರು.



# ಮುಕುಂದೋಪಾಖ್ಯಾನವು

ಚಂದ್ರಭಾಗಾನದೀ ತೀರದಲ್ಲಿ ಅಯೋಧ್ಯಾಪಟ್ಟಣವಿರುವುದು. ಅಲ್ಲಿ ಪಾಪಿಯಾದ ಚಂಡಕ ಎಂದು ಹೆಸರುಳ್ಳ ಕ್ಷೌರಿಕನು (ನಾಶವನು) ಇದ್ದನು. ಆ ಪಾಪಿಯು ಕಳ್ಳತನವನ್ನು ಮಾಡಿ ಇನ್ನೊಬ್ಬರ ಸೊತ್ತನ್ನು ಅಪಹರಿಸುತ್ತಿದ್ದನು. ದಾರಿಯಲ್ಲಿ ಹೋಗುವವರನ್ನು ಬಡಿದು ಹಣವನ್ನು ಅಪಹರಿಸುತ್ತಿದ್ದನು. ಚೀಟಾಡುವನು. ಕಳ್ಳುಕುಡಿಯುವನು. ಪರಸ್ತ್ರೀಯರನ್ನು ಸೆಳೆಯುವನು. ದೇವರಗುಡಿಯ ಗೋಡೆಯನ್ನು ಒಡೆದು ಹಾಕಿ ಅಲ್ಲಿಯ ಇಟ್ಟಿಗೆಗಳೆಲ್ಲವನ್ನು ಮಾರುತ್ತಿದ್ದನು. ಅವನ ಮನೆಯ ಹತ್ತಿರವೇ ಮುಕುಂದನೆಂಬ ಹಣವಂತನಾದ ಬ್ರಾಹ್ಮಣನು ಇದ್ದನು.

ಒಂದು ದಿವಸ ರಾತ್ರಿಯಲ್ಲಿ ಪತ್ನಿಯೊಡನೆ ಮನೆಯಲ್ಲಿ ಮಲಗಿದ್ದನು. ಆದಿನ ಮಧ್ಯರಾತ್ರಿ ಯಲ್ಲಿ ಮುಕುಂದನ ಮನೆಯಲ್ಲಿ ಬಂಗಾರಾದಿಗಳನ್ನು ಅಪಹರಿಸುವುದಕ್ಕಾಗಿ ಚಂಡಕನು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಮನೆಯೊಳಗೆ ಹೋದನು. ಅಲ್ಲಿ ದಂಪತಿಗಳು ಮಲಗಿರುವುದನ್ನು ನೋಡಿದನು. ಮಂಚದ ಪಾರ್ಶ್ವದಲ್ಲಿ ಇದ್ದ ಆಭರಣಗಳೆಲ್ಲವನ್ನೂ ಹಿಡಿದುಕೊಂಡು ಅವರ ಮೈಯಲ್ಲಿ ಇದ್ದ ಆಭರಣಗಳನ್ನು ತೆಗೆಯಲಿಕ್ಕೆ ಕೈಹಾಕಿದನು. ಕೈತಾಗಿದ ಕೂಡಲೇ ಮುಕುಂದನಿಗೆ ಎಚ್ಚರಿಕೆಯಾಯಿತು. ಕಳ್ಳನನ್ನು ನೋಡಿ ಭಯವುಳ್ಳವನಾಗಿ ಒಂದೂ ಮಾತನಾಡಲಿಲ್ಲ. ಕಣ್ಣುಮುಚ್ಚಿಕೊಂಡು ಅಲ್ಲಿಯೇ ಇದ್ದನು. ಕಳ್ಳನು ಆಭರಣಗಳೆಲ್ಲವನ್ನೂ ಹಿಡಿದುಕೊಂಡು ಹೋಗುತ್ತಿರಲು ಅದನ್ನು ನೋಡಿ ಸಹಿಸದೆ ಮುಕುಂದನು ಹಿಂದಿನಿಂದ ಓಡಿಬಂದು ಎರಡು ಕೈಗಳಿಂದ ಕಳ್ಳನನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಕಳ್ಳನು ಕತ್ತಿಯಿಂದ ಅವನ ಹೊಟ್ಟೆಯನ್ನು ಸೀಳಿಹಾಕಿದನು. ಮುಕುಂದನು 'ಅಮ್ಮ! ಅಪ್ಪ' ಎಂದು ಕೂಗುತ್ತಾ ಬಿದ್ದುಬಿಟ್ಟನು. ಶಬ್ದವನ್ನು ಕೇಳಿ ಜನರು ಏನು? ಏನು? ಎಂದು ಕೇಳುತ್ತಾ ಓಡಿಬಂದರು.

ಕರುಳು ಹೊರಗೆ ಬಂದು ಮೈಯೆಲ್ಲ ರಕ್ತದಿಂದ ಕೂಡಿದ ಮುಕುಂದನನ್ನು ನೋಡಿ ಜನರು 'ಯಾರು ಹೀಗೆ ಮಾಡಿದರು?' ಎಂದು ಕೇಳಿದರು. ಮುಕುಂದನು ಬಂಧುಗಳೊಡನೆ ಬಹು ಕಷ್ಟದಿಂದ 'ನಾನು ಜನ್ಮಾಂತರದಲ್ಲಿ ಮಾಡಿದ ಪಾಪದ ಫಲವಿದು. ಯಾರೊಬ್ಬರೂ ಸುಖ ದುಃಖವನ್ನು ಕೊಡುವವರಲ್ಲ. ಅವರವರು ಮಾಡಿದ ಪುಣ್ಯಪಾಪಗಳೇ ಅವರವರ ಸುಖದುಃಖಗಳಿಗೆ ಕಾರಣಗಳು' ಎಂದು ಹೇಳಿ ವೇದನೆಯನ್ನು ತಾಳಲಾರದೆ ಮಿತ್ರರು ನೋಡುತ್ತಿರುವಂತೆ ಪ್ರಾಣವನ್ನು ಬಿಟ್ಟನು. ಮುಕುಂದನ ತಾಯಿಯು ಮುಕುಂದನ ತಲೆಯನ್ನು ತೊಡೆಯಲ್ಲಿ

ಇಟ್ಟುಕೊಂಡು ಬಹುವಿಲಾಪವನ್ನು ಮಾಡಿ ಮೂರ್ಛಿತಳಾದಳು. ತರುವಾಯ ಗರ್ಭಿಣಿಯಾಗಿದ್ದ ಮುಕುಂದನ ಹೆಂಡತಿಯು ಬಹಳವಾಗಿ ವಿಲಾಪವನ್ನು ಮಾಡಿ ಸಹಗಮನ ಮಾಡಲಿಕ್ಕೆ ಉದ್ಯುಕ್ತಳಾದಳು. ತರುವಾಯ ಆ ಸಮಯದಲ್ಲಿ ಮುಕುಂದನ ಗುರುವಾದ ವೇದಾಯನ ಎಂದು ಹೆಸರುಳ್ಳ ಒಬ್ಬ ಯತಿಯು ಆ ಮನೆಗೆ ಬಂದನು. 'ಮುಕುಂದನು ಎಲ್ಲಿಗೆ ಹೋಗಿರುವನು? ಅವನ ತಾಯಿಯೂ ಹೆಂಡತಿಯೂ ಎಲ್ಲಿರುವರು?' ಎಂದು ಕೇಳಿದನು. ಅದಕ್ಕೆ ಒಬ್ಬ ದಾಸಿಯು 'ಸ್ವಾಮಿ! ಯಾರೋ ಒಬ್ಬ ಕಳ್ಳನು ಬಂದು ನಮ್ಮ ಯಜಮಾನರನ್ನು ಕೊಂದು ಹಾಕಿದನು. ಸೊಸೆಯ ಆಭರಣಗಳನ್ನು ಸೀರೆಗಳನ್ನೂ ಅಪಹರಿಸಿರುವನು. ಮಹಡಿಯಲ್ಲಿ ಯಜಮಾನರು ಹತ್ತಿರದಲ್ಲಿಯೇ ಅಳುತ್ತಾ ಇರುವರು' ಎಂದು ಹೇಳಿದಳು.

ಈರೀತಿಯಾಗಿ ದಾಸಿಯ ಮಾತನ್ನು ಕೇಳಿ ಆ ಯತಿಯು ಮಹಡಿಯ ಮೇಲೆ ಹೋಗಿ ಸತ್ತು ಮಲಗಿದ್ದ ತನ್ನ ಶಿಷ್ಯನನ್ನು ನೋಡಿದನು. ಅವನ ಹತ್ತಿರದಲ್ಲಿಯೇ ಅಳುತ್ತಾ ಇದ್ದ ಬಂಧುಗಳನ್ನು ನೋಡಿ ಅವರಿಗೆಲ್ಲಾ ಸಮಾಧಾನವನ್ನು ಹೇಳಿ ಮೃತನಿಗೆ ಮಾಡತಕ್ಕ ಮುಂದಿನ ಕಾರ್ಯಗಳನ್ನು ಮಾಡಿಸಿದರು. ಗಂಡನೊಡನೆ ಸಹಗಮನ ಮಾಡುವೆನೆಂದು ನಿರ್ಬಂಧ ಮಾಡುತ್ತಿದ್ದ ಮುಕುಂದನ ಪತ್ನಿಯನ್ನು ಬೇಡವೆಂದು ತಡೆದು ವೇದಾಯನನು ಅಲ್ಲಿಂದ ಹೋದನು. ಅವನ ಒಟ್ಟಿಗೆ ಮುಕುಂದನ ತಮ್ಮನು ಅವನ ಎಲುಬನ್ನು ಗಂಗೆಯಲ್ಲಿ ಹಾಕಬೇಕೆಂದು ಹಿಡಿದುಕೊಂಡು ಹೋದನು. ಅವರಿಬ್ಬರೂ ಕ್ರಮದಿಂದ ಇಂದ್ರಪ್ರಸ್ಥಕ್ಕೆ ಬಂದು ಸೇರಿದರು. ಇಂದ್ರಪ್ರಸ್ಥಕ್ಕೆ ಹೋಗಲಿಕ್ಕೆ ಮಧ್ಯದಲ್ಲಿ ಇರುವ ಕೋಶಲದಲ್ಲಿ ಯಮುನಾತೀರದಲ್ಲಿ ರಾತ್ರಿಯಲ್ಲಿ ಶ್ರಮದಿಂದ ಮಲಗಿದರು. ತಮ್ಮಿಬ್ಬರು ಮಧ್ಯದಲ್ಲಿ ಆ ಎಲುಬಿನ ಸಂಪುಟವನ್ನು ಇಟ್ಟುಕೊಂಡಿದ್ದರು. ಮಾರ್ಗಾಯಾಸದಿಂದ ಒಳ್ಳೇ ನಿದ್ರೆಯು ಬಂದಿದ್ದಿತು. ಆ ಸಮಯದಲ್ಲಿ ಒಂದು ನಾಯಿಯು ಅಲ್ಲಿಗೆ ಬಂದಿತು. ಅನೇಕ ಸ್ಥಳಗಳಲ್ಲಿ ಪೆಟ್ಟುತಿಂದು ಅಲ್ಲಿಗೆ ಬಂದು ಆ ಎಲುಬಿನ ಗಂಟನ್ನು ಹಿಡಿದುಕೊಂಡು ಹೋಯಿತು. ಅದು ಮಾಂಸರಹಿತವಾದ ಬರೇ ಎಲುಬನ್ನು ನೋಡಿ ಕೋಶಲೆಯ ನೀರಿನ ಮಧ್ಯದಲ್ಲಿ ಹಾಕಿತು. ಎಲುಬು ಅಲ್ಲಿ ನೀರಿನಲ್ಲಿ ಬೀಳುವ ಮಾತ್ರದಿಂದಲೇ ಮುಕುಂದನು ದಿವ್ಯವಿಮಾನದಲ್ಲಿ ಕೂತುಕೊಂಡು ಅಲ್ಲಿಗೆ ಬಂದನು. ಗುರುಗಳೂ ತಮ್ಮನೂ ಮಲಗಿರುವುದನ್ನು ನೋಡಿ ಮೆಲ್ಲನೆ ಎಬ್ಬಿಸಿದನು. ದಿವ್ಯಾಕಾರವುಳ್ಳ ತಾನು ಗುರುಗಳಿಗೆ ನಮಸ್ಕರಿಸಿ 'ಗುರುಗಳೇ! ನಿಮಗೆ ನಮಸ್ಕಾರವು. ತಮ್ಮನೇ ನಿನಗೆ ಆಶೀರ್ವಾದವು. ನಿಮ್ಮಿಬ್ಬರ ಅನುಗ್ರಹದಿಂದ ನನ್ನ ಎಲುಬು ಈ ತೀರ್ಥದಲ್ಲಿ

ಬಿದ್ದಿತು. ಅಪಮೃತ್ಯುವನ್ನು ಹೊಂದಿ ಅದರ ಫಲವಾಗಿ ನರಕವನ್ನು ಹೊಂದಿದ ನಾನು ಈ ತೀರ್ಥದ ಮಹಿಮೆಯಿಂದ ಉತ್ತಮವಾದ ಗತಿಯನ್ನು ಹೊಂದಿದೆನು. ನಾನು ದಿವ್ಯವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಗುವವನು ಗುರುಗಳಾದ ನಿಮಗೆ ನಮಸ್ಕರಿಸಲಿಕ್ಕೆ ಬಂದೆನು. ನಿಮಗೆ ನಮಸ್ಕರಿಸಿಯಾಯಿತು. ತಮ್ಮನನ್ನು ಈ ತೀರ್ಥವನ್ನು ನೋಡಿಯಾಯಿತು. ಇನ್ನು ಸ್ವರ್ಗಕ್ಕೆ ಹೋಗುವೆನು. ನನಗೆ ಅನುಜ್ಞೆಯನ್ನು ಕೊಡಬೇಕು' ಎಂದು ಹೇಳಿದನು.

ಆಗ ವೇದಾಯನನು 'ಮುಕುಂದ! ನೀನು ಅಪಮೃತ್ಯುವನ್ನು ಹೊಂದಿ ಯಾವ ಲೋಕಕ್ಕೆ ಹೋದಿ? ಅಲ್ಲಿಯ ವೃತ್ತಾಂತವೇನು? ಆ ಲೋಕಕ್ಕೆ ಯಾರು ಅಧಿಪತಿಯು? ಎಲ್ಲಾ ವಿಷಯವನ್ನು ತಿಳಿಸು' ಎಂದು ಕೇಳಿದನು.

ಅದಕ್ಕೆ ಮುಕುಂದನು 'ಗುರುಗಳೇ! ಮರಣದ ಅನಂತರದಲ್ಲಿ ನಡೆದ ವಿಷಯವೆಲ್ಲವನ್ನೂ ತಿಳಿಸುತ್ತೇನೆ. ಈ ತೀರ್ಥದ ಪ್ರಭಾವದಿಂದ ನನಗೆ ಎಲ್ಲವೂ ಸ್ಮರಣೆಗೆ ಬರುತ್ತಿದೆ. ನಾನು ದುರಾತ್ಮನಾದ ಕ್ಷೌರಿಕನಾದ ಚಂಡಕನಿಂದ ಯಾವಾಗ ಸಂಹಾರ ಮಾಡಲ್ಪಟ್ಟೆನೋ ಆಗಲೇ ಅತಿಭಯಂಕರರಾದ ಕಪ್ಪಾಗಿದ್ದ ಕೆಂಪಾದ ಕೂದಲಿದ್ದ ಗಿಡ್ಡಾಗಿದ್ದ ಉದ್ದ ಪಾದಗಳಿದ್ದ ಗಿಡ್ಡವಾದ ಮೂಗು ಇದ್ದ ಯಮದೂತರು ಬಂದರು. 'ಯಮದೇವರ ಆಜ್ಞೆಯಿಂದ ಸಂಯಮಿನೀನಗರಕ್ಕೆ ಕರಕೊಂಡು ಹೋಗುವ' ಎಂದು ಪರಸ್ಪರ ಹೇಳಿಕೊಂಡರು.

ತರುವಾಯ ನನ್ನನ್ನು ಯಾತನಾ ದೇಹದಲ್ಲಿ ಪ್ರವೇಶಮಾಡಿಸಿ ಲೋಹದ ಪಾಶದಿಂದ ಕಟ್ಟಿ ಮುದ್ಗರ ಎಂಬ ಆಯುಧಗಳಿಂದ ಬಡೆದರು. ಅವರು ನನ್ನನ್ನು ಬಿಸಿಯಾದ ಉಸುಬಿನ ಮೇಲೆ ಕರಕೊಂಡು ಹೋದರು. ನಾನು ತುಂಬಾ ದುಃಖವುಳ್ಳವನಾಗಿ ಅಳುವವನಾದೆನು. ಆಗ ಅವರು ಪುನಃ ಬಡೆದು ಬೆದರಿಸಿದರು. 'ನೀನು ಗುರುದ್ರೋಹವನ್ನು ಮಾಡಿರುವಿ. ಏನು ಮಾಡುವಿ? ಯಮದೇವರ ಭಯಂಕರವಾದ ಮುಖವನ್ನು ನೋಡಬೇಕಾಗುವುದು. ಗುರುದ್ರೋಹದ ಫಲವನ್ನು ನೀನು ಅನುಭವಿಸಬೇಕು. ಗುರುದ್ರೋಹವನ್ನು ಮಾಡಿದ ಕಾರಣವೇ ನೀನು ಅಪಮೃತ್ಯುವನ್ನು ಹೊಂದಿರುವಿ' ಎಂದು ಹೇಳಿ ಒಂದು ಮುಹೂರ್ತದಲ್ಲಿಯೇ ಬಹುದೂರವಿರುವ ಯಮದೇವರ ಸಂಯಮಿನೀ ನಗರಕ್ಕೆ ಕರೆದುಕೊಂಡು ಹೋದರು. ಯಮದೇವರಿಗೆ ನಮಸ್ಕರಿಸಿ ನನ್ನನ್ನು ಮುಂದೆ ನಿಲ್ಲಿಸಿ 'ಈ ಪಾಪಿಯಾದ ಬ್ರಾಹ್ಮಣನನ್ನು ಕರೆದುಕೊಂಡು ಬಂದಿರುವೆವು' ಎಂದರು.

ಯಮದೇವರು ನನ್ನನ್ನು ನೋಡಿ ಸಭಿಕರೊಡನೆ 'ಸಭಿಕರೇ! ನನ್ನ ಮಾತನ್ನು

ಎಲ್ಲರೂ ಚೆನ್ನಾಗಿ ಕೇಳಬೇಕು. ಬ್ರಹ್ಮದೇವರು ನನಗೆ ಈ ಅಧಿಕಾರವನ್ನು ಕೊಟ್ಟು 'ಯಮ! ನೀನು ಸಂಯಮನೀ ನಗರಕ್ಕೆ ಅಧಿಪತಿಯಾಗಿದ್ದು ಅಧರ್ಮವನ್ನು ಮಾಡಿದ ಜನರಿಗೆ ಅವರ ಅಪರಾಧಕ್ಕೆ ಸರಿಯಾಗಿ ಶಿಕ್ಷೆಯನ್ನು ಮಾಡು. ಯಾರು ಸಮರ್ಥನಾಗಿದ್ದುಕೊಂಡು ತಂದೆತಾಯಿಗಳನ್ನು ಪೋಷಿಸುವು ದಿಲ್ಲವೋ ಯಾರು ಗುರುದ್ರೋಹವನ್ನು ಮಾಡುವನೋ ಅವರಿಬ್ಬರನ್ನು ಎಲ್ಲಾ ನರಕಗಳಲ್ಲಿಯೂ ಹಾಕು. ಒಂದೊಂದು ನರಕದಲ್ಲಿ ಹತ್ತು ಸಾವಿರ ವರ್ಷ ಹಾಕು. ಅವರಲ್ಲಿ ದಯೆಯನ್ನು ತೋರಿಸಬೇಡ' ಎಂದು ಆಜ್ಞಾಪಿಸಿರುವನು. ಆದುದರಿಂದ ಈ ಗುರುದ್ರೋಹಿ ಯಾದ ಬ್ರಾಹ್ಮಣನಲ್ಲಿ ದಯೆಯನ್ನು ಮಾಡಲಾರೆನು. ಇವನು ಗುರುದ್ರೋಹ ದಿಂದಲೇ ಅಪಮೃತ್ಯುವನ್ನು ಹೊಂದಿರುವನು. ನನ್ನ ಆಜ್ಞೆಯಿಂದ ಇವನನ್ನು ದೂತರು ಕರಕೊಂಡು ಬಂದಿರುವರು. ಇವನು ನೋಡಲಿಕ್ಕೆ ಯೋಗ್ಯನಲ್ಲ. ದೂತರೇ! ಇವನನ್ನು ಘೋರವಾದ ರೌರವನರಕದಲ್ಲಿ ಹತ್ತುಸಾವಿರ ವರ್ಷ ಹಾಕಿ ಆಮೇಲೆ ಬೇರೆ ನರಕಗಳಲ್ಲಿ ಹಾಕಿರಿ' ಎಂದು ಹೇಳಿದರು. ತರುವಾಯ ಯಮದೂತರು ನನ್ನನ್ನು ಪಾಶಗಳಿಂದ ಕಟ್ಟಿ ಎಳೆದುಕೊಂಡು ಹೋಗಿ ರೌರವನರಕದಲ್ಲಿ ಹಾಕಿದರು. ಅಲ್ಲಿ ನಾನು ಅತಿಮಹತ್ತಾದ ವ್ಯಥೆಯನ್ನು ಅನುಭವಿಸಿದೆನು. ಆ ವ್ಯಥೆಯಿಂದ ನನಗೆ ಒಂದು ಕ್ಷಣವು ಒಂದು ಯುಗದಂತೆ ಕಾಣಿಸುತ್ತಿತ್ತು. ಅಲ್ಲಿ ಮೂವತ್ತು ದಿವಸಗಳನ್ನು ಅತಿಕಷ್ಟದಿಂದ ಕಳೆದೆನು. ಮೂವತ್ತ ಒಂದನೆಯದಾದ ಈ ದಿವಸದಲ್ಲಿ ಎಲುಬು ಈ ತೀರ್ಥದಲ್ಲಿ ಬೀಳಲು ನಾನು ನರಕದಿಂದ ಹೊರಗೆ ಬಂದೆನು. ಗುರುದ್ರೋಹದಿಂದ ಉಂಟಾದ ನನ್ನ ಪಾಪವು ಪರಿಹೃತವಾಯಿತು.

ಪಾಪಿಯಾದ ನನ್ನನ್ನು ಯಾವಾಗ ಯಮದೂತರು ಯಮಲೋಕಕ್ಕೆ ಕರೆದು ಕೊಂಡು ಹೋದರೋ ಆಗ ನಾನು ಅಲ್ಲಿ ಭಯಂಕರರಾದ ಜನರನ್ನು ನೋಡಿದೆನು. ಸಿಂಹದಂತೆ ಮುಖವುಳ್ಳವರು. ಆನೆಯಂತೆ ಹಂದಿಯಂತೆ ಮುಖವುಳ್ಳವರು. ಉದ್ದವಾದ ಕೈಕಾಲುಗಳುಳ್ಳ ಹೆಂಗಸರು. ಇವರೆಲ್ಲರೂ ಕಣ್ಣುಬಿದ್ದರು. ಈ ತೀರ್ಥದ ಅನುಗ್ರಹದಿಂದ ಪಾಪರಹಿತನಾದಾಗ ದಿವ್ಯರೂಪವುಳ್ಳ ಸತ್ಯವಚನವುಳ್ಳ ವಿನಯ ವುಳ್ಳ ದಿವ್ಯಾಭರಣಗಳನ್ನು ಧರಿಸಿದ್ದ ದಿವ್ಯವಸ್ತ್ರಗಳಿಂದ ಅಲಂಕೃತರಾದ ಜನರನ್ನು ನೋಡಿದೆನು. ಈಪ್ರಕಾರವಾಗಿ ನೀವು ಕೇಳಿದ ವಿಷಯವನ್ನೆಲ್ಲಾ ಹೇಳಿದೆನು. ನನಗೆ ಸ್ವರ್ಗಕ್ಕೆ ಹೋಗಲಿಕ್ಕೆ ಅನುಜ್ಞೆಯನ್ನು ಕೊಡಿರಿ' ಎಂದು ಹೇಳಿದನು.

ಆಗ ವೇದಾಯನನು 'ಮುಕುಂದ! ಬಾಲ್ಯದಿಂದ ನಿನಗೆ ನಾನು ಗುರುವು. ನೀನು ಎಲ್ಲಾ ಶಾಸ್ತ್ರವನ್ನು ನನ್ನಿಂದಲೇ ಓದಿರುವಿ. ನಿನ್ನಲ್ಲಿ ಶಮದಮ ಎಲ್ಲಾ

ಗುಣಗಳೂ ಇರುವುವು. ನಿನಗೆ ಗುರುದ್ರೋಹ ಪಾಪವು ಹೇಗೆ ಉಂಟಾಯಿತು' ನನಗೆ ತಿಳಿಯುವಂತೆ ಹೇಳು' ಎಂದನು.

ಮುಕುಂದನು 'ನಾನು ತಂದೆತಾಯಿಗಳ ಮಾತನ್ನು ಮೀರಲಿಲ್ಲ. ಅತ್ತೆ ಮಾವಂದಿರ ಸೇವೆಯನ್ನು ಮಾಡಿರುವೆನು. ಶಾಸ್ತ್ರೋಪದೇಶ ಮಾಡಿದ ನಿಮ್ಮ ಆಜ್ಞೆಯನ್ನು ಮೀರಿದವನಲ್ಲ. ನಮ್ಮ ಕುಲಪುರೋಹಿತರು ವೇದವೇದಾಂಗಶಾಸ್ತ್ರ ಪಾರಂಗತರಾಗಿರುವರು. ಅವರಿಗೊಂದು ಅಪರಾಧವನ್ನು ಮಾಡಿರುವೆನು. ನಮ್ಮ ವಂಶದಲ್ಲಿ ಮಗುವು ಹುಟ್ಟಿದರೆ ಅದರ ನಾಭಿಚ್ಛೇದನ ಮಾಡುವ ಪೂರ್ವದಲ್ಲಿಯೇ ನಮ್ಮ ಪುರೋಹಿತರಿಗೆ ಒಂದು ಗೋದಾನವನ್ನು ಮಾಡಬೇಕೆಂದು ನಮ್ಮ ಕುಲದ ಸಂಪ್ರದಾಯವು. ನನಗೆ ಮಗನು ಹುಟ್ಟಿದಾಗ ನಾನು ಅದನ್ನು ನಿಲ್ಲಿಸಿಬಿಟ್ಟೆನು. ಅದರಿಂದ ಗುರುಗಳಾದ ಪುರೋಹಿತರಿಗೆ ಕೊಡಬೇಕಾದದ್ದನ್ನು ನಿಲ್ಲಿಸಿದ ಕಾರಣ ನನಗೆ ಗುರುದ್ರೋಹವುಂಟಾಯಿತು. ಈರೀತಿಯಾಗಿ ನನಗೆ ಗುರುದ್ರೋಹವು ಬಂದ ಕ್ರಮವನ್ನು ಹೇಳಿಯಾಯಿತು. ಇನ್ನು ಸ್ವರ್ಗಕ್ಕೆ ಹೋಗಲಿಕ್ಕೆ ನನಗೆ ಅನುಜ್ಞೆಯನ್ನು ಕೊಡಬೇಕು' ಎಂದು ಹೇಳಿದನು.

ವೇದಾಯನನು 'ಇಂದ್ರಪ್ರಸ್ಥದಲ್ಲಿರುವ ಈ ಕೋಶಲೆಯ ಅನುಗ್ರಹದಿಂದ ಪೂರ್ವಜನ್ಮ ಸ್ಮರಣೆಯೂ ಬರುವುದು. ನಿನಗೆ ಜ್ಞಾಪಕಕ್ಕೆ ಬಂದರೆ ನಿನ್ನ ಎಲುಬು ಯಾವ ಪುಣ್ಯದಿಂದ ಈ ತೀರ್ಥದಲ್ಲಿ ಬಿದ್ದಿತು ಎಂಬುದನ್ನು ಹೇಳು' ಎಂದನು.

ಮುಕುಂದನು 'ಒಬ್ಬ ಬ್ರಾಹ್ಮಣನು ಸಾಯಂಕಾಲದಲ್ಲಿ ನನ್ನ ಮನೆಗೆ ಬಂದನು. ಅವನಿಗೆ ನಾನು ಆಶ್ರಯವನ್ನು ಕೊಟ್ಟು ಭೋಜನವನ್ನು ಹಾಕಿದೆನು. ಅವನು ಭೋಜನ ಮಾಡಿ ನನ್ನ ಮನೆಯಲ್ಲಿಯೇ ಮಲಗಿದನು. ಮಧ್ಯರಾತ್ರಿಯಲ್ಲಿ ಅವನಿಗೆ ಅತಿಭಯಂಕರವಾದ ಜ್ವರವು ಬಂದಿತು. ಅದರಿಂದ ಅವನಿಗೆ ನಿದ್ರೆಯೇ ಬರಲಿಲ್ಲ. ಬೆಳಗಾಗಲು ಅವನು ಪ್ರಾಣಬಿಟ್ಟನು. ಅವನಿಗೆ ನಾನು ಎಲ್ಲಾ ಸಂಸ್ಕಾರವನ್ನು ಮಾಡಿಸಿದೆನು. ಅವನ ಎಲುಬನ್ನು ಗಂಗೆಯಲ್ಲಿ ಹಾಕಿಸಿದೆನು. ಆ ಪುಣ್ಯದಿಂದ ನನ್ನ ಎಲುಬುಗಳು ಬ್ರಹ್ಮದೇವರಿಂದ ನಿರ್ಮಿತವಾದ ಪರಮಪವಿತ್ರವಾದ ಕೋಶಲಾ ಎಂದು ಹೆಸರುಳ್ಳ ಈ ತೀರ್ಥದಲ್ಲಿ ಬಿದ್ದವು! ಈ ಪ್ರಕಾರವಾಗಿ ಹೇಳಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಲೋಕಕ್ಕೆ ಹೋದನು.



# ಚಂಡಕನ ಕಥೆಯು

ಮುಕುಂದ ಎಂಬ ಬ್ರಾಹ್ಮಣನನ್ನು ಚಂಡಕನು ಸಂಹರಿಸಿದ ವಿಷಯವನ್ನು ತಿಳಿದು ಊರಿನ ಜನರು ರಾಜನ ಬಳಿಗೆ ಹೋಗಿ 'ಚಂಡಕನು ಬ್ರಾಹ್ಮಣೋತ್ತಮನಾದ ಮುಕುಂದನನ್ನು ಸಂಹರಿಸಿದನು. ಅವನ ಬಹಳವಾದ ಹಣವನ್ನು ಅಪಹರಿಸಿದನು. ಅವನಿಗೆ ಮಾಡಬೇಕಾದ ಶಿಕ್ಷೆಯನ್ನು ಮಾಡಬೇಕು' ಎಂದು ಹೇಳಿಕೊಂಡರು. ಅದನ್ನು ಕೇಳಿ ರಾಜನು ಹತ್ತಿರದಲ್ಲೇ ಇದ್ದ ಮಂತ್ರಿಯೊಡನೆ ಕಣ್ಣನ್ನು ಕೋಪದಿಂದ ಕೆಂಪಗೆ ಮಾಡಿಕೊಂಡು 'ಬೇಗನೇ ಆ ಪಾಪಿಯನ್ನು ಸೆಳೆದುಕೊಂಡು ಬಾ. ಇಲ್ಲದಿದ್ದರೆ ನಿನಗೇ ಹಿಂಸೆಯನ್ನು ಮಾಡಿಸುವೆನು. ಏಳು. ಏಳು. ಸಜ್ಜನರಿಗೆ ಸುಖವನ್ನು ಉಂಟುಮಾಡು. ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ದುಷ್ಟರಿಂದ ಹಿಂಸಿಸಲ್ಪಡುವರೋ ಆ ರಾಜನು ಪ್ರಜೆಗಳನ್ನು ದುಷ್ಟರಿಂದ ರಕ್ಷಿಸದೆ ಇದ್ದರೆ ನರಕವನ್ನು ಹೊಂದವನು' ಎಂದು ಹೇಳಿದನು. ಕೂಡಲೇ ಮಂತ್ರಿಯು ಕುದುರೆಯ ಮೇಲೆ ಕೂತುಕೊಂಡು ನೂರುಜನ ಪದಾತಿಗಳಿಂದ ಕೂಡಿಕೊಂಡು ಮುಕುಂದನ ಮನೆಗೆ ಹೋದನು. ಅಲ್ಲಿದ್ದ ಅವನ ಬಂಧುಗಳೊಡನೆ ಕೇಳಿದನು. 'ಮುಕುಂದನನ್ನು ಯಾವ ಪಾಪಿಯು ಸಂಹರಿಸಿದನು? ಅದನ್ನು ನನ್ನೊಡನೆ ಹೇಳಿರಿ. ಆ ಪಾಪಿಯನ್ನು ರಾಜಾಜ್ಞೆಯಿಂದ ನಾನು ಸಂಹರಿಸುವೆನು' ಎಂದನು. ಅದಕ್ಕೆ ಬಂಧುಗಳು 'ಮುಕುಂದನನ್ನು ಚಂಡಕನೆಂದು ಹೆಸರುಳ್ಳ ಕ್ಷೌರಿಕನು ಸಂಹರಿಸಿದನು. ಓಡುವಾಗ ಅವನ ಈ ರುಮಾಲು ಇಲ್ಲಿಯೇ ಬಿದ್ದಿರುತ್ತದೆ. ಮುಕುಂದನ ಹೆಂಡತಿಯು ಅವನನ್ನು ಕಣ್ಣಾರೆ ನೋಡಿದಳು. ಏನು ಮಾಡಲಿ? ಆ ಪಾಪಿಯಿಂದ ನಾವೆಲ್ಲರೂ ದುಃಖಸಾಗರದಲ್ಲಿ ಮುಳುಗಿರುವೆವು' ಎಂದು ಹೇಳಿದರು. ಅದನ್ನು ಕೇಳಿ ಕೂಡಲೇ ಮಂತ್ರಿಯು ಆ ಕ್ಷೌರಿಕನ ಮನೆಗೆ ಹೋದನು.

ಅಲ್ಲಿ ಕುದುರೆಯಿಂದ ಕೆಳಗೆ ಇಳಿದು ಬೇಗನೇ ಕೆಲವು ಪದಾತಿಗಳಿಂದ ಕೂಡಿಕೊಂಡು ತಾನೇ ಅವನ ಮನೆಯ ಒಳಗೆ ಹೋದನು. ಚಂಡಕನು ಅಲ್ಲಿ ಮಲಗಿರುವುದನ್ನು ನೋಡಿದನು. ಆಗ ಮಂತ್ರಿಯಿಂದ ಆಜ್ಞಪ್ತರಾದ ಪದಾತಿಗಳು ಅವನ ತಲೆಕೂದಲನ್ನು ಹಿಡಿದು ಸೆಳೆದು ಹಾಸಿಗೆಯಿಂದ ಎಬ್ಬಿಸಿದನು. ಚಂಡಕನು 'ಏನು ಏನು?' ಎಂದು ಹೇಳುತ್ತಾ ಕಣ್ಣು ತೆರೆಯುವವನಾಗಿ ಮುಂದೆ ನಿಂತಿದ್ದ ಮಂತ್ರಿಯನ್ನು ನೋಡಿದನು. ತಾನು ರಾತ್ರಿಯಲ್ಲಿ ಮಾಡಿದ ಕಾರ್ಯವನ್ನು ಸ್ಮರಿಸಿಕೊಂಡು ತನ್ನ ತಲೆಯ ಮೇಲೆ ಯಮನು ಬಂದಿರುವನೆಂದು ತಿಳಿದು ಮುಖವನ್ನು ತಗ್ಗಿಸಿಕೊಂಡು ಸುಮ್ಮನೆ ನಿಂತರು. ಮಂತ್ರಿಯು ಪದಾತಿಗಳಿಂದ ಅವನ್ನು

ಸೆಳೆದುಕೊಂಡು ಬರುವಂತೆ ಹೇಳಿ ರಾಜನ ಬಳಿಗೆ ಕರೆದುಕೊಂಡು ಹೋಗಿ 'ಬ್ರಹ್ಮಹತ್ಯೆಯನ್ನು ಮಾಡಿದ ಈ ಕ್ಷೌರಿಕನನ್ನು ಸೆಳೆದುಕೊಂಡು ಬಂದಿರುವೆನು. ತಾವು ಆಜ್ಞೆಯನ್ನು ಮಾಡಿದಂತೆ ಅವನಿಗೆ ಶಿಕ್ಷೆಯನ್ನು ಮಾಡುವೆನು' ಎಂದು ಹೇಳಿದನು.

ಆಗ ರಾಜನು 'ಮಂತ್ರಿ ಶ್ರೇಷ್ಠನೇ! ಕೇಳು. ಈ ಚಂದ್ರಭಾಗಾ ಎಂದು ಹೆಸರುಳ್ಳ ಪರಮಪವಿತ್ರವಾದ ನದಿಯ ತೀರದಲ್ಲಿ ಯಾರು ಸಾಯುವರೋ ಅವರಿಗೆ ಸ್ವರ್ಗವೇ ಉಂಟಾಗುವುದು. ಆದುದರಿಂದ ಈ ಪಾಪಿಯನ್ನು ಇಲ್ಲಿ ಕೊಲ್ಲಬಾರದು. ಈ ನದಿಯ ತೀರದಿಂದ ಹತ್ತು ಮೈಲು ದೂರದಲ್ಲಿ ಇವನನ್ನು ಸಂಹರಿಸಬೇಕು' ಎಂದು ಹೇಳಿದನು. ಅದನ್ನು ಕೇಳಿ ಮಂತ್ರಿಯು ರಾಜಾಜ್ಞೆಯಿಂದ ಅವನನ್ನು ಕೊಲ್ಲಲಿಕ್ಕೆ ಚಂಡಾಲರಿಗೆ ಆಜ್ಞೆಯನ್ನು ಮಾಡಿದನು. ಚಂಡಾಲರು ಅವನನ್ನು ಚಂದ್ರಭಾಗೆಯ ತೀರದಿಂದ ಹತ್ತುಮೈಲು ದೂರಕ್ಕೆ ಕರೆದುಕೊಂಡು ಹೋಗಿ ಅವನ ತಲೆಯನ್ನು ಕಡಿದುಹಾಕಿದರು. ತರುವಾಯ ಆ ಪಾಪಿಯಾದ ಚಂಡಕನು ಮರುದೇಶದಲ್ಲಿ ದೊಡ್ಡ ಹಾವಾಗಿ ಹುಟ್ಟಿದನು. ಅವನ ವಿಷದಿಂದ ಅಲ್ಲಿದ್ದ ಗಿಡಗಳೂ ಹುಲ್ಲುಗಳೂ ಸುಟ್ಟುಹೋದವು. ಒಂದು ಸಮಯದಲ್ಲಿ ದಕ್ಷಿಣದೇಶದಿಂದ ಕೆಲವು ಜನರು ಬದರಿಕಾಶ್ರಮಕ್ಕೆ ಹೋಗಲು ಪ್ರಯಾಣ ಮಾಡುತ್ತಾ ಬಂದರು. ದಾರಿಯಲ್ಲಿ ಒಬ್ಬ ಬ್ರಾಹ್ಮಣನು ಅವರೊಡನೆ ಸೇರಿಕೊಂಡನು. ಅವನು ತಂದೆತಾಯಿಗಳ ಎಲುಬಿನಿಂದ ಕೂಡಿದ ಒಂದು ಬುಟ್ಟಿಯನ್ನು ಹೆಗಲಲ್ಲಿ ಹೊತ್ತುಕೊಂಡು ಬಂದಿದ್ದರು. ಆ ಎಲುಬುಗಳನ್ನು ಗಂಗೆಯಲ್ಲಿ ಹಾಕಬೇಕೆಂದು ಅವನ ಅಭಿಪ್ರಾಯವು. ಅವನು ಆ ಸರ್ಪವು ಇದ್ದ ವನಕ್ಕೆ ಬಂದನು. ಅವನು ಕಬ್ಬಿಣದ ಕಂಬಿಗಳಿಂದ ಮಾಡಿದ್ದ ಆ ಬುಟ್ಟಿಯನ್ನು ಏಕಾಂತದಲ್ಲಿ ಇಟ್ಟು ಹೋದನು. ಆ ಸರ್ಪವು ಆ ಬುಟ್ಟಿಯನ್ನು ನೋಡಿ ತನ್ನ ಹೆಡೆಯಿಂದ ಅದರ ಕಂಬಿಯನ್ನು ಬಡಿಯಿತು. ಕಂಬಿಯು ಸ್ವಲ್ಪ ಸರಿಯಿತು. ಸರ್ಪವು ಆ ಬುಟ್ಟಿಯ ಒಳಗೆ ಹೋಯಿತು. ಪುನಃ ಆ ಕಂಬಿಯು ಹಾಗೆಯೇ ಆಯಿತು. ಸರ್ಪವು ಒಳಗೇ ಇದ್ದಿತು. ಬೆಳಗಾಗಲು ಎಲ್ಲರೂ ಅಲ್ಲಿಂದ ಹೊರಟರು. ಬ್ರಾಹ್ಮಣನೂ ಕಂಬಳಿಯಿಂದ ಆ ಬುಟ್ಟಿಯನ್ನು ಸುತ್ತಿಕೊಂಡು ತಲೆಯ ಮೇಲೆ ಇಟ್ಟುಕೊಂಡು ಗಂಗೆಗೆ ಹೋಗಬೇಕೆಂದು ಹೋದನು. ಹಾವು ಆ ಬುಟ್ಟಿಯೊಳಗೆ ಸೇರಿದ್ದು ಅವನಿಗೆ ತಿಳಿಯಲೇ ಇಲ್ಲ. ಕೆಲವು ದಿನಗಳಲ್ಲಿ ಆ ಜನರ ಗುಂಪಿನ ಒಟ್ಟಿಗೆ ಬ್ರಾಹ್ಮಣನು ಕೋಶಲಾನದಿಯ ತೀರಕ್ಕೆ ಬಂದು ಸೇರಿದನು.

ಅಲ್ಲಿ ಬ್ರಾಹ್ಮಣನು ಛಳಿಯಾಗುತ್ತದೆಂದು ಬುತ್ತಿಗೆ ಸುತ್ತಿದ್ದ ಕಂಬಳಿಯನ್ನು ತೆಗೆದನು. ಅಷ್ಟರಲ್ಲಿ ಬುಟ್ಟಿಯೊಳಗೆ ಆಹಾರವಿಲ್ಲದೆ ಇದ್ದ ಸರ್ಪವು ಮೆಲ್ಲನೆ

ಕಂಬಿಯನ್ನು ಸರಿಸಿಕೊಂಡು ಹೊರಗೆ ಬಂದಿತು. ಅದನ್ನು ನೋಡಿ ಜನರು 'ಸರ್ಪನು, ಸರ್ಪನು' ಎಂದು ಹೇಳುತ್ತಾ ಕೋಪದಿಂದ ಕಲ್ಲನ್ನು ಹಿಡಿದುಕೊಂಡು ಬಂದರು. ಆ ಸರ್ಪವು ಓಡಿಹೋಗುವಷ್ಟರಲ್ಲಿಯೇ ಒಬ್ಬನು ಕಲ್ಲಿನಿಂದ ಅದನ್ನು ಬಡಿದನು. ಎಲ್ಲರೂ ನೋಡುವಂತೆ ಆ ಸರ್ಪವು ಪ್ರಾಣವನ್ನು ಬಿಟ್ಟಿತು. ಆ ಸರ್ಪದೇಹವು ಹೋಗಿ ಅದಕ್ಕೆ ದೇವತೆಯಂತೆ ಇರುವ ದೇಹವು ಬಂದಿತು. ಅವನು ದಿವ್ಯವಿಮಾನವನ್ನು ಏರಿ 'ದಕ್ಷಿಣದೇಶದ ಬ್ರಾಹ್ಮಣರೇ! ಕೇಳಿರಿ. ನಾನು ಪೂರ್ವದಲ್ಲಿ ಚಂಡಕ ಎಂದು ಹೆಸರುಳ್ಳ ಕೌರಿಕನು. ಬ್ರಹ್ಮಹತ್ಯೆಯನ್ನು ಮಾಡಿದವನು. ಅಧಮನು. ಬ್ರಹ್ಮಹತ್ಯಾದೋಷದಿಂದ ಮರುಪ್ರದೇಶದಲ್ಲಿ ಸರ್ಪನಾಗಿದ್ದೆನು. ಐದುಲಕ್ಷ ವರ್ಷ ನರಕಗಳನ್ನು ಅನುಭವಿಸಿ ಸರ್ಪನಾದೆನು. ಸರ್ಪದೇಹವನ್ನು ಹೊಂದಿಯೇ ಇಪ್ಪತ್ತು ಸಾವಿರ ವರ್ಷಗಳಾದವು. ಈಗ ಈ ತೀರ್ಥದ ಮಹಿಮೆಯಿಂದ ನನಗೆ ದಿವ್ಯದೇಹವು ಬಂದಿರುವುದು. ಆದುದರಿಂದ ಈ ಕೋಶಲಾ ಎಂಬ ತೀರ್ಥವನ್ನು ಬಿಡಬಾರದು. ಪಾಪಿಯಾದ ನಾನು ಇದರಿಂದ ಸ್ವರ್ಗವನ್ನು ಹೊಂದಿರುವೆನು' ಎಂದು ಹೇಳಿ ವಿಮಾನದಲ್ಲಿ ಕೂತುಕೊಂಡು ಹೊರಟುಹೋದನು.

ಆಮೇಲೆ ದಕ್ಷಿಣದೇಶದ ಆ ಬ್ರಾಹ್ಮಣರೆಲ್ಲರೂ ಶ್ರದ್ಧೆಯಿಂದ ಆ ನದೀತೀರದಲ್ಲಿಯೇ ವಾಸಮಾಡಿದರು. ಆ ಬ್ರಾಹ್ಮಣನೂ ನಂಬಿಕೆಯುಳ್ಳವನಾಗಿ ತನ್ನ ತಂದೆತಾಯಿಗಳ ಎಲುಬನ್ನು ಆ ತೀರ್ಥದಲ್ಲಿ ಹಾಕಿದನು. ಎಲುಬು ಆ ತೀರ್ಥದಲ್ಲಿ ಬೀಳಲು ಆಗಲೇ ಅವನ ತಂದೆತಾಯಿಗಳು ದಿವ್ಯದೇಹವುಳ್ಳವರಾಗಿ ವಿಮಾನದಲ್ಲಿ ಕೂತುಕೊಂಡು ಅಲ್ಲಿಗೆ ಬಂದವರಾಗಿ ಎಲ್ಲಾ ಜನರೂ ಕೇಳುವಂತೆ 'ಮಗ! ಬಹುಕಾಲ ಲೋಕದಲ್ಲಿ ಬದುಕಿರು. ಧನಧಾನ್ಯವುಳ್ಳವನಾಗಿರು. ನಮಗೆ ಸ್ವರ್ಗವನ್ನು ಉಂಟುಮಾಡಿದ ಕಾರಣ ನೀನೂ ಸ್ವರ್ಗವನ್ನು ಹೊಂದುವಿ. ಗಯೆಯಲ್ಲಿ ಪಿಂಡಪ್ರದಾನ ಮಾಡುವುದರಿಂದ ಮಗನಿಗೆ ಏನು ಫಲವು ಬರುವುದೋ ಅವನ ಪಿತೃಗಳಿಗೆ ಏನು ಗತಿಯಾಗುವುದೋ ಅದು ಎರಡೂ ಈ ತೀರ್ಥದಲ್ಲಿ ಎಲುಬನ್ನು ಹಾಕುವುದರಿಂದ ಆಗುವುದು' ಎಂದು ಹೇಳಿ ವಿಮಾನದಲ್ಲಿ ಕೂತುಕೊಂಡು ಹೊರಟುಹೋದರು. ಆ ಬ್ರಾಹ್ಮಣನು ಅಲ್ಲಿಯೇ ಮೂರು ದಿವಸವಿದ್ದು ಆ ತೀರ್ಥರ ಮಹಿಮೆಯನ್ನು ಸ್ಮರಿಸುತ್ತಾ ಮನೆಗೆ ಹೋದನು.



# ಕೋಶಲಾನದಿಯ ಮಹಿಮಾತಿಶಯವು [1]

ತರುವಾಯ ಆ ದಕ್ಷಿಣದೇಶದವರೆಲ್ಲರೂ ಆ ನದೀತೀರದಲ್ಲಿಯೇ ಸಾಯಬೇಕೆಂಬ ಆಸೆಯಿಂದ ಅಲ್ಲಿಯೇ ವಾಸಮಾಡಿದರು. ಒಬ್ಬ ಪುರುಷನು ಮಾತ್ರ ಆ ನದಿಯಲ್ಲಿ ವಿಶ್ವಾಸವಿಲ್ಲದೆ ಬದರಿಕಾಶ್ರಮಕ್ಕೆ ಹೋಗಬೇಕೆಂದು ಹೋದನು. ಆಗ ದಾರಿಯಲ್ಲಿ ಪರಮಾತ್ಮನೇ ವೃದ್ಧಬ್ರಾಹ್ಮಣರೂಪದಿಂದ ಬಂದು 'ಬ್ರಾಹ್ಮಣೋತ್ತಮ! ಈ ಶುಭವಾದ ನದಿಯನ್ನು ಬಿಟ್ಟು ಎಲ್ಲಿಗೆ ಹೋಗುತ್ತಿರುವಿ? ಈ ಕೋಶಲಾನದಿಯು ಪರಮಪವಿತ್ರವಾದದ್ದು. ಪಾಪಪರಿಹಾರಕವಾದದ್ದು. ಇಂತಹ ಉತ್ತಮ ನದಿಯನ್ನು ಬಿಟ್ಟು ಎಲ್ಲಿಗೆ ಹೋಗುವಿ? ಇದನ್ನು ಬಿಟ್ಟು ಎಲ್ಲಿಗೆ ಹೋದರೂ ನಿನಗೆ ಸಿದ್ಧಿಯಾಗಲಾರದು. ಪರಮಾತ್ಮನು ನಿನಗೆ ಪರಾಙ್ಮುಖನಾಗುವನು. ನೀನು ಮೋಕ್ಷವನ್ನು ಇಚ್ಛಿಸಿ ಇಲ್ಲಿ ವಾಸಮಾಡಿದರೂ ಕ್ರಮದಿಂದ ಅದೂ ಆಗುವುದು. ನೀನು ಯಾವ ಫಲವನ್ನು ಇಚ್ಛಿಸಿಕೊಂಡು ಇಲ್ಲಿ ಸ್ನಾನ ಮಾಡುವಿಯೋ ಆ ಫಲವನ್ನು ಕೊಡುವುದು. ನೀನು ನೋಡುವಂತೆಯೇ ಆ ಸರ್ಪವೂ ದಿವ್ಯದೇಹವನ್ನು ಧರಿಸಿಕೊಂಡು ಹೋಯಿತಷ್ಟೆ! ಆ ಬ್ರಾಹ್ಮಣ ದಂಪತಿಗಳೂ ಸ್ವರ್ಗಕ್ಕೆ ಹೋದರು. ಇಷ್ಟೆಲ್ಲವನ್ನೂ ನೋಡಿಯೂ ಕೂಡ ನೀನು ಇದನ್ನು ಬಿಟ್ಟು ಏಕೆ ಹೋಗುವಿ?' ಇತ್ಯಾದಿ ರೀತಿಯಿಂದ ಹೇಳಲು ಬ್ರಾಹ್ಮಣನು 'ನನಗೆ ನಿಮ್ಮ ಮಾತಿನಲ್ಲಿ ವಿಶ್ವಾಸವುಂಟಾಗುವುದಿಲ್ಲ. ಇಂದ್ರಪ್ರಸ್ಥದಲ್ಲಿರುವ ಈ ತೀರ್ಥವನ್ನು ನಾನು ಇಷ್ಟರವರೆಗೆ ಕೇಳಿದ್ದೇ ಇಲ್ಲ. ಸಾಕ್ಷಾತ್ ಪರಮಾತ್ಮನೂ ಯೋಗಿಗಳೂ ಇರುವ ಪರಮಪವಿತ್ರವಾದ ಬದರಿಕಾಶ್ರಮವನ್ನು ಬಿಟ್ಟು ನಾನು ಇಲ್ಲಿ ಏಕೆ ಇರುವೆನು? ಸಾಕ್ಷಾತ್ ಪರಮಾತ್ಮನೇ ಬಂದು ಇಲ್ಲಿಂದ ಹೋಗುವುದು ಬೇಡವೆಂದು ತಡೆದರೆ ಮಾತ್ರ ನಾನು ಇಲ್ಲಿಯೇ ನಿಲ್ಲುವೆನು' ಎಂದು ಹೇಳಿದನು.

ಆಗ ಪರಮಾತ್ಮನು ವೃದ್ಧ ಬ್ರಾಹ್ಮಣರೂಪವನ್ನು ಬಿಟ್ಟು ನಿಜರೂಪವನ್ನು ತೋರಿಸಿ 'ಇದು ಪರಮಶ್ರೇಷ್ಠ ವಾದದ್ದು. ಇದನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋದವನಿಗೆ ನನ್ನಿಂದ ಫಲವು ದೊರೆಯಲಾರದು' ಎಂದು ಹೇಳಿದನು. ಅದನ್ನು ಕೇಳಿ ಬ್ರಾಹ್ಮಣನು ಪರಮಾತ್ಮನಿಗೆ ನಮಸ್ಕರಿಸಿ ಆ ಕೋಶಲಾನದಿಯ ತೀರಕ್ಕೇ ಹೋದನು. ಅಲ್ಲಿದ್ದ ಜನರಿಗೆಲ್ಲರಿಗೂ ನಡೆದ ವಿಷಯವನ್ನು ತಿಳಿಸಿದನು. ಅದನ್ನು ಕೇಳಿ ಅಲ್ಲಿ ಇದ್ದ ದಕ್ಷಿಣದೇಶದ ಬ್ರಾಹ್ಮಣ ರೆಲ್ಲರೂ ಉಪವಾಸ ಮಾಡಿ ದೇಹವನ್ನು ಪರಿತ್ಯಜಿಸಿದರು. ಆಗಲೇ ಪರಮಾತ್ಮನು ಅಷ್ಟು ವಿಮಾನಗಳಿಂದ ಸಹಿತನಾಗಿ ಗರುಡಾರೂಢನಾಗಿ ಅಲ್ಲಿಗೆ ಬಂದನು. ಬಂದಿರುವ ಪರಮಾತ್ಮನನ್ನು ನೋಡಿ ಅವರೆಲ್ಲರೂ ದಿವ್ಯದೇಹ

1. ಪ.ಪು.ಉ.ಖಂ. ಅ.259

ವುಳ್ಳವರಾಗಿ ಉದ್ದಕ್ಕೆ ಪರಮಾತ್ಮನಿಗೆ ನಮಸ್ಕರಿಸಿ ಸ್ತೋತ್ರ ಮಾಡಿದರು. ಆಗ ಪರಮಾತ್ಮನು 'ಬ್ರಾಹ್ಮಣರೇ! ನೀವು ಈ ಕೋಶಲಾನದಿಯ ಅನುಗ್ರಹದಿಂದ ಸಾರೂಪ್ಯವನ್ನು ಹೊಂದಿರುವಿರಿ. ಇನ್ನು ಮುಂದೆ ಈ ತೀರ್ಥವು ದಕ್ಷಿಣಕೋಶಲೆ ಯೆಂದು ಪ್ರಸಿದ್ಧಿಯನ್ನು ಹೊಂದುವುದು. ಎಲ್ಲಿ ರಾಮದೇವರು ಅವತರಿಸಿ ರಾವಣನನ್ನು ಸಂಹರಿಸುವರೋ ಅದು ಉತ್ತರಕೋಶಲೆಯೆಂದು ಪ್ರಸಿದ್ಧಿಯನ್ನು ಹೊಂದುವುದು. ಇಲ್ಲಿ ಮೃತ ನಾದವನು ಉತ್ತಮಲೋಕವನ್ನು ಹೊಂದುವನು' ಎಂದು ಹೇಳಿ ಅವರನ್ನು ತನ್ನ ಲೋಕಕ್ಕೆ ಕರೆದುಕೊಂಡು ಹೋದನು.



## ತುಂಬುರುತೀರ್ಥದ ಮಹಿಮೆ [1]

ಒಂದು ದಿನದಲ್ಲಿ ಬ್ರಹ್ಮದೇವರ ಸಭೆಯಲ್ಲಿ ವಸಿಷ್ಠರು ಬ್ರಹ್ಮದೇವರಿಗೆ ನಮಸ್ಕರಿಸಿ 'ನನಗೆ ವಸಿಷ್ಠರು ಎಂದು ಎಲ್ಲರೂ ಬಹುಮಾನ ಮಾಡುತ್ತಿರುವರು. ಅದು ನನಗೆ ಬಹಳ ದುಃಖಕರವಾಗಿದೆ. ನಾನು ರಾಜರಿಗೆ ಪುರೋಹಿತನಾಗಿದ್ದೇನೆ. ರಾಜರ ಪಾಪವು ಪುರೋಹಿತರಿಗೆ ಬರುವುದು ಎಂದು ಜ್ಞಾನಿಗಳು ಹೇಳುವರು. ಆದುದ ರಿಂದ ನನಗೆ ರಾಜರಿಂದಾಗಿ ಬಹಳ ಪಾಪವು ಬರುವುದು. ಅದರ ಪರಿಹಾರವು ಹೇಗೆ ಆಗುವುದು?

ಮತ್ತು ಒಂದು ಗ್ರಾಮದಲ್ಲಿ ನಾಸ್ತಿಕನಾದ ದುರಾಚಾರಿಯಾದ ಸರ್ವಾಬದ್ಧ[2] ಎಂದು ಹೆಸರುಳ್ಳ ಒಬ್ಬ ಬ್ರಾಹ್ಮಣನಿರುವನು. ಅವನು ಒಂದು ದಿನದಲ್ಲಿ ಒಂದು ಯಜ್ಞವು ನಡೆಯುವ ಸ್ಥಳಕ್ಕೆ ಹೋಗಿ ಅಲ್ಲಿ ಎಲ್ಲ ಬ್ರಾಹ್ಮಣರೂ ನಿಂತಿರಲು ತಾನೂ ದಕ್ಷಿಣೆಗಾಗಿ ನಿಂತಿದ್ದನು. ಆಗ ಒಬ್ಬ ಬ್ರಾಹ್ಮಣನು ಕೋಪದಿಂದ ಅವನ ಬಳಿಗೆ ಬಂದು 'ಸರ್ವಾಬದ್ಧಕ್ಕೆ ಸ್ನಾನ ಆಡಾರಗಳನ್ನು ಬಿಟ್ಟಿರುವ ನೀನು ವಸಿಷ್ಠರಂತೆ ಬ್ರಾಹ್ಮಣರ ಮಧ್ಯದಲ್ಲಿ ಬಂದು ಏಕೆ ನಿಂತಿರುವೆ?' ಎಂದು ಗದರಿಸಿದನು. ಆದನ್ನು ಕೇಳಿ ಸರ್ವಾಬದ್ಧನು ಅಲ್ಲಿಂದ ಬೇರೆ ಸ್ಥಳಕ್ಕೆ ಹೋದನು. 'ಆ ಬ್ರಾಹ್ಮಣನು ನನ್ನನ್ನು ಕೋಪದಿಂದ ವಸಿಷ್ಠರಂತೆ ನಿಂತಿರುವೆ ಹೇಳಿದನು. ಆ ವಸಿಷ್ಠರೇ ನನ್ನನ್ನು ಪವಿತ್ರನನ್ನಾಗಿ ಮಾಡಲಿ' ಎಂದು ಹೇಳಿ ನನ್ನನ್ನೇ ಅವನು ಧ್ಯಾನಮಾಡುತ್ತಿರುವನು. ಯಾವಾಗಲೂ ವಸಿಷ್ಠ ವಸಿಷ್ಠ ಎಂದೇ ಹೇಳುತ್ತಾ ಇರುತ್ತಾನೆ. ಅವನು

1. ಬ್ರಹ್ಮ.ಪು. ಅ-4ರಲ್ಲಿ ಇತರ ಮಹಿಮೆ ಹೇಳಲಾಗಿದೆ. 2. ಬ್ರ.ಖಂ.ದಲ್ಲಿ ಈ ಬಗ್ಗೆ ನೋಡಬಹುದು.

ಮಹಾಪಾಪಿಯು. ಅವನು ಮಾಡದೆ ಇರುವ ಪಾಪವೇ ಇರುವುದಿಲ್ಲ. ಆದರೂ ಅವನು ನನ್ನನ್ನೇ ಆಶ್ರಯಿಸಿದ್ದಾನೆ. ಆದುದರಿಂದ ನನ್ನನ್ನು ಆಶ್ರಯಿಸಿದ ಅವನ ಮತ್ತು ನನ್ನ ಪಾಪವು ಹೇಗೆ ಪರಿಹೃತವಾಗುವುದು ಎಂಬುದನ್ನು ತಾವು ಆಜ್ಞಾಪಿಸಬೇಕು'' ಎಂದು ಹೇಳಿದರು.

ಆದಕ್ಕೆ ಬ್ರಹ್ಮದೇವರು ಭೂಮಿಯಲ್ಲಿ ವೇಂಕಟಾಚಲವೆಂಬ ಪವಿತ್ರವಾದ ಪರ್ವತವಿರುವುದು. ಅಲ್ಲಿ ಸರ್ವಪಾಪಗಳನ್ನು ಪರಿಹರಿಸುವ ಅರವತ್ತಾರು ಕೋಟಿ ತೀರ್ಥಗಳಿರುವುವು. ಅವುಗಳಲ್ಲಿ ಸ್ವಾಮಿಪುಷ್ಕರಿಣಿಯೆಂಬುದು ಅತ್ಯುತ್ತಮವಾದ ತೀರ್ಥವು. ಅದರ ದಕ್ಷಿಣತೀರದಲ್ಲಿ ಶ್ರೀನಿವಾಸದೇವರು ರಮಾದೇವಿಯರಿಂದ ಕೂಡಿಕೊಂಡು ಭಕ್ತರಿಗೆ ವರವನ್ನು ಕೊಡುತ್ತಿರುವರು. ಅವರಿಗೆ ನಮಸ್ಕರಿಸಿದರೆ ಸರ್ವಾಭೀಷ್ಟವೂ ಸಿದ್ಧಿಸುವುದು. ಆ ಪರ್ವತದ ಮಧ್ಯದಲ್ಲಿಯೇ ಘೋಣತೀರ್ಥವೆಂಬ ಪವಿತ್ರವಾದ ತೀರ್ಥವಿರುವುದು. ಮೀನಮಾಸದಲ್ಲಿ ಹುಣ್ಣಿಮೆದಿನದಲ್ಲಿ ಅಲ್ಲಿ ಸ್ನಾನಮಾಡಿದರೆ ಎಲ್ಲಾ ಪಾಪಗಳ ಪರಿಹಾರವೂ ಆಗುವುದು. ನಿನ್ನನ್ನು ಆಶ್ರಯಿಸಿದ ಬ್ರಾಹ್ಮಣನೂ ನೀನೂ ಅಲ್ಲಿಗೆ ಹೋಗಿ ಮೀನಮಾಸದ ಹುಣ್ಣಿಮೆಯಲ್ಲಿ ಸ್ನಾನಮಾಡಿದರೆ ಪವಿತ್ರರಾಗುವಿರಿ' ಎಂದು ಹೇಳಲು ವಸಿಷ್ಠರು ಆ ಬ್ರಾಹ್ಮಣನಿದ್ದಲ್ಲಿಗೆ ಹೋಗಿ 'ಎಲೋ ಬ್ರಾಹ್ಮಣನೇ! ಪಾಪಪರಿಹಾರವಾಗಬೇಕೆಂದು ನನ್ನನ್ನು ಆಶ್ರಯಿಸಿರುವೆಯಲ್ಲಾ! ನಾನು ಹೇಳುವ ಮಾತನ್ನು ಕೇಳು. ನಾನು ವೇಂಕಟಗಿರಿಗೆ ಹೋಗುತ್ತೇನೆ. ಬೇಗನೆ ನನ್ನೊಡನೆ ನೀನೂ ಬಾ' ಎಂದರು. ಅದೇ ರೀತಿಯಾಗಿ ಆ ಬ್ರಾಹ್ಮಣನೂ ವಸಿಷ್ಠರೊಡನೆ ವೆಂಕಟಗಿರಿಗೆ ಹೋದನು.

ವಸಿಷ್ಠರು ಸರ್ವಾಬದ್ಧನೊಡನೆ ವೆಂಕಟಗಿರಿಗೆ ಬಂದು ಮೊದಲು ಸುವರ್ಣಮುಖರೀನದಿಯ ತೀರದಲ್ಲಿರುವ ಶುಕಾಚಾರ್ಯರಿಗೆ ವರಪ್ರದನಾದ ಕೃಷ್ಣನನ್ನು ನೋಡಿ ನಮಸ್ಕರಿಸಿ ಕಪಿಲತೀರ್ಥದಲ್ಲಿ ಸ್ನಾನಮಾಡಿ ಬೆಟ್ಟವನ್ನು ಹತ್ತಿ ಹೋದರು. ಸ್ವಾಮಿಪುಷ್ಕರಿಣಿಗೆ ಹೋದರು. ಅಲ್ಲಿ ಸ್ನಾನಮಾಡಿ ಭೂವರಾಹ ದೇವರಿಗೆ ನಮಸ್ಕರಿಸಿ ದಕ್ಷಿಣಪಾರ್ಶ್ವದಲ್ಲಿ ಶ್ರೀನಿವಾಸದೇವರನ್ನು ನಮಸ್ಕರಿಸಿ ಸ್ತೋತ್ರಮಾಡಿದರು. ತರುವಾಯ ಅಲ್ಲೇ ಉತ್ತರದಲ್ಲಿ ಇದ್ದ ಪಾಪನಾಶನಿತೀರ್ಥದಲ್ಲಿ ಸ್ನಾನಮಾಡಿ ಸರ್ವಾಬದ್ಧನಿಂದ ಸಹಿತರಾಗಿ ಘೋಣತೀರ್ಥಕ್ಕೆ ಹೋದರು. ಏಕಾದಶೀದಿನದಲ್ಲಿ ಅಲ್ಲಿಗೆ ಹೋಗಿ ಐದುದಿವಸ ಅಲ್ಲಿಯೇ ವಾಸಮಾಡಿದರು. ಮೀನಮಾಸದ ಹುಣ್ಣಿಮೆದಿನದಲ್ಲಿ ಮಧ್ಯಾಹ್ನದಲ್ಲಿ ಸ್ನಾನಮಾಡಲಿಕ್ಕೆ ಬಂದ ದೇವ ಋಷಿ ಯಕ್ಷ ಗಂಧರ್ವ ಕಿನ್ನರರನ್ನು ನೋಡಿ ವಸಿಷ್ಠರು ಪರಮ ಆಶ್ಚರ್ಯವನ್ನು

ಹೊಂದಿದರು. ತರುವಾಯ ಸರ್ವಾಬದ್ಧನೊಡನೆ ಸಂಕಲ್ಪಮಾಡಿ ಸ್ನಾನಮಾಡಿ ದೇವರ್ಷಿಗಳಿಗೆ ತರ್ಪಣವನ್ನು ಕೊಟ್ಟು ಅಲ್ಲಿಯೇ ಜಪವನ್ನು ಮಾಡಿದರು. ಜಪವು ಮುಗಿದಮೇಲೆ ಶ್ರೀಭಗವಂತನನ್ನು ಧ್ಯಾನಮಾಡುತ್ತಾ ಕೂತುಕೊಂಡರು. ಬಂದಿರುವವರೆಲ್ಲರೂ ಸ್ನಾನಮಾಡಿ ನಿಂತಿರಲು ಶ್ರೀನಿವಾಸದೇವರು ರಮಾದೇವಿಯರಿಂದ ಸಹಿತರಾಗಿ ಗರುಡಾರೂಢರಾಗಿ ಪ್ರತ್ಯಕ್ಷರಾದರು. ತೀರ್ಥಸ್ನಾನಕ್ಕೆ ಬಂದಿರುವ ಸಮಸ್ತರನ್ನೂ ಕರುಣೆಯಿಂದ ನೋಡುವವರಾಗಿ ಶ್ರೀನಿವಾಸದೇವರು ವಸಿಷ್ಠರೊಡನೆ 'ವಸಿಷ್ಠ! ನಿನಗೆ ನಾನು ಪ್ರಸನ್ನನಾಗಿರುವೆನು. ಬ್ರಹ್ಮನ ಮುಖದಿಂದ ನನ್ನ ತೀರ್ಥದ ಮಹಿಮೆಯನ್ನು ಕೇಳಿ ಭಕ್ತಿಯಿಂದ ಇಲ್ಲಿಗೆ ಬಂದದ್ದಕ್ಕೆ ಸಂತೋಷಪಟ್ಟಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ' ಎಂದರು. ಆಗ ವಸಿಷ್ಠರು 'ಭಗವಂತನೇ! ನನ್ನ ವಿಜ್ಞಾಪನೆಯನ್ನು ಕೇಳಬೇಕು. ಈ ಬ್ರಾಹ್ಮಣನು ಮಹಾಪಾಪವನ್ನು ಮಾಡಿರುವನು. ಆದರೂ ನನ್ನನ್ನು ಆಶ್ರಯಿಸಿರುವನು. ಆದುದರಿಂದ ನನ್ನಲ್ಲಿ ಅನುಗ್ರಹಬುದ್ಧಿಯಿಂದಲೂ ಈ ತೀರ್ಥದ ಪ್ರಭಾವದಿಂದಲೂ ಇವನು ಪಾಪರಹಿತನಾಗಿ ಪವಿತ್ರನಾಗುವಂತೆ ಮಾಡಬೇಕು' ಎಂದು ಹೇಳಿಕೊಂಡರು.

ಶ್ರೀನಿವಾಸದೇವರು 'ವಸಿಷ್ಠ! ನನಗೆ ಬಹಳ ಸಂತೋಷವಾಯಿತು. ಈ ಬ್ರಾಹ್ಮಣನಲ್ಲಿ ತನ್ನನ್ನು ಆಶ್ರಯಿಸಿದವನೆಂದು ದಯೆಯನ್ನು ತೋರಿಸಿರುವಿ. **ಯಾರು ತಮ್ಮಲ್ಲಿ ಆಶ್ರಯಿಸಿರುವರಲ್ಲಿ ದಯೆಯನ್ನು ತೋರಿಸುವರೋ ಅವರಲ್ಲಿ ನನಗೆ ಬಹಳ ಪ್ರೀತಿಯು. ಆಶ್ರಯ ಮಾಡಿದವರಲ್ಲಿ ದಯೆಯನ್ನು ತೋರಿಸುವುದು ನನ್ನ ಗುಣವು.** ಮತ್ತು ಈ ಬ್ರಾಹ್ಮಣನು ನಿನ್ನಲ್ಲಿ ವಿಶ್ವಾಸದಿಂದ ಭಕ್ತಿಯನ್ನು ಮಾಡಿರುವನು. ಯಾರು ದೊಡ್ಡವರಲ್ಲಿ ಭಕ್ತಿಯನ್ನು ಮಾಡುವನೋ ಅವನೇ ಉತ್ತಮನು. ಅವನ ಹೃದಯದಲ್ಲಿ ನಾನು ರಮಾದೇವಿಯರಿಂದ ಸಹಿತನಾಗಿ ವಾಸಮಾಡುವೆನು. ಇವನು ಬಹುಪಾಪಗಳನ್ನು ಮಾಡಿರುವನು. **ಇವನಲ್ಲಿ ಒಂದು ಗುಣವೂ ಇಲ್ಲ. ಇವನ ಹೆಸರೇ ಸರ್ವಾಬದ್ಧನೆಂ**ದಿರುವುದು. ಆದರೂ ನಿನ್ನ ಸಹಾಯದಿಂದ ಭಕ್ತಿಯಿಂದ ಬಂದು ಹುಣ್ಣಿಮೆಯಲ್ಲಿ ಸ್ನಾನಮಾಡಿರುವನು. ನಿನ್ನ ಸಹವಾಸದಿಂದ ಇವನಲ್ಲಿ ಎಲ್ಲಾ ಗುಣಗಳೂ ಉಂಟಾಗಿರುವುವು. ಆದುದರಿಂದ ಇನ್ನು ಮುಂದೆ **ಸರ್ವಸಿದ್ಧ** ಎಂದು ಹೆಸರನ್ನು ಹೊಂದುವನು. ಇವನ ಹೃದಯದಲ್ಲಿ ಇದ್ದುಕೊಂಡು ಸತ್ಕರ್ಮವನ್ನು ಮಾಡಿಸುವೆನು. ಪೌರೋಹಿತ್ಯದಿಂದ ನಿನಗೆ ಉಂಟಾದ ಪಾಪವೆಲ್ಲವೂ ಪರಿಹೃತವಾಯಿತು. ಹೆಂಗಸಾಗಲೀ ಗಂಡಸಾಗಲೀ ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ಇಲ್ಲಿ ಸ್ನಾನ ಮಾಡಿ ಪಾಪಪರಿಹಾರವನ್ನು ಹೊಂದುವರು. ಇಲ್ಲಿ ತುಂಬರುವು ನನ್ನನ್ನು

ಉದ್ದೇಶಿಸಿ ತಪಸ್ಸು ಮಾಡಿ ತನ್ನ ಹೆಸರಿನಿಂದಲೇ ಇದಕ್ಕೆ ಪ್ರಸಿದ್ಧಿ ಬರಬೇಕೆಂದು ಪ್ರಾರ್ಥಿಸಿರುವನು. ಈ ತೀರ್ಥಕ್ಕೆ ತುಂಬುರುತೀರ್ಥವೆಂದೂ ಹೆಸರನ್ನು ಕೊಟ್ಟಿದ್ದೇನೆ. ಇಲ್ಲಿ ಸ್ನಾನಮಾಡಿದವರಿಗೆ ಸರ್ವಾಭೀಷ್ಟವೂ ಸಿದ್ಧಿಸುತ್ತದೆ. ಇಲ್ಲಿ ಯಾವ ದಾನಮಾಡಿದರೂ ಮಹಾಫಲವು ಸಿದ್ಧಿಸುತ್ತದೆ. ಆದುದರಿಂದ ಎಲ್ಲರೂ ಬೇಕಾದ ದಾನಗಳನ್ನು ಮಾಡಿರಿ. ಇಲ್ಲಿ ಸ್ನಾನಮಾಡಿದವರಿಗೆಲ್ಲಾ ಬೇಕಾದ ಅಭೀಷ್ಟಗಳನ್ನು ಕೊಡುತ್ತೇನೆ'. ಈಪ್ರಕಾರವಾಗಿ ಹೇಳಿ ಶ್ರೀನಿವಾಸದೇವರು ರಮಾದೇವಿಯರಿಂದ ಸಹಿತರಾಗಿ ವಿಹಾರ ಮಾಡುತ್ತಾ ಇದ್ದನು. ಬಂದಿರುವ ದೇವರ್ಷಿ ಮನುಷ್ಯರೆಲ್ಲರೂ ಭಗವಂತನನ್ನು ನಮಸ್ಕರಿಸಿ ಭಗವಂತನನ್ನು ಆ ತೀರ್ಥವನ್ನು ಸ್ತುತಿಸುತ್ತಾ ಹೊರಟು ಹೋದರು.

ತರುವಾಯ ವಸಿಷ್ಠರು ಆ ಸರ್ವಸಿದ್ಧ ಎಂದು ಹೆಸರನ್ನು ಹೊಂದಿದ ಬ್ರಾಹ್ಮಣನಿಂದ ಸಹಿತರಾಗಿ ತನ್ನ ವಾಸಸ್ಥಳಕ್ಕೆ ಹೋದರು. ಸ್ವಲ್ಪ ಸಮಯವಾದ ಮೇಲೆ ವಸಿಷ್ಠರು ಆ ಬ್ರಾಹ್ಮಣನೊಡನೆ 'ಬ್ರಾಹ್ಮಣ! ನಿನ್ನ ಊರಿಗೆ ಹೋಗು. ಶ್ರೀನಿವಾಸ ದೇವರ ಅನುಗ್ರಹದಿಂದ ನಿನಗೆ ಬೇಕಾದಷ್ಟು ಧನಧಾನ್ಯಾದಿಗಳು ಬಂದಿರುವುವು. ಸ್ನಾನದಾನಜಪಾದಿಗಳನ್ನು ಮಾಡು. ದೊಡ್ಡವರನ್ನು ಪೂಜಿಸು. ಬ್ರಾಹ್ಮಣರ ಭೋಜನವನ್ನು ಮಾಡಿಸು ವೆಂಕಟೇಶ ಎಂದು ಹೇಳುತ್ತಾ ಮಕ್ಕಳು ಮೊಮ್ಮಕ್ಕಳಿಂದ ಸಹಿತನಾಗಿ ಸುಖದಿಂದ ಇರು' ಎಂದು ಹೇಳಲು ಆ ಬ್ರಾಹ್ಮಣನೂ ವಸಿಷ್ಠರ ಪಾದಗಳಿಗೆ ನಮಸ್ಕರಿಸಿ ತನ್ನ ಗ್ರಾಮಕ್ಕೆ ಹೋದನು. ಎಲ್ಲ ಜನರೂ ಅವನಿಗೆ ಸತ್ಕರಿಸಿದರು. ಆ ಬ್ರಾಹ್ಮಣನು ಶ್ರೀನಿವಾಸದೇವರ ಅನುಗ್ರಹದಿಂದ ಸುಖದಿಂದ ಇದ್ದನು.

ಆ ಘೋಣತೀರ್ಥಕ್ಕೆ ತುಂಬುರುತೀರ್ಥವೆಂದು ಹೆಸರು ಬರಲಿಕ್ಕೆ ಕಾರಣವು ಹೀಗೆ ಇರುವುದು. ಒಂದು ದಿನದಲ್ಲಿ ಆಕಾಶಮಾರ್ಗದಲ್ಲಿ ತುಂಬುರು ಮತ್ತು ನಾರದರು ವೀಣೆಯನ್ನು ಬಾರಿಸುತ್ತಾ ಭಗವಂತನ ಗಾಯನ ಮಾಡುತ್ತಾ ಹೋಗುತ್ತಿದ್ದರು. ನಾರದರು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ ಸರ್ವರತ್ನ ಮಯವಾದ ವೀಣೆಯನ್ನು ಧರಿಸಿಕೊಂಡಿದ್ದ ತುಂಬುರುವನ್ನು ನೋಡಿ ಆಶ್ಚರ್ಯ ಹೊಂದಿದರು. 'ತುಂಬುರೋ' ನಿನ್ನ ವೀಣೆಯು ನನ್ನ ವೀಣೆಗಿಂತ ಶೋಭಿಸುತ್ತಿದೆ. ಪೂರ್ವದಲ್ಲಿ ಹೀಗೆ ಶೋಭಿಸುತ್ತಾ ಇರಲಿಲ್ಲವಲ್ಲಾ! ಸತ್ಯವನ್ನು ಹೇಳು. ಯಾರಿಂದಾಗಿ ಈ ವೀಣೆಯು ಹೀಗೆ ಶೋಭಿಸುತ್ತಿದೆ?' ಎಂದು ಕೇಳಿದರು.

ಅದಕ್ಕೆ ತುಂಬುರುವು 'ನಾನು ಪ್ರಾಚೀನ ಬರ್ಹಿರಾಜನ ಬಳಿಗೆ ಹೋಗಿ

ಸ್ತೋತ್ರಮಾಡಿದೆನು. ಆರಾಜನು ಇದರಿಂದ ಸಂತುಷ್ಟನಾಗಿ ಈಪ್ರಕಾರವಾದ ವೀಣೆಯನ್ನು ಮಾಡಿಸಿಕೊಟ್ಟನು' ಎಂದನು.

ಅದನ್ನು ಕೇಳಿ ನಾರದರು ಕೋಪಿಸಿಕೊಂಡವರಾಗಿ 'ನರಸ್ತುತಿಯನ್ನು ಮಾಡಿದಿಯಾ? ಆದುದರಿಂದ ನನ್ನೊಡನೆ ಸಹವಾಸ ಮಾಡಲಿಕ್ಕೆ ನಿನಗೆ ಯೋಗ್ಯತೆಯಿಲ್ಲ. ಸರ್ವಲೋಕಕ್ಕೂ ಪ್ರಭುವಾದ ಭಗವಂತನನ್ನು ಬಿಟ್ಟು ನಾನು ಯಾರನ್ನೂ ಸ್ತೋತ್ರ ಮಾಡಲಾರೆನು. ಆ ಪ್ರಕಾರವಾಗಿ ನಾನು ಪರಮಾತ್ಮನ ಪ್ರಿಯನು. ಮನುಷ್ಯ ಸ್ತುತಿಮಾಡಿದ ನಿನಗೆ ನನ್ನೊಡನೆ ಸಖ್ಯವು ಉಚಿತವಲ್ಲ. ನೀನು ತಲೆಕೆಳಗಾಗಿ ಕೆಳಗೆ ಬೀಳು. ಇನ್ನು ಆಕಾಶದಲ್ಲಿ ಸಂಚರಿಸುವ ಶಕ್ತಿಯು ಇಲ್ಲದೆ ಹೋಗಲಿ' ಎಂದು ಶಾಪವನ್ನು ಕೊಟ್ಟರು. ಕೂಡಲೇ ತಲೆಕೆಳಗಾಗಿ ವೇಂಕಟಾಚಲದಲ್ಲಿ ಜನಸಂಜಾರ ರಹಿತವಾದ ಘೋಣತೀರ್ಥದ ಸಮೀಪದ ಪ್ರದೇಶದಲ್ಲಿ ಬಿದ್ದನು. ಆದರೂ ದೇವರನ್ನು ಧ್ಯಾನಮಾಡುತ್ತಾ ಇದ್ದನಾದ ಕಾರಣ ವ್ಯಥೆಯನ್ನು ಹೊಂದಲಿಲ್ಲ. ಘೋಣತೀರ್ಥಕ್ಕೆ ಬಂದನು. ಘೋಣತೀರ್ಥವನ್ನು ನೋಡಿ ಸುತ್ತಲೂ ನೋಡಿ 'ಇದು ವೇಂಕಟಾದ್ರಿಯ ಮಧ್ಯಪ್ರದೇಶವೇ ಬೇರೆ ಪ್ರದೇಶವಲ್ಲ. ಆದುದರಿಂದ ವೇಂಕಟೇಶದೇವರೇ ನನ್ನನ್ನು ರಕ್ಷಿಸಲಿ' ಎಂದು ಹೇಳಿ ಶ್ರೀನಿವಾಸದೇವರ ಧ್ಯಾನ ಮಾಡಿದನು.

ತರುವಾಯ ಫಾಲ್ಗುಣಮಾಸ ಹುಣ್ಣಿಮೆದಿನದಲ್ಲಿ ಶ್ರೀನಿವಾಸದೇವರು ರಮಾದೇವಿಯರಿಂದ ಸಹಿತರಾಗಿ ಪ್ರತ್ಯಕ್ಷರಾದರು. 'ತುಂಬುರೋ! ತುಂಬುರೋ! ನೋಡು ನಾನು ಬಂದಿರುವೆನು. ಯಾವುದನ್ನು ಅಪೇಕ್ಷಿಸುವಿ?' ಎಂದು ಹೇಳಲು ತುಂಬುರುವು ಕಣ್ಣು ತೆರೆದು ನೋಡಿದನು. ಶ್ರೀನಿವಾಸದೇವರನ್ನು ಹತ್ತಿರದಲ್ಲಿದ್ದ ಶೇಷಾದಿದೇವತೆಗಳನ್ನೂ ನೋಡಿದನು. ಶ್ರೀನಿವಾಸದೇವರಿಗೆ ನಮಸ್ಕರಿಸಿದನು. ಶ್ರೀನಿವಾಸದೇವರು ಬಂದಿರುವ ಎಲ್ಲರೊಡನೆಯೂ ಈ ತೀರ್ಥದಲ್ಲಿ ಸ್ನಾನ ಮಾಡಿರಿ ಎಂದರು. ಎಲ್ಲರೂ ಭಕ್ತಿಯಿಂದ ಸಂಕಲ್ಪಮಾಡಿ ಸ್ನಾನ ಮಾಡಿದರು. ತುಂಬುರುವೂ ಸ್ನಾನಮಾಡಿ ಶುದ್ಧವಾದ ಮನಸ್ಸುಳ್ಳವನಾದನು. ಎಲ್ಲರೂ ಭಗವಂತನನ್ನು ಸ್ತುತಿಸಿದರು. ತುಂಬುರುವೂ ಶ್ರೀನಿವಾಸದೇವರ ಸ್ತೋತ್ರವನ್ನು ಮಾಡಿದರು. ಆಗ ಶ್ರೀನಿವಾಸದೇವರು ಅಗಸ್ತ್ಯರೊಡನೆ ಈ ವೇಂಕಟಾಚಲದ ಮಹಿಮೆಯನ್ನು ಈ ತೀರ್ಥದ ಮಹಿಮೆಯನ್ನು ಸ್ವಲ್ಪ ಹೇಳುವಂತೆ ಹೇಳಿದರು. ಆಗ ಅಗಸ್ತ್ಯರು 'ಈ ವೆಂಕಟಗಿರಿಯು ಪರಮಪವಿತ್ರವಾದದ್ದು. ಇಲ್ಲಿ ಎಲ್ಲಾ ಪವಿತ್ರತೀರ್ಥಗಳೂ ಇವೆ. ಇಲ್ಲಿ ಶ್ರೀನಿವಾಸದೇವರು ಭಕ್ತರ ಅಪರಾಧವನ್ನು ಕ್ಷಮಿಸಿ ರಕ್ಷಿಸುತ್ತಿರುವರು.

ಈತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಸರ್ವಶ್ರೇಯಸ್ಸೂ ಉಂಟಾಗುವುದು. ಇಲ್ಲಿ ಬಂಗಾರವನ್ನು ಅನ್ನವನ್ನು ತಾಂಬೂಲವನ್ನು ತಣ್ಣಗಿರುವ ನೀರನ್ನು ದಾನಮಾಡಿದರೆ ಎಲ್ಲ ಅಭೀಷ್ಟಗಳನ್ನೂ ಹೊಂದಬಹುದು' ಎಂದು ಹೇಳಿದರು.

ಆಗ ತುಂಬುರುವು ಶ್ರೀನಿವಾಸದೇವರೊಡನೆ ಈ ತೀರ್ಥಕ್ಕೆ ತನ್ನ ಹೆಸರೇ ಬರಬೇಕೆಂದು ಕೇಳಿಕೊಂಡನು. ಶ್ರೀನಿವಾಸದೇವರು ಹಾಗೆಯೇ ಆಗಲಿ ಎಂದು ಹೇಳಿದವರಾಗಿ 'ತುಂಬರೋ! ನೀನು ಪವಿತ್ರನಾಗಿರುವೆ. ನಾರದನೊಡನೆ ಸೇರಿಕೊಂಡು ನನ್ನ ಕೀರ್ತನೆಯನ್ನು ಮಾಡುತ್ತಿರು. ಫಾಲ್ಗುಣಮಾಸದ ಹುಣ್ಣಿಮೆಯಲ್ಲಿ ಇಲ್ಲಿ ಸ್ನಾನಾದಿ ಮಾಡುವವರಿಗೆ ಬೇಕಾದ ಅಭೀಷ್ಟಗಳನ್ನು ಕೊಡುವೆನು' ಎಂದು ಹೇಳಿದರು. ಎಲ್ಲರೂ ಸಂತೋಷದಿಂದ ತಮ್ಮ ಸ್ಥಾನಕ್ಕೆ ಹೋದರು.



## ಜಾಬಾಲಿತೀರ್ಥದ ಮಹಿಮೆ [1]

ವೇಂಕಟಾಚಲದಲ್ಲಿ ಜಾಬಾಲಿತೀರ್ಥವೆಂದು ಹೆಸರುಳ್ಳ ತೀರ್ಥವಿದೆ. ಅದರಲ್ಲಿ ದುರಾಚಾರವೆಂದು ಹೆಸರುಳ್ಳ ಒಬ್ಬ ಬ್ರಾಹ್ಮಣನು ಸ್ನಾನ ಮಾಡಿ ಪಾಪಪರಿಹಾರವನ್ನು ಹೊಂದಿರುವನು.

ಕಾವೇರೀತೀರದಲ್ಲಿ ದುರಾಚಾರ ಎಂಬ ಬ್ರಾಹ್ಮಣನಿದ್ದನು. ಅವನು ಮಹಾ ಪಾಪಿಯು. ಕ್ರೂರವಾದ ಕರ್ಮವನ್ನು ಮಾಡುತ್ತಿದ್ದನು. ಬ್ರಹ್ಮಹತ್ಯೆ ಮಾಡಿದವ ರೊಡನೆ ಸುರಾಪಾನ ಮಾಡಿದವರೊಡನೆಯೂ ಕಳ್ಳರೊಡನೆಯೂ ಗುರು ಸ್ತ್ರೀಗಮನ ಮಾಡುವವರೊಡನೆಯೂ ಸಹವಾಸವನ್ನು ಮಾಡಿ ದುಷ್ಟನಾಗಿದ್ದನು. ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪವನ್ನು ಮಾಡಿದವರ ಸಹವಾಸದಿಂದ ಅವನ ಬ್ರಾಹ್ಮಣ್ಯವು ಸಂಪೂರ್ಣನಾಶವನ್ನು ಹೊಂದಿತ್ತು. ಮಹಾಪಾಪ ಮಾಡಿದವರೊಡನೆ ಸ್ನೇಹದಿಂದ ಒಂದು ದಿವಸವಿದ್ದರೆ ಅವನ ನಾಲ್ಕನೇ ಒಂದು ಬ್ರಾಹ್ಮಣ್ಯವು ನಷ್ಟವಾಗುವುದು. ಎರಡುದಿವಸ ಅವರೊಡನೆ ಸ್ಪರ್ಶ ದರ್ಶನ ಒಟ್ಟಿಗೆ ಮಲಗೋಣ ಒಂದು ಪಂಕ್ತಿಯಲ್ಲಿ ಭೋಜನ ಇತ್ಯಾದಿಗಳನ್ನು ಮಾಡಿದರ ಅರ್ಧಬ್ರಾಹ್ಮಣ್ಯವು ನಷ್ಟವಾಗುವುದು. ಮೂರುದಿವಸ ಸಹವಾಸ ಮಾಡಿದರೆ ಮುಕ್ಕಾಲು ಭಾಗ ಬ್ರಾಹ್ಮಣ್ಯವು ನಷ್ಟವಾಗುವುದು. ನಾಲ್ಕು ದಿವಸವಿದ್ದರೆ ಸಂಪೂರ್ಣ

1. ಸ್ಕಾಂ.ಪು.ದಲ್ಲಿ ಮಹಿಮೆ ನೋಡಬಹುದು.

ಬ್ರಾಹ್ಮಣ್ಯವು ನಷ್ಟವಾಗುವುದು. ಆಮೇಲೆ ಅವರೊಡನೆ ಮಲಗೋಣ ಇತ್ಯಾದಿಗಳನ್ನು ಮಾಡಿದರೆ ಅವರಿಗೆ ಸಮಾನ ಪಾಪಿಯೇ ಆಗುವನು. ಇದರಿಂದ ದುರಾಚಾರ ಎಂಬ ಆ ಬ್ರಾಹ್ಮಣನು ತನ್ನ ಬ್ರಾಹ್ಮಣ್ಯವನ್ನು ಕಳೆದುಕೊಂಡಿದ್ದನು.

ಇದರಿಂದ ಒಂದು ಕಾಡಿನಲ್ಲಿ ಇವನು ಹೋಗುತ್ತಿರುವಾಗ ಒಂದು ಬೇತಾಳನು ಅವನನ್ನು ಹಿಡಿಯಿತು. ಇದರಿಂದ ಅವನು ಅತ್ಯಂತ ಪೀಡಿತನಾಗಿ ಹುಚ್ಚನಂತೆ ದೇಶದಿಂದ ದೇಶಕ್ಕೆ ವನದಿಂದ ವನಕ್ಕೆ ಸಂಚರಿಸುತ್ತಾ ಪೂರ್ವಪುಣ್ಯದಿಂದ ದೈವೇಚ್ಛೆಯಿಂದ ಮಹಾ ಪವಿತ್ರವಾದ ಸರ್ವಪಾಪವನ್ನು ಪರಿಹರಿಸುವ ವೇಂಕಟಾಚಲಕ್ಕೆ ಬಂದನು. ಬೇತಾಳನು ಅವನನ್ನು ಅಟ್ಟಿಸಿಕೊಂಡು ಬಂದು ಅಲ್ಲಿದ್ದ ಜಾಬಾಲಿತೀರ್ಥದಲ್ಲಿ ಅವನನ್ನು ಮುಳುಗಿಸಿತು. ಆ ಕ್ಷಣ ಬೇತಾಳವು ಅವನನ್ನು ಬಿಟ್ಟು ಹೋಯಿತು. ಆ ಪವಿತ್ರವಾದ ತೀರ್ಥದಿಂದ ಮೇಲಕ್ಕೆ ಬಂದು ಆ ಬ್ರಾಹ್ಮಣನು ಸ್ವಸ್ಥವಾದ ಮನಸ್ಸುಳ್ಳವನಾಗಿ 'ನಾನು ಕಾವೇರೀತೀರದಲ್ಲಿ ವಾಸಮಾಡುತ್ತಿದ್ದವನು ಈ ಸುವರ್ಣಮುಖರೀತೀರಕ್ಕೆ ಹೇಗೆ ಬಂದೆನು? ಎಂದು ಯೋಚಿಸುತ್ತಾ ಅಲ್ಲೇ ಸ್ವಲ್ಪದೂರದಲ್ಲಿ ಇದ್ದ ಜಾಬಾಲಿಋಷಿಗಳನ್ನು ನೋಡಿ ಅವರ ಹತ್ತಿರ ಹೋಗಿ ನಮಸ್ಕರಿಸಿ 'ಸ್ವಾಮಿ! ನಾನು ಈ ಪರ್ವತವನ್ನೇ ತಿಳಿಯಲಿಲ್ಲ. ನಾನು ಕಾವೇರೀತೀರದಲ್ಲಿ ವಾಸಮಾಡುತ್ತಿದ್ದ ದುರಾಚಾರ ಎಂದು ಹೆಸರುಳ್ಳವನು. ನಾನು ಇಲ್ಲಿಗೆ ಹೇಗೆ ಬಂದೆನೆಂದು ತಾವು ದಯಮಾಡಿ ಹೇಳಬೇಕು' ಎಂದು ಕೇಳಿದನು.

ಆಗ ಜಾಬಾಲಿಋಷಿಗಳು 'ಮಹಾಪಾಪಿಗಳ ಸಹವಾಸದಿಂದ ನಿನ್ನ ಬ್ರಾಹ್ಮಣ್ಯವು ಪೂರ್ವದಲ್ಲಿ ನಷ್ಟವಾಗಿತ್ತು. ಆದರಿಂದ ನಿನ್ನನ್ನು ಒಂದು ಬೇತಾಳವು ಹಿಡಿದಿತ್ತು. ಆದರಿಂದ ನೀನು ಪರವಶನಾಗಿ ಇಲ್ಲಿಗೆ ಬಂದಿರುವಿ. ಬೇತಾಳನು ನಿನ್ನನ್ನು ಇಲ್ಲಿ ಅತಿಪವಿತ್ರವಾದ ಈ ತೀರ್ಥದಲ್ಲಿ ಮುಳುಗಿಸಿತು. ಇಲ್ಲಿ ಸ್ನಾನ ಮಾಡುವ ಮಾತ್ರದಿಂದ ನಿನ್ನ ಪಾಪವೆಲ್ಲವೂ ಕಳೆದುಹೋಯಿತು. ಜಾಬಾಲಿತೀರ್ಥದಲ್ಲಿ ಯಾರು ಸ್ನಾನ ಮಾಡುವರೋ ಅವರ ಪಂಚೇಂದ್ರಿಯಗಳಿಂದ ಮಾಡಿರುವ ಪಾಪಗಳೂ ಪರಿಹೃತವಾಗುವುವು. ಈ ಸರೋವರದಲ್ಲಿ ಸ್ನಾನಮಾಡಿದ್ದರಿಂದ ಮಹಾಪಾಪಿಗಳ ಸಹವಾಸದಿಂದ ನಿನ್ನಲ್ಲಿ ಉಂಟಾಗಿರುವ ದೋಷವೆಲ್ಲವೂ ಪರಿಹೃತವಾಯಿತು. ನಿನ್ನನ್ನು ಹಿಡಿದ ಬೇತಾಳನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದನು. ಅವನು ತನ್ನ ತಂದೆಗೆ ಶ್ರಾದ್ಧವನ್ನು ಮಾಡಿಲ್ಲ. ಇದರಿಂದ ಪಿತೃಗಳಿಂದ ಶಾಪವನ್ನು ಹೊಂದಿ ಬೇತಾಳನಾದನು. ಅವನೂ ಈ ಜಾಬಾಲಿತೀರ್ಥದಲ್ಲಿ ಸ್ನಾನಮಾಡಿದ ಪ್ರಭಾವದಿಂದ ಬೇತಾಳಜನ್ಮವನ್ನು ಬಿಟ್ಟು ವಿಷ್ಣುಲೋಕಕ್ಕೆ ಹೋದನು. ಯಾರು ತಂದೆತಾಯಿಗಳ

ಶ್ರಾದ್ಧವನ್ನು ಮಾಡುವುದಿಲ್ಲವೋ ಅವನು ಬೇತಾಳ ಜನ್ಮವನ್ನು ಹೊಂದಿ ಆಮೇಲೆ ನರಕವನ್ನು ಹೊಂದುವನು. ಈರೀತಿಯಾಗಿ ಆ ದುರಾಚಾರ ಎಂಬ ಬ್ರಾಹ್ಮಣನು ಜಾಬಾಲಿತೀರ್ಥದಲ್ಲಿ ಸ್ನಾನಮಾಡಿ ಕ್ರಮದಿಂದ ವಿಷ್ಣುಲೋಕವನ್ನು ಹೊಂದಿದನು.

ಪ್ರಾಯಶ್ಚಿತ್ತ ರಹಿತಗಳಾದ ಪಾಪಗಳನ್ನು ಮಾಡಿದವರನ್ನು ಜಾಬಾಲಿತೀರ್ಥವು ಉದ್ಧಾರ ಮಾಡುವುದು. ಶೂದ್ರರು ಪ್ರತಿಷ್ಠಾ ಮಾಡಿಸಿರುವ ಶಿವಲಿಂಗವನ್ನೋ ವಿಷ್ಣುಪ್ರತಿಮೆಯನ್ನೋ ಬ್ರಾಹ್ಮಣನು ನಮಸ್ಕರಿಸಿದರೆ ಅವನಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ. ಬ್ರಾಹ್ಮಣರ ನಿಂದೆಯನ್ನು ಮಾಡಿದವರಿಗೆ ಪ್ರಾಯಶ್ಚಿತ್ತವಿರುವುದಿಲ್ಲ. ವಿಶ್ವಾಸಘಾತಕರಿಗೆ ಕೃತಘ್ನರಿಗೆ ಸಹೋದರರ ಪತ್ನಿಯರನ್ನು ಅಪಹರಿಸಿದವರಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ. ಇಂತಹ ಮಹಾಪಾಪಿಗಳೂ ಕೂಡ ಜಾಬಾಲಿತೀರ್ಥದಲ್ಲಿ ಸ್ನಾನಮಾಡಿದರೆ ಪ್ರಾಯಶ್ಚಿತ್ತವನ್ನು ಹೊಂದುವರು. ಈ ಪ್ರಕಾರವಾದ ಮಹಿಮೆಯು ಜಾಬಾಲಿತೀರ್ಥಕ್ಕೆ ಇರುತ್ತದೆ.



# ಘೋಣತೀರ್ಥದ ಮಹಿಮೆ [1]

ವೇಂಕಟಾಚಲದಲ್ಲಿ ಘೋಣತೀರ್ಥವೆಂಬ ತೀರ್ಥವಿದೆ. ಆ ತೀರ್ಥದಲ್ಲಿ ಉತ್ತರಾನಕ್ಷತ್ರಯುಕ್ತವಾದ ಹುಣ್ಣಿಮೆದಿನ ಸ್ನಾನಮಾಡುವುದು ಬಹು ಪ್ರಶಸ್ತವಾದದ್ದು. ಗಂಗಾದಿ ತೀರ್ಥಾಭಿಮಾನಿಗಳು 'ಪಾಪಿಗಳಾದ ಮನುಷ್ಯರು ಬಂದು ತಮ್ಮಲ್ಲಿ ಸ್ನಾನಮಾಡಿ ತಮ್ಮ ಪಾಪಗಳನ್ನೆಲ್ಲಾ ನಮ್ಮಲ್ಲಿ ಬಿಡುವರಲ್ಲಾ! ನಮ್ಮ ಪಾಪವು ಹೇಗೆ ಹೋಗುವುದು?' ಎಂದು ಯೋಚನೆ ಮಾಡಿ ನಾರದರು ಹೇಳಿದ ಮಾತನ್ನು ಸ್ಮರಿಸಿಕೊಂಡು ವೇಂಕಟಾಚಲಕ್ಕೆ ಹೋಗಿ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಅಲ್ಲಿಂದ ಘೋಣತೀರ್ಥಕ್ಕೆ ಹೋಗಿ ಅತಿಪವಿತ್ರವಾದ ಆ ತೀರ್ಥದಲ್ಲಿ ಉತ್ತರಾನಕ್ಷತ್ರಯುಕ್ತವಾದ ಹುಣ್ಣಿಮೆಯಲ್ಲಿ ಆ ತೀರ್ಥದಲ್ಲಿ ಸ್ನಾನಮಾಡುವರು.

ಆ ಘೋಣತೀರ್ಥದಲ್ಲಿ ಸ್ನಾನಮಾಡದೆ ತಿರಸ್ಕರಿಸಿದರೆ ಬಹುಪಾಪಗಳು ಬರುವುವು. ತೋಟವನ್ನು ನಾಶಮಾಡಿದ ಪಾಪವೂ, ಕನ್ಯೆಯನ್ನೂ ಕುದುರೆಯನ್ನೂ ಮಾರಿದ ಪಾಪವೂ, ಬ್ರಹ್ಮಹತ್ಯೆಯ ಪಾಪವೂ, ದೇವರ ಸೊತ್ತನ್ನು ಅಪಹರಿಸಿದ ಪಾಪವೂ, ದತ್ತಾಪಹಾರ ಮಾಡಿದ ಪಾಪವೂ, ಸರೋವರವನ್ನೂ ಸೇತುವೆಯನ್ನೂ

1. ಸ್ಕಾಂ.ಪು.ದಲ್ಲಿ ಮಹಿಮೆ ಹೇಳಲಾಗಿದೆ.

ಒಡೆದು ಹಾಕಿದ ಪಾಪವೂ, ಪರಸ್ತ್ರೀಗಮನ ಮಾಡಿದ ಪಾಪವೂ, ಕದ್ದುಕೊಂಡ ಪಾಪವೂ, ಬ್ರಾಹ್ಮಣರಿಗೆ ಮೊದಲು ಕೊಡುತ್ತೇನೆ ಎಂದು ಹೇಳಿ ಆಮೇಲೆ ಕೊಡದೆ ಇದ್ದವನ ಪಾಪವೂ, ಮದ್ಯಪಾನ ಮಾಡಿದ ಪಾಪವೂ, ಗುರುಗಳನ್ನೂ ಬ್ರಾಹ್ಮಣರನ್ನೂ ದ್ವೇಷಿಸಿದ ಪಾಪವೂ, ತನ್ನನ್ನು ಸ್ತೋತ್ರಮಾಡಿಕೊಂಡ ಪಾಪವೂ, ವೈಶ್ವದೇವ ದೇವರ ನೈವೇದ್ಯವಿಲ್ಲದ ಅನ್ನವನ್ನೂ ಪಿತೃಶೇಷವನ್ನು ಭೋಜನ ಮಾಡಿದ ಪಾಪವೂ, ತಂದೆತಾಯಿಗಳಿಗೆ ವಿರೋಧಮಾಡಿದ ಪಾಪವೂ ಇತ್ಯಾದಿ ಬಹುಪಾಪಗಳು ಘೋಣತೀರ್ಥವನ್ನು ಪರಿತ್ಯಜಿಸಿದವರಿಗೆ ಬರುವುದು.

ಈ ತೀರ್ಥವು ಬಹುಪಾಪಮಾಡಿದವರನ್ನು ಉದ್ಧರಿಸುವುದು. ತುಂಬುರು ಎಂಬ ಗಂಧರ್ವನು ತನ್ನ ಹೆಂಡತಿಗೆ ಶಾಪವನ್ನು ಕೊಟ್ಟು ಇಲ್ಲಿ ಸ್ನಾನ ಮಾಡಿ ಶ್ರೀನಿವಾಸದೇವರನ್ನು ಪೂಜಿಸಿ ಭಗವಂತನ ಲೋಕಕ್ಕೆ ಹೋದನು. ಅವನು ಶಾಪಕೊಡಲಕ್ಕೆ ಕಾರಣವು ಹೀಗಿರುವುದು—

ಒಂದು ದಿನದಲ್ಲಿ ತುಂಬುರು ಎಂಬ ಗಂಧರ್ವನು ಪ್ರೀತಿಯಿಂದ ತನ್ನ ಹೆಂಡತಿಯೊಡನೆ 'ಸುಂದರಿ! ನೀನು ಮಾಘಮಾಸದಲ್ಲಿ ನನ್ನೊಡನೆ ಪ್ರಾತಃಸ್ನಾನವನ್ನು ಮಾಡು. ದೇವರ ಪೂಜೆ ಮಾಡಲಿಕ್ಕೆ ಗೋಮಯದಿಂದ ಸಾರಿಸಿ ರಂಗೋಲೆ ಹಾಕು. ಮಾಘಮಾಸದಲ್ಲಿ ದೇವರ ಮುಂದೆ ದೀಪವನ್ನಿಡು. ಮಡಿಯಿಂದ ದೇವರ ನೈವೇದ್ಯಕ್ಕೆ ಅಡಿಗೆಯನ್ನು ಮಾಡು. ನಿತ್ಯವೂ ಪುರಾಣವನ್ನು ಕೇಳು. ನಿತ್ಯವೂ ಪ್ರಾತಃಸ್ನಾನ ಮಾಡಿ ದೇವರ ತೀರ್ಥವನ್ನು ತೆಗೆದುಕೊ. ದೇವರನ್ನು ಸ್ಮರಿಸು. ಕೋಪ ಮಾತ್ಸರ್ಯ ಲೋಭ ಮೊದಲಾದವನ್ನು ಬಿಡು. ಇದರಿಂದ ನಿನಗೆ ವಿಷ್ಣುಲೋಕವು ಲಭಿಸುವುದು' ಎಂದು ಹೇಳಿದನು.

ಗಂಡನ ಮಾತನ್ನು ಕೇಳಿ ಅವಳು ಕೋಪಿಸಿಕೊಡು 'ನೀವು ಹೇಳಿದ ಒಂದು ಮಾತನ್ನು ಕೇಳಲು ಆಗಲಾರದು. ಈ ಛಳಿಯಲ್ಲಿ ಬೆಳಿಗ್ಗೆ ಹೇಗೆ ಸ್ನಾನ ಮಾಡಲಿ? ಸ್ನಾನಮಾಡಿದರೆ ಛಳಿಯಿಂದ ಸಾಯುವೆನು. ಯಾರು ನೋಡಿಕೊಳ್ಳುವವರಿದ್ದಾರೆ?' ಎಂದು ಹೇಳಿದಳು.

ಅದನ್ನು ಕೇಳಿ ಗಂಧರ್ವನು 'ಧರ್ಮವನ್ನು ಬಿಟ್ಟ ಮಗನನ್ನೂ, ಅಪ್ರಿಯಮಾತಾಡುವ ಹೆಂಡತಿಯನ್ನೂ, ಬ್ರಾಹ್ಮಣದ್ವೇಷಿಯಾದ ರಾಜನನ್ನೂ ಆಗಲೇ ಶಾಪಕೊಡಬೇಕೆಂಬ ನ್ಯಾಯವಿದೆ' ಎಂದು ಯೋಚಿಸಿ 'ವೇಂಕಟಾಚಲದಲ್ಲಿ ಘೋಣತೀರ್ಥದ ಬಳಿಯಲ್ಲಿ ನೀರಿಲ್ಲದ ಪ್ರದೇಶದಲ್ಲಿ ಕಪ್ಪೆಯಾಗು' ಎಂದು ಶಾಪಕೊಟ್ಟನು. ಗಂಡನ ಮಾತನ್ನು ಕೇಳಿ ಗಂಡನ ಕಾಲಿಗೆ ಬಿದ್ದು ಆ ಶಾಪವನ್ನು

ಪರಿಹರಿಸಬೇಕೆಂದು ಕೇಳಿಕೊಂಡಳು. ಅದಕ್ಕೆ ತುಂಬುರುವು 'ಅಗಸ್ತ್ಯರು ಹುಣ್ಣಿಮೆಯ ದಿನದಲ್ಲಿ ಘೋಣತೀರ್ಥದಲ್ಲಿ ಸ್ನಾನಮಾಡಿ ಅಶ್ವತ್ಥಮರದ ಬುಡದಲ್ಲಿ ಘೋಣತೀರ್ಥದ ಮಹಿಮೆಯನ್ನು ಹೇಳುವರು. ಅದನ್ನು ಕೇಳಿ ನೀನು ಪಾಪ ರಹಿತಳಾಗಿ ಆಮೇಲೆ ನನ್ನೊಡನೆ ಸಂತೋಷದಿಂದ ಇರುವಿ' ಎಂದು ಹೇಳಿದನು. ಅದರಂತೆ ಅವಳು ಗಂಡನ ಶಾಪದಿಂದ ಅಶ್ವತ್ಥಮರದ ಪೊಂದಿನಲ್ಲಿ ಕಪ್ಪೆಯಾಗಿ ಬಹುಕಾಲವಿದ್ದಳು. ಅಂದರೆ ಹತ್ತುಸಾವಿರ ವರ್ಷ ಹಾಗೆಯೇ ಕಳೆದುಹೋಯಿತು.

ಆಮೇಲೆ ಒಂದು ದಿನದಲ್ಲಿ ಅಗಸ್ತ್ಯರು ವೇಂಕಟಾಚಲಕ್ಕೆ ಹೋಗಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ ವರಾಹದೇವರಿಗೂ ಶ್ರೀನಿವಾಸದೇವರಿಗೂ ನಮಸ್ಕರಿಸಿ ತನ್ನ ಶಿಷ್ಯರಿಂದ ಸಹಿತರಾಗಿ ಘೋಣತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಶಿಷ್ಯರಿಗೆ ಆ ತೀರ್ಥದ ಮಹಿಮೆಯನ್ನು ಹೇಳಿದರು.

ಅದನ್ನು ಕೇಳಿ ಅಲ್ಲಿ ಕಪ್ಪೆಯಾಗಿದ್ದ ತುಂಬುರುವಿನ ಹೆಂಡತಿಯು ನಿಜರೂಪವನ್ನು ಹೊಂದಿ 'ಗಂಡನ ಮಾತನ್ನು ಮೀರಿರುವ ನನ್ನನ್ನು ರಕ್ಷಿಸಿರಿ' ಎಂದು ಅಗಸ್ತ್ಯರ ಕಾಲಿಗೆ ಅಡ್ಡಬಿದ್ದಳು. ಅಗಸ್ತ್ಯರು 'ಯಾರಮ್ಮ ನೀನು? ನಿನಗೆ ಮಂಗಳ ವಾಗಲಿ. ಕಪ್ಪೆಯ ಜನ್ಮವು ಬರುವಂತೆ ನೀನು ಯಾವ ಪಾಪವನ್ನು ಮಾಡಿರುವಿ?' ಎಂದು ಕೇಳಿದರು.

ಆಗ ಅವಳು ತನ್ನ ವಿಷಯವನ್ನು ಹೇಳಿಕೊಂಡಳು. ಆಗ ಅಗಸ್ತ್ಯರು 'ನಿನ್ನ ಗಂಡನು ಸೂಕ್ಷ್ಮಬುದ್ಧಿಯುಳ್ಳವನಾಗಿರುವನು. ಆದುದರಿಂದ ಸರಿಯಾದ ಶಾಪವನ್ನೇ ಕೊಟ್ಟಿರುವನು. ಗಂಡನ ಮಾತಿಗೆ ಎದುರಾಡುವ ಹೆಂಗಸಿಗೆ ಈರೀತಿಯಾಗಿ ಶಾಪವನ್ನು ಕೊಡುವುದು ಯುಕ್ತವೇ. ಯಾವಾಗ ಹೆಂಗಸು ಗಂಡನ ಮಾತನ್ನು ಮೀರಿ ತನ್ನ ಇಚ್ಛೆ ಬಂದಂತೆ ಇರುವಳೋ ಅವಳು ಚಂದ್ರಸೂರ್ಯರು ಇರುವವರೆಗೆ ನರಕದಲ್ಲಿ ಬಿದ್ದಿರುವರು. ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ. ಅವರು ಪತಿಯ ಮಾತನ್ನು ಮೀರಬಾರದು. ಸ್ತ್ರೀಯರು ಪಾತಿವ್ರತ್ಯದಿಂದ ಗಂಡನ ಸೇವೆಯಿಂದ ವಿಷ್ಣುಲೋಕ ವನ್ನು ಹೊಂದುವರು. ಇತರ ವ್ರತಗಳಿಂದ ಅಲ್ಲ. ಸ್ತ್ರೀಗೆ ಪತಿಯೇ ತಾಯಿಯು. ಗುರುವು. ಭಗವಂತನ ಸನ್ನಿಧಾನವುಳ್ಳವನು. ಪತಿಯ ಮಾತನ್ನು ತಿರಸ್ಕರಿಸಿ ಯಾವ ವ್ರತಗಳನ್ನು ಮಾಡಿದರೂ ಪ್ರಯೋಜನವೇ ಇಲ್ಲ. ಅವಳು ಪಾಪಿಯೇ ಆಗುವಳು. ಪತಿಯ ಪಾದಜಲದಿಂದ ಸ್ನಾನಮಾಡಿದರೆ ಗಂಗಾದಿ ತೀರ್ಥದಲ್ಲಿ ಸ್ನಾನಮಾಡಿದ ಪುಣ್ಯವನ್ನು ಹೊಂದುವಳು. ಆದುದರಿಂದ ನೀನು ಮಾಡಿದ ಪಾಪದ ಫಲವನ್ನು ನೀನು ಅನುಭವಿಸಿದಿ. ಘೋಣತೀರ್ಥದ ಮಹಿಮೆಯನ್ನು ಕೇಳಿದ್ದರಿಂದ ನಿನ್ನ ಪಾಪ

ಪರಿಹಾರವಾಯಿತು. ಇನ್ನು ಮುಂದೆ ಈ ತೀರ್ಥಕ್ಕೆ ತುಂಬುರು ತೀರ್ಥವೆಂದು ಹೆಸರು ಬರುವುದು' ಎಂದು ಹೇಳಿದರು. ಈರೀತಿಯಾಗಿ ಘೋಣತೀರ್ಥವು ಮಹಾಫಲಕ್ಕೆ ಕಾರಣವಾದದ್ದು.



## ಕಟಾಹತೀರ್ಥದ ಮಹಿಮೆ [1]

ವೇಂಕಟಾಚಲದಲ್ಲಿ ಶ್ರೀನಿವಾಸದೇವರ ಗುಡಿಯ ಉತ್ತರದಲ್ಲಿ ಕಟಾಹತೀರ್ಥ ವೆಂಬ ಹೆಸರುಳ್ಳ ತೀರ್ಥವಿದೆ. ಅದೂ ಅತ್ಯಂತ ಪವಿತ್ರವಾದದ್ದು. ಸರ್ವಪಾಪ ಪರಿಹಾರಕವಾದದ್ದು. ದುಃಸ್ವಪ್ನವನ್ನು ಪರಿಹಾರ ಮಾಡತಕ್ಕದ್ದು. ಕೇಶವಾದಿ ನಾಮ ಗಳನ್ನು ಉಚ್ಚರಿಸಿ ಅದರ ನೀರನ್ನು ಪಾನ ಮಾಡಬೇಕು. ಅಥವಾ ನಾಮತ್ರಯವನ್ನು (ಅಚ್ಯುತ ಅನಂತ ಗೋವಿಂದ) ಜಪಿಸಿ ನೀರನ್ನು ಪಾನಮಾಡಬೇಕು. ಮಂತ್ರವು ತಿಳಿಯದೆ ಇದ್ದರೂ ಜನ್ಮಾಂತರದಲ್ಲಿಯೂ ಮಾಡಿದ ನನ್ನ ಪಾಪವನ್ನು ಪರಿಹರಿಸು ಎಂದು ಹೇಳಿ ನೀರನ್ನು ಪಾನಮಾಡಿದರೆ ಪಾಪವೆಲ್ಲವೂ ಹೋಗುವುದು. **ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನ, ವರಾಹದೇವರ ದರ್ಶನ, ಕಟಾಹತೀರ್ಥದ ಪಾನ ಈ** ಮೂರೂ ಮೂರು ಲೋಕಗಳಲ್ಲಿಯೂ ದುರ್ಲಭಗಳು.

ಪೂರ್ವದಲ್ಲಿ ಗಂಧರ್ವರಿಂದ ಸೇವಿತವಾದ ಮನೋಹರವಾದ ತುಂಗಭದ್ರ ತೀರದಲ್ಲಿ ವೇದಾಢ್ಯ ಎಂಬ ಅಗ್ರಹಾರವಿದ್ದಿತು. ಅಲ್ಲಿ ವೇದಶಾಸ್ತ್ರಪಾರಂಗತರಾದ ಅನೇಕ ಬ್ರಾಹ್ಮಣರಿದ್ದರು. ಎಲ್ಲರೂ ಧರ್ಮಶಾಸ್ತ್ರ ತಿಳಿದವರಾಗಿದ್ದವರು. ವೇದಾಂತ ಶಾಸ್ತ್ರವನ್ನು ಓದಿಕೊಂಡವರಾಗಿದ್ದರು. ಅನ್ನದಾನ ಮಾಡುತ್ತಾ ಇದ್ದರು. ಪುತ್ರವಂತರಾಗಿದ್ದರು. ಆ ಅಗ್ರಹಾರದಲ್ಲಿ ಪದ್ಮನಾಭನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಕೇಶವ ಎಂಬ ಮಗನಿದ್ದನು. ಅವನು ತಂದೆತಾಯಿಗಳನ್ನು ಬಿಟ್ಟು ಹೆಂಡತಿಯನ್ನೂ ಬಿಟ್ಟು ಯಾವಾಗಲೂ ವೇಶ್ಯಾಸ್ತ್ರೀಯರಲ್ಲಿ ಆಸಕ್ತನಾಗಿದ್ದನು. ಕಳವು ಮಾಡುವವನಾಗಿ ಬಹು ಹಣವನ್ನು ಸಂಪಾದಿಸಿ ವೇಶ್ಯೆಯ ಮನೆಯಲ್ಲಿಯೇ ಇದ್ದನು. ಅವಳ ಮನೆಯಲ್ಲಿಯೇ ಊಟ ಮಾಡುತ್ತಿದ್ದನು. ಒಂದೇ ಪಾತ್ರೆಯಲ್ಲಿ ಅವಳೊಡನೆ ಮದ್ಯಪಾನ ಮಾಡಿದನು. ಒಂದು ದಿನದಲ್ಲಿ ಕೇಶವನು ಬೇಡರ ವೇಷವನ್ನು ಹಾಕಿಕೊಂಡು ಒಬ್ಬ ಬ್ರಾಹ್ಮಣನ ಮನೆಗೆ ಹೋಗಿ ಆ ಬ್ರಾಹ್ಮಣನನ್ನು ಕತ್ತಿಯಿಂದ

---

1. **ಸ್ಕಾಂ.ಪು.ದಲ್ಲಿ ಮಹಿಮೆ ಹೇಳಲಾಗಿದೆ.**

ಕೊಂದು ಬಹು ಹಣವನ್ನು ಹಿಡಿದುಕೊಂಡು ವೇಶ್ಯೆಯ ಮನೆಗೆ ಬಂದನು. ಅವನನ್ನು ಬ್ರಹ್ಮಹತ್ಯೆಯು ಅಟ್ಟಿಸಿಕೊಂಡು ಬಂದಿತು. ಅದರಿಂದ ಕೇಶವನು ಭಯವುಳ್ಳವನಾಗಿ ಎಲ್ಲೆಲ್ಲಿ ಸುತ್ತಿಕೊಂಡು ತನ್ನ ಗ್ರಾಮಕ್ಕೆ ಬಂದನು. ತನ್ನ ಮನೆಯನ್ನು ಪ್ರವೇಶಿಸಿ ತಂದೆಯನ್ನು ರಕ್ಷಿಸು ಎಂದು ಮರೆಹೊಂದಿದನು. ತಂದೆಯು ಭಯಪಡಬೇಡ ಎಂದು ಹೇಳಿ ರಕ್ಷಿಸಲಿಕ್ಕೆ ಉದ್ಯುಕ್ತನಾದನು.

ಆಗ ಬ್ರಹ್ಮಹತ್ಯೆಯು 'ಪದ್ಮನಾಭ! ಇವನು ಅತ್ಯಂತ ಪಾಪಿಯು, ಇವನನ್ನು ನೀನು ಸೇರಿಸಿಕೊಳ್ಳುವುದಾದರೆ ನಿನ್ನ ವಂಶವನ್ನೇ ನುಂಗಿಹಾಕುವೆನು. ಇವನನ್ನು ಬಿಡುವ ಪಕ್ಷದಲ್ಲಿ ನಿಮ್ಮನ್ನೆಲ್ಲಾ ಬಿಟ್ಟು ಬಿಡುತ್ತೇನೆ. ಒಬ್ಬನಿಗಾಗಿ ಕುಲವನ್ನು ನಾಶ ಮಾಡಬೇಡ' ಎಂದಿತು.

ಆಗ ಪದ್ಮನಾಭನು 'ಮಗನ ಮೇಲಿನ ಸ್ನೇಹವು ಬಾಧಿಸುತ್ತದೆ. ನಾನು ಹೇಗೆ ಮಗನನ್ನು ಬಿಡಲಿ' ಎಂದನು. ಬ್ರಹ್ಮಹತ್ಯೆಯು 'ನಿನ್ನ ಮಗನು ಪತಿತನಾಗಿರುವನು. ಇವನಲ್ಲಿ ದಯೆಯನ್ನು ಮಾಡಬೇಡ. ಇವನಲ್ಲಿ ಸ್ನೇಹವನ್ನು ತೋರಿಸುವುದು ಸರಿಯಲ್ಲ' ಎಂದು ಹೇಳಿ ಪದ್ಮನಾಭವು ನೋಡುವಂತೆ ಕೇಶವನಿಗೆ ಬಡೆಯಿತು. ಕೇಶವನು 'ತಂದೆ, ತಂದೆ' ಎಂದು ಅಳುವವನಾದನು. ತಾಯಿ ಹೆಂಡತಿ ಎಲ್ಲರೂ ಅತ್ತರು.

ಆ ಸಮಯದಲ್ಲಿ ದೈವೇಚ್ಛೆಯಿಂದ ಅಲ್ಲಿಗೆ ಭರದ್ವಾಜ ಋಷಿಗಳು ಬಂದರು. ಪದ್ಮನಾಭನು ಋಷಿಗಳನ್ನು ನೋಡಿ ತನ್ನ ಮಗನ ವಿಷಯವನ್ನು ತಿಳಿಸಿ ರಕ್ಷಿಸುವಂತೆ ಪ್ರಾರ್ಥಿಸಿಕೊಂಡನು.

ಭರದ್ವಾಜರು ಬಹಳ ಹೊತ್ತು ಯೋಚಿಸಿ 'ಪದ್ಮನಾಭ! ನಿನ್ನ ಮಗನು ಬಹುಪಾಪ ಮಾಡಿರುವನು. ಅವನಿಗೆ ಎಷ್ಟು ಪ್ರಾಯಶ್ಚಿತ್ತಮಾಡಿದರೂ ಪಾಪವು ಹೋಗಲಾರದು. ಆದರೂ ಒಂದು ಪ್ರಾಯಶ್ಚಿತ್ತವನ್ನು ಹೇಳುತ್ತೇನೆ. ವೇಂಕಟಾಚಲದಲ್ಲಿ ಶ್ರೀನಿವಾಸದೇವರು ಶ್ರೀಭೂನೀಲಾದೇವಿಯರಿಂದ ಸಹಿತರಾಗಿ ಭಕ್ತರನ್ನು ಉದ್ಧರಿಸುತ್ತಾ ಇದ್ದಾರೆ. ಆ ಶ್ರೀನಿವಾಸದೇವರ ಆಲಯದ ಉತ್ತರದಿಕ್ಕಿನಲ್ಲಿ ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸುವ ಕಟಾಹತೀರ್ಥವಿರುವುದು. ಅಲ್ಲಿಗೆ ಮಗನನ್ನು ಕರೆದುಕೊಂಡು ಹೋಗಿ ಅಲ್ಲಿಯ ನೀರನ್ನು ಪಾನಮಾಡಿಸು' ಎಂದರು.

ತರುವಾಯ ಪದ್ಮನಾಭನು ಮಗನನ್ನು ಕರೆದುಕೊಂಡು ವೇಂಕಟಾಚಲಕ್ಕೆ ಹೋಗಿ ಸ್ವಾಮಿ ಪುಷ್ಕರಣಿಯಲ್ಲಿ ನಿಯಮದಿಂದ ಸ್ನಾನಮಾಡಿದನು. ವರಾಹದೇವರಿಗೆ ನಮಸ್ಕರಿಸಿ ಶ್ರೀನಿವಾಸದೇವರ ಗುಡಿಗೆ ಹೋಗಿ ಪ್ರದಕ್ಷಿಣೆ ಬಂದು

ನಮಸ್ಕಾರವನ್ನು ಮಾಡಿ ಮಗನಿಂದ ಸಹಿತನಾಗಿ ಕಟಾಹತೀರ್ಥದ ನೀರನ್ನು ಪಾನಮಾಡಿದನು. ಕೂಡಲೇ ಬ್ರಹ್ಮಹತ್ಯೆಯು ಮರೆಯಾಯಿತು. ಶ್ರೀನಿವಾಸದೇವರು ಪ್ರತ್ಯಕ್ಷರಾದರು. 'ಪದ್ಮನಾಭ! ಭರದ್ವಾಜ ವಚನದಿಂದ ಇಲ್ಲಿಗೆ ಬಂದು ಕಟಾಹತೀರ್ಥವನ್ನು ಪಾನಮಾಡಿ ಕೃತಾರ್ಥನಾಗಿರುವಿ. ನಿನ್ನ ಮಗ ಕೇಶವನ ಬ್ರಹ್ಮಹತ್ಯೆಯು ಪರಿಹೃತವಾಯಿತು. ಆದುದರಿಂದ ಎಲ್ಲರೂ ಕಟಾಹತೀರ್ಥವನ್ನು ಸೇವಿಸಬೇಕು. ನೀನೂ ಸೇವಿಸಿ ಕೃತಾರ್ಥನಾಗಿರುವಿ. ನನ್ನ ಲೋಕವನ್ನು ಹೊಂದಿ ಸುಖವಾಗಿ ಇರು' ಎಂದು ಹೇಳಿದರು.



# ರಾಮಕೃಷ್ಣತೀರ್ಥದ ಮಹಿಮೆ [1]

ಪರಮಪವಿತ್ರವಾದ ವೇಂಕಟಾಚಲದಲ್ಲಿ ರಾಮಕೃಷ್ಣತೀರ್ಥ ಎಂದು ಹೆಸರುಳ್ಳ ತೀರ್ಥವಿದೆ. ಇದಕ್ಕೆ ಪೂರ್ವದಲ್ಲಿ ಕೃಷ್ಣತೀರ್ಥವೆಂದು ಹೆಸರಿದ್ದಿತು. ಈ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ತಂದೆತಾಯಿಗಳನ್ನು ಅವಮಾನ ಮಾಡಿದ ದೋಷದಿಂದಲೂ, ಗುರುಗಳನ್ನು ಅವಮಾನ ಮಾಡಿದ ದೋಷದಿಂದಲೂ, ಕೃತಘ್ನನಾದ ದೋಷದಿಂದಲೂ, ಬಿಡುಗಡೆ ಹೊಂದುವರು. ಪೂರ್ವದಲ್ಲಿ ಕೃಷ್ಣ ಎಂಬ ಮುನಿಗಳು ವೇಂಕಟಾಚಲದಲ್ಲಿ ಶ್ರೀನಿವಾಸದೇವರನ್ನು ಧ್ಯಾನ ಮಾಡುತ್ತಿದ್ದರು. ತಪಸ್ಸು ಮಾಡುತ್ತಿದ್ದರು. ಅವರು ತಾನು ಸ್ನಾನಮಾಡುವುದಕ್ಕಾಗಿ ಈ ತೀರ್ಥವನ್ನು ನಿರ್ಮಿಸಿದರು. ಇಲ್ಲಿ ಸ್ನಾನಮಾಡುವುದರಿಂದ ಕೃತಘ್ನನೂ ಪವಿತ್ರನಾಗುವನು.

ಪೂರ್ವದಲ್ಲಿ ರಾಮಕೃಷ್ಣ ಎಂಬ ಮುನಿಗಳು ಇದ್ದರು. ಅವರೂ ಪರಮಾತ್ಮನಾಗಿ [2]ಭಕ್ತರಾಗಿ ಕಠಿನವಾಗಿ ತಪಸ್ಸು ಮಾಡುತ್ತಿದ್ದರು. ಒಂದೇ ಸ್ಥಳದಲ್ಲಿಯೇ ಅಂಗಗಳ ಚಲನೆ ಮಾಡದೆ ತಪಸ್ಸು ಮಾಡುತ್ತಿದ್ದರೂ ಹೀಗೆ ಅನೇಕ ನೂರು ವರ್ಷಕಾಲ ತಪಸ್ಸು ಮಾಡಿದರು. ಅವರ ಮೈಮೇಲೆ ಹುತ್ತವು ಬೆಳೆಯಿತು. ಆದರೂ ಅವರು ತಪಸ್ಸನ್ನು ಬಿಡಲೇ ಇಲ್ಲ. ಹುತ್ತವು ಮೈಮೇಲೆ ಬೆಳೆದದ್ದನ್ನು ತಿಳಿಯಲೇ ಇಲ್ಲ. ತರುವಾಯ ಇಂದ್ರದೇವರು ಏಳುದಿವಸ ನಿರಂತರ ಮಳೆಯನ್ನು ಸುರಿಸಿದರು. ಆ ಮಳೆಯನ್ನು ತಡೆದುಕೊಂಡೇ ಮುನಿಗಳನ್ನು ತಪಸ್ಸು ಮಾಡುತ್ತಿದ್ದರು. ಪಿಡಿಗಿನ ಶಬ್ದದಿಂದ ಕಿವಿಯು ಕಿವುಡಾಗುವಂತೆ ಆಯಿತು. ಹುತ್ತದ ಮೇಲೆಯೇ ಪಿಡುಗು ಬಿದ್ದಿತು. ಹುತ್ತದ

1. ಸ್ಕಾ.ಪು.ದಲ್ಲಿ ಮಹಿಮೆ ಹೇಳಲಾಗಿದೆ. 2. ಪರಮಾತ್ಮನ ಭಕ್ತರಾಗಿ

ತಲೆಯು ಸೀಳಿಹೋಯಿತು. ಆಗ ಶ್ರೀನಿವಾಸದೇವರು ಶಂಖ ಚಕ್ರ ಗದಾಧಾರಿಯಾಗಿ ಗರುಡಾರೂಢರಾಗಿ ಪ್ರತ್ಯಕ್ಷರಾದರು. ರಾಮಕೃಷ್ಣಮುನಿಗಳ ತಪಸ್ಸಿನಿಂದ ಪ್ರತ್ಯಕ್ಷರಾಗಿ ನಾನು ಅವತರಿಸಿದ ದಿವಸದಲ್ಲಿ ಈ ತೀರ್ಥದಲ್ಲಿ ಯಾರು ಸ್ನಾನ ಮಾಡುವರೋ ಅವರಿಗೆ ಬಹುಪುಣ್ಯವು ಬರುವುದು. ಮಕರರಾಶಿಯಲ್ಲಿ ಸೂರ್ಯನಿರುವಾಗ ಪುಷ್ಯ ನಕ್ಷತ್ರಯುಕ್ತವಾದ ಹುಣ್ಣಿಮೆಯಲ್ಲಿ ಸ್ನಾನ ಮಾಡುವುದು ಅತ್ಯಂತ ಪ್ರಶಸ್ತವಾದದ್ದು. ನನ್ನ ಆವಿರ್ಭಾವ ದಿವಸದಲ್ಲಿ ದೇವತೆಗಳೂ ಮನುಷ್ಯರೂ ದಿಕ್ಪಾಲಕರೂ ತಮ್ಮ ಪಾಪಪರಿಹಾರಕ್ಕಾಗಿ ಇಲ್ಲಿಗೆ ಬರುವರು. ಇಲ್ಲಿ ಸ್ನಾನಮಾಡಿ ಪವಿತ್ರರಾಗುವರು. ಇನ್ನು ಮುಂದೆ ಈ ಕೃಷ್ಣತೀರ್ಥವು ನಿನ್ನ ಹೆಸರಿನಿಂದ ಎಂದರೆ, ರಾಮಕೃಷ್ಣತೀರ್ಥ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದುವುದು' ಎಂದು ಅಂತರ್ಧಾನವನ್ನು ಹೊಂದಿದರು. ಈರೀತಿಯಿಂದ ಮಹಿಮೆಯುಳ್ಳ ರಾಮಕೃಷ್ಣತೀರ್ಥವು ಎಲ್ಲರಿಗೂ ಬುದ್ಧಿಶುದ್ಧಿಯನ್ನು ಕೊಟ್ಟು ಸರ್ವೈಶ್ವರ್ಯವನ್ನು ಕೊಡತಕ್ಕದ್ದು.



## ಚಕ್ರತೀರ್ಥದ ಮಹಿಮೆ [1]

ವೇಂಕಟಾಚಲದಲ್ಲಿ ಚಕ್ರತೀರ್ಥವೆಂಬ ಪವಿತ್ರವಾದ ತೀರ್ಥವಿದೆ. ಅನ್ನದಾನ ಜಲದಾನ ಗೋದಾನಮಾಡದೆ ಇದ್ದವರೂ ಇಲ್ಲಿ ಸ್ನಾನಮಾಡಿದರೆ ಪವಿತ್ರ ರಾಗುವರು. ಅಂತ ಚಕ್ರತೀರ್ಥದ ತೀರದಲ್ಲಿ ಶ್ರೀವತ್ಸಗೋತ್ರದ ಪದ್ಮನಾಭ ಎಂಬ ಬ್ರಾಹ್ಮಣನು ಕಠಿನವಾದ ತಪಸ್ಸನ್ನು ಹನ್ನೆರಡು ವರ್ಷ ಮಾಡಿದನು. ಅವನ ತಪಸ್ಸಿನಿಂದ ಸಂತುಷ್ಟರಾಗಿ ಶ್ರೀನಿವಾಸದೇವರು ಚಕ್ರ ಶಂಖ ಗದಾಧಾರಿಯಾಗಿ ಪ್ರತ್ಯಕ್ಷರಾದರು. ಪದ್ಮನಾಭನು ಭಗವಂತನನ್ನು ಬಹಳವಾಗಿ ಭಕ್ತಿಯಿಂದ ಸ್ತೋತ್ರ ಮಾಡಿದನು. ಅದನ್ನು ಕೇಳಿ ಶ್ರೀನಿವಾಸದೇವರು ಸಂತುಷ್ಟರಾಗಿ 'ಬ್ರಾಹ್ಮಣೋತ್ತ ಮನೇ! ಚಕ್ರತೀರ್ಥದ ತೀರದಲ್ಲಿಯೇ ನೀನು ನನ್ನನ್ನು ಪೂಜಿಸುತ್ತಾ ಇರು. ಒಂದು ಕಲ್ಪಪರ್ಯಂತವಾಗಿ ಇರು' ಎಂದು ಹೇಳಿ ಮರೆಯಾದರು.

ಪದ್ಮನಾಭ ಬ್ರಾಹ್ಮಣನು ಅಲ್ಲಿಯೇ ಇದ್ದನು. ಒಂದು ದಿವಸದಲ್ಲಿ ಒಬ್ಬ ರಾಕ್ಷಸನು ಹಸಿವೆಯಿಂದ ಪೀಡಿತನಾಗಿ ಬಂದು ತಿನ್ನಬೇಕೆಂದು ಪದ್ಮನಾಭನನ್ನು ಹಿಡಿದನು. ಆಗ ಪದ್ಮನಾಭನು ಶ್ರೀನಿವಾಸದೇವರನ್ನು ಕೂಗಿ ರಕ್ಷಿಸಬೇಕೆಂದು ಸ್ತೋತ್ರ

1. ಸ್ಕಾಂ.ಪು.

ಮಾಡಿದನು. ಶ್ರೀನಿವಾಸದೇವರು ಭಕ್ತನ ಭಯವನ್ನು ತಿಳಿದು ಭಕ್ತನನ್ನು ರಕ್ಷಿಸುವುದಕ್ಕಾಗಿ ತನ್ನ ಚಕ್ರವನ್ನು ಕಳುಹಿಸಿದರು. ಪರಮಾತ್ಮನಿಂದ ಪ್ರೇರಿತರಾದ ಚಕ್ರವು ಬೇಗನೆ ಚಕ್ರತೀರ್ಥದ ಬಳಿಗೆ ಬಂದಿತು. ಭಯಂಕರವಾದ ಆ ಚಕ್ರಾಯುಧವನ್ನು ನೋಡಿ ಆ ರಾಕ್ಷಸನು ಭಯದಿಂದ ಓಡಲಿಕ್ಕೆ ಆರಂಭಿಸಿದನು. ಓಡುತ್ತಿರುವ ರಾಕ್ಷಸನ ಬಳಿಗೆ ಆ ಚಕ್ರವು ಶೀಘ್ರವಾಗಿ ಹೋಗಿ ಅವನ ಕುತ್ತಿಗೆಯನ್ನು ಕತ್ತರಿಸಿತು. ಸತ್ತು ಬಿದ್ದಿರುವ ರಾಕ್ಷಸನನ್ನು ನೋಡಿ ಪದ್ಮನಾಭನು ಸಂತೋಷದಿಂದ ಸುದರ್ಶನ ಚಕ್ರವನ್ನು ಸ್ತೋತ್ರ ಮಾಡಿ ಪ್ರಾರ್ಥಿಸಿಕೊಂಡನು. ಭಕ್ತರ ಭಯವನ್ನು ಪರಿಹರಿಸುವ ಸುದರ್ಶನವೇ! ನಿನಗೆ ನಮಸ್ಕಾರವು. ಭಯಪೀಡಿತನಾದ ನನ್ನನ್ನು ಸರ್ವದೋಷ ದಿಂದ ರಕ್ಷಿಸು. ಜಗತ್ತಿನ ಕ್ಷೇಮಕ್ಕಾಗಿ ಯಾವಾಗಲೂ ಈ ಚಕ್ರತೀರ್ಥದಲ್ಲಿಯೇ ಸನ್ನಿಹಿತನಾಗಿರು' ಎಂದು ಪ್ರಾರ್ಥಿಸಿಕೊಂಡನು.

ಅದಕ್ಕೆ ಸುದರ್ಶನವು 'ಪದ್ಮನಾಭ! ಪರಮಪವಿತ್ರವಾದ ಈ ಚಕ್ರತೀರ್ಥದಲ್ಲಿ ಲೋಕಗಳ ಹಿತಕ್ಕಾಗಿ ನಾನು ಸರ್ವದಾ ಸನ್ನಿಹಿತರಾಗಿರುವೆನು. ದುರಾತ್ಮನಾದ ರಾಕ್ಷಸನು ನಿನ್ನನ್ನು ಪೀಡಿಸುವುದನ್ನು ತಿಳಿದು ಭಗವಂತನಿಂದ ಆಜ್ಞಪ್ತನಾಗಿ ನಾನು ಇಲ್ಲಿಗೆ ಬಂದಿರುವೆನು. ನಿನ್ನನ್ನು ಪೀಡಿಸಿದ ರಾಕ್ಷಸನನ್ನು ಸಂಹರಿಸಿ ನಿನ್ನನ್ನು ಭಯ ದಿಂದ ಬಿಡಿಸಿರುವೆನು. ಇಲ್ಲಿ ನನ್ನ ಸನ್ನಿಧಾನದಿಂದ ಇನ್ನು ಯಾರಿಗೂ ಪೀಡೆಯು ಏರ್ಪಡಲಾರದು. ನನ್ನ ಸನ್ನಿಧಾನದಿಂದಲೇ ಚಕ್ರತೀರ್ಥವೆಂಬ ಪ್ರಸಿದ್ಧಿಯು ಹೆಚ್ಚುವುದು. ಇಲ್ಲಿ ಯಾರು ಸ್ನಾನ ಮಾಡುವರೋ ಅವರಲ್ಲಿ ಮಕ್ಕಳು ಮೊಮ್ಮಕ್ಕಳು ಎಲ್ಲರೂ ಶುದ್ಧರಾಗಿ ಸಾಧನ ಮಾಡಿ ಮೋಕ್ಷವನ್ನು ಹೊಂದುವರು' ಎಂದು ಹೇಳಿ ಚಕ್ರತೀರ್ಥವನ್ನು ಪ್ರವೇಶಿಸಿತು. ಈರೀತಿಯಾಗಿ ಚಕ್ರತೀರ್ಥವು ಅತಿ ಪವಿತ್ರವಾಗಿರುವುದು.



# ಸಂಕೀರ್ಣ ಪರಿಚ್ಛೇದ

## ಗೋಮಹಿಮಾ [1]

ಪೂರ್ವದಲ್ಲಿ ಚ್ಯವನ ಋಷಿಗಳು ಅಭಿಮಾನ ಕ್ರೋಧ ಹರ್ಷ ಶೋಕಗಳನ್ನೆಲ್ಲಾ ಬಿಟ್ಟು ಹದಿನೆರಡು ವರ್ಷಕಾಲ ನೀರಿನಲ್ಲಿ ವಾಸಮಾಡುತ್ತಿದ್ದರು. ಜಲಚರಪ್ರಾಣಿಗಳ ಮಧ್ಯದಲ್ಲಿ ಚಂದ್ರನಂತೆ ಪ್ರಕಾಶಿಸುತ್ತಾ ಇದ್ದರು. ದೇವತೆಗಳಿಗೆ ನಮಸ್ಕರಿಸಿ ಕಂಬದಂತೆ ನಿಂತುಕೊಂಡಿದ್ದರು. ಗಂಗಾಯಮುನಾ ನದಿಗಳ ಮಧ್ಯದಲ್ಲಿ ನೀರಿನಲ್ಲಿ ಪ್ರವೇಶಿಸಿದರು. ಭಯಂಕರವಾದ ಗಂಗಾಯಮುನಾ ಪ್ರವಾಹದ ವೇಗವನ್ನು ತಲೆಯಿಂದ ತಡೆದರು. ಗಂಗಾ ಯಮುನಾ ಇತ್ಯಾದಿ ನದಿಗಳು ಅವರಿಗೆ ಪ್ರದಕ್ಷಿಣೆ ಮಾಡಿದವು. ಪೀಡಿಸಲಿಲ್ಲ. ನೀರಿನ ಒಳಗೆ ಕಟ್ಟಿಗೆಯಂತೆ ಮಲಗಿದರು. ಆಮೇಲೆ ನಿಂತುಕೊಂಡರು. ನೀರಿನಲ್ಲಿ ಇರುವ ಪ್ರಾಣಿಗಳಿಗೆಲ್ಲಾ ಪ್ರಿಯರಾಗಿದ್ದರು. ಜಲಜಂತುಗಳೆಲ್ಲ ಸಂತೋಷದಿಂದ ಬಂದು ಅವರ ತುಟಿಯನ್ನು ಮೂಸುತ್ತಾ ಇದ್ದವು. ಹೀಗೆಯೇ ಬಹಳ ಸಮಯವು ಕಳೆಯಿತು. ತರುವಾಯ ಒಂದು ಸಮಯದಲ್ಲಿ ಕೆಲವು ಮೀನು ಹಿಡಿಯುವವರು ಬಲೆಯನ್ನು ಹಿಡಿದುಕೊಂಡು ಅಲ್ಲಿಗೆ ಬಂದರು. ತುಂಬಾ ಮೀನುಗಳುಳ್ಳ ಆ ಸ್ಥಳಕ್ಕೆ ಬಂದರು. ಆ ಗಂಗಾಯಮುನಾ ಜಲದಲ್ಲಿ ಬಲೆಯನ್ನು ಬೀಸಿದರು. ತರುವಾಯ ಸಂತೋಷದಿಂದ ಬಲೆಯನ್ನು ಸೆಳೆದರು. ಆ ಬಲೆಯಲ್ಲಿ ಮೀನುಗಳೊಡನೆ ಚ್ಯವನರೂ ಸಿಕ್ಕಿಬಿದ್ದಿದ್ದರು. ಮೀನು ಹಿಡಿಯುವವರು ಬಲೆಯನ್ನು ಮೇಲಕ್ಕೆ ಎಳೆದು ಅದರಲ್ಲಿ ಸಿಕ್ಕಿದ್ದ ವೇದಶಾಸ್ತ್ರಪಾರಂಗತರಾದ ಚ್ಯವನರನ್ನು ನೋಡಿ ಕೈಮುಗಿದು ಉದ್ದಕ್ಕೆ ನಮಸ್ಕಾರ ಮಾಡಿದರು. ಮೀನುಗಳನ್ನು ಮೇಲೆ ಎಳೆದು ಹಾಕಲು ಮೀನುಗಳು ತುಂಬಾ ಶ್ರಮವನ್ನು ಹೊಂದಿದವು. ಮೀನುಗಳ ಈ ಹಿಂಸೆಯನ್ನು ನೋಡಿ ಕೃಪೆಯುಳ್ಳವರಾಗಿ ಪುನಃ ಪುನಃ ದೀರ್ಘಶ್ವಾಸವನ್ನು ಬಿಟ್ಟರು. ಆಗ ಮೀನು ಹಿಡಿಯುವವರು ನಾವು ತಿಳಿಯದೆ ಪಾಪವನ್ನು ಮಾಡಿದೆವು. ತಾವು ಕ್ಷಮಿಸಬೇಕು. ನಾವು ನಿಮಗೆ ಏನು ಪ್ರಿಯವನ್ನು ಮಾಡಲಿ ಎಂದು ಕೇಳಿಕೊಂಡರು. ಆಗ ಮೀನುಗಳ ಮಧ್ಯದಲ್ಲಿದ್ದ ಚ್ಯವನರು ನನ್ನ ಅಭೀಷ್ಟವನ್ನು ಕೇಳಿರಿ. ಒಂದೋ ನನ್ನನ್ನು ಮೀನುಗಳನ್ನೂ ಬಿಟ್ಟುಬಿಡಬೇಕು. ಅಥವಾ ಮೀನುಗಳೊಡನೆ ನಾನು ಸಾಯುವೆನು. ನಾನು ನೀರಿನಲ್ಲಿ ಇವುಗಳ ಒಟ್ಟಿಗೆ ವಾಸಮಾಡಿದ್ದೆನು. ಇವುಗಳನ್ನು ಬಿಡಲಿಕ್ಕೆ ಆಗಲಾರದು ಎಂದು

1. ಮ.ಭಾ.ಅ.ಪ. ಅ-50,51

ಹೇಳಿದರು. ಈರೀತಿಯಾಗಿ ಹೇಳಲು ಮೀನು ಹಿಡಿಯುವವರೆಲ್ಲರೂ ಅತ್ಯಂತ ಭಯದಿಂದ ನಡುಗಿದವರಾಗಿ ನಹುಷರಾಜನ ಬಳಿಗೆ ಓಡಿ ತಿಳಿಸಿದರು.

ನಹುಷರಾಜನು ಆ ಪ್ರಕಾರವಾಗಿರುವ ಚ್ಯವನರನ್ನು ಕೇಳಿ ಮಂತ್ರಿಪುರೋಹಿತರಿಂದ ಕೂಡಿಕೊಂಡು ಅಲ್ಲಿಗೆ ಬೇಗನೇ ಬಂದನು. ಶುದ್ಧನಾಗಿ ಚ್ಯವನರ ಬಳಿಗೆ ಬಂದು ಕೈಮುಗಿದು ತಾನು ಬಂದಿರುವುದನ್ನು ತಿಳಿಸಿದನು. ರಾಜನ ಪುರೋಹಿತರು ಚ್ಯವನರನ್ನು ಪೂಜಿಸಿದರು.

ನಹುಷರಾಜನು 'ಬ್ರಾಹ್ಮಣೋತ್ತಮರೇ! ನಿಮಗೆ ನಾನು ಯಾವ ಪ್ರಿಯವನ್ನು ಮಾಡಲಿ. ಮಾಡಲಿಕ್ಕೆ ಅಶಕ್ಯವಾಗಿದ್ದರೂ ಕೂಡ ನಾನು ಅವಶ್ಯವಾಗಿ ಮಾಡುವೆನು' ಎಂದು ಕೇಳಿದನು.

ಚ್ಯವನರು 'ಈ ಮೀನು ಹಿಡಿಯುವವರು ಬಹಳ ಶ್ರಮವನ್ನು ಹೊಂದಿದ್ದಾರೆ. ಇವರಿಗೆ ನನ್ನ ಮತ್ತು ಈ ಮೀನುಗಳ ಬೆಲೆಯನ್ನು ಕೊಡತಕ್ಕವನಾಗು' ಎಂದರು.

ನಹುಷರಾಜನು 'ಪುರೋಹಿತರೇ! ಈ ಪೂಜ್ಯರು ಹೇಳಿದಂತೆ ಇವರ ಬೆಲೆ ಸಾವಿರ ನಾಣ್ಯಗಳನ್ನು ಕೊಟ್ಟಿಬಿಡಿರಿ' ಎಂದನು.

ಆಗ ಚ್ಯವನರು 'ರಾಜನೇ! ನನ್ನ ಬೆಲೆಯು ಸಹಸ್ರನಾಣ್ಯಗಳಲ್ಲ. ನನಗೆ ಸರಿಯಾದ ಕ್ರಯವನ್ನು ಕೊಡು. ಎಷ್ಟಾಗಬಹುದೆಂದು ನೀನೇ ಮನಸ್ಸಿನಲ್ಲಿ ನಿಶ್ಚಯ ಮಾಡಿ ತಿಳಿಯು' ಎಂದರು.

ನಹುಷರಾಜನು 'ಪುರೋಹಿತರೇ! ನೂರು ಸಾವಿರ ನಾಣ್ಯಗಳನ್ನು ಮೀನು ಹಿಡಿಯುವವರಿಗೆ ಕೊಡಿರಿ. ಅದು ಸರಿಯಾದ ಬೆಲೆಯಾಗಬಹುದು. ಇನ್ನು ನಿಮ್ಮ ಅಭಿಪ್ರಾಯವೇನಿದೆ' ಎಂದು ಹೇಳಿದನು.

ಚ್ಯವನರು 'ನನ್ನ ಬೆಲೆಯು ನೂರು ಸಹಸ್ರ ನಾಣ್ಯಗಳಲ್ಲ. ನಿನ್ನ ಮಂತ್ರಿಗಳೊಡನೆ ಎಷ್ಟು ಬೆಲೆಯೆಂದು ಯೋಚನೆ ಮಾಡು' ಎಂದರು.

ನಹುಷರಾಜನು 'ಪುರೋಹಿತರೇ! ಈ ಮೀನು ಹಿಡಿಯುವವರಿಗೆ ಕೋಟಿ ನಾಣ್ಯಗಳನ್ನು ಕೊಡಿರಿ. ಅದೂ ಸಾಲದಾದರೆ ಇನ್ನೂ ಹೆಚ್ಚಾಗಿ ಕೊಡಿರಿ' ಎಂದನು.

ಚ್ಯವನರು 'ರಾಜನೇ! ನನ್ನ ಬೆಲೆಯು ಕೋಟಿ ನಾಣ್ಯಗಳೂ ಅಲ್ಲ. ಅದಕ್ಕಿಂತ ಹೆಚ್ಚು ನಾಣ್ಯಗಳೂ ಅಲ್ಲ. ನನಗೆ ಸರಿಯಾದ ಬೆಲೆಯನ್ನು ಬ್ರಾಹ್ಮಣರೊಡನೆ ಯೋಚಿಸು' ಎಂದರು.

ನಹುಷನು 'ಈ ಮೀನು ಹಿಡಿಯುವವರಿಗೆ ಅರ್ಧರಾಜ್ಯವನ್ನು ಕೊಡಿರಿ.

ಅಥವಾ ಸಂಪೂರ್ಣವಾದ ರಾಜ್ಯವನ್ನು ಕೊಡಿರಿ. ಇನ್ನು ಇದಕ್ಕಿಂತ ಬೇರೆ ಏನಿದೆ?' ಎಂದನು.

ಚ್ಯವನರು 'ರಾಜನೇ! ನನಗೆ ಅರ್ಧರಾಜ್ಯವಾಗಲೀ ಸಂಪೂರ್ಣ ರಾಜ್ಯವಾಗಲೀ ಸರಿಯಾದ ಬೆಲೆಯಾಗಲಾರದು. ನನಗೆ ಸರಿಯಾದ ಬೆಲೆಯನ್ನು ಕೊಡು. ಋಷಿಗಳ ಹತ್ತಿರ ಯೋಚನೆ ಮಾಡು' ಎಂದರು.

ಚ್ಯವನರ ಮಾತನ್ನು ಕೇಳಿ ನಹುಷನಿಗೆ ದುಃಖವುಂಟಾಯಿತು. ಮಂತ್ರಿ ಪುರೋಹಿತರಿಂದ ಕೂಡಿಕೊಂಡು ಯೋಚನೆ ಮಾಡಿದನು. ಅಲ್ಲಿ ಕಾಡಿನಲ್ಲಿ ಇರುತ್ತಿದ್ದ ಹಣ್ಣುಗೆಡ್ಡೆಗಳನ್ನು ತಿನ್ನುತ್ತಿದ್ದ ಗೋವಿನಲ್ಲಿ ಹುಟ್ಟಿದ್ದ ಒಬ್ಬ ಮುನಿಗಳು ಇದ್ದರು. ಅವರು ನಹುಷನೊಡನೆ 'ಆ ಚ್ಯವನರು ಬೇಗನೇ ಸಂತೋಷವನ್ನು ಹೊಂದುವಂತೆ ಮಾಡುವೆನು. ನಾನು ತಮಾಷೆ ಮಾತಾಡುವಾಗಲೂ (ಗೇಲಿ ಮಾತಾಡುವಾಗಲೂ) ಸುಳ್ಳು ಹೇಳುವವನಲ್ಲ. ನಾನು ನಿನ್ನ ಹತ್ತಿರ ಹೇಳಿದಂತೆ ಸಂದೇಹವಿಲ್ಲದೆ ಮಾಡಬೇಕು' ಎಂದು ಹೇಳಿದರು.

ನಹುಷನು 'ಪೂಜ್ಯರೇ! ಅವರ ಸರಿಯಾದ ಬೆಲೆಯನ್ನು ಹೇಳಿರಿ. ನನ್ನನ್ನು ನನ್ನ ದೇಶವನ್ನೂ ನನ್ನ ವಂಶವನ್ನೂ ರಕ್ಷಿಸಿರಿ. ಪೂಜ್ಯರಾದ ಚ್ಯವನರು ಕೋಪವುಳ್ಳವರಾದರೆ ಮೂರುಲೋಕಗಳನ್ನೂ ಸುಟ್ಟುಹಾಕುವರು. ಹೀಗಿರುವಾಗ ತಪೋಹೀನನಾದ ನನ್ನನ್ನು ಬಿಡುವರೇ!' ಎಂದು ಹೇಳಿದನು.

ನಹುಷನ ಮಾತನ್ನು ಕೇಳಿ ಆ ಮುನಿಗಳು ಎಲ್ಲಾ ಮಂತ್ರಿಗಳನ್ನೂ ಆ ರಾಜನನ್ನೂ ಸಂತೋಷಪಡಿಸುತ್ತಾ 'ಬ್ರಾಹ್ಮಣರು ಬೆಲೆ ರಹಿತರು. ಎಂದರೆ ಅವರ ಬೆಲೆಯು ಇಷ್ಟೇ ಎಂದು ಹೇಳಲಿಕ್ಕೆ ಆಗಲಾರದು. ಹಾಗೆಯೇ ಗೋವುಗಳ ಬೆಲೆಯೂ ಇರುವುದು' ಎಂದರು.

ನಹುಷರಾಜನು ಆ ಮುನಿಗಳ ಮಾತನ್ನು ಕೇಳಿ ಬಹಳ ಸಂತೋಷವುಳ್ಳವನಾಗಿ ಮಂತ್ರಿಪುರೋಹಿತರಿಂದ ಕೂಡಿಕೊಂಡು ಚ್ಯವನರ ಸಮೀಪಕ್ಕೆ ಹೋಗಿ 'ಪೂಜ್ಯರೇ! ಏಳಿರಿ. ನಿಮ್ಮನ್ನು ಗೋವಿನಿಂದ ಕ್ರಯಕ್ಕೆ ಹೊಂದುವೆನು. ನಿಮಗೆ ದನವೇ ಕ್ರಯವು' ಎಂದನು.

ಆಗ ಚ್ಯವನರು 'ರಾಜನೇ! ನಾನು ಏಳುವೆನು. ನನಗೆ ಸರಿಯಾದ ಕ್ರಯವನ್ನು ಹೇಳಿದಿ. ಗೋವಿಗೆ ಸಮಾನವಾದ ಧನವು ಯಾವುದೂ ಇಲ್ಲ, ಗೋವುಗಳ ಕೀರ್ತನ ಮಾಡುವುದು, ಶ್ರವಣ, ದರ್ಶನ, ದಾನ ಎಲ್ಲವೂ ಪ್ರಶಸ್ತವಾದದ್ದು. ಎಲ್ಲವೂ

ಪಾಪಪರಿಹಾರಕವಾದದ್ದು. ಗೋವುಗಳ ಸ್ವರ್ಗಕ್ಕೆ ಕಾರಣಗಳು. ಗೋವುಗಳಿಂದ ಸಮಸ್ತ ಅಭೀಷ್ಟವೂ ಉಂಟಾಗುವುದು' ಎಂದರು.

ಆಗ ಮೀನು ಹಿಡಿಯುವವರು'ಪೂಜ್ಯರೇ! ನಮ್ಮನ್ನು ನೋಡಿ ನಮ್ಮೊಡನೆ ಮಾತಾಡಿದಿರಿ. ಸಜ್ಜನರು ಒಟ್ಟಿಗೆ ಏಳು ಹೆಜ್ಜೆ ನಡೆದರೆ ಮೈತ್ರಿಯ ಏರ್ಪಡುವುದು ಎನ್ನುವರು. ನೀವು ನಮಗೂ ಅನುಗ್ರಹ ಮಾಡಬೇಕು. ನಮ್ಮ ಅನುಗ್ರಹಕ್ಕಾಗಿ ಈ ಗೋವನ್ನು ನೀವು ಸ್ವೀಕರಿಸಬೇಕು' ಎಂದು ಹೇಳಿದರು.

ಚ್ಯವನರು 'ನಿಮ್ಮ ಗೋವನ್ನು ನಾನು ಸ್ವೀಕರಿಸುವೆನು. ನೀವು ಪಾಪ ರಹಿತರಾಗಿರುವಿರಿ. ಬೇಗನೆ ಈ ಮೀನುಗಳೊಡನೆ ಸ್ವರ್ಗಕ್ಕೆ ಹೋಗಿರಿ' ಎಂದರು.

ತರುವಾಯ ಆ ಮುನಿಗಳ ಪ್ರಭಾವದಿಂದ ಮೀನು ಹಿಡಿಯುವವರೆಲ್ಲರೂ ಮೀನುಗಳ ಸಹಿತವಾಗಿ ಸ್ವರ್ಗಕ್ಕೆ ಹೋದರು. ನಹುಷರಾಜನು ಆ ಮೀನು ಹಿಡಿಯುವವರೂ ಮೀನುಗಳೂ ಸ್ವರ್ಗಕ್ಕೆ ಹೋಗುವುದನ್ನು ನೋಡಿದನು. ಅನಂತರದಲ್ಲಿ ಆ ಗೋವಿನಲ್ಲಿ ಹುಟ್ಟಿದ ಮುನಿಗಳೂ ಚ್ಯವನರೂ ರಾಜನೊಡನೆ ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದರು. ನಹುಷರಾಜನು ನಾನು ಧರ್ಮದಲ್ಲಿಯೇ ಇರುವಂತೆ ವರವನ್ನು ಕೊಡಬೇಕೆಂದು ಕೇಳಿಕೊಂಡನು. ಹಾಗೆಯೇ ಆಗಲಿ ಎಂದು ಅವರಿಬ್ಬರೂ ಹೇಳಲು ಅವರಿಬ್ಬರನ್ನು ಪೂಜಿಸಿದನು. ಚ್ಯವನರು ನೀರಿನಲ್ಲಿ ವಾಸಮಾಡುವ ತನ್ನ ದೀಕ್ಷೆಯನ್ನು ಮುಗಿಸಿಕೊಂಡು ತನ್ನ ಆಶ್ರಮಕ್ಕೆ ಹೋದರು. ಗೋವಿನಲ್ಲಿ ಹುಟ್ಟಿದ ಮುನಿಗಳು ಆಶ್ರಮಕ್ಕೆ ಹೋದರು. ಮೀನು ಹಿಡಿಯುವವರೂ ಮೀನುಗಳೂ ಸ್ವರ್ಗಕ್ಕೆ ಹೋದವು. ನಹುಷನೂ ವರವನ್ನು ಪಡೆದು ತನ್ನ ನಗರವನ್ನು ಪ್ರವೇಶಿಸಿದನು.



# ಬ್ರಾಹ್ಮಣ ಮಾಹಾತ್ಮ್ಯ [1]

ಮಾರ್ಕಂಡೇಯರು ಪಾಂಡವರ ಹತ್ತಿರ ಹೇಳಿದರು. ಪೂರ್ವದಲ್ಲಿ ಹೈಹಯವಂಶದಲ್ಲಿ ಹುಟ್ಟಿದ ಸರ್ವಶಾಸ್ತ್ರದಲ್ಲಿಯೂ ಪಂಡಿತನಾದ ಮಹಾತೇಜಸ್ವಿಯಾದ ಯೌವನವುಳ್ಳವನಾದ ಸುಂದರನಾದ ಬಲಿಷ್ಠನಾದ ಒಬ್ಬ ರಾಜನು ಕಾಡಿನಲ್ಲಿ ಮೃಗಬೇಟೆಯನ್ನು ಆಡುತ್ತಾ ಸಂಚರಿಸಿದನು. ಹೀಗೆಯೇ ಅರಣ್ಯದಲ್ಲಿ ಸಂಚರಿಸುತ್ತಾ

1. ಮ.ಭಾ.ವ.ಪ. ಅ-184

ಅಥವಾ ಸಂಪೂರ್ಣವಾದ ರಾಜ್ಯವನ್ನು ಕೊಡಿರಿ. ಇನ್ನು ಇದಕ್ಕಿಂತ ಬೇರೆ ಏನಿದೆ?' ಎಂದನು.

ಚ್ಯವನರು 'ರಾಜನೇ! ನನಗೆ ಅರ್ಧರಾಜ್ಯವಾಗಲೀ ಸಂಪೂರ್ಣ ರಾಜ್ಯವಾಗಲೀ ಸರಿಯಾದ ಬೆಲೆಯಾಗಲಾರದು. ನನಗೆ ಸರಿಯಾದ ಬೆಲೆಯನ್ನು ಕೊಡು. ಋಷಿಗಳ ಹತ್ತಿರ ಯೋಚನೆ ಮಾಡು' ಎಂದರು.

ಚ್ಯವನರ ಮಾತನ್ನು ಕೇಳಿ ನಹುಷನಿಗೆ ದುಃಖವುಂಟಾಯಿತು. ಮಂತ್ರಿ ಪುರೋಹಿತರಿಂದ ಕೂಡಿಕೊಂಡು ಯೋಚನೆ ಮಾಡಿದನು. ಅಲ್ಲಿ ಕಾಡಿನಲ್ಲಿ ಇರುತ್ತಿದ್ದ ಹಣ್ಣುಗೆಡ್ಡೆಗಳನ್ನು ತಿನ್ನುತ್ತಿದ್ದ ಗೋವಿನಲ್ಲಿ ಹುಟ್ಟಿದ್ದ ಒಬ್ಬ ಮುನಿಗಳು ಇದ್ದರು. ಅವರು ನಹುಷನೊಡನೆ 'ಆ ಚ್ಯವನರು ಬೇಗನೇ ಸಂತೋಷವನ್ನು ಹೊಂದುವಂತೆ ಮಾಡುವೆನು. ನಾನು ತಮಾಷೆ ಮಾತಾಡುವಾಗಲೂ (ಗೇಲಿ ಮಾತಾಡುವಾಗಲೂ) ಸುಳ್ಳು ಹೇಳುವವನಲ್ಲ. ನಾನು ನಿನ್ನ ಹತ್ತಿರ ಹೇಳಿದಂತೆ ಸಂದೇಹವಿಲ್ಲದೆ ಮಾಡಬೇಕು' ಎಂದು ಹೇಳಿದರು.

ನಹುಷನು 'ಪೂಜ್ಯರೇ! ಅವರ ಸರಿಯಾದ ಬೆಲೆಯನ್ನು ಹೇಳಿರಿ. ನನ್ನನ್ನು ನನ್ನ ದೇಶವನ್ನೂ ನನ್ನ ವಂಶವನ್ನೂ ರಕ್ಷಿಸಿರಿ. ಪೂಜ್ಯರಾದ ಚ್ಯವನರು ಕೋಪವುಳ್ಳವರಾದರೆ ಮೂರುಲೋಕಗಳನ್ನೂ ಸುಟ್ಟುಹಾಕುವರು. ಹೀಗಿರುವಾಗ ತಪೋಹೀನನಾದ ನನ್ನನ್ನು ಬಿಡುವರೇ!' ಎಂದು ಹೇಳಿದನು.

ನಹುಷನ ಮಾತನ್ನು ಕೇಳಿ ಆ ಮುನಿಗಳು ಎಲ್ಲಾ ಮಂತ್ರಿಗಳನ್ನೂ ಆ ರಾಜನನ್ನೂ ಸಂತೋಷಪಡಿಸುತ್ತಾ 'ಬ್ರಾಹ್ಮಣರು ಬೆಲೆ ರಹಿತರು. ಎಂದರೆ ಅವರ ಬೆಲೆಯು ಇಷ್ಟೇ ಎಂದು ಹೇಳಲಿಕ್ಕೆ ಆಗಲಾರದು. ಹಾಗೆಯೇ ಗೋವುಗಳ ಬೆಲೆಯೂ ಇರುವುದು' ಎಂದರು.

ನಹುಷರಾಜನು ಆ ಮುನಿಗಳ ಮಾತನ್ನು ಕೇಳಿ ಬಹಳ ಸಂತೋಷವುಳ್ಳವನಾಗಿ ಮಂತ್ರಿಪುರೋಹಿತರಿಂದ ಕೂಡಿಕೊಂಡು ಚ್ಯವನರ ಸಮೀಪಕ್ಕೆ ಹೋಗಿ 'ಪೂಜ್ಯರೇ! ಏಳಿರಿ. ನಿಮ್ಮನ್ನು ಗೋವಿನಿಂದ ಕ್ರಯಕ್ಕೆ ಹೊಂದುವೆನು. ನಿಮಗೆ ದನವೇ ಕ್ರಯವು' ಎಂದನು.

ಆಗ ಚ್ಯವನರು 'ರಾಜನೇ! ನಾನು ಏಳುವೆನು. ನನಗೆ ಸರಿಯಾದ ಕ್ರಯವನ್ನು ಹೇಳಿದಿ. ಗೋವಿಗೆ ಸಮಾನವಾದ ಧನವು ಯಾವುದೂ ಇಲ್ಲ. ಗೋವುಗಳ ಕೀರ್ತನ ಮಾಡುವುದು, ಶ್ರವಣ, ದರ್ಶನ, ದಾನ ಎಲ್ಲವೂ ಪ್ರಶಸ್ತವಾದದ್ದು. ಎಲ್ಲವೂ

ಪಾಪಪರಿಹಾರಕವಾದದ್ದು. ಗೋವುಗಳ ಸ್ವರ್ಗಕ್ಕೆ ಕಾರಣಗಳು. ಗೋವುಗಳಿಂದ ಸಮಸ್ತ ಅಭೀಷ್ಟವೂ ಉಂಟಾಗುವುದು' ಎಂದರು.

ಆಗ ಮೀನು ಹಿಡಿಯುವವರು'ಪೂಜ್ಯರೇ! ನಮ್ಮನ್ನು ನೋಡಿ ನಮ್ಮೊಡನೆ ಮಾತಾಡಿದಿರಿ. ಸಜ್ಜನರು ಒಟ್ಟಿಗೆ ಏಳು ಹೆಜ್ಜೆ ನಡೆದರೆ ಮೈತ್ರಿಯ ಏರ್ಪಡುವುದು ಎನ್ನುವರು. ನೀವು ನಮಗೂ ಅನುಗ್ರಹ ಮಾಡಬೇಕು. ನಮ್ಮ ಅನುಗ್ರಹಕ್ಕಾಗಿ ಈ ಗೋವನ್ನು ನೀವು ಸ್ವೀಕರಿಸಬೇಕು' ಎಂದು ಹೇಳಿದರು.

ಚ್ಯವನರು 'ನಿಮ್ಮ ಗೋವನ್ನು ನಾನು ಸ್ವೀಕರಿಸುವೆನು. ನೀವು ಪಾಪ ರಹಿತರಾಗಿರುವಿರಿ. ಬೇಗನೆ ಈ ಮೀನುಗಳೊಡನೆ ಸ್ವರ್ಗಕ್ಕೆ ಹೋಗಿರಿ' ಎಂದರು.

ತರುವಾಯ ಆ ಮುನಿಗಳ ಪ್ರಭಾವದಿಂದ ಮೀನು ಹಿಡಿಯುವವರೆಲ್ಲರೂ ಮೀನುಗಳ ಸಹಿತವಾಗಿ ಸ್ವರ್ಗಕ್ಕೆ ಹೋದರು. ನಹುಷರಾಜನು ಆ ಮೀನು ಹಿಡಿಯುವವರೂ ಮೀನುಗಳೂ ಸ್ವರ್ಗಕ್ಕೆ ಹೋಗುವುದನ್ನು ನೋಡಿದನು. ಅನಂತರದಲ್ಲಿ ಆ ಗೋವಿನಲ್ಲಿ ಹುಟ್ಟಿದ ಮುನಿಗಳೂ ಚ್ಯವನರೂ ರಾಜನೊಡನೆ ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಹೇಳಿದರು. ನಹುಷರಾಜನು ನಾನು ಧರ್ಮದಲ್ಲಿಯೇ ಇರುವಂತೆ ವರವನ್ನು ಕೊಡಬೇಕೆಂದು ಕೇಳಿಕೊಂಡನು. ಹಾಗೆಯೇ ಆಗಲಿ ಎಂದು ಅವರಿಬ್ಬರೂ ಹೇಳಲು ಅವರಿಬ್ಬರನ್ನು ಪೂಜಿಸಿದನು. ಚ್ಯವನರು ನೀರಿನಲ್ಲಿ ವಾಸಮಾಡುವ ತನ್ನ ದೀಕ್ಷೆಯನ್ನು ಮುಗಿಸಿಕೊಂಡು ತನ್ನ ಆಶ್ರಮಕ್ಕೆ ಹೋದರು. ಗೋವಿನಲ್ಲಿ ಹುಟ್ಟಿದ ಮುನಿಗಳು ಆಶ್ರಮಕ್ಕೆ ಹೋದರು. ಮೀನು ಹಿಡಿಯುವವರೂ ಮೀನುಗಳೂ ಸ್ವರ್ಗಕ್ಕೆ ಹೋದವು. ನಹುಷನೂ ವರವನ್ನು ಪಡೆದು ತನ್ನ ನಗರವನ್ನು ಪ್ರವೇಶಿಸಿದನು.



# ಬ್ರಾಹ್ಮಣ ಮಾಹಾತ್ಮ್ಯ [1]

ಮಾರ್ಕಂಡೇಯರು ಪಾಂಡವರ ಹತ್ತಿರ ಹೇಳಿದರು. ಪೂರ್ವದಲ್ಲಿ ಹೈಹಯವಂಶದಲ್ಲಿ ಹುಟ್ಟಿದ ಸರ್ವಶಾಸ್ತ್ರದಲ್ಲಿಯೂ ಪಂಡಿತನಾದ ಮಹಾತೇಜಸ್ವಿ ಯಾದ ಯೌವನವುಳ್ಳವನಾದ ಸುಂದರನಾದ ಬಲಿಷ್ಠನಾದ ಒಬ್ಬ ರಾಜನು ಕಾಡಿನಲ್ಲಿ ಮೃಗಬೇಟೆಯನ್ನು ಆಡುತ್ತಾ ಸಂಚರಿಸಿದನು. ಹೀಗೆಯೇ ಅರಣ್ಯದಲ್ಲಿ ಸಂಚರಿಸುತ್ತಾ

1. ಮ.ಭಾ.ವ.ಪ. ಅ-184

ಆ ರಾಜನು ಹುಲ್ಲುಗಳೂ ಪೊದರುಗಳೂ ಬೆಳದಿರುವ ಸ್ಥಳದಲ್ಲಿ ಹತ್ತಿರದಲ್ಲೇ ಕೃಷ್ಣಾಜಿನವನ್ನು ಹೊದ್ದುಕೊಂಡಿದ್ದ ಒಬ್ಬ ಮುನಿಯನ್ನು ಕಂಡನು. ರಾಜನು ಮೃಗವೆಂದು ತಿಳಿದುಕೊಂಡು ಅವನನ್ನು ಕೊಂದುಬಿಟ್ಟನು. ಆ ರಾಜಕುಮಾರನು ಈ ಕಾರ್ಯವನ್ನು ಮಾಡಿ ಬಹಳವಾಗಿ ದುಃಖವನ್ನು ಹೊಂದಿ ಹೈಹಯವಂಶದ ಪ್ರಸಿದ್ಧರಾದ ರಾಜರ ಬಳಿಗೆ ಹೋಗಿ ಅವರೊಡನೆ ನಡೆದ ವಿಷಯವನ್ನೆಲ್ಲಾ ಹೇಳಿದನು. ಹಣ್ಣುಗಳನ್ನೂ ಗೆಣಸುಗಳನ್ನೂ ತಿಂದು ತಪಸ್ಸು ಮಾಡುತ್ತಿದ್ದ ಮುನಿಯನ್ನು ಆ ರಾಜಕುಮಾರನು ಕೊಂದಿರುವುದನ್ನು ಎಲ್ಲರೂ ದೈನ್ಯಯುಕ್ತವಾದ ಮನಸ್ಸುಳ್ಳವರಾಗಿ ಕಾಡಿಗೆ ಬಂದು ಅಲ್ಲಿ ಬಿದ್ದಿದ್ದ ಮುನಿಯ ದೇಹವನ್ನು ನೋಡಿ, ಇದು ಯಾವ ಮುನಿಯ ಮಗನ ದೇಹವು ಎಂದು ವಿಚಾರಿಸುತ್ತಾ ತೃಕ್ಷ ಎಂದ ಹೆಸರುಳ್ಳ ಕಶ್ಯಪರ ಮಗನಾದ ಅರಿಷ್ಟನೇಮಿ ಎಂಬ ಋಷಿಗಳ ಆಶ್ರಮಕ್ಕೆ ಹೋದರು. ಉತ್ತಮವಾದ ವ್ರತದಲ್ಲಿ ಆಸಕ್ತರಾದ ಆ ಮುನಿಗಳಿಗೆ ನಮಸ್ಕಾರ ಮಾಡಿ ಎಲ್ಲರೂ ನಿಂತುಕೊಂಡರು.

ಮುನಿಗಳು ಅವರಿಗೆಲ್ಲಾ ಪೂಜೆಯನ್ನು ಎಂದರೆ ಸತ್ಕಾರವನ್ನು ಮಾಡಿದರು. ಅದಕ್ಕೆ ಅವರೆಲ್ಲರೂ 'ಮಹಾಮುನಿಗಳೇ! ನಾವು ಸತ್ಕಾರಕ್ಕೆ ಅರ್ಹರಲ್ಲ. ನಾವು ಕರ್ಮದೋಷದಿಂದ ಬ್ರಹ್ಮಹತ್ಯೆಯನ್ನು ಮಾಡಿರುವೆವು' ಎಂದು ಹೇಳಿದರು. ಅದಕ್ಕೆ ಅರಿಷ್ಟನೇಮಿ ಋಷಿಗಳು 'ಹೇಗೆ ಬ್ರಾಹ್ಮಣನನ್ನು ಕೊಂದಿರಿ. ಆ ಬ್ರಾಹ್ಮಣನು ಎಲ್ಲಿ? ತೋರಿಸಿರಿ. ನನ್ನ ತಪಸ್ಸಿನ ಸಾಮರ್ಥ್ಯವನ್ನು ನೋಡಿರಿ' ಎಂದರು. ಅವರು ನಡೆದ ವಿಷಯವನ್ನೆಲ್ಲಾ ತಿಳಿಸಿ, ತಾವು ನೋಡಿದ ಸ್ಥಳಕ್ಕೆ ಹೋಗಲು ಅಲ್ಲಿ ಆ ಮುನಿಯ ದೇಹವು ಇರಲಿಲ್ಲ. ಅವರು ಅಲ್ಲಿ ಹುಡುಕಿ ಹುಡುಕಿ ಕಾಣದೆ ನಾಚಿಕೆಉಳ್ಳವರಾದರು.

ಆಗ ಅರಿಷ್ಟನೇಮಿಋಷಿಗಳು 'ನೀವು ಕೊಂದಿರುವ ಮುನಿಯು ನನ್ನ ಮಗನಾಗಿರಬಹುದು. ಇವನೋ ತಪೋಬಲವುಳ್ಳ ನನ್ನ ಮಗನು' ಎಂದರು. ಆ ಮುನಿಪುತ್ರನು ಬದುಕಿರುವುದನ್ನು ನೋಡಿ ಅವರೆಲ್ಲರೂ ಆಶ್ಚರ್ಯವನ್ನು ಹೊಂದಿ ದರು. 'ಬಹು ಆಶ್ಚರ್ಯ ವಾಗಿದೆಯಲ್ಲಾ! ಈಗಲೇ ಮೃತನಾದ ಇವನ ದೇಹವನ್ನು ನಾವು ನೋಡಿದೆವಲ್ಲಾ! ಇವನು ಹೇಗೆ ಬದುಕಿದನು? ಇದೇನು ತಪಸ್ಸಿನ ಮಹಿಮೆಯೋ? ನಮಗೆ ಹೇಳಬೇಕು ಎಂದು ಎಲ್ಲರೂ ಹೇಳಿಕೊಂಡರು.

ಅದಕ್ಕೆ ಅರಿಷ್ಟನೇಮಿ ಮುನಿಗಳು 'ರಾಜರೇ! ಮೃತ್ಯುವು ನಮ್ಮ ಬಳಿ ಬರಲಿಕ್ಕೆ ಸಮರ್ಥ ವಾಗುವುದಿಲ್ಲ. ಅದಕ್ಕೆ ಕಾರಣವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ನಾವು ಶುದ್ಧ ಆಚಾರವುಳ್ಳವರಾಗಿರುತ್ತೇವೆ. ಸೋಮಾರಿಗಳಾಗಿರುವುದಿಲ್ಲ. ದೇವತೆಗಳ

ಧ್ಯಾನಮಾಡುತ್ತೇವೆ. ಶುದ್ಧವಾದ ಆಹಾರವನ್ನು ತೆಗೆದುಕೊಳ್ಳುತ್ತೇವೆ. ಶುದ್ಧವಾದ ಸ್ಥಳದಲ್ಲಿ ಇರುತ್ತೇವೆ. ಬ್ರಹ್ಮಚರ್ಯ ವ್ರತವುಳ್ಳವರಾಗಿರುತ್ತೇವೆ. ನಾವು ಸತ್ಯವನ್ನೇ ತಿಳಿದವರು. ಸುಳ್ಳನ್ನು ತಿಳಿದವರಲ್ಲ. ನಮ್ಮ ಧರ್ಮವನ್ನು ನಾವು ಮಾಡುವೆವು. ಬ್ರಾಹ್ಮಣರಿಗೆ ಕ್ಷೇಮವನ್ನೇ ಹೇಳುತ್ತೇವೆ. ಅವರ ಉತ್ತಮ ಚರಿತ್ರೆಯನ್ನು ಹೇಳುತ್ತಾ ಇರುತ್ತೇವೆ. ಅತಿಥಿಗಳಿಗೆ ಅನ್ನಪಾನವನ್ನು ಹಾಕುತ್ತೇವೆ. ಭೃತ್ಯರಿಗೂ ಅನ್ನವನ್ನು ಹಾಕುತ್ತೇವೆ. ಎಲ್ಲರಿಗೂ ಹಾಕಿ ಉಳಿದ ಅನ್ನವನ್ನು ಊಟಮಾಡುವೆವು. ಕ್ಷಮಾಗುಣ ಉಳ್ಳವರಾಗಿರುವೆವು. ಇಂದ್ರಿಯನಿಗ್ರಹ ಉಳ್ಳವರಾಗಿರುವೆವು. ತೀರ್ಥಯಾತ್ರಾ ಮಾಡುವೆವು. ದಾನವನ್ನು ಮಾಡುವೆವು. ಪವಿತ್ರದೇಶದಲ್ಲಿ ವಾಸಮಾಡುವೆವು. ಇದೆಲ್ಲಾ ನಿಮ್ಮ ಹತ್ತಿರ ಸ್ವಲ್ಪ ಮಾತ್ರ ಹೇಳಿದ್ದು. ನೀವು ಹೊರಟುಹೋಗಿರಿ. ನಿಮಗೆ ಬ್ರಹ್ಮಹತ್ಯೆಯಿಂದ ಉಂಟಾದ ಪಾಪವಿಲ್ಲ' ಎಂದು ಹೇಳಿದರು. ಅದನ್ನು ಕೇಳಿ ಹಾಗೆಯೇ ಆಗಲಿ ಎಂದು ಹೇಳಿ ಅವರೆಲ್ಲರೂ ಮುನಿಗಳಿಗೆ ನಮಸ್ಕರಿಸಿ ತಮ್ಮ ದೇಶಕ್ಕೆ ಹೋದರು.



## ಬ್ರಾಹ್ಮಣರ ಮಹತ್ವವು [1]

ಕುರುಕ್ಷೇತ್ರದಲ್ಲಿ ಬಾಣದ ಮಂಚದಲ್ಲಿ ಮಲಗಿರುವ ಭೀಷ್ಮಾಚಾರ್ಯರೊಡನೆ ಧರ್ಮರಾಜನು 'ತಾತ! ಬ್ರಾಹ್ಮಣರಿಗೆ ಒಂದು ವಸ್ತುವನ್ನು ಮೊದಲು ಕೊಡುತ್ತೇನೆ ಎಂದು ಪ್ರತಿಜ್ಞಾಮಾಡಿ ಆಮೇಲೆ ಕೊಡದೆ ಇದ್ದವರಿಗೆ ಏನಾಗುವುದು?' ಎಂದು ಕೇಳಿದನು.

ಅದಕ್ಕೆ ಭೀಷ್ಮಾಚಾರ್ಯರು 'ಧರ್ಮರಾಜ! ಯಾವಾತನು ಬ್ರಾಹ್ಮಣರಿಗೆ ಸ್ವಲ್ಪವನ್ನಾಗಲೀ ಅಧಿಕವನ್ನಾಗಲೀ ಕೊಡುತ್ತೇನೆ ಎಂದು ಪ್ರತಿಜ್ಞಾಮಾಡಿ ಕೊಡದೆ ಇದ್ದರೆ ಆ ಪುರುಷನು ಆಸೆಪಟ್ಟಿದ್ದೆಲ್ಲಾ ವ್ಯರ್ಥವಾಗುತ್ತದೆ. ಅವನು ಹುಟ್ಟಿದ ದಿವಸವನ್ನು ಆರಂಭಿಸಿ ಸಾಯುವ ದಿವಸದವರೆಗೆ ಮಾಡಿದ ಪುಣ್ಯವೆಲ್ಲವೂ ವ್ಯರ್ಥವಾಗುವುದು. ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುವರು.

ಇಬ್ಬರು ಪುರುಷರು ಪರಸ್ಪರ ಮಿತ್ರರಾಗಿದ್ದರು. ಅವರಲ್ಲಿ ಒಬ್ಬನು ಕಪಿಯಾಗಿಯೂ ಒಬ್ಬನು ನರಿಯಾಗಿಯೂ ಹುಟ್ಟಿದನು. ಒಂದುದಿನದಲ್ಲಿ

1. ಮ.ಭಾ.ಅ.ಪ. ಅ-9.

ಸ್ಮಶಾನದಲ್ಲಿ ಹೆಣಗಳನ್ನು ತಿನ್ನುತ್ತಿದ್ದ ಆ ನರಿಯನ್ನು ನೋಡಿ ತನ್ನ ಪೂರ್ವಜನ್ಮವನ್ನು ಸ್ಮರಿಸಿಕೊಂಡು 'ನರಿಯೇ! ನೀನು ಸ್ಮಶಾನದಲ್ಲಿ ಕೊಳೆತುಹೋಗಿರುವ ನಿಂದ್ಯಗಳಾದ ಹೆಣಗಳನ್ನು ತಿನ್ನುತ್ತಿರುವೆಯಲ್ಲಾ! ನೀನು ಪೂರ್ವಜನ್ಮದಲ್ಲಿ ಯಾವ ಪಾಪವನ್ನು ಮಾಡಿರುವಿ?' ಎಂದು ಕೇಳಿತು. ಅದಕ್ಕೆ ನರಿಯು 'ನಾನು ಬ್ರಾಹ್ಮಣರಿಗೆ ಕೊಡುತ್ತೇನೆ' ಎಂದು ಹೇಳಿ ಆಮೇಲೆ ಆ ವಸ್ತುವನ್ನು ಕೊಡಲಿಲ್ಲ. ಆ ಪಾಪದಿಂದ ಈ ರೀತಿಯಾಗಿ ನರಿಯಾಗಿ ಹುಟ್ಟಿ ಹಸಿವೆಯಾದಾಗ ಇಂತಹ ಅಯೋಗ್ಯ ಆಹಾರವನ್ನು ತಿನ್ನುತ್ತಿರುವೆನು. ನೀನು ಕಪಿಯಾಗಿ ಹುಟ್ಟಲಿಕ್ಕೆ ಏನು ಪಾಪವನ್ನು ಮಾಡಿರುವಿ?' ಎಂದಿತು.

ಅದಕ್ಕೆ ಕಪಿಯು 'ನಾನು ಬ್ರಾಹ್ಮಣರ ಹಣ್ಣುಗಳನ್ನು ಅಪಹಾರ ಮಾಡಿದೆನು. ಆದುದರಿಂದ ಕಪಿಯಾಗಿ ಹುಟ್ಟಿದೆನು. ಆದಕಾರಣ ಬ್ರಾಹ್ಮಣರ ವಸ್ತುವನ್ನು ಅಪಹರಿಸಬಾರದು' ಎಂದು ಹೇಳಿತು.

ಈರೀತಿಯಾಗಿ ಕಪಿನರಿಗಳ ಕಥೆಯನ್ನು ಹೇಳಿ ಭೀಷ್ಮಾಚಾರ್ಯರು 'ಧರ್ಮರಾಜನೇ! ಶ್ರೀಕೃಷ್ಣಪರಮಾತ್ಮನೂ ಹೀಗೆ ಹೇಳಿರುವನು. ಬ್ರಾಹ್ಮಣರ ಹಣವನ್ನು ಅಪಹರಿಸಬಾರದು. ಬ್ರಾಹ್ಮಣರು ಕೋಪಿಸಿಕೊಂಡರೂ ಕ್ಷಮಿಸಬೇಕು. ಬ್ರಾಹ್ಮಣರು ಚಿಕ್ಕವರಾಗಿದ್ದರೂ ದರಿದ್ರರಾಗಿದ್ದರೂ ಲೋಭಿಗಳಾಗಿದ್ದರೂ ಅವರನ್ನು ಅವಮಾನ ಮಾಡಬಾರದು. ಬ್ರಾಹ್ಮಣರಿಗೆ ಒಂದು ಕೊಡುತ್ತೇನೆ ಎಂದು ಹೇಳಿದ ಮೇಲೆ ಕೊಟ್ಟೇ ಕೊಡಬೇಕು. ಕೇವಲ ಆಸೆ ಹುಟ್ಟಿಸಬಾರದು. ಬ್ರಾಹ್ಮಣನಿಗೆ ಮೊದಲು ಕೊಡುತ್ತೇನೆ ಎಂದು ಆಸೆ ಹುಟ್ಟಿಸಿಬಿಟ್ಟರೆ ಅವನು ಉರಿಯುವ ಬೆಂಕಿಗೆ ಸಮಾನನು. ಅವನು ಮೊದಲಿನ ಆಸೆಯಿಂದ ಕೋಪಿಸಿಕೊಂಡು ನೋಡಿದರೆ ಸುಟ್ಟು ಹಾಕುವನು. ಅವನಿಗೆ ಪೂರ್ವದಲ್ಲಿ ಕೊಡುತ್ತೇನೆ ಎಂದು ಹೇಳಿದ್ದನ್ನು ಕೊಟ್ಟು ಸಂತೋಷಪಡಿಸಿದರೆ ಅವನೇ ರೋಗಪರಿಹಾರಕ ಔಷಧದಂತೆ ಹಿತಕ್ಕೆ ಕಾರಣನಾಗುವನು. ಬ್ರಾಹ್ಮಣರಿಗೆ ದಾನ ಮಾಡುವುದರಿಂದಲೇ ಸರ್ವಶ್ರೇಯಸ್ಸೂ ಉಂಟಾಗುವುದು. ಸ್ವರ್ಗವೂ ಉಂಟಾಗುವುದು. ದೇವತೆಗಳೂ ಪಿತೃಗಳೂ ಎಲ್ಲರೂ ಸಂತೋಷವನ್ನು ಹೊಂದು ವರು. ಬ್ರಾಹ್ಮಣರು ಸತ್ಪಾತ್ರರು. ಅವರನ್ನು ಸತ್ಕರಿಸದೆ ಇರಲೇಬಾರದು' ಎಂದು ಹೇಳಿದರು.



# ಬ್ರಾಹ್ಮಣರ ಶಕ್ತಿ

ವಾಯುದೇವರು ಕಾರ್ತವೀರ್ಯಾರ್ಜುನನೊಡನೆ ಹೇಳಿದರು. 'ಪೂರ್ವದಲ್ಲಿ ಕಪ ಎನ್ನುವವರು ಸ್ವರ್ಗಲೋಕವನ್ನು ಅಪಹರಿಸಿದರು. ಆಗ ದೇವತೆಗಳೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ದೂರಿಕೊಂಡರು. ಅದಕ್ಕೆ ಬ್ರಹ್ಮದೇವರು 'ಬ್ರಾಹ್ಮಣ ರನ್ನು ಆಶ್ರಯಿಸಿರಿ' ಎಂದು ಹೇಳಿದರು. ಆಗ ದೇವತೆಗಳು ಬ್ರಾಹ್ಮಣರನ್ನು ಆಶ್ರಯಿಸಿ ದರು. ಅದಕ್ಕೆ ಬ್ರಾಹ್ಮಣರು ನಾವು ಯಾರನ್ನು ಜಯಿಸಬೇಕು ಎಂದು ಕೇಳಿದರು. ದೇವತೆಗಳು ಕಪರನ್ನು ಜಯಿಸಬೇಕು ಎಂದರು. ಭೂಮಿಯಲ್ಲಿರುವ ಅವರನ್ನು ಜಯಿಸುವೆವು ಎಂದು ದೇವತೆಗಳೊಡನೆ ಹೇಳಿದರು. ತರುವಾಯ ಬ್ರಾಹ್ಮಣರು ಕಪರನ್ನು ನಾಶಮಾಡಲಿಕ್ಕೆ ಕರ್ಮವನ್ನು ಆರಂಭಿಸಿದರು. ಇದನ್ನು ಕೇಳಿ ಕಪರು ಬ್ರಾಹ್ಮಣರಿದ್ದಲ್ಲಿಗೆ ಧನೀ ಎಂಬ ದೂತನನ್ನು ಕಳುಹಿಸಿದರು. ಆ ಧನಿಯು ಬಂದು ಬ್ರಾಹ್ಮಣರೊಡನೆ ಕಪರು ಹೇಳಿ ಕಳುಹಿಸಿದ ಮಾತುಗಳನ್ನು ಹೇಳಿದನು. 'ಕಪರು ನಿಮಗೆಲ್ಲಾ ಸಮಾನರೇ. ಅವರಿಗೆ ನೀವೇಕೆ ದ್ರೋಹವನ್ನು ಮಾಡುವಿರಿ? ಅವರೆಲ್ಲರೂ ವೇದಗಳನ್ನು ತಿಳಿದವರು. ಎಲ್ಲರೂ ಯಾಗವನ್ನು ಮಾಡಿದವರು. ಸತ್ಯವ್ರತವುಳ್ಳವರು. ಮಹರ್ಷಿಗಳಿಗೆ ಸಮಾನರು. ಅವರು ಸಂಪತ್ತು ಉಳ್ಳವರಾಗಿ ದ್ದಾರೆ. ವ್ಯರ್ಥವಾಗಿ ಸ್ತ್ರೀಯರನ್ನು ಹೊಂದುವುದಿಲ್ಲ. ವ್ಯರ್ಥವಾಗಿ ಮಾಂಸವನ್ನು ತಿನ್ನುವುದಿಲ್ಲ. ಉರಿಯುವ ಬೆಂಕಿಯಲ್ಲೇ ಹೋಮವನ್ನು ಮಾಡುತ್ತಾರೆ. ಗುರುಗಳ ಮಾತಿನಂತೆ ನಡೆಯುತ್ತಾರೆ. ಎಲ್ಲರೂ ಮನೋನಿಗ್ರಹವುಳ್ಳವರು. ರಜಸ್ವಲೆಯನ್ನು ಸೇವಿಸುವುದಿಲ್ಲ ಸ್ವರ್ಗವನ್ನು ಹೊಂದುತ್ತಾರೆ. ಶುಭಕರ್ಮವನ್ನು ಮಾಡುತ್ತಾರೆ. ಗರ್ಭಿಣಿಯರೂ ಮುದುಕರೂ ಊಟ ಮಾಡದ ಮೊದಲು ತಾವು ಭೋಜನವನ್ನು ಮಾಡಲಾರರು. ಬೆಳಿಗ್ಗೆ ಪಗಡೆ ಆಟವನ್ನು ಆಡಲಾರರು. ಹಗಲಲ್ಲಿ ಮಲಗಲಾರರು. ಹೀಗೆಲ್ಲಾ ಬಹುಗುಣಯುಕ್ತರಾದ ಪ್ರಯುಕ್ತ ಅವರನ್ನು ಹೇಗೆ ಜಯಿಸುವಿರಿ? ನೀವು ಹೊರಟುಹೋಗಿರಿ. ಹಾಗಾದರೆ ನಿಮಗೆ ಸುಖವಾಗುವುದು' ಎಂದು ಹೇಳಿದನು.

ಅದಕ್ಕೆ ಬ್ರಾಹ್ಮಣರು 'ನಾವು ಕಪರನ್ನು ಜಯಿಸುವೆವು. ದೇವತೆಗಳು ನಮಗೆ ಪ್ರಿಯರು. ಆದುದರಿಂದ ಕಪರು ನಮಗೆ ವಧ್ಯರು. ಧನಿಯೇ! ನೀನು ಬಂದಂತೆಯೇ ಹೊರಟುಹೋಗು' ಎಂದು ಹೇಳಿದರು. ಧನಿಯು ಹೋಗಿ ಕಪರೊಡನೆ ಹಾಗೆಯೇ ಹೇಳಿದನು. ನಿಮಗೆ ಬ್ರಾಹ್ಮಣರು ಪ್ರಿಯವನ್ನು ಮಾಡಲಾರರು ಎಂದನು. ಅದನ್ನು ಕೇಳಿ ಕಪರೆಲ್ಲರೂ ಅಸ್ತ್ರಗಳನ್ನು ಹಿಡಿದುಕೊಂಡು ಬ್ರಾಹ್ಮಣರಿದ್ದಲ್ಲಿಗೆ ಓಡಿಬಂದರು. ಎತ್ತರವಾದ ಧ್ವಜಗಳಿಂದ ಸಹಿತವಾಗಿ ಬಂದಿರುವ ಕಪರನ್ನು ಬ್ರಾಹ್ಮಣರನ್ನು ನೋಡಿ

ಅವರ ಪ್ರಾಣಗಳನ್ನು ಪರಿಹರಿಸುವ ಅಗ್ನಿಗಳನ್ನು ಬಿಟ್ಟರು. ಬ್ರಾಹ್ಮಣರು ಕಳುಹಿಸಿದ ಅಗ್ನಿಗಳು ಕಪರನ್ನು ಸಂಹರಿಸಿ ಆಕಾಶದಲ್ಲಿ ಮೇಘಗಳಂತೆ ಪ್ರಕಾಶಿಸಿದವು. ದೇವತೆಗಳೆಲ್ಲರೂ ಸೇರಿ ದಾನವರನ್ನು ಸಂಹರಿಸಿದರು. ಕಪರು ಬ್ರಾಹ್ಮಣರಿಂದ ಮೃತರಾದದ್ದನ್ನು ತಿಳಿಯಲಿಲ್ಲ. ತರುವಾಯ ಮಹಾತೇಜಸ್ವಿಯಾದ ನಾರದರು ಬಂದು ದೇವತೆಗಳೊಡನೆ ಮಹಾನುಭಾವರಾದ ಬ್ರಾಹ್ಮಣರು ಕಪರನ್ನು ಸಂಹರಿಸಿದ ವಿಷಯ ವನ್ನು ಹೇಳಿದರು. ನಾರದರ ಮಾತನ್ನು ಕೇಳಿ ದೇವತೆಗಳು ಸಂತೋಷವುಳ್ಳವರಾಗಿ ಬ್ರಾಹ್ಮಣರನ್ನು ಹೊಗಳಿದರು. ದೇವತೆಗಳಿಗೆ ತೇಜಸ್ಸು ಸಾಮರ್ಥ್ಯವೂ ಹೆಚ್ಚಿತು. ಅವರನ್ನು ಮೂರುಲೋಕಗಳಲ್ಲಿಯೂ ಅಮರರೆಂದು ಪೂಜಿಸಿದರು. ಈಪ್ರಕಾರ ವಾಗಿ ಕ್ಷತ್ರಿಯನೊಬ್ಬನನ್ನು ಹೇಳು ನೋಡೋಣ'' ಎಂದು ವಾಯುದೇವರು ಹೇಳಲು ಕಾರ್ತವೀರ್ಯಾರ್ಜುನನು ಬ್ರಾಹ್ಮಣರು ಶ್ರೇಷ್ಠರೆಂಬುದನ್ನು ಅಂಗೀಕರಿಸಿ ದನು.



## ಬ್ರಾಹ್ಮಣರ ವಸ್ತುವನ್ನು ಅಪಹರಿಸಬಾರದು [1]

ಭೀಷ್ಮಾಚಾರ್ಯರು ಧರ್ಮರಾಜನೊಡನೆ ಹೇಳಿದರು. 'ಧರ್ಮರಾಜ! ಒಬ್ಬ ರಾಜನು ಒಬ್ಬ ಚಂಡಾಲನನ್ನು ನೋಡಿ 'ಎಲೋ ಚಂಡಾಲನೇ! ನೀನು ಮುದುಕನಾಗಿರುವಿ. ಆದರೆ ಬಾಲಕರಂತೆ ಕಾರ್ಯವನ್ನು ಮಾಡುತ್ತಿರುವಿ. ನಾಯಿಯ ಕತ್ತೆಯ ಧೂಳಿಗಳನ್ನು ಅಂದರೆ ನಾಯಿಯು ಮತ್ತೂ ಕತ್ತೆಗಳೂ ಹೋಗುವಾಗ ಏಳು ಧೂಳಿಯನ್ನು ಸ್ವೀಕರಿಸುವಿ. ದನಗಳು ಹೋಗುವ ಸಮಯದಲ್ಲಿ ಮಾತ್ರ ಮೈಗೆ ದನಗಳ ಕೆಚ್ಚಲುಗಳಿಂದ (ಮಡಿ) ಒಂದಿಷ್ಟು ಹಾಲಿನ ಬಿಂದುವ ಸಿಡಿದರೆ ಅದನ್ನು ಕೂಡಲೇ ನೀರು ಹಾಕಿ ತೊಳೆದುಕೊಳ್ಳುವಿಯಲ್ಲಾ' ಎಂದು ಕೇಳಿದನು.

ಅದಕ್ಕೆ ಚಂಡಾಲನು 'ಪೂರ್ವದಲ್ಲಿ ಒಂದು ಸ್ಥಳದಲ್ಲಿ ಬ್ರಾಹ್ಮಣರು ಗೋವುಗಳು ಹೋಗುವಾಗ ಅಲ್ಲಿ ಇದ್ದ ಸೋಮಲತೆಯಲ್ಲಿ ಆ ಗೋವುಗಳ ಹಾಲು ಸಿಡಿಯಿತು. ತರುವಾಯ ಒಬ್ಬ ರಾಜನು ಆ ಸೋಮಲತೆಯನ್ನು ತರಿಸಿ ಅದರಿಂದ ಸೋಮಯಾಗವನ್ನು ಮಾಡಿಸಿದನು. ಈರೀತಿ ಯಾಗ ಬ್ರಾಹ್ಮಣರ ದನಗಳ ಹಾಲು ಸಿಡಿದ ಆ ಸೋಮಲತೆಯ ರಸವನ್ನು ಯಾಗದಲ್ಲಿ ಬ್ರಾಹ್ಮಣರು ಋತ್ವಿಕ್ಕುಗಳು

1. ಮ.ಭಾ. ಅ.ಪ. ಅ-70 ಹಾಗೂ ಭಾಗವತದಲ್ಲೂ ಇಂತಹುದೇ ಕಥೆ ಇದೆ. (ನೃಗೋಪಾಖ್ಯಾನ)

ಪಾನಮಾಡಿದ ಕಾರಣ ಅವರೆಲ್ಲರೂ ನರಕವನ್ನು ಹೊಂದಿದರು. ದೀಕ್ಷಿತನಾದ ಆ ರಾಜನೂ ನರಕವನ್ನು ಹೊಂದಿದನು. ಈರೀತಿಯಾಗಿ ಬ್ರಾಹ್ಮಣರ ವಸ್ತುವಾದ ಆ ಸೋಮಲತೆಯಲ್ಲಿ ಸಿಡಿದ ಹಾಲನ್ನು ಸ್ವೀಕರಿಸಿದ ಪ್ರಯುಕ್ತ ರಾಜನೂ ಋತ್ವಿಕ್ಕುಗಳೂ ನರಕವನ್ನು ಹೊಂದಿದರು. ಮತ್ತೂ ತಮ್ಮ ಸಿಡಿದ ಹಾಲನ್ನು ಇನ್ನೊಬ್ಬರು ಪಾನಮಾಡಿದ ಕಾರಣ ಆ ದನಗಳೂ ಅವುಗಳನ್ನು ಸಂಬಂಧ ಮಾಡಿದ ಎತ್ತುಗಳೂ ಅವುಗಳಿಂದ ಹುಟ್ಟಿದ ಕರುಗಳೂ ಅವುಗಳ ಕರುಗಳೂ ಅಲ್ಪಾಯುಷ್ಯ ಉಳ್ಳವುಗಳಾದವು. ಆಗ ನಾನೂ ಅಲ್ಲಿ ಒಬ್ಬ ಬ್ರಹ್ಮಚಾರಿಯಾಗಿದ್ದೆನು. ನಾನು ಭಿಕ್ಷಾನ್ನವನ್ನು ಹಿಡಿದುಕೊಂಡು ಬರುತ್ತಿರುವಾಗ ನನ್ನ ಭಿಕ್ಷಾನ್ನದ ಮೇಲೆ ಬ್ರಾಹ್ಮಣರ ದನಗಳ ಹಾಲು ಸಿಡಿಯಿತು. ಆ ಅನ್ನವನ್ನು ಊಟದ ಪ್ರಯುಕ್ತ ನಾನೀಗ ಚಂಡಾಲ ನಾಗಿರುವೆನು. (ಆ ರಾಜನು ಮಹಾನರಕವನ್ನು ಹೊಂದಿದನು) ಆದುದರಿಂದ ಬ್ರಾಹ್ಮಣರ ವಸ್ತುವನ್ನು ಯಾವಾಗಲೂ ಅಪಹರಿಸಬಾರದು. ನೋಡಬಾರದು. ಇನ್ನೊಬ್ಬರು ಅಪಹರಿಸುವುದನ್ನೂ ಸರಿಯೆಂದು ಅಂಗೀಕರಿಸಬಾರದು. ಬ್ರಾಹ್ಮಣರ ಗೋವಿನ ಹಾಲು ಸಿಡಿದ ಭಿಕ್ಷಾನ್ನವನ್ನು ಭೋಜನ ಮಾಡಿಯೇ ಈ ರೀತಿಯಾಗಿ ಗತಿಯನ್ನು ಹೊಂದಿರುವೆನು. ಈರೀತಿಯಾಗಿ ತಿಳಿಯದೆ ದೋಷವು ಸಂಭವಿಸುವ ಕಾರಣದಿಂದಲೇ ಬ್ರಾಹ್ಮಣರು ಸೋಮಲತೆಯನ್ನು ಮಾರುವುದನ್ನು ನಿಷೇಧಿ ಸಿರುವರು. ಇಂತಹ ಎಂದರೆ ಬ್ರಾಹ್ಮಣರ ವಸ್ತುವಿನಿಂದ ಕೂಡಿರುವ ಸೋಮಲತೆ ಯನ್ನು ಮಾರುವರೋ ಯಾರು ಕ್ರಯಕ್ಕೆ ತೆಗದುಕೊಳ್ಳುವರೋ ಅವರು ಯಮಲೋಕಕ್ಕೆ ಹೋಗುವರು ಅಲ್ಲಿ ಮೂವತ್ತು ನರಕಗಳನ್ನು ಹೊಂದಿ ತನ್ನ ಮಲವನ್ನು ತಿನ್ನುವನು. ಬ್ರಾಹ್ಮಣರ ಸೊತ್ತನ್ನು ಅಪಹರಿಸಿದವನು ನರಕಗಳನ್ನು ಅನುಭವಿಸಿ ನಾಯಿಯ ಮಲವನ್ನು ತಿನ್ನುವನು.

ಮತ್ತೂ ನೀಚರ ಸೇವೆಯನ್ನು ಮಾಡುವುದು, ಅತ್ಯಂತ ಅಹಂಕಾರವನ್ನು ಹೊಂದುವುದು, ಮಿತ್ರರ ಪತ್ನಿಯರನ್ನು ಅಪಹರಿಸುವುದು ಎಂಬ ಈ ಮೂರು ಪಾಪಗಳನ್ನು ಧರ್ಮದೇವತೆಯು ತಕ್ಕಡಿಯಲ್ಲಿ ತೂಕಮಾಡಿದರು. ಆಗ ಅತ್ಯಂತ ಅಹಂಕಾರವನ್ನು ಹೊಂದುವುದೇ ಅಧಿಕವಾಯಿತು. ನಾನು ಅತಿ ಅಹಂಕಾರದ ಫಲವಾಗಿ ಕಪ್ಪಾಗಿ ಅಂಗಗಳು ಸರಿಯಾಗಿ ಇಲ್ಲವೆ ಕೃಶನಾಗಿರುವುದನ್ನು ನೋಡು. ನಾನು ಪೂರ್ವದಲ್ಲಿ ಹಣವಂತರ ಉತ್ತಮರಾದವರ ಕುಲದಲ್ಲಿ ಬ್ರಾಹ್ಮಣನಾಗಿ ಹುಟ್ಟಿರುವೆನು. ಉತ್ತಮಜ್ಞಾನಿಯಾಗಿದ್ದೆನು. ಆದರೂ ತಿಳಿದವನಾಗಿಯೇ ಅತಿ ಅಹಂಕಾರವೇ ಮೊದಲಾದ ಈ ದೋಷಗಳುಳ್ಳವನಾಗಿದ್ದೆನು. ಪ್ರಾಣಿಗಳ ಮೇಲೆ

ಯಾವಾಗಲೂ ಕೋಪವುಳ್ಳವನಾಗಿಯೇ ಅವುಗಳ ಕಟಿ ಪ್ರದೇಶದ ಮಾಂಸವನ್ನು ತಿನ್ನುತ್ತಿದ್ದೆನು. ನಾನು ಎಲ್ಲರಿಗೂ ತಿಳಿದವನಾಗಿದ್ದೆನು. ಆದರೂ ಬ್ರಾಹ್ಮಣರು ನನ್ನನ್ನು ಏನು ಮಾಡಲಿಕ್ಕೆ ಆಗುವುದು ಎಂದು ಅಹಂಕಾರದಿಂದ ನಿಷಿದ್ಧ ಕಾರ್ಯಗಳನ್ನು ಮಾಡುತ್ತಿದ್ದೆನು. ಹಣದಿಂದ ಮದವುಳ್ಳವನಾಗಿ ಬ್ರಾಹ್ಮಣರನ್ನು ಅವಮಾನ ಮಾಡಬೇಕೆಂಬ ಅಭಿಪ್ರಾಯದಿಂದಲೇ ಹಾಗೆ ಮಾಡುತ್ತಿದ್ದೆನು. ಇದರಿಂದ ನಾನು ಈಗ ಹೊಂದಿರುವ ಅವಸ್ಥೆಯನ್ನು ನೋಡು. ಭ್ರಮರಗಳು ಬಂದು ಕಟ್ಟಿದರೂ ನಾವು ಉಟ್ಟುಕೊಂಡಿರುವ ವಸ್ತ್ರಕ್ಕೆ ಬೆಂಕಿ ಹಿಡಿದರೂ ಎಷ್ಟು ದುಃಖವಾಗುವುದೋ ಅಷ್ಟು ದುಃಖವನ್ನು ಅನುಭವಿಸುತ್ತಿರುವೆನು. ಬ್ರಾಹ್ಮಣರಾದರೆ ವೇದಾಧ್ಯಯನಗಳಿಂದ ಮಹತ್ತಾದ ಪಾಪಗಳನ್ನು ಪರಿಹರಿಸಿಕೊಳ್ಳುವರು. ನಾನಾ ವಿಧಾನಗಳಿಂದ ತಮ್ಮನ್ನು ಉದ್ಧರಿಸಿಕೊಳ್ಳುವರು. ಸರ್ವತ್ರ ಸ್ನೇಹರಹಿತನಾಗಿ ಆಶ್ರಮಧರ್ಮವನ್ನು ಅನುಸರಿಸುತ್ತಿರುವ ಬ್ರಾಹ್ಮಣನು ಪಾಪಿಮಾಡಿದರೂ ಅವನನ್ನು ವೇದಗಳು ಉದ್ಧಾರ ಮಾಡುವುವು. ನಾನೋ ಪಾಪ ಯೋನಿಯಲ್ಲಿ ಚಂಡಾಲಜನ್ಮದಲ್ಲಿ ಹುಟ್ಟಿರುವೆನು. ಆರಿಂದ ನನ್ನ ಪಾಪವು ಹೇಗೆ ಪರಿಹೃತವಾಗಬಹುದೆಂಬ ನಿಶ್ಚಯವನ್ನು ಹೊಂದದೆ ಇದ್ದೇನೆ. ನನಗೇನೂ ಪೂರ್ವಪುಣ್ಯದಿಂದ ಪೂರ್ವಜನ್ಮದ ಸ್ಮರಣೆಯುಂಟಾಗಿದೆ. ನಾನು ಚಂಡಾಲನಾದ ಪ್ರಯುಕ್ತ ಯಾವ ಶುಭಕರ್ಮವನ್ನು ಮಾಡುವುದರಿಂದ ಪಾಪಕರ್ಮದಿಂದ ಬಿಡುಗಡೆಯನ್ನು ಹೊಂದುವುದಕ್ಕೆ ಆಗುವುದೆಂದು ಹೇಳು. ನನ್ನ ಸಂಶಯವನ್ನು ಪರಿಹರಿಸು' ಎಂದು ಕೇಳಿದನು.

ಅದಕ್ಕೆ ಆ ರಾಜನು 'ನೀನು ಬ್ರಾಹ್ಮಣರಿಗೋಸ್ಕರ ಯುದ್ಧವನ್ನು ಮಾಡಿ ಯುದ್ಧದಲ್ಲಿ ಪ್ರಾಣವನ್ನು ಬಿಡುವುದಾದರೆ ಇಷ್ಟವಾದ ಗತಿಯನ್ನು ಹೊಂದುವಿ. ಬ್ರಾಹ್ಮಣ ನಿಮಿತ್ತವಾಗಿ ಮಾಂಸವನ್ನು ಭಕ್ಷಿಸುವ ಪ್ರಾಣಿಗಳಿಗೆ ತನ್ನ ಶರೀರವನ್ನು ಕೊಟ್ಟು ಪ್ರಾಣವನ್ನು ಬಿಟ್ಟರೆ ನಿನಗೆ ಪಾಪ ಪರಿಹಾರವಾಗಬಹುದು. ಇಲ್ಲದಿದ್ದರೆ ಆಗಲಾರದು' ಎಂದನು.

ಅದನ್ನು ಕೇಳಿ ಚಂಡಾಲನು ಬ್ರಾಹ್ಮಣರಿಗೋಸ್ಕರ ಯುದ್ಧದಲ್ಲಿ ಪ್ರಾಣಗಳನ್ನು ಬಿಟ್ಟು ಇಷ್ಟಲೋಕಗಳನ್ನು ಹೊಂದಿದನು. ಆದುದರಿಂದ ಬ್ರಾಹ್ಮಣರ ವಸ್ತುವನ್ನು ಅಪಹರಿಸಬಾರದು. ಅತಿ ಅಹಂಕಾರವನ್ನು ಹೊಂದಬಾರದು.



# ಅತಿಥಿ ಸತ್ಕಾರದ ಮಹತ್ವವು[1]

ಪೂರ್ವದಲ್ಲಿ ಇಕ್ಷ್ವಾಕುವಂಶದಲ್ಲಿ ದುರ್ಯೋಧನನೆಂಬ ರಾಜನಿದ್ದನು. ಅವನು ಪರಮಧರ್ಮಿಷ್ಠನಾಗಿದ್ದನು. ಅವನಿಗೆ ನದಿಯ ಅಭಿಮಾನಿಯಾದ ನರ್ಮದೆಯೇ ಪತ್ನಿಯಾದಳು. ಅವಳಲ್ಲಿ ಪರಮಸುಂದರಿಯಾದ ಸುದರ್ಶನಾ ಎಂಬ ಮಗಳು ಹುಟ್ಟಿದಳು. ಅವಳಂತೆ ಇರುವ ಸುಂದರಿಯು ಯಾರೂ ಇರಲಿಲ್ಲ. ಅಗ್ನಿದೇವರೇ ಅವಳನ್ನು ಮದುವೆಯಾಗಲು ಆಸೆಪಟ್ಟರು. ರಾಜನಿದ್ದಲ್ಲಿ ಬ್ರಾಹ್ಮಣರೂಪದಿಂದ ಬಂದು ನಿನ್ನ ಮಗಳನ್ನು ನನಗೆ ಮದುವೆ ಮಾಡಿಕೊಡಬೇಕೆಂದು ಕೇಳಿದರು. ಆಗ ರಾಜನು ದರಿದ್ರರೆಂದೂ ತನ್ನ ಜಾತಿಯಲ್ಲವೆಂದೂ ಕೊಡಲಿಕ್ಕೆ ಒಪ್ಪಲಿಲ್ಲ. ತರುವಾಯ ರಾಜನು ಒಂದು ಯಾಗವನ್ನು ಮಾಡುತ್ತಿರಲು ಯಾಗದ ಬೆಂಕಿಯು ಆರಿ ಹೋಯಿತು. ಯಾಗದಲ್ಲಿ ಬೆಂಕಿಯು ಆರಿಹೋದರೆ ಬಹಳ ಅನಿಷ್ಟವು. ಆಗ ರಾಜನು ತುಂಬಾ ಭಯವುಳ್ಳವನಾಗಿ ಬ್ರಾಹ್ಮಣರೊಡನೆ 'ಈರೀತಿಯಾಗಿ ಅಗ್ನಿಯು ನಾಶವಾಗಲಿಕ್ಕೆ ಕಾರಣವೇನು? ನಾನೇ ಏನಾದರೂ ಅಪರಾಧವನ್ನು ಮಾಡಿರು ವೆನೋ ಅಥವಾ ನಿಮ್ಮದ್ದು ಏನಾದರೂ ಹೆಚ್ಚು ಕಡಿಮೆಯಾಗಿದೆಯೋ? ವಿಚಾರ ಮಾಡಿರಿ' ಎಂದು ಹೇಳಿದನು. ತರುವಾಯ ಬ್ರಾಹ್ಮಣರು ಮೌನವುಳ್ಳವರಾಗಿ ನಿಯಮದಿಂದ ಅಗ್ನಿದೇವರನ್ನೇ ಮರೆಹೊಂದಿದರು. ತರುವಾಯ ಅಗ್ನಿದೇವರು ಬ್ರಾಹ್ಮಣರಿಗೆ ಕಾಣಿಸಿಕೊಂಡು ನಾನು ರಾಜನ ಮಗಳನ್ನು ಮದುವೆಯಾಗಲು ಆಸೆಯುಳ್ಳವನಾಗಿರುವೆನು ಎಂದರು. ತರುವಾಯ ಬ್ರಾಹ್ಮಣರು ಆಶ್ಚರ್ಯವುಳ್ಳವ ರಾಗಿ ಮರುದಿವಸ ಬೆಳಿಗ್ಗೆ ರಾಜನ ಬಳಿಯಲ್ಲಿ ಈ ವಿಷಯವನ್ನು ತಿಳಿಸಿದರು. ಅದನ್ನು ಕೇಳಿ ರಾಜನು ಸಂತೋಷವನ್ನು ಹೊಂದಿದನು. ರಾಜನು ಅಗ್ನಿದೇವರೊಡನೆ ನನ್ನ ಮಗಳನ್ನು ಮದುವೆ ಮಾಡಿಕೊಂಡು ನನ್ನ ರಾಜ್ಯದಲ್ಲೇ ಸರ್ವದಾ ತಾವು ಇರಬೇಕೆಂದು ಕೇಳಿಕೊಂಡನು. ಅದಕ್ಕೆ ಅವರು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು ಮದುವೆ ಮಾಡಿಕೊಂಡು ಅಲ್ಲಿಯೇ ಇದ್ದರು. ಅಗ್ನಿದೇವರಿಂದ ಸುದರ್ಶನೆಯೆಂದು ಹೆಸರುಳ್ಳ ರಾಜಪುತ್ರಿಯಲ್ಲಿ ಸುದರ್ಶನ ಎಂಬ ಪರಮರೂಪ ವಂತನಾದ ಮಗನು ಹುಟ್ಟಿದನು. ಅವನು ಮಗುವಾಗಿರುವಾಗಲೇ ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದನು.

ಆ ಸಮಯದಲ್ಲಿ ನೃಗರಾಜನ ಪಿತಾಮಹನಾದ ಓಘವಾನ್ ಎಂಬ

---

1. ಮ.ಭಾ.ಅ.ಪ. ಅ-3

ರಾಜನಿದ್ದನು. ಅವನಿಗೆ ಓಘವತೀ ಎಂಬ ಮಗಳೂ ಓಘರಥ ಎಂಬ ಮಗನೂ ಇದ್ದರು. ಓಘವಾನ್ ರಾಜನು ತನ್ನ ಮಗಳಾದ ಓಘವತಿಯನ್ನು ಸುದರ್ಶನನಿಗೆ ಮದುವೆಮಾಡಿಕೊಟ್ಟನು.

ಸುದರ್ಶನನು ಗೃಹಸ್ಥಾಶ್ರಮಿಯಾಗಿದ್ದುಕೊಂಡು ಕುರುಕ್ಷೇತ್ರದಲ್ಲಿ ವಾಸಮಾಡಿದನು. ನಾನು ಗೃಹಸ್ಥನಾಗಿದ್ದುಕೊಂಡೇ ಮೃತ್ಯುವನ್ನು ಜಯಿಸುವೆನು ಎಂದು ಪ್ರತಿಜ್ಞಾ ಮಾಡಿದನು. ತನ್ನ ಹೆಂಡತಿಯೊಡನೆ 'ಅತಿಥಿಸತ್ಕಾರವನ್ನು ಮಾಡಲಿಕ್ಕೆ ವಿರೋಧವನ್ನು ಮಾಡಬಾರದು. ಗೃಹಸ್ಥರಿಗೆ ಅತಿಥಿಸತ್ಕಾರವೇ ಮುಖ್ಯವು. ನಾನು ಹೊರಗೆ ಹೋಗಿರುವ ಸಮಯ ಅತಿಥಿಗಳು ಬಂದರೆ ಅವರಿಗೆ ನೀನು ಸತ್ಕಾರ ಮಾಡಬೇಕು. ಅವರು ಏನು ಕೇಳಿದರೂ ಕೊಡಬೇಕು. ಒಂದುವೇಳೆ ಅವರು ನಿನ್ನನ್ನೇ ಅಪೇಕ್ಷಿಸಿದರೂ ನೀನು ಸಮ್ಮತಿಸಬೇಕು' ಎಂದು ಹೇಳಿದನು. ಅದಕ್ಕೆ ಓಘವತಿಯು ಪತ್ನಿಯಾದ ನನಗೆ ಪತಿಯಾದ ನಿಮ್ಮ ಮಾತಿಗಿಂದ ಹೆಚ್ಚಿನ ಪ್ರಮಾಣವಿರುವುದಿಲ್ಲ. ನಿಮ್ಮ ಮಾತಿನಂತೆ ನಾನು ನಡೆಯುವೆನು' ಎಂದು ಹೇಳಿದಳು. ತರುವಾಯ ಮೃತ್ಯುವು ಸುದರ್ಶನನ್ನು ಜಯಿಸಬೇಕೆಂದು ಅಭಿಪ್ರಾಯದಿಂದ ಯಾವಾಗ ಅವನು ತನ್ನ ಪ್ರತಿಜ್ಞೆಯನ್ನು ಮೀರುವನು? ಯಾವಾಗ ನಾನು ಅವನನ್ನು ಜಯಿಸುವೆನು? ಎಂದು ಅವನ ಹಿಂದೆಯೇ ಸಂಚರಿಸುತ್ತಿದ್ದನು.

ಒಂದು ದಿನ ಸುದರ್ಶನು ಕಟ್ಟಿಗೆಯನ್ನು ತರಲಿಕ್ಕೆ ಹೊರಗೆ ಹೋಗಿರುವ ಸಮಯದಲ್ಲಿ ಒಬ್ಬ ಅತಿಥಿ ಬ್ರಾಹ್ಮಣನು ಸುದರ್ಶನನ ಮನೆಗೆ ಬಂದನು. ಆಗ ಓಘವತಿಯು ಮನೆಯಲ್ಲಿ ಇದ್ದಳು. ಅವಳು ಗಂಡನ ಆಜ್ಞೆಯಂತೆ ಅತಿಥಿಗಳನ್ನು ಬನ್ನಿರಿ ಎಂದಳು. ಆಸನ ಕೊಟ್ಟಳು. ಉಪಚರಿಸಿದಳು. ತಮಗೆ ಏನು ಬೇಕೆಂದು ಕೇಳಿದಳು. ಅದಕ್ಕೆ ಅತಿಥಿ ಬ್ರಾಹ್ಮಣನು ನನಗೆ ನೀನೇ ಬೇಕು ಎಂದನು. ಓಘವತಿಯು ಬೇರೆ ಏನಾದರೂ ಕೇಳಿರಿ ಎಂದು ಎಷ್ಟೋ ಹೇಳಿ ನೋಡಿದಳು. ಅತಿಥಿಯು ಕೇಳಲೇ ಇಲ್ಲ. ಅತಿಥಿ ಸತ್ಕಾರವನ್ನು ಮಾಡುವುದು ಧರ್ಮವೆಂದು ನೀನು ತಿಳಿದಿರುವ ಪಕ್ಷದಲ್ಲಿ ನನಗೆ ನೀನೇ ಬೇಕು. ನನ್ನ ಆಸೆಯನ್ನು ಪೂರೈಸು ಎಂದನು. ಓಘವತಿಯು ಯೋಚನೆಮಾಡಿ ಗಂಡನ ಮಾತನ್ನು ಸ್ಮರಿಸಿಕೊಂಡು ಕೊನೆಗೆ ಆಗಲಿ ಎಂದಳು. ಅತಿಥಿ ಬ್ರಾಹ್ಮಣನು ಅವಳ ಕೈಯನ್ನು ಹಿಡಿದನು. ಆ ಸಮಯಕ್ಕೆ ಸರಿಯಾಗಿ ಸುದರ್ಶನನು ಕಟ್ಟಿಗೆಯನ್ನು ಹಿಡಿದುಕೊಂಡು ಮನೆಯ ಹೊರಗೆ ಬಂದು ಸೇರಿದನು. ಮೃತ್ಯುವು ಅವನ ಹಿಂದೆಯೇ ಬರುತ್ತಿದ್ದನು. ಸುದರ್ಶನನು ತನ್ನ ಹೆಂಡತಿಯನ್ನು ಕರೆದನು. ಆಗ ಓಘವತಿಯು ತನ್ನನ್ನು ಪರಪುರುಷನು ಕೈಯಲ್ಲಿ

ಹಿಡಿದನು. ತಾನು ಭ್ರಷ್ಟಳಾದೆನು ಎಂದು ತಿಳಿದುಕೊಂಡು ಮಾತಾಡಲೇ ಇಲ್ಲ. ಆಗ ಅತಿಥಿ ಬ್ರಾಹ್ಮಣನು 'ನಾನು ಅತಿಥಿ ಬ್ರಾಹ್ಮಣನು ಬಂದಿದ್ದೇನೆ. ನಾನು ನಿನ್ನ ಪತ್ನಿಯನ್ನು ಅಪೇಕ್ಷಿಸಿದೆನು. ಅದಕ್ಕೆ ಅವಳು ಸಮ್ಮತಿಸಿದ್ದಾಳೆ. ಆದುದರಿಂದ ಅವಳು ಮಾತಾಡದೆ ಇದ್ದಾಳೆ'. ಇದನ್ನು ಕೇಳಿ ಮುಂದೆ ಏನು ಮಾಡುವಿಯೋ ಮಾಡು' ಎಂದನು. ಆಗ ಮೃತ್ಯುವು ಇಂತಹ ಸಂದರ್ಭದಲ್ಲಿ ಸುದರ್ಶನನು ತಾನು ಮಾಡಿದ ಪ್ರತಿಜ್ಞೆಯನ್ನು ಮರೆತು ಕೋಪವಶದಿಂದ ತನ್ನ ಪತ್ನಿಯನ್ನು ಅಪೇಕ್ಷಿಸಿದ ಬ್ರಾಹ್ಮಣನಿಗೆ ಶಿಕ್ಷಿಸಲಿಕ್ಕೆ ಹೋಗುವನು. ನಾನು ಇವನನ್ನು ಕೊಂದು ಹಾಕುವೆನು ಎಂದುಕೊಂಡು ಮುದ್ಗರವೆಂಬ ಆಯುಧವನ್ನು ಹಿಡಿದುಕೊಂಡು ಅವನ ಹತ್ತಿರವೇ ಬಂದನು.

ಆದರೆ ಸುದರ್ಶನನು ಒಂದು ವಿಕಾರವನ್ನು ಹೊಂದದೆ 'ಸಂತೋಷ ವಾಯಿತು. ನನಗೆ ಅತಿಥಿ ಸತ್ಕಾರವೇ ಮುಖ್ಯವು. ಅತಿಥಿಗಳು ಸಂತೋಷಪಡುವುದೇ ಮುಖ್ಯವು' ಎಂದು ಹೇಳಿದನು. 'ನಾನು ಸತ್ಯವಾಗಿಯೂ ಹೇಳಿದ ಮಾತು. ಈ ಸತ್ಯದಿಂದ ದೇವತೆಗಳು ನನ್ನನ್ನು ರಕ್ಷಿಸಲಿ' ಎಂದನು. ಆಗ ಸತ್ಯ ಸತ್ಯ ಎಂಬ ಮಾತು ಎಲ್ಲಾ ದಿಕ್ಕುಗಳಲ್ಲಿಯೂ ಉಂಟಾಯಿತು.

ತರುವಾಯ ಆಶ್ರಮದ ಒಳಗಿನಿಂದ ಬ್ರಾಹ್ಮಣನು ಹೊರಗೆ ಬಂದನು. ತನ್ನ ದೇಹದಿಂದ ಭೂಮಿಯಿಂದ ಆಕಾಶವನ್ನು ಮುಟ್ಟುವಷ್ಟು ದೊಡ್ಡವನಾಗಿ ಕಂಡನು. ಅವನು ಸುದರ್ಶನನನ್ನು ಕರೆದು 'ಸುದರ್ಶನ! ನಾನು ಧರ್ಮದೇವತೆಯು, ನಿನ್ನನ್ನು ಪರೀಕ್ಷಿಸಲು ಬಂದಿರುವೆನು. ನಿನ್ನ ಸತ್ಯವನ್ನು ನೋಡಿ ನನಗೆ ಪರಮಪ್ರೀತಿ ಯಾಯಿತು. ನಿನ್ನ ಅವಕಾಶವನ್ನು ನೋಡುತ್ತಾ ಮೃತ್ಯುವು ನಿನ್ನನ್ನು ಬೆನ್ನಟ್ಟಿ ಬರುತ್ತಾನೆ. ನೀನು ಯಾವಾಗ ಸತ್ಯವನ್ನು ಮೀರುವಿ? ಯಾವಾಗ ಕೊಲ್ಲಲಿ ಎಂದು ಬರುತ್ತಾನೆ. ನೀನು ಸತ್ಯವನ್ನು ಬಿಡಲೇ ಇಲ್ಲ. ನೀನೇ ಮೃತ್ಯುವನ್ನು ಜಯಿಸಿದವನಾಗಿರುವಿ. ನಿನ್ನ ಹೆಂಡತಿಯು ಪರಮಪತಿವ್ರತೆಯು. ಅಗ್ನಿಯಂತೆ ಇರುವವಳು. ಮೂರು ಲೋಕ ದಲ್ಲಿಯೂ ಯಾರೊಬ್ಬರಿಗೂ ಅವಳನ್ನು ದುರಭಿಪ್ರಾಯದಿಂದ ನೋಡಲಿಕ್ಕೆ ಆಗಲಾರದು. ಅವಳು ನಿನ್ನ ಗುಣಗಳಿಂದಲೂ ತನ್ನ ಗುಣಗಳಿಂದಲೂ ಸರ್ವದಾ ರಕ್ಷಿತಳಾಗಿಯೇ ಇರುವಳು. ಅವಳು ಮಹಾತಪಸ್ವಿನಿಯು. ಅವಳು ತಪಸ್ಸಿನಿಂದ ಒಂದು ರೂಪದಿಂದ ಓಘವತಿಯೆಂಬ ಹೆಸರುಳ್ಳ ನದಿಯಾಗಿ ಹರಿದುಕೊಂಡು ಹೋಗು ವಳು. ಒಂದು ರೂಪದಿಂದ ನಿನ್ನ ಬಳಿಯಲ್ಲಿಯೇ ಇರುವಳು. ನೀನು ಇವಳಿಂದ ಕೂಡಿಕೊಂಡು ಉತ್ತಮಲೋಕಗಳನ್ನು ಹೊಂದುವಿ' ಎಂದು ಹೇಳಿದನು. ಈರೀತಿಯಾಗಿ ಹೇಳಿ ಧರ್ಮದೇವತೆಯು ಹೊರಟುಹೋದನು. ಇಂದ್ರದೇವರೂ

ಬಂದು ಅನುಗ್ರಹಮಾಡಿದರು. ಆದುದರಿಂದ ಅತಿಥಿಗಳಿಗೆ ಸತ್ಕಾರಮಾಡುವುದು ಗೃಹಸ್ಥ ಧರ್ಮವುಳ್ಳವರಿಗೆ ಮುಖ್ಯವಾದದ್ದು. (ಈ ಕತೆಯಿಂದ ಗೃಹಸ್ಥರು ಅತಿಥಿಗಳಿಗೆ ಸತ್ಕರಿಸುವುದು ಮುಖ್ಯವೆಂದು ಇಷ್ಟೇ ಅಂಶವನ್ನು ಗ್ರಹಣಮಾಡಲಿಕ್ಕೆ ಬೇಕಲ್ಲದೆ ಎಲ್ಲಾ ಅಂಶವನ್ನೂ ಅಂದರೆ ಸ್ತ್ರೀಯಾದವಳು ಅತಿಥಿಯ ವಶವಾಗ ಬಹುದು ಎಂಬ ಅಂಶವನ್ನು ಇಟ್ಟುಕೊಳ್ಳಬಾರದು. ಆ ಅಂಶದಲ್ಲಿ ಕಥೆಗೆ ತಾತ್ಪರ್ಯವಲ್ಲ. ಅತಿಥಿಯನ್ನು ಸತ್ಕರಿಸುವುದು ಮುಖ್ಯವೆಂಬುದರಲ್ಲಿಯೇ. ಏಕೆಂದರೆ ಸ್ತ್ರೀಯಾದವರಿಗೆ ಪಾತಿವ್ರತ್ಯವೇ ಮುಖ್ಯವೆಂಬುದು ಶಾಸ್ತ್ರಕ್ಕೆ ಸಮ್ಮತವಾದದ್ದು.)



# ಅತಿಥಿ ಪೂಜೆಯು

ದೇವರಿಗೆ ಸಮರ್ಪಣೆ ಮಾಡಿದ್ದನ್ನು ಅತಿಥಿಯನ್ನು ಮುಂದೆ ಮಾಡಿಕೊಂಡು ಭೋಜನ ಮಾಡಬೇಕು. ಕಾಲಕ್ಕೆ ಸರಿಯಾಗಿ ಬಂದಿರುವ ಅತಿಥಿಯನ್ನು ಶಕ್ತಿಯನ್ನನು ಸರಿಸಿ ಪೂಜಿಸಬೇಕು. ಅತಿಥಿಯಾದವನು ಕಳ್ಳನಾಗಿರಲಿ, ಚಂಡಾಲನಾಗಿರಲಿ, ಬ್ರಹ್ಮಹತ್ಯೆಯನ್ನು ಮಾಡಿದವನಾಗಿರಲಿ, ಪಿತೃಹತ್ಯೆಯನ್ನು ಮಾಡಿದವನಾಗಿರಲಿ, ವೈಶ್ವದೇವವನ್ನು ಮಾಡಿದಮೇಲೆ ಬಂದಿರುವವನು ಅತಿಥಿಯೆನಿಸಿಕೊಳ್ಳುವನು. ಅವನು ಸ್ವರ್ಗಕ್ಕೆ ಕಾರಣನಾಗುವನು. ದೂರದಿಂದ ನಡೆದುಕೊಂಡು ಬಂದು ವೈಶ್ವದೇವವು ಮುಗಿದಮೇಲೆ ಬಂದವನು ಅತಿಥಿಯೆನ್ನಿಸುವನು. ಮೊದಲೇ ಬಂದವನು ಅತಿಥಿಯಾಗಲಾರನು. ಅತಿಥಿಯು ನಿರಾಶನಾಗಿ ಯಾರ ಮನೆಯಿಂದ ಹೊರಟುಹೋಗುವನೋ ಅವನು ಮನೆಯ ಯಜಮಾನನಿಗೆ ತಾನು ಮಾಡಿದ ಪಾಪವನ್ನು ಕೊಟ್ಟು ಪುಣ್ಯವನ್ನು ಹಿಡಿದುಕೊಂಡು ಹೋಗುವನು. ಆದುದರಿಂದ ಅತಿಥಿಗಳಾಗಿ ಬಂದ ಬ್ರಾಹ್ಮಣರನ್ನು ವಿಚಾರಮಾಡದೆ ಪೂಜಿಸಬೇಕು.

ಅತಿಥಿಯ ಗೋತ್ರವನ್ನೋ ಆಚಾರವನ್ನೋ ಕೇಳಬಾರದು. ಏನನ್ನು ಓದಿ ಕೊಂಡಿರುವಿ ಎಂದೂ ಕೇಳಬಾರದು. ಅವರಲ್ಲಿ ಪರಮಾತ್ಮನ ಸನ್ನಿಧಾನವಿರುವು ದೆಂದು ತಿಳಿದುಕೊಂಡು ವಿಚಾರಮಾಡದೆ ಪೂಜಿಸಬೇಕು. ಇದು ಸಾಮಾನ್ಯ ಅತಿಥಿಗಳ ವಿಷಯವು. ವಿಶಿಷ್ಟವೈಷ್ಣವರಾದ ಬ್ರಾಹ್ಮಣರು ಮನೆಗೆ ಬಂದರೆ ಎದುರುಗೊಂಡು ಕರಕೊಂಡು ಬಂದು ಬೇಗನೇ ಅವರಿಗೆ ನಮಸ್ಕರಿಸಿ ವಿಧಿ ಪ್ರಕಾರವಾಗಿ ಪೂಜೆಯನ್ನು ಮಾಡಬೇಕು. ಅವರ ಪಾದಪ್ರಕ್ಷಾಲನೆಯನ್ನು ಮಾಡಬೇಕು. ಸುಂದರವಾದ ಆಸನದಲ್ಲಿ ಕೂತುಕೊಳ್ಳಿಸಿ ಮಧುಪರ್ಕದಿಂದ ಪೂಜಿಸಬೇಕು. ಶ್ರೋತ್ರಿಯರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಗ್ರಾಮದ

ಎಲ್ಲೆಯವರೆಗೆ ಅವರ ಹಿಂದೆಯೇ ಹೋಗಿ ನಮಸ್ಕಾರ ಮಾಡಿ ಕಳುಹಿಸಬೇಕು. ಮಾರ್ಗದಲ್ಲಿ ಶ್ರಮವುಳ್ಳವನಾಗಿ ಹಸಿವೆದಾಹದಿಂದ ಕೂಡಿದವನಾಗಿ ಬಂದಿರುವ ಅಪ್ಪರವರೆಗೆ ತಿಳಿಯದೆ ಇರುವ ಅತಿಥಿಯನ್ನು ಯಾರು ಶಕ್ತಿಯನ್ನು ಅನುಸರಿಸಿ ಪೂಜಿಸುವು ದಿಲ್ಲವೋ ಅವನನ್ನು ಬ್ರಹ್ಮಹತ್ಯೆಯನ್ನು ಮಾಡಿದವನೆನ್ನುವರು. ನಿತ್ಯವೂ ಬಲಿಹರಣವನ್ನು ಮಾಡಿಯಾದ ಮೇಲೆ ದನವನ್ನು ಕರೆಯುವಷ್ಟು ಹೊತ್ತು ಅತಿಥಿಗಳನ್ನು ಎದುರು ನೋಡಿಕೊಂಡು ನಿಲ್ಲಬೇಕು. ಆ ಸಮಯದಲ್ಲಿ ಬಂದವರನ್ನು ಫಲಮೂಲಾದಿಗಳಿಂದ ಭೋಜನ ಮಾಡಿಸಬೇಕು. ಮಹಾಭಾಗವತರಾದ ಬ್ರಾಹ್ಮಣರನ್ನು ವಿಶೇಷವಾಗಿ ಪೂಜಿಸಬೇಕು. ಮಧುಪರ್ಕ ಪಾದ್ಯ ಅರ್ಘ್ಯ ಪಾದ್ಯ ಆಚಮನ ಗಂಧ ಪುಷ್ಪ ತಾಂಬೂಲ ಧೂಪದೀಪ ನೈವೇದ್ಯಗಳಿಂದ ಪೂಜಿಸಬೇಕು. ಆಸನದಲ್ಲಿ ಕೂತುಕೊಳ್ಳಿಸಿ ಶ್ರದ್ಧೆಯಿಂದ ಭಗವದ್ಭಕ್ತರಾದ ಬ್ರಾಹ್ಮಣರನ್ನು ಒಂದು ಬಾರಿ ಪೂಜಿಸುವುದರಿಂದ ಅರವತ್ತು ಸಾವಿರವರ್ಷ ಭಗವಂತನನ್ನು ಪೂಜಿಸಿದ ಫಲವು ಉಂಟಾಗುವುದು. ಭಗವದ್ಭಕ್ತರನ್ನು ಮೋಹದಿಂದ ಪೂಜಿಸದಿದ್ದರೆ ಕೋಟಿ ಜನ್ಮಗಳಲ್ಲಿ ಮಾಡಿದ ಪುಣ್ಯವು ನಷ್ಟವಾಗುವುದು. ಅವನ ಮನೆಯಲ್ಲಿ ನೂರು ವರ್ಷ ಪರಮಾತ್ಮನು ಪೂಜೆಯನ್ನು ಸ್ವೀಕರಿಸಲಾರನು.

ಭಗವದ್ಭಕ್ತನು ಪರಮಾತ್ಮನ ಮುಖದ ಸನ್ನಿಧಾನವುಳ್ಳವನು. ಸರ್ವದೇವತೆಗಳ ಮುಖದ ಸನ್ನಿಧಾನವುಳ್ಳವನು. ಅವನನ್ನು ಪೂಜಿಸಿದರೆ ಮೂರುಜಗತ್ತನ್ನು ಪೂಜಿಸಿ ದಂತೆ ಆಗುವುದು. ಸರಿಯಾದ ಸಮಯದಲ್ಲಿ ಅತಿಥಿಯಾಗಿ ಬಂದ ವಿಷ್ಣುಭಕ್ತನನ್ನು ಪೂಜಿಸಿದರೆ ಆ ಕ್ಷಣದಲ್ಲಿಯೇ ಪರಮಾತ್ಮನು ಸಂತುಷ್ಟನಾಗಿ ಅಭೀಷ್ಟಗಳನ್ನು ಕೊಡುವನು. ಮಹಾಭಾಗವತರಾದ ಪಾದೋದಕವನ್ನು ಯಾರು ಪಾನಮಾಡು ವನೋ ಭಕ್ತಿಯಿಂದ ಶಿರಸ್ಸಿನಿಂದ ಧರಿಸುವನೋ ಅವನು ಸರ್ವಪಾಪಗಳಿಂದ ರಹಿತನಾಗುವನು. ಯಾರಾದರೂ ಒಬ್ಬ ಮಹಾಭಗವದ್ಭಕ್ತನು ಎಲ್ಲಿಯಾದರೂ ಒಂದು ರಾತ್ರಿಯಲ್ಲಿ ವಾಸಮಾಡಿದರೆ ಆ ದೇಶವೇ ತೀರ್ಥಕ್ಕೆ ಸಮಾನವಾಗುವುದು. ಭಗವದ್ಭಕ್ತರಾದ ಅತಿಥಿಗಳನ್ನು ಭೋಜನ ಮಾಡಿಸಿ ಬಾಲಕರನ್ನೂ ಮಿತ್ರರನ್ನೂ ವೃದ್ಧರನ್ನೂ ಬಂದಿರುವ ಬಂಧುಗಳನ್ನೂ ಭೋಜನ ಮಾಡಿಸಬೇಕು. ಮನೆಗೆ ಬಂದ ಯತಿಗಳಿಗೂ ಬ್ರಹ್ಮಚಾರಿಗಳಿಗೂ ಭಿಕ್ಷೆಯನ್ನು ಹಾಕಬೇಕು. ಶೂದ್ರನೋ ಸಂಕರಜಾತಿಯವನೋ ದಾರಿಯ ಶ್ರಮದಿಂದ ಹಸಿವೆಯ ಶ್ರಮದಿಂದ ಪೀಡಿತನಾಗಿ ಅತಿಥಿಯಾಗಿ ಬಂದರೆ ಅವನಿಗೆ ಭೋಜನ ಮಾಡಿಸಬೇಕು. ಆದರೆ ಪಾಷಂಡಿಗಳೋ ಪತಿತರೋ ಹಸಿವೆಯಿಂದ ಬಂದರೂ ಅವರಿಗೆ ಮಾತ್ರ ಅನ್ನವಾಗಲೀ ಅಕ್ಕಿಬೇಳೆಯನ್ನಾಗಲೀ ಕೊಡಬಾರದು.

# ಯತಿಭಿಕ್ಷೆಯು [1]

ವೈಶ್ವದೇವಕ್ಕಿಂತ ಮೊದಲೋ ಭೋಜನಕಾಲದಲ್ಲಿಯೋ ಯಾವಾಗಲಾದರೂ ಯತಿಗಳು ಮನೆಗೆ ಬಂದರೆ ಅವರಿಗೆ ಭಿಕ್ಷೆಯನ್ನು ಹಾಕಬೇಕು. ಹಾಗೆಯೇ ಬ್ರಹ್ಮಚಾರಿಗಳಿಗೂ ಭಿಕ್ಷೆಯನ್ನು ಹಾಕಬೇಕು. ವೈಶ್ವದೇವವನ್ನು ಮಾಡುವ ಸಮಯದಲ್ಲಿ ಸನ್ಯಾಸಿಗಳು ಬಂದರೆ ವೈಶ್ವದೇವಕ್ಕೆ ಅನ್ನವನ್ನು ತೆಗೆದಿಟ್ಟು ಸನ್ಯಾಸಿಗಳಿಗೆ ಭಿಕ್ಷೆಯನ್ನು ಹಾಕಿ ಕಳುಹಿಸಬೇಕು. ವೈಶ್ವದೇವನಿಮಿತ್ತವಾದ ದೋಷವು ಯತಿಗಳಿಗೆ ಭಿಕ್ಷೆಯನ್ನು ಹಾಕಿದರೆ ಪರಿಹಾರವಾಗುವುದು. ಯತಿಗಳಿಗೆ ಭಿಕ್ಷೆ ಹಾಕದಿದ್ದರೆ ಅದರಿಂದ ಬರುವ ದೋಷವು ವೈಶ್ವದೇವದಿಂದ ಪರಿಹೃತವಾಗಲಾರದು. ಆದರೆ ಶ್ರಾದ್ಧದಿವಸದಲ್ಲಿ ಯತಿಗಳಿಗೂ ಬ್ರಹ್ಮಚಾರಿಗಳಿಗೂ ಪಿಂಡಪ್ರದಾನವಾಗುವ ಮೊದಲು ಶ್ರಾದ್ಧದ ಅಡಿಗೆಯಿಂದ ಭಿಕ್ಷೆಯನ್ನು ಹಾಕಬಾರದು. ಆದರೆ ಮನೆಗೆ ಬಂದ ಯತಿಗಳಿಗೆ ಭಿಕ್ಷೆಯನ್ನು ಹಾಕದೆ ಶ್ರಾದ್ಧವನ್ನು ಮಾಡಿದರೆ ಶ್ರಾದ್ಧವನ್ನು ಮಾಡಿದವನೂ, ಶ್ರಾದ್ಧದಲ್ಲಿ ಭೋಜನ ಮಾಡಿದವನೂ, ಶ್ರಾದ್ಧಮಾಡಿದವನ ತಂದೆಯೂ, ಈ ಮೂರು ಜನರೂ ನರಕವನ್ನು ಹೊಂದುವರು. ಯತಿಗಳಿಗೆ ಭಿಕ್ಷೆಯನ್ನು ಹಾಕದೆ ಇದ್ದು ಶ್ರಾದ್ಧಮಾಡಿದವನ ಪಿತೃಗಳು ಹದಿನೈದು ವರ್ಷ ಶ್ರಾದ್ಧವನ್ನು ಸ್ವೀಕರಿಸಲಾರರು. ಅಗ್ನಿಯು ಹವ್ಯವನ್ನು ಸ್ವೀಕರಿಸಲಾರನು. ಅದುಷ್ಟರಾದ ಮನೆಗೆ ಬಂದ ಯತಿಗಳಿಗೆ ಭಿಕ್ಷೆಯನ್ನು ಹಾಕದೆ ಇದ್ದರೆ ಆ ಯತಿಗಳಿಗೆ ತನ್ನ ಪುಣ್ಯವನ್ನು ಕೊಟ್ಟು ಅವರ ದುಷ್ಕೃತವನ್ನು ಸ್ವೀಕರಿಸುವರು.

ಯಾರ ಮನೆಗೆ ಯತಿಯು ಬಂದು ನಿರಾಶನಾಗಿ ಹೋಗುವನೋ ಆ ಯಜಮಾನನ ಯಜ್ಞ ದಾನ ತಪಸ್ಸು ಅಧ್ಯಯನಗಳ ಪುಣ್ಯವನ್ನು ತೆಗೆದುಕೊಂಡು ಹೋಗುವನು. ಯತಿಗಳ ಕೈಗೆ ನೀರನ್ನು ಹಾಕಿ ಭಿಕ್ಷೆಯನ್ನು ಹಾಕಬೇಕು. ಆ ಭಿಕ್ಷೆ ಹಾಕಿದ್ದು ಮೇರುಪರ್ವತಕ್ಕೆ ಸಮಾನವಾಗುವುದು. ಕೈಗೆ ಹಾಕಿದ ನೀರು ಸಮುದ್ರಕ್ಕೆ ಸಮಾನವಾಗುವುದು. ಯತಿಗಳೂ ಬ್ರಹ್ಮಚಾರಿಗಳೂ ಸಿದ್ಧವಾದ ಅನ್ನಕ್ಕೆ ಸ್ವಾಮಿಗಳು. ಅವರಿಗೆ ಭಿಕ್ಷೆಯನ್ನು ಹಾಕದೆ ಭೋಜನ ಮಾಡಿದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು. ಯಾರು ದೇವತಾಪೂಜೆಗಾಗಿಯೂ ಅತಿಥಿ ಸತ್ಕಾರಕ್ಕಾಗಿಯೂ ಅನ್ನವನ್ನು ಮಾಡದೆ ತನ್ನ ಭೋಜನಕ್ಕಾಗಿಯೇ ಅನ್ನವನ್ನು ಮಾಡುವನೋ ಅವನು ಮೈಯೆಲ್ಲಾ ದುರ್ವಾಸನೆಯುಳ್ಳವನಾಗಿ ಸ್ಮಶಾನದಲ್ಲಿ ಬ್ರಹ್ಮರಾಕ್ಷಸನಾಗುವನು.

---

1. ಯ.ಪ್ರ.ಕ. ಮತ್ತು ನ್ಯಾ.ಪ.

ಬ್ರಹ್ಮಚಾರಿಗೆ ಕೊಟ್ಟದ್ದು ಸಮವಾದ ಫಲವನ್ನು ಉಂಟು ಮಾಡುವುದು. ಗೃಹಸ್ಥರಿಗೆ ಕೊಟ್ಟದ್ದು ಎರಡು ಪಾಲು ಫಲಕ್ಕೆ ಕಾರಣ ವಾಗುವುದು. ವಾನಪ್ರಸ್ಥರಿಗೆ ಕೊಟ್ಟರೆ ನೂರುಪಾಲು ಫಲಕ್ಕೆ ಕಾರಣವಾಗುವುದು. **ಯತಿಗಳಿಗೆ ಕೊಟ್ಟದ್ದು ಅನಂತ ಫಲಕ್ಕೆ ಕಾರಣವಾಗುವುದು.** ಸಾವಿರ ಬ್ರಹ್ಮಚಾರಿಗಳಿಂದಲೂ ನೂರು ವಾನಪ್ರಸ್ಥರಿಗಿಂತಲೂ ಕೋಟಿಗೃಹಸ್ಥರಿಗಿಂತಲೂ ಒಬ್ಬ ಯತಿಯು ಶ್ರೇಷ್ಠನಾಗುವನು. ಯತಿಗಳಲ್ಲಿಯೂ ಕುಟೀಚಕ ಬಹೂದಕ ಹಂಸ ಪರಮಹಂಸ ಎಂಬವರ ಕ್ರಮದಿಂದ ಉತ್ತರೋತ್ತರ ಶ್ರೇಷ್ಠರಾದವರು. **ಯತಿಯನ್ನು ಪೂಜಿಸಿದರೆ ಭಗವಂತನನ್ನು ಎಲ್ಲಾ ದೇವತೆಗಳನ್ನು ಪೂಜಿಸಿದಂತೆ ಆಗುವುದು.**



# ಗುರುಪೂಜೆಯ ಫಲವು [1]

**(ಕಾರ್ತಿಕಮಾಸ ಪುರಾಣ)**

ಪೂರ್ವದಲ್ಲಿ ಭಾಗೀರಥೀ ತೀರದಲ್ಲಿ ಆಶ್ರಮದಲ್ಲಿ ಗೌತಮರು ಶಿಷ್ಯರಿಂದ ಸಹಿತರಾಗಿ ಪತ್ನಿಯಾದ ಅಹಲ್ಯೆಯಿಂದ ಕೂಡಿಕೊಂಡು ವಾಸಮಾಡಿಕೊಂಡಿದ್ದರು. ಅವರಲ್ಲಿ ಮೇಧಾವಿ ಕಪಿಲ ಸುಮತಿ ಎಂಬ ಮೂರು ಶಿಷ್ಯರು ಅಧ್ಯಯನ ಮಾಡುತ್ತಿದ್ದರು. ಅವರು ಮೂವರೂ ಗುರುಭಕ್ತಿಉಳ್ಳವರಾಗಿದ್ದರು ಅವರಿಗೆ ಮದುವೆಯಾಗಿಲ್ಲ. ಅವರ ತಂದೆತಾಯಿಗಳು ದೂರದಲ್ಲಿ ಇದ್ದರು. ಬಾಲ್ಯದಲ್ಲಿಯೇ ತಪಸ್ಸು ಮಾಡುತ್ತಿದ್ದರು. ಗುರುಗಳ ಸೇವೆಯನ್ನು ಮಾಡುತ್ತಿದ್ದರು.

ಒಂದು ದಿನದಲ್ಲಿ ಗೌತಮರು ಶಿಷ್ಯರನ್ನು ಕರೆದು ಫಲಾದಿಗಳನ್ನು ತರಲಿಕ್ಕೆ ಹೇಳಿದರು. ಸುಮತಿಯೊಡನೆ ಹಣ್ಣುಗಳನ್ನು ತರಲಿಕ್ಕೆ ಹೇಳಿದರು. ಸಮಿಧೆಗಳನ್ನು ದರ್ಭೆಗಳನ್ನೂ ತರಲಿಕ್ಕೆ ಕಪಿಲನನ್ನು ಕಳುಹಿಸಿದರು. ಮೇಧಾವಿಯನ್ನು ಕಟ್ಟಿಗೆಗಳನ್ನು ತರಲಿಕ್ಕೆ ಕಳುಹಿಸಿದರು. ಮೂವರೂ ಗುರುಗಳನ್ನು ನಮಸ್ಕರಿಸಿ ವನಕ್ಕೆ ಹೋದರು. ತರುವಾಯ ಎಲ್ಲವನ್ನೂ ಹಿಡಿದುಕೊಂಡು ಮಧ್ಯಾಹ್ನಕ್ಕೆ ಸರಿಯಾಗಿ ಬಂದರು. ಗೌತಮರು ಶಿಷ್ಯರು ತಂದಿರುವ ಫಲ ಪುಷ್ಪಾದಿಗಳನ್ನು ನೋಡಿ ನೀವು ಸ್ವಲ್ಪವೇ ತಂದಿರುವಿರಿ ಎಂದು ಕೋಪಿಸಿಕೊಂಡರು. 'ಪಾಪಿಗಳೇ! ಬೆಳಿಗ್ಗೆ ಹೋದಿರಿ. ಈಗ ಮಧ್ಯಾಹ್ನವಾಯಿತು. ಇಷ್ಟು ಹೊತ್ತು ಏನು ಮಾಡಿದಿರಿ? ಇಷ್ಟು ಸ್ವಲ್ಪವೇ ತಂದಿರುವಿರಲ್ಲಾ! ತಿರುಗಿ ಹೋಗಿರಿ. ಬದುಕಿರುವ ಆಸೆಯಿದ್ದರೆ ಬೇಗನೇ ಹೋಗಿ

1. ಸ್ಕಾಂ.ಪು.ಕಾ.ಮಾ.ಮ. ಅ-10

ಇನ್ನಷ್ಟು ಹಣ್ಣುಗಳನ್ನು ಕಟ್ಟಿಗೆಗಳನ್ನೂ ತನ್ನಿರಿ' ಎಂದು ಬೆದರಿಸಿದರು. ತರುವಾಯ ಹಸಿವೆದಾಹ ಇವುಗಳಿಂದ ಪೀಡಿತರಾಗಿ ಪುನಃ ಕಾಡಿಗೆ ಹೋದರು. ಅವರು ಹಸಿವೆಯಿಂದ ಬಳಲುತ್ತಾ ಒಂದು ವನದಿಂದ ಮತ್ತೊಂದು ವನ ಹೀಗೇ ಹೋದರು. ಪಶ್ಚಿಮಾಭಿಮುಖವಾಗಿ ಹೋಗುತ್ತಾ ಬಾಯಾರಿಕೆಯಿಂದ ಪೀಡಿತರಾಗಿ ಒಂದು ಸರೋವರವನ್ನು ನೋಡಿದರು. ಅಲ್ಲಿ ಸ್ನಾನ ಮಾಡಿ ನೀರು ಕುಡಿದರು. ಸಂಧ್ಯಾವಂದನೆಯನ್ನು ಮಾಡಿ ಅತಿಭಯಂಕರವಾದ ವನವನ್ನು ಪ್ರವೇಶಿಸಿದರು. ಅಲ್ಲಿ ಹುಲಿಯ ಮತ್ತು ಸಿಂಹದ ಗರ್ಜನೆಯನ್ನು ಕೇಳಿ ಭಯವುಳ್ಳವರಾಗಿ ದಾರಿ ತಿಳಿಯದೆ ಪರಸ್ಪರ ಒಬ್ಬೊಬ್ಬರ ಕೈಹಿಡಿದುಕೊಂಡು ಹೋಗುತ್ತಾ ಕತ್ತಲೆಯಲ್ಲಿ ಒಂದು ಭಾವಿಯಲ್ಲಿ ಬಿದ್ದರು. ಆ ಭಾವಿಯಲ್ಲಿ ಇದ್ದ ವಿಷಯುಕ್ತಗಳಾದ ಸರ್ಪಗಳು ಕಚ್ಚಿದವು. ಇದರಿಂದ ಆ ಮೂರೂ ಜನರು ಮೂರ್ಛಿತರಾದರು.

ಇಲ್ಲಿ ಗೌತಮರು ಶಿಷ್ಯರು ಬರದೆ ಇದ್ದುದನ್ನು ನೋಡಿ 'ಶಿಷ್ಯರು ಯಾಕೆ ಬರಲಿಲ್ಲ? ತೋಳಗಳು ಅವರನ್ನು ತಿಂದವೋ? ಸಿಂಹಗಳು ಕೊಂದವೋ? ಚಿಕ್ಕ ಹುಡುಗರ ಮೇಲೆ ಸ್ವಲ್ಪವೂ ದಯೆಯಿಲ್ಲದ ನನಗೆ ಧಿಕ್ಕಾರವಿರಲಿ. ಬಿಸಿಲಲ್ಲಿ ಬಂದ ಬಾಲಕರನ್ನು ಹಾಗೇ ಅಟ್ಟಿಸಿದೆನು. ತಂದೆ ಗುರು ಬಂಧು ಎಂಬ ಭಾವನೆಯಿಂದ ನನ್ನನ್ನೇ ಆಶ್ರಯಿಸಿ ಕೊಂಡಿದ್ದರು. ಅವರನ್ನು ಬಿಟ್ಟು ನಾನು ಹೇಗೆ ಇರಲಿ? ಎಂದು ಯೋಚಿಸುತ್ತಾ ರಾತ್ರಿಯನ್ನು ಕಳೆದರು. ಬೆಳಗಾದರೂ ಹೆಂಡತಿಯಾದ ಅಹಲ್ಯೆಯನ್ನು ಕರೆದುಕೊಂಡು ಶಿಷ್ಯರನ್ನು ಹುಡುಕುತ್ತಾ ಕಾಡಿಗೆ ಹೋದರು. ಅವರ ಹೆಸರನ್ನು ಹೇಳಿ ಕರೆದರು. ಪ್ರತ್ಯುತ್ತರವನ್ನು ಹೊಂದದೆ ಮುಂದೆ ಪಾತಾಲದಂತೆ ಇರುವ ಒಂದು ಭಾವಿಯಲ್ಲಿ ನೋಡಿದರು. ಆ ಭಾವಿಯಲ್ಲಿ ಸತ್ತು ಬಿದ್ದಿರುವ ಶಿಷ್ಯರನ್ನು ಅತಿ ವಿಷಭರಿತಗಳಾಗಿರುವ ಸರ್ಪಗಳನ್ನು ನೋಡಿ ಗೌತಮರು ಹೆಂಡತಿಯಾದ ಅಹಲ್ಯೆಯಿಂದ ಕೂಡಿಕೊಂಡು ಬಹಳವಾಗಿ ಅಳುವವರಾದರು. ಗೌತಮರನ್ನು ನೋಡಿ ಸರ್ಪಗಳು ಘೋರವಾದ ವಿಷವನ್ನು ಕಾರುತ್ತಾ ಮೇಲೆ ಬಂದವು. ಗೌತಮರು ಆ ಸರ್ಪಗಳನ್ನು ಲಕ್ಷ್ಯಮಾಡದೆ ಶಿಷ್ಯರ ಹೆಸರನ್ನು ಹೇಳಿ ಕರೆದರು. ಶಿಷ್ಯರನ್ನು ಎಬ್ಬಿಸಲಿಕ್ಕೆ ನೋಡಿದರು. ಸಾಧ್ಯವಾಗಲಿಲ್ಲ. ಆಗ ಸರ್ಪಗಳು 'ನಿಮ್ಮ ಶಿಷ್ಯರು ಸತ್ತುಹೋದರು. ನಮ್ಮ ವಿಷಾಗ್ನಿಯಿಂದ ದಗ್ಧರಾದವರು ಬದುಕುವುದೆಲ್ಲಿ?' ಎಂದು ಹೇಳಿದವು. ಈರೀತಿಯಾಗಿ ಹೇಳಿದ ಸರ್ಪಗಳ ಭಯಂಕರವಾದ ಮಾತನ್ನು ಕೇಳಿ ಗೌತಮರು 'ನಿರಪರಾಧಿಗಳಾದ ತಪಸ್ವಿಗಳಾದ ' ಬ್ರಹ್ಮಚಾರಿಗಳಾದ ಸದಾಚಾರ ವುಳ್ಳವರಾದ ಇವರನ್ನು ನೀವೇಕೆ ಸಂಹಾರಮಾಡಿದಿರಿ?' ಎಂದು ಕೇಳಿದರು. ಅದಕ್ಕೆ

ಸರ್ಪಗಳು 'ಈ ದುರಾತ್ಮರು ನಮಗೆ ಅಪರಾದ ಮಾಡಿದ ಕಾರಣವೇ ನಾವು ಕೊಂದೆವು. ನೀವು ಶೋಕವನ್ನು ಹೊಂದ ಬೇಡಿರಿ' ಎಂದವು. ಆಗ ಗೌತಮರು 'ನನ್ನ ಶಿಷ್ಯರು ಯಾರಿಗೂ ಒಂದೂ ಅಪರಾಧವನ್ನು ಮಾಡಿದವರಲ್ಲ. ಕ್ರೂರಸ್ವಭಾವವುಳ್ಳ ನೀವೇ ಇವರನ್ನು ಕೊಂದಿರಿ. ಇವರಿಗೆ ಇನ್ನೂ ಕಾಲಮೃತ್ಯುವು ಬಂದಿಲ್ಲ. ಆದುದರಿಂದ ನಿಮ್ಮ ದೋಷವೂ ಅಲ್ಲ. ಇವರ ದೋಷವೂ ಅಲ್ಲ. ಇವರ ಮರಣಕ್ಕೆ ಯಮದೇವರೇ ಕಾರಣ. ಆದುದರಿಂದ ನಾನು ಯಮದೇವರಿಗೆ ಶಾಪವನ್ನು ಕೊಡುವೆನು' ಎಂದು ಕೋಪಿಸಿಕೊಂಡು ಶಾಪವನ್ನು ಕೊಡಲು ಆರಂಭಿಸಿದರು. ಅದನ್ನು ತಿಳಿದು ಯಮದೇವರು ಬೇಗನೇ ಬಂದು 'ಬ್ರಾಹ್ಮಣೋತ್ತಮ! ವಿಚಾರಮಾಡಿ ಶಾಪವನ್ನು ಕೊಡಿರಿ. ಇವರಿಗೆ ಅಕಾಲ ಮರಣವಲ್ಲ. ಸರಿಯಾದ ಕಾಲದಲ್ಲೇ ಮರಣವನ್ನು ಹೊಂದಿರುತ್ತಾರೆ. ಅವರ ಕರ್ಮಾನುಸಾರವಾಗಿ ಮರಣವನ್ನು ಹೊಂದಿದ್ದಾರೆ. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಭಗವಂತನೇ ಇದಕ್ಕೆ ಮುಖ್ಯಕಾರಣನು ಆದುದರಿಂದ ಭಗವಂತನ ಮಹಿಮೆ ಯೆಂದೇ ತಿಳಿದುಕೊಂಡು ಸುಮ್ಮನೆ ಆಗಿರಿ' ಎಂದರು. ಆಗ ಗೌತಮರು 'ಶಿಷ್ಯರಿಲ್ಲದೆ ನಾನು ಬದುಕಿ ಏನು ಪ್ರಯೋಜಮ? ನಾನು ಪುಣ್ಯವನ್ನು ಮಾಡಿದ್ದಿದ್ದರೆ ನಾನು ಗುರುಗಳ ಸೇವೆಯನ್ನು ಮಾಡಿದ್ದಿದ್ದರೆ ನಾನು ತಪಸ್ಸನ್ನು ಮಾಡಿದ್ದರೆ ನನ್ನ ಪುಣ್ಯದಿಂದಲೋ ನಿಮ್ಮ ಅನುಗ್ರಹದಿಂದಲೋ ನಿನ್ನ ಶಿಷ್ಯರು ಬದುಕಲಿ. ನೀವು ಹಾಗೆ ಅನುಗ್ರಹ ಮಾಡಬೇಕು' ಎಂದರು.

ಆಗ ಯಮದೇವರು ನಿಮ್ಮ ಶಿಷ್ಯರು ಬದುಕಲಿ ಎಂದು ವರವನ್ನು ಕೊಟ್ಟರು. ತರುವಾಯ ಮೂರು ಜನ ಶಿಷ್ಯರು ಎದ್ದು ಸಂತೋಷದಿಂದ ಪರಸ್ಪರವಾಗಿ ನೋಡಿಕೊಂಡರು. ಮುಂದೆ ನಿಂತಿರುವ ಗುರುಗಳನ್ನೂ ಯಮದೇವರನ್ನೂ ನೋಡಿ ನಮಸ್ಕರಿಸಿದರು. ಗೌತಮರು ಶಿಷ್ಯರನ್ನು ದೃಢವಾಗಿ ಆಲಿಂಗನ ಮಾಡಿ 'ನಾನು ಸಂತೋಷವುಳ್ಳವನಾದೆನು. ನಿಮಗೆ ವರವನ್ನು ಕೊಡುವೆನು' ಎಂದು ಹೇಳಿ 'ನೀವು ನನ್ನ ಅನುಗ್ರಹದಿಂದ ಸಮಸ್ತ ವೇದಗಳನ್ನೂ ಶಾಸ್ತ್ರಗಳನ್ನೂ ಇತಿಹಾಸ ಪುರಾಣಗಳನ್ನು ತಿಳಿಯುವಿರಿ' ಎಂದು ತಾನಾಗಿಯೇ ವರವನ್ನು ಕೊಟ್ಟರು. ಈರೀತಿಯಾಗಿ ಗುರುಗಳು ವರವನ್ನು ಕೊಡಲು ಯಮದೇವರು 'ಬ್ರಾಹ್ಮಣರೇ1 ನನ್ನ ಬಳಿಯಲ್ಲಿಯೂ ವರವನ್ನು ಕೇಳಿಕೊಳ್ಳಿರಿ' ಎಂದು ಹೇಳಿದರು. ಅದಕ್ಕೆ ಶಿಷ್ಯರು ಗುರುಗಳಿಗೆ ಪುಷ್ಪ ಹಣ್ಣುಗಳನ್ನು ತಂದುಕೊಡುತ್ತೇವೆಂದು ಹೇಳಿ ನಾವು ತಂದುಕೊಡಲಿಲ್ಲ. ಇದರಿಂದ ನಾವು ಸುಳ್ಳು ಹೇಳಿದವರಾದೆವು. ಅದರಿಂದ ನಮಗೆ ಬಂದ ಪಾಪವನ್ನು ಪರಿಹರಿಸಬೇಕು' ಎಂದು ಕೇಳಿಕೊಂಡರು. ಯಮದೇವರು ಹಾಗೆಯೇ ಆಗಲಿ ಎಂದರು.

ಈ ಸಮಯದಲ್ಲಿ ಇಂದ್ರದೇವರು ಬಂದರು. ಗೌತಮರು ಯಮದೇವರು ಮತ್ತು ಆ ಬ್ರಾಹ್ಮಣರೊಡನೆ 'ನಾನು ದೇವೇಂದ್ರನು ನಿಮಗೆಲ್ಲಾ ಮಂಗಳವಾಗಲಿ. ನನ್ನ ಮಾತನ್ನು ಕೇಳಬೇಕು. ಸುಮತಿಯೂ ಕಪಿಲನೂ ಮೇಧಾವಿಯೂ ನನ್ನ ಲೋಕಕ್ಕೆ ಬರಲಿ' ಎಂದರು. ಅದಕ್ಕೆ ಗೌತಮರು 'ಇನ್ನೂ ಇವರು ಗುರುದಕ್ಷಿಣೆಯನ್ನು ಕೊಡಲಿಲ್ಲ. ಮದುವೆಯಾಗಲಿಲ್ಲ. ಸತ್ತು ಈಗ ತಾನೇ ಬದುಕಿದರು. ಇವರನ್ನು ನಾನು ಹೇಗೆ ಬಿಡಲಿಕ್ಕೆ ಸಾಧ್ಯವಾಗುತ್ತದೆ' ಎಂದರು.

ಇಂದ್ರದೇವರು 'ನಿಮ್ಮ ಅನುಗ್ರಹದಿಂದ ಇವರು ಬದುಕಿದರು. ಇವರು ಎಲ್ಲಾ ಪುಣ್ಯವನ್ನೂ ಹೊಂದಿದ್ದಾರೆ. ಆದುದರಿಂದ ನನ್ನ ಲೋಕಕ್ಕೆ ಬರಲಿ'ಎಂದರು.

ಗೌತಮರು 'ಇವರು ದೇಹಸಹಿತವಾಗಿ ಸ್ವರ್ಗವನ್ನು ಹೊಂದಲಿ. ಇವರ ಸಾಮರ್ಥ್ಯವೂ ಕೀರ್ತಿಯೂ ಗುರುಪೂಜಾಫಲವೂ ಲೋಕದಲ್ಲಿ ಪ್ರಸಿದ್ಧವಾಗುವಂತೆ ಮಾಡಿರಿ' ಎಂದರು. ಇಂದ್ರದೇವರು ಹಾಗೇ ಆಗಲಿ ಎಂದು ಹೇಳಿ ಸೂರ್ಯನಂತೆ ಪ್ರಕಾಶಿಸುತ್ತಿರುವ ವಿಮಾನದಲ್ಲಿ ಕೂತುಕೊಳ್ಳಿರಿಸಿಕೊಂಡು ಸ್ವರ್ಗಕ್ಕೆ ಹೋದರು. ಯಮದೇವರು ಗೌತಮರೊಡನೆ ಹೋಗಿಬರುತ್ತೇನೆಂದು ಹೇಳಿಕೊಂಡು ಹೊರಟು ಹೋದರು. ಗೌತಮರೂ ತನ್ನ ಪತ್ನಿಯಿಂದ ಸಹಿತರಾಗಿ ಆಶ್ರಮಕ್ಕೆ ಹೊರಟು ಹೋದರು.



## ವೈಷ್ಣವನ ಲಕ್ಷಣವು [1]

ರುದ್ರದೇವರು ಪಾರ್ವತಿದೇವಿಗೆ ಹೇಳಿದರು. 'ವಿಷ್ಣುವಿನ ಭಕ್ತನು ವೈಷ್ಣವನು. ಆ ವಿಷ್ಣುವಿನಿಂದಲೇ ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರು ಹುಟ್ಟಿರುವರು. ಆವೇದ ಶಾಸ್ತ್ರಪಾರಂಗತರಾದ ಬ್ರಾಹ್ಮಣರೇ ವೈಷ್ಣವರು. ಶೌಚ ಸತ್ಯ ಕ್ಷಮಾಗುಣಗಳಿಂದ ಕೂಡಿದವನಾಗಿ ರಾಗದ್ವೇಷಗಳಿಂದ ರಹಿತನಾಗಿ ವೇದವಿದ್ಯಾವಿಚಾರವನ್ನು ತಿಳಿದವ ನಾಗಿ ಯಾರು ಇರುವನೋ ಅವನು ವೈಷ್ಣವನೆನ್ನಿಸುವನು. ನಿತ್ಯವೂ ಅಗ್ನಿಹೋತ್ರವನ್ನು ಮಾಡುವವನೂ ನಿತ್ಯವೂ ಅತಿಥಿ ಪೂಜೆಯನ್ನು ಮಾಡುವವನೂ ತಂದೆತಾಯಿಗಳಲ್ಲಿ ಭಕ್ತಿಯುಳ್ಳವನೂ ದಯಾಧರ್ಮದಿಂದ ಕೂಡಿದವನೂ ಪಾಪದಿಂದ ಪರಾಙ್ ಮುಖನಾದವನೂ ಶಂಖ ಚಕ್ರ ಮುದ್ರೆಯನ್ನು ಧರಿಸಿದವನೂ ವೈಷ್ಣವನೆಂದು

1. ಪ.ಪು. ಉಖಂ. ಅ-69

ಹೇಳಲ್ಪಡುವನು. ಕುತ್ತಿಗೆಯಲ್ಲಿ ತುಲಸೀಮಾಲೆಯನ್ನು ಧರಿಸಿದವನಾಗಿ ಬಾಯಿಯಲ್ಲಿ ರಾಮಮಂತ್ರವನ್ನು ಜಪಿಸುವವನಾಗಿ ಯಾವಾಗಲೂ ಭಕ್ತಿಯಿಂದ ಭಗವಂತನನ್ನು ಗಾನಮಾಡುವವನಾಗಿ ಯಾರು ಇರುವನೋ ಅವನು ವೈಷ್ಣವನು. ಪುರಾಣಗಳಲ್ಲಿ ಆಸಕ್ತರಾದವರೂ ಯಜ್ಞಗಳಲ್ಲಿ ಆಸಕ್ತರಾದವರೂ ಸರ್ವಧರ್ಮಗಳಲ್ಲಿ ಸಂಮತ ರಾದವರೂ ವೈಷ್ಣವರೆನಿಸಿಕೊಳ್ಳುವರು. ಇಂತಹ ವೈಷ್ಣವರನ್ನು ಯಾರು ನಿಂದಿಸು ವರೋ ಅವರು ಸತ್ತಮೇಲೆ ಹಾಳು ಜನ್ಮವನ್ನು ಹೊಂದುವರು. ಯಾರು ಲೋಹ ದಿಂದಲೋ ಮಣ್ಣಿನಿಂದಲೋ ಮಾಡಿರುವ ನಾಲ್ಕು ಕೈಗಳುಳ್ಳ ಕೃಷ್ಣಪ್ರತಿಮೆಯನ್ನು ಪೂಜಿಸುವರೋ ಆ ಬ್ರಾಹ್ಮಣರು ಅತ್ಯಂತ ಪವಿತ್ರರು. ಸಾಲಿಗ್ರಾಮವನ್ನು ಚಕ್ರಾಣಿಕೆ ಯನ್ನು ಒಟ್ಟಿಗೆ ಇಟ್ಟು ಪೂಜಿಸಿದರೆ ಸಮಸ್ತ ಪಾಪಗಳು ಪರಿಹಾರವಾಗುವುದು. ಪ್ರತಿಮೆಯನ್ನು ಮಂತ್ರದಿಂದ ಸ್ಥಾಪನೆ ಮಾಡಿ ಪೂಜೆ ಮಾಡಿದರೆ ಕೋಟಿಪಾಟ ಪುಣ್ಯವು ಬರುವುದು. ಧರ್ಮ ಅರ್ಥ ಕಾಮ ಮೋಕ್ಷಗಳು ಉಂಟಾಗುವುವು. ಭಗವಂತನಲ್ಲಿ ಒಂಭತ್ತು ಚಿಹ್ನೆಯುಳ್ಳ ಭಕ್ತಿಯನ್ನು ಮಾಡಬೇಕು. (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂದು ಒಂಭತ್ತು ಚಿಹ್ನೆಗಳು) ಆದುದರಿಂದ ಕಲ್ಲಿನ ಪ್ರತಿಮೆಯಲ್ಲಿಯೋ ಲೋಹದ ಪ್ರತಿಮೆಯ್ಲಲಿಯೋ ಭಕ್ತರು ನಿತ್ಯವೂ ಪೂಜೆಯನ್ನು ಮಾಡಬೇಕು. ರಾಜೋಪಚಾರ ಪೂಜೆಯನ್ನು ಮಾಡಬೇಕು. ಭಗವಂತನು ಸರ್ವಸ್ವಾಮಿಯೆಂದು ಸರ್ವಕಾಲ ದಲ್ಲಿಯೂ ಸ್ಮರಿಸಬೇಕು. ಯಾರು ಈ ರೀತಿಯಿಂದ ಭಕ್ತಿಯಿಂದ ಪೂಜಿಸುವನೋ ಅವನು ಸರಿಯಾದ ಭಗವದ್ಭಕ್ತನು. ಗೋಕುಲದಲ್ಲಿ ಕೃಷ್ಣಪರಮಾತ್ಮನು ಎಂತಹ ರೂಪವನ್ನು ಧರಿಸಿದ್ದನೋ ಅಂತಹ ಆಕಾರವುಳ್ಳ ಪ್ರತಿಮೆಯನ್ನು ಮಾಡಿಸಬೇಕು. ಪ್ರತಿಮೆಗೆ ನಾಲ್ಕು ಕೈಗಳಿರಬೇಕು. ಶಂಖಚಕ್ರಾದಿ ಆಯುಧಗಳೂ ಸಮಸ್ತ ಆಭರಣ ಗಳೂ ಪೀತಾಂಬರಾದಿಗಳೂ ಇರಬೇಕು. ಬಂಗಾರದಿಂದಲೋ ಬೆಳ್ಳಿಯಿಂದಲೋ ತಾಮ್ರದಿಂದಲೋ ಹಿತ್ತಾಳಿಯಿಂದಲೋ ಪ್ರತಿಮೆಯನ್ನು ಮಾಡಿಸಬೇಕು. ಪಂಚರಾತ್ರಾದಿ ಆಗಮಗಳ ಮಂತ್ರಗಳಿಂದಲೂ ವೇದಮಂತ್ರಗಳಿಂದಲೂ ಪ್ರತಿಷ್ಠಾ ಮಾಡಿ ಆಮೇಲೆ ಶಾಸ್ತ್ರದಲ್ಲಿ ಹೇಳಿದಂತೆ ಪೂಜೆಯನ್ನು ಮಾಡಬೇಕು. ಪರಮಾತ್ಮನನ್ನು ಪೂಜಿಸಿದರೆ ಎಲ್ಲಾ ದೇವತೆಗಳನ್ನು ಪೂಜಿಸಿದಂತೆ ಆಗುತ್ತದೆ. ಈರೀತಿಯಾಗಿ ಭಕ್ತಿಯಿಂದ ಪೂಜಾ ಮಾಡಿದರೆ ಪರಮಾತ್ಮನು ಸರ್ವ ಅಭೀಷ್ಟವನ್ನು ಕೊಡುತ್ತಾನೆ.



# ಸುದರ್ಶನದ ಮಹಿಮೆಯು [1]

ರುದ್ರದೇವರು ಪಾರ್ವತೀದೇವಿಗೆ ಹೇಳಿದರು. ಗಿರಿಜೆಯೇ!

ನಾನು ಉತ್ತಮವಾದ ಪರಮಾತ್ಮನ ಭಕ್ತಿಯ ವಿಷಯವನ್ನು ಅವನ ಮಂತ್ರಗಳ ವಿಧಾನವನ್ನೂ ಆ ಭಗವಂತನ ಸ್ವರೂಪವನ್ನು ಹೇಳುವೆನು. ಅವನು ಉತ್ತಮ ತತ್ತ್ವವು. ಅವನಿಗೆ ನಾರಾಯಣ ವಿಷ್ಣು ವಾಸುದೇವ ಸನಾತನ ಪರಮಾತ್ಮ ಪರಬ್ರಹ್ಮ ಇತ್ಯಾದಿ ಅನಂತನಾಮಗಳಿರುವುವು. ಅವನೇ ಸಕಲ ಲೋಕಗಳನ್ನು ಸೃಷ್ಟಿ ಮಾಡಿದವನು. ಅಕಾರವಾಚ್ಯನು. ಅಮುಕ್ತವರ್ಗಕ್ಕೆ ಸ್ವಾಮಿಯಾದ ಕಾರಣ ಮುಕ್ತವರ್ಗಕ್ಕೂ ಸ್ವಾಮಿಯಾಗಿರುವನು. ಅನಂತಶಿರಸ್ಸುಳ್ಳವನು. ಅನಂತ ಕಣ್ಣುಗಳುಳ್ಳವನು. ಅನಂತ ಪಾದಗಳುಳ್ಳವನು. ಅವನು ಸರ್ವತ್ರ ವ್ಯಾಪಿಸಿಕೊಂಡು ಇರುವನು. ಅವನೇ ರಾಮಚಂದ್ರನು. ಸರ್ವಲೋಕಪ್ರಭುವು. ಸರ್ವಜ್ಞನು. ಜಗತ್ತಿಗೆ ಸ್ವಾಮಿಯಾದ ಅವನ ಮಹಿಮೆಯನ್ನು ಎಷ್ಟು ಹೇಳಲಿಕ್ಕೆ ನನ್ನಿಂದ ಸಾಧ್ಯವೋ ಅಷ್ಟು ಮಾತ್ರವನ್ನೇ ಹೇಳುವೆನು. ಬ್ರಹ್ಮದೇವರಿಂದಲೂ ನನ್ನಿಂದಲೂ ಸರ್ವದೇವತೆಗಳಿಂದಲೂ ಆ ಭಗವಂತನ ಎಲ್ಲಾ ಮಹಿಮೆಗಳನ್ನು ಹೇಳಲಿಕ್ಕೆ ಆಗಲಾರದು. ಅವನೇ ಸರ್ವ ಉಪನಿಷತ್ತುಗಳಿಗೂ ಅರ್ಥಭೂತನಾಗಿರುವನು.

ಅವನನ್ನು ಉಪಾಸನಾ ಮಾಡುವ ಪ್ರಭೇಧಗಳನ್ನು ಹೇಳುತ್ತೇನೆ ಕೇಳು. (1)ಮೊದಲು ಪರಮಾತ್ಮನ ಆಯುಧಗಳಾದ ಶಂಖಚಕ್ರಮುದ್ರೆಗಳನ್ನು ಧರಿಸುವುದು, (2) ದ್ವಾದಶನಾಮಗಳನ್ನು ಧರಿಸುವುದು, (3)ಭಗವಂತನ ಮಂತ್ರಗಳನ್ನು ಜಪಿಸುವುದು, (4)ಪರಮಾತ್ಮನನ್ನು ಪೂಜಿಸುವುದು, (5) ಧ್ಯಾನ ಮಾಡುವುದು, (6) ನಾಮಸ್ಮರಣೆಯನ್ನು ಮಾಡುವುದು, (7) ಕೀರ್ತನ ಮಾಡುವುದು, (8) ಶ್ರವಣ ಮಾಡುವುದು, (9)ನಮಸ್ಕರಿಸುವುದು, (10)ಪಾದಸೇವೆಯನ್ನು ಮಾಡುವುದು, (11)ಭಗವಂತನ ಪಾದೋದಕವನ್ನು ಸೇವಿಸುವುದು, (12)ಆ ಭಗವಂತನಿಗೆ ಸಮರ್ಪಿಸಿದ್ದನ್ನೇ ಭೋಜನ ಮಾಡುವುದು, (13)ವಿಷ್ಣುಭಕ್ತರನ್ನು ಸೇವಿಸುವುದು, (14)ಏಕಾದಶೀ (15)ದ್ವಾದಶೀವ್ರತವನ್ನು ಮಾಡುವುದು ಅಂದರೆ ಏಕಾದಶಿಯಲ್ಲಿ ಉಪವಾಸಮಾಡಿ ದ್ವಾದಶಿಯಲ್ಲಿ ಸರಿಯಾದ ಸಮಯದಲ್ಲಿ ಪಾರಣೆ ಮಾಡುವುದು, (16)ದೇವರಿಗೆ ತುಲಸಿಯನ್ನು ಸಮರ್ಪಿಸುವುದು ಈರೀತಿಯಾಗಿ ಹದಿನಾರು

---

1. ಪ.ಪು. ಉಖಂ. ಅ-252 ಇತ್ಯಾದಿ

ಪ್ರಕಾರವಾಗಿ ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುವುದು ಇದೆ. ಈ ಭಕ್ತಿಯಿಂದಲೇ ಸಂಸಾರದಿಂದ ಬಿಡುಗಡೆಯಾಗುವುದು.

ಎಲ್ಲಾ ದೇವತೆಗಳೂ ನಾನೂ ಆ ಪರಮಾತ್ಮನನ್ನು ಪೂಜಿಸಬೇಕು. ಬ್ರಾಹ್ಮಣರು ವಿಶೇಷವಾಗಿ ಅವನನ್ನು ಪೂಜಿಸಬೇಕು. ಆದುದರಿಂದ ಬ್ರಾಹ್ಮಣನು ನಿತ್ಯವೂ ವಿಧಿ ಪ್ರಕಾರವಾಗಿ ಆ ಭಗವಂತನನ್ನು ಪೂಜಿಸಬೇಕು. ಪರಮಾತ್ಮನ ಆಯುಧಗಳಿಂದ ಚಿಹ್ನಿತನಾದವನು ಪರಮಾತ್ಮನ ಲೋಕವನ್ನು ಹೊಂದುವನು. ಬ್ರಾಹ್ಮಣನು ಬಾಹುವಿನಲ್ಲಿ ಶಂಕಚಕ್ರ ಮುದ್ರೆಗಳನ್ನು ಧರಿಸಬೇಕು. ಹೋಮಾಗ್ನಿಯಲ್ಲಿ ಕಾಯಿಸಿ ಶಂಕಚಕ್ರಗಳನ್ನೋ ಪಂಚಾಯುಧಗಳನ್ನೋ ಧರಿಸಬೇಕು. ಈರೀತಿಯಾಗಿ ಮುದ್ರಾಧಾರಣ ಮಾಡಿಯೇ ನಿತ್ಯಕರ್ಮವನ್ನು ಮಾಡಬೇಕು.

ತಪ್ತಮುದ್ರೆಯನ್ನು ಧರಿಸಿದವನು ಯಮಲೋಕಕ್ಕೆ ಹೋಗದೆ ವಿಷ್ಣುಲೋಕಕ್ಕೆ ಹೋಗುವನು. ತಪ್ತಚಕ್ರಶಂಕಧಾರಣೆಯಿಲ್ಲದ ಬ್ರಾಹ್ಮಣನು ಮಾಡಿದ ಪೂಜಾ ಮಂತ್ರಜಪ ಇತ್ಯಾದಿಗಳು ವ್ಯರ್ಥವಾಗುತ್ತದೆ. ಬ್ರಾಹ್ಮಣನು ತಪ್ತ ಶಂಖ ಚಕ್ರ ಮುದ್ರೆಯನ್ನು ಧರಿಸಿದವನಾಗಿ ಮಂತ್ರವನ್ನು ಜಪಿಸಿದರೆ ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ. ತಪ್ತಮುದ್ರಾಧಾರಣೆಯನ್ನು ಮಾಡಿಕೊಳ್ಳದ ಬ್ರಾಹ್ಮಣನನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ ಆ ಶ್ರಾದ್ಧವು ನಿಷ್ಫಲವಾಗುವುದು. ಪಿತೃಗಳು ನಿರಾಶರಾಗಿ ಹೋಗುವರು. ಆದುದರಿಂದ ತಪ್ತಮುದ್ರೆಯುಳ್ಳ ಬ್ರಾಹ್ಮಣನನ್ನೇ ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕು. ತಪ್ತಮುದ್ರೆಯಿಲ್ಲದವನನ್ನು ಪ್ರಯತ್ನಪೂರ್ವಕವಾಗಿ ಪರಿತ್ಯಜಿಸಬೇಕು. ಗೋ ಭೂ ಬಂಗಾರ ಇತ್ಯಾದಿಗಳನ್ನು ತಪ್ತಮುದ್ರಾಧಾರಿಗೇನೇ ದಾನ ಮಾಡಬೇಕು. ತಪ್ತಮುದ್ರೆಯಿಲ್ಲದವನಿಗೆ ಮಾಡಿದ ದಾನವು ಅಸುರರ ಪಾಲಾಗುವುದು. ತಪ್ತಚಕ್ರವನ್ನು ಧರಿಸದವರು ಸರ್ವಪಾಪರಹಿತರಾಗಿ ವಿಷ್ಣುಲೋಕವನ್ನು ಹೊಂದುವರು. ತಪ್ತಚಕ್ರವನ್ನು ಧರಿಸದವನ ದೇಹದಲ್ಲಿ ತೀರ್ಥಾಭಿಮಾನಿಗಳೂ ಯಜ್ಞಾಭಿಮಾನಿಗಳೂ ವಾಸಮಾಡುವರು. ತಪ್ತಚಕ್ರವನ್ನು ಧರಿಸದ ಬ್ರಾಹ್ಮಣನು ನೀಚನಾಗುವನು. ಅವನು ಸಾವಿರ ಯಾಗಗಳನ್ನು ಮಾಡಿದ್ದರೂ ಅವನು ಕೊಟ್ಟ ಯಾವ ವಸ್ತುವನ್ನು ಸ್ವೀಕರಿಸಬಾರದು. ಅವನು ಸಮಸ್ತ ವೇದಗಳನ್ನು ಓದಿದ್ದರೂ ಸಮಸ್ತ ಶಾಸ್ತ್ರಗಳನ್ನು ಅಭ್ಯಾಸ ಮಾಡಿದ್ದರೂ ಉಪಯೋಗವಿಲ್ಲ. ತಪ್ತಚಕ್ರವನ್ನು ಧರಿಸದವನು ಭ್ರಷ್ಟನಾಗುವನು. ಯಾವ ಬ್ರಾಹ್ಮಣನು ದ್ವಾದಶನಾಮಗಳನ್ನು ಧರಿಸದೆ ತಪ್ತಚಕ್ರವನ್ನು ಧರಿಸುವುದಿಲ್ಲವೋ ಅವನನ್ನು ಕತ್ತೆಯ ಮೇಲೆ ಕೂತುಕೊಳ್ಳಿಸಿ ಊರಿನಿಂದ ಹೊರಗೆ ಮಾಡಬೇಕು.

ಪರಮಾತ್ಮನು ಪ್ರಕೃತಿಯ ಸಂಬಂಧದಿಂದ ರಹಿತನಾಗಿರುವನು. ಅವನ ಆಯುಧವನ್ನು ಧರಿಸಿದ ಪುರುಷನೂ ಪ್ರಕೃತಿ ಸಂಬಂಧರಹಿತನಾದ ಮುಕ್ತನಾಗುವನು. ಆದುದರಿಂದ ಭಗವಂತನ ಆಯುಧವಾದ ತಪ್ತ ಚಕ್ರ ಶಂಖಗಳನ್ನು ಧರಿಸಬೇಕು. ಶ್ರೌತಸ್ಮಾರ್ತಕರ್ಮಗಳಲ್ಲಿ ಅಧಿಕಾರ ಸಿದ್ಧಿಸುವುದಕ್ಕೂ ಮಂತ್ರಸಿದ್ಧಿಗಾಗಿಯೂ ದೇವರ ಪೂಜೆಯನ್ನು ಮಾಡಲಿಕ್ಕೆ ಅಧಿಕಾರವು ಸಿದ್ಧಿಸುವುದಕ್ಕಾಗಿಯೂ ವಿಧಿಪ್ರಕಾರವಾಗಿ ತಪ್ತ ಚಕ್ರವನ್ನು ಧರಿಸಬೇಕು. ವೈಷ್ಣವತ್ವವು ಸಿದ್ಧಿಸುವುದಕ್ಕಾಗಿಯೂ ಜ್ಞಾನಸಿದ್ಧಿಗಾಗಿಯೂ ವಿಧಿಪ್ರಕಾರವಾಗಿ ಮಾಡಿದ ಹೋಮದ ಅಗ್ನಿಯಲ್ಲಿ ಶಂಖಚಕ್ರಮುದ್ರೆಗಳನ್ನು ಕಾಯಿಸಿ ಧರಿಸಬೇಕು. ಶಂಖ ಚಕ್ರ ಗದಾ ಶಾಂರ್ಙ ಹೊರತು ಇತರ ಪರಮಾತ್ಮನ ಆಯುಧಗಳಿಂದ ಮೈಯಲ್ಲಿ ಸುಟ್ಟುಕೊಳ್ಳಬಾರದು. ಬೇರೆ ವಸ್ತುವಿನಿಂದ ಸುಟ್ಟುಕೊಂಡರೆ ಅವನು ಸತ್ಕರ್ಮಕ್ಕೆ ಅರ್ಹನಾಗುವುದಿಲ್ಲ. ಚಕ್ರಧಾರಿ ಯಾಗದ ಬ್ರಾಹ್ಮಣನನ್ನು ದೂರದಲ್ಲಿಯೇ ಬಿಡಬೇಕು. ಅವನನ್ನು ಚಂಡಾಲನಿಗೆ ಸಮಾನನೆಂದು ತಿಳಿಯಬೇಕು. ಅವನನ್ನು ನೋಡಲೇಬಾರದು. ವಿಷ್ಣುಭಕ್ತನಾದೆ ಇರುವ ಬ್ರಾಹ್ಮಣನಾದರೂ ಚಂಡಾಲನಿಗೆ ಸಮಾನನು. ವಿಷ್ಣುಭಕ್ತನಾದವನು ನಾಲ್ಕು ವರ್ಣದಿಂದ ಬಾಹ್ಯನಾದ ಸಂಕರಜಾತಿಯವನಾದರೂ ಎಲ್ಲರನ್ನೂ ಪವಿತ್ರೀಕರಿಸುವನು. ಆದುದರಿಂದ ಬ್ರಾಹ್ಮಣರು ಮಂತ್ರಸಿದ್ಧಿಗಾಗಿಯೂ ಜ್ಞಾನಸಿದ್ಧಿಗಾಗಿಯೂ ಮೋಕ್ಷಕ್ಕಾಗಿಯೂ ತಪ್ತ ಚಕ್ರವನ್ನು ಧರಿಸಬೇಕು.

ವಿಷ್ಣುಚಕ್ರವನ್ನು ಧರಿಸಿದವರು ಉತ್ತಮರು. ಧರಿಸದೆ ಇದ್ದವರು ನೀಚರು. ಸರ್ವಾಶ್ರಮಗಳಲ್ಲಿ ಇರುವ ಬ್ರಾಹ್ಮಣರೂ ವಿಶೇಷವಾಗಿ ತಪ್ತಮುದ್ರೆಯನ್ನು ಧರಿಸಬೇಕು. (ಈ ವಿಷಯವನ್ನು ವೇದದಲ್ಲಿಯೇ ಹೇಳುತ್ತದೆ) ಬಲಭುಜದಲ್ಲಿ ಚಕ್ರಮುದ್ರೆಯನ್ನು ಎಡಭುಜದಲ್ಲಿ ಶಂಖಮುದ್ರೆಯನ್ನು ಧರಿಸಬೇಕೆಂದು ಬ್ರಹ್ಮಜ್ಞಾನಿಗಳು ಹೇಳುವರು. ತಪ್ತಮುದ್ರೆಯನ್ನು ಧರಿಸದೆ ಇದ್ದವನು ವಿಷ್ಣುಲೋಕವನ್ನು ಹೊಂದಲಾರನು. ತಪ್ತಮುದ್ರೆಯನ್ನು ಧರಿಸುವವರು ಹೊಂದುವರು. ಪವಿತ್ರವಾದ ತಪ್ತ ಚಕ್ರವನ್ನು ಧರಿಸದವರು ಪಾಪಸಮುದ್ರವನ್ನು ಧರಿಸುವರು. ಪರಮಾತ್ಮನ ಚಕ್ರವು ಪವಿತ್ರವಾದದ್ದು. ಜಗತ್ತಿನಲ್ಲಿ ವ್ಯಾಪ್ತವಾದದ್ದು. ಆದರಿಂದ ತಪ್ತವಾದ (ಬಿಸಿಮಾಡಲ್ಪಟ್ಟ) ದೇಹವುಳ್ಳವರು ಉತ್ತಮಲೋಕವನ್ನು ಹೊಂದುವರು – ಪವಿತ್ರ, ಚರಣ, ನೇಮಿ, ಚಕ್ರ, ಸುದರ್ಶನ, ಸಹಸ್ರಾರ, ಪ್ರಾಕೃತಘ್ನ, ಲೋಕದ್ವಾರ ಮಹೌಜಸ ಇತ್ಯಾದಿ ರೀತಿಯಾಗಿ ವಿಷ್ಣುಚಕ್ರಕ್ಕೆ ಹೆಸರುಗಳು ಇರುವುವು. ಶುದ್ಧವಾದ ಅಗ್ನಿತಪ್ತವಾದ ಚಕ್ರದಿಂದ ನಾವು ಅಧ್ಯಯನ ಮಾಡಿದ ವೇದಗಳನ್ನು ಪವಿತ್ರವನ್ನಾಗಿ

ಮಾಡು (ಅಂದರೆ ತಪ್ತಮುದ್ರಾಧಾರಣೆ ಮಾಡದೆ ಇದ್ದರೆ ವೇದಾಧ್ಯಯನ ಮಾಡಿದ್ದು ನಿಷ್ಫಲವಾಗುತ್ತದೆ ಎಂದು ಭಾವವು) ಅಗ್ನಿದೇವತೆಯೇ! ಅಂದರೆ ಅಗ್ನಿಯೆಂದು ಹೆಸರುಳ್ಳ ಪರಮಾತ್ಮನೇ! ನಿನ್ನ ಜ್ವಾಲೆಯಿಂದ ಕೂಡಿದ ಚಕ್ರಮುದ್ರೆಯಿಂದ ನಮ್ಮನ್ನು ಪವಿತ್ರರನ್ನಾಗಿ ಮಾಡು—ಯಾವ ಚಕ್ರದಿಂದ ದೇವತೆಗಳು ತಮ್ಮ ದೇಹವನ್ನು ಪವಿತ್ರೀಕರಿಸಿಕೊಳ್ಳುತ್ತಾರೋ ಅಂತಹ ಚಕ್ರಮುದ್ರೆಯಿಂದ ವಾಯುದೇವರ ಅವತಾರಭೂತರಾದ ಶ್ರೀಮದಾಚಾರ್ಯರೂ ಅವರ ಪೀಠದಲ್ಲಿ ಬಂದ ಅವರ ಸನ್ನಿಧಾನವುಳ್ಳ ಯತಿಗಳೂ ನಮ್ಮನ್ನು ಪವಿತ್ರೀಕರಿಸಲಿ–ಭಗವಂತನ ಸಂಬಂಧಿಯಾದ ನೂರು ಗುರುಗುಂಜ ತೂಕ ಬಂಗಾರದಿಂದ ಮಾಡಿದ ಚಕ್ರಮುದ್ರೆಯಿಂದ ನಾವು ಓದಿದ ವೇದಗಳನ್ನು ಪವಿತ್ರೀಕರಿಸುತ್ತೇವೆ. ಮಹಾನುಭಾವನಾದ ಪರಮಾತ್ಮನ ಚಕ್ರವನ್ನು ದೇಹದಲ್ಲಿ ಧರಿಸಿದರೆ ಉತ್ತಮವಾದ ಸ್ಥಾನವು ಸಿಗುವುದು' ಇತ್ಯಾದಿ ರೀತಿಯಾಗಿ

ಅತಪ್ತತನೂರ್ನ ತದಾಮೋ ಅಶ್ನುತೇ ತತಂ ಪುರಾಣಂ ವಾಙ್ಮಯಂಶುಭಮ್ ।
ತೇನ ಚಕ್ರೇಣ ಸಂತಪ್ತಾಸ್ತರೇಯುಃ ಪಾತಕಾಂಬುಧಿಮ್ ।
ಪವಿತ್ರಂ ವಿಷ್ಣುಚಕ್ರಂ ತಜ್ಜಗದ್ವ್ಯಾಪ್ಯಂ ಹರೇಃ ಸದಾ ।
ತೇನ ತಪ್ತಾ ತನುರ್ಯೇಷಾಂ ತೇ ಯಾಂತಿ ಪರಮಂ ಪದಮ್ ।
ಪವಿತ್ರಂ ಚರಣಂ ನೇಮಿ ಹರೇಶ್ಚಕ್ರಂ ಸುದರ್ಶನಮ್ ।
ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಮ್ ।
ನಾಮಾನಿ ವಿಷ್ಣುಚಕ್ರಸ್ಯ ಪರ್ಯಾಯೇಣ ನಿಬೋಧ ಮೇ ।
ಶುದ್ಧೇನ ವಹ್ನಿ ತಪ್ತೇನ ಬ್ರಹ್ಮ ತೇನ ಪುನೀಹಿ ನಃ ।
ಯತ್ತೇ ಪವಿತ್ರ ಮರ್ಚಿವದಗ್ನೇ ತೇನ ಪುನೀಹಿ ನಃ ।
ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ ।
ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಮ್ ।
ಪ್ರಾಜಾಪತ್ಯಂ ಪವಿತ್ರಂ ತಚ್ಛತೋದ್ಯಾಮಂ ಹಿರಣ್ಮಯಮ್ ।
ವಯಂ ಬ್ರಹ್ಮವಿದಸ್ತೇನ ಪೂತಂ ಬ್ರಹ್ಮ ಪುನೀಮಹೇ ।
ಸನೇಮಿಚಕ್ರಂ ಸತತಂ ಚಾಕ್ಷರಸ್ಯ ಮಹಾತ್ಮ ನಃ ।
ತಸ್ಮಿಂಶ್ಚಕ್ರವೃತೇ ದೇಹೇ ಮಹೋನ್ನತಿ ಪದಂ ಯಯೌ ॥

ಈ ಶ್ರುತಿಗಳ ತಾತ್ಪರ್ಯವಿರುತ್ತದೆ.

ಹಾಗೆಯೇ ಇತಿಹಾಸ ಪುರಾಣ ಗಳಲ್ಲಿಯೂ ಶಂಖ ಚಕ್ರ ಮುದ್ರೆಗಳನ್ನು ಧರಿಸಬೇಕೆಂದು ಹೇಳುತ್ತದೆ. ಯಾವ ಮಹಾನುಭಾವನು ಊರ್ಧ್ವಪುಂಡ್ರಗಳನ್ನು (ನಾಮಗಳನ್ನು) ಹಚ್ಚಿಕೊಂಡವನಾಗಿ ಚಕ್ರಮುದ್ರೆಯನ್ನು ಧರಿಸಿದವನಾಗಿ ಹೃದಯ ದಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತಾನೋ ಉತ್ತಮವಾದ ಮಂತ್ರವನ್ನು ಜಪಿಸುತ್ತಾನೋ ಅವನು ಶುದ್ಧವಾದ ಮನಸ್ಸುಳ್ಳವನಾಗಿ ಪರಮಾತ್ಮನನ್ನು ಹೊಂದುತ್ತಾನೆ. ಯಾರು ಕುತ್ತಿಗೆಯಲ್ಲಿ ತುಲಸೀಮಣಿಯ ಮಾಲೆಯನ್ನು ಪದ್ಮಾಕ್ಷಿಮಾಲೆಯನ್ನು ಧರಿಸುತ್ತಾರೋ ಬಾಹುಮೂಲದಲ್ಲಿ ತಪ್ತ ಶಂಖಚಕ್ರಮುದ್ರೆಯನ್ನು ಧರಿಸಿರುತ್ತಾರೋ ಹಣೆಯಲ್ಲಿ ಪ್ರಕಾಶಮಾನವಾದ ಊರ್ಧ್ವಪುಂಡ್ರವುಳ್ಳವರಾಗಿರುತ್ತಾರೋ ಅಂತಹ ವೈಷ್ಣವರು ಬೇಗನೆ ಲೋಕವನ್ನು ಪವಿತ್ರೀಕರಿಸುತ್ತಾರೆ. ಯಾರ ಬಲಭುಜದಲ್ಲಿ ತಪ್ತ ಚಕ್ರವು ಇರುವುದಿಲ್ಲವೋ ಅವನು ಮಾಡಿದ ಸತ್ಕರ್ಮಗಳೆಲ್ಲವೂ ವ್ಯರ್ಥವಾಗುವುವು. ಯಾವ ಬ್ರಾಹ್ಮಣರು ಭುಜದಲ್ಲಿ ವಿಧಿಪ್ರಕಾರವಾಗಿ ತಪ್ತಚಕ್ರಶಂಖಗಳನ್ನು ಧರಿಸುತ್ತಾರೋ ಅವರು ವಿರುದ್ಧ ಕರ್ಮ ಮಾಡಿದವರಾದರೂ ಅವರನ್ನು ಜನರು ರಕ್ಷಿಸುವರು. ಹೋಮಾಗ್ನಿಯಿಂದ ಕಾಯಿಸಿದ ಶಂಖಚಕ್ರಮುದ್ರೆಗಳನ್ನು ಬಾಹು ಮೂಲದಲ್ಲಿ ಧರಿಸಿದವನು ಸಂಸಾರ ಸಮುದ್ರವನ್ನು ದಾಟಿ ಪರಮಾತ್ಮನ ಲೋಕವನ್ನು ಹೊಂದುವನು. ತಾನು ಮಾತ್ರ ತಪ್ತಮುದ್ರೆಯನ್ನು ಧರಿಸುವುದಲ್ಲದೆ ತನ್ನ ಹೆಂಡತಿ ಮಕ್ಕಳು ಭೃತ್ಯರಿಗೂ ಪಶುಗಳಿಗೂ ಧರಿಸುವಂತೆ ಮಾಡಬೇಕು. ತಪ್ತಚಕ್ರಶಂಖ ಧಾರಣೆಯು ಪ್ರಥಮ ವೈಷ್ಣವಲಕ್ಷಣವು ತಪ್ತಮುದ್ರಾಧಾರಣೆಯಿಂದ ಮನಸ್ಸಿನಲ್ಲಿ ಅಭಿಮಾನರೋಷಗಳು ಹೋಗುವುವು. ಭಗವಂತನ ಜ್ಞಾನವು ಬರುವುದು. ಸರ್ವಪ್ರಾಣಿಗಳಲ್ಲಿಯೂ ದಯೆಯುಂಟಾಗು ವುದು. ಶಾಂತಿಯುಂಟಾಗುವುದು. ಇಂದ್ರಿಯ ವಿಷಯಗಳಲ್ಲಿ ಆಸೆಯು ಹೋಗುವುದು. ಪತ್ನೀಪುತ್ರಾದಿಗಳಲ್ಲಿ ಅಭಿಮಾನವು ಹೋಗುವುದು. ಭಗವಂತನ ಧ್ಯಾನದಲ್ಲಿ ಆಸಕ್ತಿಯು ಬರುವುದು. ಪರಮಾತ್ಮನಲ್ಲಿ ಭಕ್ತಿಯಿಂದ ಸೇವೆಯು ನಡೆಯುವುದು. ಆದುದರಿಂದ ತಪ್ತಮುದ್ರೆ ಯನ್ನು ಧರಿಸುವುದು ಮುಖ್ಯ ವೈಷ್ಣವಧರ್ಮವು. ತಪ್ತಮುದ್ರೆಯನ್ನು ಧರಿಸದೆ ಇದ್ದರೆ ವೈಷ್ಣವನಾಗಲಾರನು.

# ಊರ್ಧ್ವಪುಂಡ್ರ ಮಹಿಮೆ [1]

ರುದ್ರದೇವರು ಪಾರ್ವತೀದೇವರಿಗೆ ಹೇಳಿದರು—

ಊರ್ಧ್ವಪುಂಡ್ರದ (ದ್ವಾದಶ ನಾಮಗಳ) ಮಹಿಮೆಯನ್ನು ಹೇಳುತ್ತೇನೆ. ಊರ್ಧ್ವಪುಂಡ್ರಗಳನ್ನು ಧರಿಸುವುದರಿಂದಲೇ ಕ್ರಮದಿಂದ ಸಂಸಾರದಿಂದ ಬಿಡುಗಡೆಯನ್ನು ಹೊಂದುವನು. ಮನೋಹರವಾದ ವಿಶಾಲವಾದ ಊರ್ಧ್ವಪುಂಡ್ರದ ಮಧ್ಯದಲ್ಲಿ ರಮಾದೇವಿಯ ರಿಂದ ಸಹಿತನಾಗಿ ಪರಮಾತ್ಮನು ವಾಸಮಾಡುವನು. ಆದುದರಿಂದ ಯಾರ ದೇಹದಲ್ಲಿ ಊರ್ಧ್ವಪುಂಡ್ರವಿರುವದೋ ಅವನ ದೇಹವು ಶುಭವಾದ ಪರಮಾತ್ಮನ ಮನೆಯು. ಯಾರು ಶುಭ್ರಮೃತ್ತಿಕೆಯಿಂದ ಅಂದರೆ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸುವನೋ ಅವನು ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಎಲ್ಲಾ ಯಜ್ಞಗಳಲ್ಲಿ ದೀಕ್ಷಿತನಾದ ಫಲವನ್ನು ಹೊಂದುವನು. ಊರ್ಧ್ವಪುಂಡ್ರವನ್ನು ಧರಿಸಿದ ಬ್ರಾಹ್ಮಣನು ಸರ್ವಲೋಕಗಳಲ್ಲಿಯೂ ಪೂಜಿತನಾಗಿ ವಿಮಾನಶ್ರೇಷ್ಠದಲ್ಲಿ ಕೂತುಕೊಂಡು ವಿಷ್ಣುಲೋಕವನ್ನು ಹೊಂದುವನು. ಬ್ರಾಹ್ಮಣನು ಮೂರು ಕಾಲದಲ್ಲಿಯೂ ಸರ್ವಪಾಪಪರಿಹಾರಕ್ಕಾಗಿ ಸಮಸ್ತ ಪುಣ್ಯವು ಸಿಗುವುದಕ್ಕಾಗಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಊರ್ಧ್ವಪುಂಡ್ರವನ್ನು ಧರಿಸಿದ ಬ್ರಾಹ್ಮಣನನ್ನು ನೋಡಿದರೆ ಎಲ್ಲಾ ಪಾಪವೂ ಹೋಗುತ್ತದೆ. ಭಕ್ತಿಯಿಂದ ನಮಸ್ಕರಿಸಿದರೆ ಎಲ್ಲಾ ದಾನಗಳನ್ನು ಮಾಡಿದ ಫಲವು ಬರುತ್ತದೆ. ಊರ್ಧ್ವಪುಂಡ್ರಧಾರಿಯಾದ ಬ್ರಾಹ್ಮಣನನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ ಕೋಟಿಕಲ್ಪದವರೆಗೆ ಪಿತೃಗಳು ತೃಪ್ತಿಯನ್ನು ಹೊಂದುವರು.

ಯಾರು ಊರ್ಧ್ವಪುಂಡ್ರಧಾರಿಯಾಗಿ ಶ್ರಾದ್ಧವನ್ನು ಮಾಡುತ್ತಾನೋ ಅವನು ಕೋಟಿ ಸಾವಿರ ಕಲ್ಪ ಗಯೆಯಲ್ಲಿ ಶ್ರಾದ್ಧ ಮಾಡಿದಂತೆ ಆಗುತ್ತದೆ. ಊರ್ಧ್ವಪುಂಡ್ರವನ್ನು ಧರಿಸಿದವನಾಗಿ ಯಜ್ಞ ದಾನ ತಪಸ್ಸು ಜಪ ಹೋಮ ಇತ್ಯಾದಿಗಳನ್ನು ಯಾವುದನ್ನು ಮಾಡಿದರೂ ಅವನಿಗೆ ಅನಂತ ಪುಣ್ಯವು ಉಂಟಾಗುವುದು. ಊರ್ಧ್ವಪುಂಡ್ರವಿಲ್ಲದೆ ಮಾಡಿದ ಯಾವ ಕರ್ಮವೂ ಪುಣ್ಯದಾಯಕವಾಗಲಾರದು. ಊರ್ಧ್ವಪುಂಡ್ರವಿಲ್ಲದ ದೇಹವು ಸ್ಮಶಾನಕ್ಕೆ ಸಮಾನವಾದದ್ದು. ಅದನ್ನು ನೋಡಲೇಬಾರದು. ಊರ್ಧ್ವಪುಂಡ್ರವಿಲ್ಲದೆ ಸಂಧ್ಯಾವಂದನೆಯನ್ನು ಮಾಡಿದರೆ ಅದರ ಫಲವನ್ನು ರಾಕ್ಷಸರು ಅಪಹರಿಸುವರು. ಅವನು ನರಕವನ್ನು ಹೊಂದುವನು.

---

**1. ಪ.ಪು. ಉಖಂ. ಅ-68. ಕೃ.ಮ. 253**

ಬ್ರಾಹ್ಮಣನು ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನೇ ಧರಿಸಬೇಕು. ಎಂತಹ ಆಪತ್ತು ಬಂದರೂ ಅಡ್ಡನಾಮವನ್ನು ಧರಿಸಬಾರದು. ಊರ್ಧ್ವಪುಂಡ್ರವು ಯಾರಿಗೂ ನಿಷಿದ್ಧವಲ್ಲ. ಕ್ಷತ್ರಿಯಾದಿಗಳೂ ಊರ್ಧ್ವಪುಂಡ್ರವನ್ನು ಧರಿಸಬೇಕು. ಬ್ರಾಹ್ಮಣರು ಅಡ್ಡನಾಮಗಳನ್ನು ಹಚ್ಚಿಕೊಳ್ಳಲೇಬಾರದು. ನಾರಾಯಣನು ಹೊರತು ಇನ್ನೊಬ್ಬರನ್ನು ಸರ್ವೋತ್ತಮನೆಂದು ಪೂಜಿಸಲೂಬಾರದು. ಒಳ್ಳೇ ವಂಶದಲ್ಲಿ ಹುಟ್ಟಿದವನಾಗಿದ್ದರೂ ಬ್ರಾಹ್ಮಣನು ಭಸ್ಮವನ್ನು ಧರಿಸಿದರೆ ಮದ್ಯದ ಗಡಿಗೆಯನ್ನು ಬಿಡುವಂತೆ ಅವನನ್ನು ಬಿಟ್ಟು ಬಿಡಬೇಕು. ಅಡ್ಡನಾಮವನ್ನು ಹಚ್ಚಿಕೊಳ್ಳುವುದರಿಂದ ಬ್ರಾಹ್ಮಣನನು ಭ್ರಷ್ಟನಾಗುವನು. ಸರ್ವಪ್ರಾಣಿಗಳ ಹಿತದಲ್ಲಿ ಆಸಕ್ತರಾದ ಮಹಾನುಭಾವರು ಮಧ್ಯಸ್ಥಳವನ್ನು ಬಿಟ್ಟು ಊರ್ಧ್ವಪುಂಡ್ರವನ್ನು ಧರಿಸುವರು. ಅದು ಪರಮಾತ್ಮನ ಮಂದಿರವು. ಹಾಗೆಯೇ ಧರಿಸಬೇಕು. ಹೆಂಗಸರೂ ಊರ್ಧ್ವಪುಂಡ್ರ ವನ್ನು ಧರಿಸಬೇಕು. ಊರ್ಧ್ವಪುಂಡ್ರದಲ್ಲಿ ಅವಕಾಶದಲ್ಲಿ ರಮಾದೇವಿಯರಿಂದ ಸಹಿತನಾಗಿ ಪರಮಾತ್ಮನು ವಾಸಮಾಡುವನು. ಊರ್ಧ್ವಪುಂಡ್ರದ ಮಧ್ಯದಲ್ಲಿ ಅವಕಾಶ ಮಾಡದೆ ಧರಿಸಿದರೆ ಅವನು ರಮಾದೇವಿಯರಿಂದ ಸಹಿತನಾದ ಪರಮಾತ್ಮನನ್ನು ದೂರಮಾಡುವನು. ಆದುದರಿಂದ ಭಗವಂತನ ಲೋಕವು ಸಿದ್ಧಿಸುವುದಕ್ಕಾಗಿ ಮಧ್ಯದಲ್ಲಿ ಅವಕಾಶ ಮಾಡಿಯೇ ಊರ್ಧ್ವಪುಂಡ್ರವನ್ನು ಧರಿಸಬೇಕು.

ವೈಕುಂಠ ಎಂಬ ಮಡುವಿನ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬಹುದು. ತುಲಸೀಮೂಲ ಮೃತ್ತಿಕೆಯನ್ನು ತೆಗೆದು ಊರ್ಧ್ವಪುಂಡ್ರವನ್ನು ಧರಿಸಬೇಕು. ಅದರಿಂದ ಪರಮಾತ್ಮನು ಸಂತುಷ್ಟನಾಗುವನು. ಅಥವಾ ದ್ವಾರಕಾದಲ್ಲಿ ವಾಸುದೇವ ಹ್ರದದಲ್ಲಿ ಇರುವ ಮೃತ್ತಿಕೆಯಿಂದ ಅಂದರೆ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಗಂಗಾತೀರದ ಮೃತ್ತಿಕೆಯಿಂದಲೂ ಊರ್ಧ್ವ ಪುಂಡ್ರವನ್ನು ಧರಿಸಬಹುದು. ಊರ್ಧ್ವಪುಂಡ್ರವನ್ನು ಧರಿಸುವುದರಿಂದ ಸರ್ವಯಜ್ಞ ಗಳ ಫಲಗಳು ಬರುವುವು. ಉತ್ತಮ ಕ್ಷೇತ್ರಗಳ ಮೃತ್ತಿಕೆಯನ್ನು ಪರಮಾತ್ಮನ ಪಾದೋದಕವನ್ನು ಸೇರಿಸಿ ಭಕ್ತಿಯಿಂದ ಅದರಿಂದ ಊರ್ಧ್ವಪುಂಡ್ರವನ್ನು ಧರಿಸ ಬಹುದು. ಎಲ್ಲಿಯ ಮೃತ್ತಿಕೆಯನ್ನು ವೈಷ್ಣವರು ಧರಿಸುವರೋ ಆ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಊರ್ಧ್ವಪುಂಡ್ರವು ನೀಲವಾಗಿದ್ದರೆ ಶಾಂತಿಗೆ ಕಾರಣವಾಗುವುದು. ಕೆಂಪಾಗಿದ್ದರೆ ವಶ್ಯಕರವಾಗಿಯೂ, ಅರಸಿನವಾದರೆ ಸಂಪತ್ಕರವಾಗಿಯೂ, ಬೆಳ್ಳಗಿದ್ದರೆ ಮೋಕ್ಷಕ್ಕೆ ಕಾರಣವಾಗಿಯೂ ಆಗುವುದು.

ಗುಂಡಗೆ ಇರುವ ನಾಮವೂ ಅಡ್ಡವಾದ ನಾಮವೂ, ಮಧ್ಯೇ ಅವಕಾಶರಹಿತವಾದ ನಾಮವೂ, ಅತಿಗಿಡ್ಡಾದ, ಅತಿಉದ್ದವಾದ, ಅತಿ ಅಗಲಾದ, ಅತಿಚಿಕ್ಕದಾದ, ವಕ್ರವಾದ, ವಿರೂಪವಾದ, ವಕ್ರವಾದ, ಅಂಗವುಳ್ಳ ಬುಡವಿಲ್ಲದ ,ಅತಿಕೆಂಪಾಗಿರುವ, ಬೆರಳಿಂದ ಹಚ್ಚಿಕೊಳ್ಳದೆ ಇದ್ದ, ವಾಸನೆಯಿಲ್ಲದೆ ಇರುವ, ನಾಮಗಳೂ ವ್ಯರ್ಥವೆಂದು ಹೇಳುವರು.

ಮೂಗಿನ ಮೂಲವನ್ನು ಆರಂಭಿಸಿ ಹಣೆಯಲ್ಲಿ ನಾಮವನ್ನು ಹಚ್ಚಿಕೊಳ್ಳಬೇಕು. ಹುಬ್ಬಿನ ಮಧ್ಯದಲ್ಲಿ ಆರಂಭಿಸಿ ಅದರ ಮಧ್ಯದಲ್ಲಿ ಅವಕಾಶವನ್ನು ಮಾಡಬೇಕು. ಹಣೆಯಲ್ಲಿ ನಾಮವನ್ನು ಹಚ್ಚಿಕೊಳ್ಳುವಾಗ ಕೇಶವನನ್ನು ಧ್ಯಾನ ಮಾಡಬೇಕು. ಉದರದಲ್ಲಿ ನಾರಾಯಣನನ್ನು, ಎದೆಯಲ್ಲಿ ಮಾಧವನನ್ನು, ಕುತ್ತಿಗೆಯ ಕೆಳಗೆ ಗೋವಿಂದನನ್ನು, ಬಲ ಹೊಟ್ಟೆಯಲ್ಲಿ ವಿಷ್ಣುವನ್ನು, ಬಲಭುಜದಲ್ಲಿ ಮಧುಸೂದನ ನನ್ನು, ಬಲಕುತ್ತಿಗೆಯಲ್ಲಿ ತ್ರಿವಿಕ್ರಮವನನ್ನು, ಎಡಹೊಟ್ಟೆಯ ಭಾಗದಲ್ಲಿ ವಾಮನ ನನ್ನು, ಎಡಭುಜದಲ್ಲಿ ಶ್ರೀಧರನನ್ನು, ಎಡಬಾಗ ಕುತ್ತಿಗೆಯಲ್ಲಿ ಹೃಷೀಕೇಶನನ್ನು, ಬೆನ್ನಿನಲ್ಲಿ ಪದ್ಮನಾಭನನ್ನು, ಕುತ್ತಿಗೆಯ ಹಿಂದಿನ ಭಾಗದಲ್ಲಿ ದಾಮೋದರನನ್ನು, ನಾಮ ಹಚ್ಚಿಕೊಳ್ಳುವಾಗ ಧ್ಯಾನ ಮಾಡಬೇಕು. ಆಮೇಲೆ ಕೈತೊಳೆದುಕೊಂಡ ನೀರಿನಿಂದ ವಾಸುದೇವನನ್ನು ಧ್ಯಾನ ಮಾಡುತ್ತಾ ಶಿರಸ್ಸಿಗೆ ಪ್ರೋಕ್ಷಣೆ ಮಾಡಿಕೊಳ್ಳಬೇಕು.

ಹಣೆಯಲ್ಲಿಯೂ ಬೆನ್ನಿನಲ್ಲಿಯೂ ಕುತ್ತಿಗೆಯಲ್ಲಿಯೂ ನಾಲ್ಕು ಅಂಗುಲ ಉದ್ದದ ನಾಮಗಳನ್ನು ಹೊಟ್ಟೆಯಲ್ಲಿಯೂ ಪಾರ್ಶ್ವಗಳಲ್ಲಿಯೂ ಹತ್ತು ಅಂಗುಲ ಉದ್ದದ ನಾಮಗಳನ್ನು ಭುಜಗಳಲ್ಲಿಯೂ ಎದೆಯಲ್ಲಿಯೂ ಎಂಟು ಅಂಗುಲ ಉದ್ದದ ನಾಮ ಗಳನ್ನು ಧರಿಸಬೇಕು. ತರುವಾಯ ಆ ನಾಮಗಳಲ್ಲಿ ಆವಾವ ಭಗವನ್ಮೂರ್ತಿಗಳನ್ನು ಧ್ಯಾನ ಮಾಡಬೇಕು. ಬ್ರಾಹ್ಮಣರಿಗೆ ಹೀಗೆ ಹನ್ನೆರಡು ನಾಮಗಳು. ಕ್ಷತ್ರಿಯರಿಗೆ ಹಣೆಯಲ್ಲಿ ಎದೆಯಲ್ಲಿ ಎರಡು ಕೈಗಳಲ್ಲಿ ಹೀಗೆ ನಾಲ್ಕೇ ನಾಮಗಳು ವೈಶ್ಯನಿಗೆ ಹಣೆಯಲ್ಲಿಯೂ ಎದೆಯಲ್ಲಿಯೂ ಎಂದು ಎರಡೇ ನಾಮಗಳು. ಶೂದ್ರರಿಗೂ ಹೆಂಗಸರಿಗೂ ಹಣೆಯಲ್ಲಿ ಒಂದೇ ನಾಮವು. ಎಲ್ಲರೂ ಮೊದಲು ಹಣೆಯಲ್ಲಿ ನಾಮವನ್ನು ಧರಿಸಬೇಕು. ಕ್ಷತ್ರಿಯರು ನಾಲ್ಕು ನಾಮಗಳಲ್ಲಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ, ಅನಿರುದ್ಧ ಎಂಬ ಭಗವಂತನ ಮೂರ್ತಿಗಳನ್ನು ಧ್ಯಾನಮಾಡಬೇಕು. ವೈಶ್ಯರು ಎರಡುನಾಮಗಳಲ್ಲಿ ಗೋವಿಂದ ಕೃಷ್ಣರನ್ನು ಧ್ಯಾನಿಸಬೇಕು. ಸ್ತ್ರೀಶೂದ್ರರು ಒಂದು ನಾಮದಲ್ಲಿ ನಾರಾಯಣನನ್ನು ಧ್ಯಾನಿಸಬೇಕು. ಅಶ್ವತ್ಥಪತ್ರದ ಆಕಾರವುಳ್ಳ ಅಥವಾ ಬಿದಿರಿನ ಎಲೆಯ ಆಕಾರವುಳ್ಳ ಪದ್ಮದ ಮೊಗ್ಗೆಯ ಆಕಾರವುಳ್ಳ ನಾಮಗಳು

ಮೋಕ್ಷಪ್ರದಗಳು. ಅಂತೂ ಉದ್ದವಾದ ನಾಮವನ್ನು ಧರಿಸಬೇಕು. ಪರಮಾತ್ಮನ ಪಾದದ ಆಕಾರವುಳ್ಳ ನಾಮವನ್ನು ಧರಿಸಬೇಕು. ಬಾಹುಮೂಲದಲ್ಲಿ ತಪ್ತಚಕ್ರ ಶಂಖಗಳನ್ನು ಧರಿಸಿದ ದೇಹದಲ್ಲಿ ಊರ್ಧ್ವಪುಂಡ್ರವನ್ನು ಧರಿಸಿದ ಕುತ್ತಿಗೆಯಲ್ಲಿ ಪದ್ಮಾಕ್ಷಮಾಲೆಯನ್ನು ಧರಿಸಿದ ವೈಷ್ಣವರು ಲೋಕಗಳನ್ನು ಪಾಪಸಮೂಹದಿಂದ ರಕ್ಷಿಸುವರು.



## ಶಾಲಗ್ರಾಮದ ಶ್ರೇಷ್ಠತೆಯು [1]

ರುದ್ರದೇವರು ಷಣ್ಮುಖನಿಗೆ ಶಾಲಗ್ರಾಮದ ಮಹಿಮೆಯನ್ನು ಹೇಳಿದರು.

ಶಾಲಗ್ರಾಮಶಿಲೆಯಲ್ಲಿ ಮೂರುಲೋಕವೂ ಅಡಗಿರುವುದು. ಅದನ್ನು ನೋಡಿದರೂ ನಮಸ್ಕರಿಸಿದರೂ ಅಭಿಷೇಕ ಮಾಡಿದರೂ ಪೂಜಿಸಿದರೂ ಕೋಟಿ ಯಜ್ಞಗಳನ್ನು ಮಾಡಿದ ಪುಣ್ಯವೂ, ಕೋಟಿ ಗೋದಾನಗಳನ್ನು ಮಾಡಿದ ಪುಣ್ಯವೂ ಬರುವುದು. ಯಾರು ಶಾಲಗ್ರಾಮತೀರ್ಥವನ್ನು ತೆಗೆದುಕೊಳ್ಳುವನೋ. ಅವನ ಗರ್ಭವಾಸವು ನಷ್ಟವಾಗುವುದು. ಕಾಮಾಸಕ್ತನಾಗಿದ್ದರೂ ಭಕ್ತಿರಹಿತನಾಗಿದ್ದರೂ ಶಾಲಗ್ರಾಮವನ್ನು ಪೂಜಿಸಿದವನಾದರೆ ಪರಮಾತ್ಮನ ಸನ್ನಿಧಾನವುಳ್ಳವನಾಗುವನು. ಶಾಲಗ್ರಾಮವನ್ನು ಸ್ಮರಿಸಿದರೂ, ಕೀರ್ತನೆ ಮಾಡಿದರೂ, ಧ್ಯಾನ ಮಾಡಿದರೂ, ಪೂಜಾ ಮಾಡಿದರೂ, ನಮಸ್ಕರಿಸಿದರೂ, ಕೋಟಿಹತ್ಯೆಗಳ ಪಾಪವು ಪರಿಹೃತವಾಗು ವುದು. ಸಿಂಹವನ್ನು ನೋಡಿ ಕಾಡಿನಲ್ಲಿ ಮೃಗಗಳು ಓಡುವಂತೆ ಶಾಲಗ್ರಾಮವನ್ನು ನೋಡಿಯೇ ಅನೇಕ ಪಾಪಗಳು ಓಡುವುವು. ಭಕ್ತಿಯಿಂದಲೋ, ಅಭಕ್ತಿ ಯಿಂದಲೋ, ಶಾಲಗ್ರಾಮಕ್ಕೆ ನಮಸ್ಕರಿಸಿದರೆ ಕ್ರಮದಿಂದ ಮೋಕ್ಷವನ್ನು ಹೊಂದುವನು. ಯಾರು ನಿತ್ಯವೂ ಶಾಲಗ್ರಾಮ ಪೂಜೆಯನ್ನು ಮಾಡುವನೋ ಅವನಿಗೆ ಯಮದೇವರ ಭಯವಿಲ್ಲ. ಜನ್ಮ ಮರಣಗಳ ಭಯವೂ ಇರುವುದಿಲ್ಲ. ಗಂಧ, ಪಾದ್ಯ, ಅರ್ಘ್ಯ, ನೈವೇದ್ಯ, ಧೂಪ, ದೀಪ, ಗೀತ, ಸ್ತೋತ್ರ ಇವುಗಳಿಂದ ಯಾರು ನಿತ್ಯವೂ ಶಾಲಗ್ರಾಮವನ್ನು ಪೂಜಿಸುವನೋ ಕಲಿಯುಗದಲ್ಲಿ ಭಕ್ತಿಯಿಂದ ಪೂಜಿಸಿದ ಅವನು ಕೋಟಿ ಸಹಸ್ರಕಲ್ಪ ಪರಮಾತ್ಮನ ಮಂದಿರದಲ್ಲಿ ಸಂತೋಷದಿಂದ ಇರುವನು. ಶಾಲಗ್ರಾಮಕ್ಕೆ ನಮಸ್ಕಾರ ಮಾಡದೆ ಇದ್ದವರು ನನ್ನ ಭಕ್ತರಾಗಿದ್ದರೂ

ಅವರನ್ನು ಮನುಷ್ಯರೆಂದು ಹೇಳಲಿಕ್ಕೆ ಆಗುವುದಿಲ್ಲ. ನನ್ನ ಭಕ್ತರು ಯಾರು ನನ್ನ ಪ್ರಭುವಾದ ಭಗವಂತನನ್ನು ಅಹಂಕಾರದಿಂದ ಪೂಜಿಸುವುದಿಲ್ಲವೋ ಪಾಪಮೋಹಿತರಾದ ಅವರು ನನ್ನ ಭಕ್ತರೇ ಅಲ್ಲ. ನನ್ನ ಭಕ್ತನಾಗಿದ್ದರೂ ಯಾರು ಏಕಾದಶಿಯಲ್ಲಿ ಭೋಜನ ಮಾಡುವನೋ ಅವನು ನನಗೆ ಹಿಂಸೆಯನ್ನು ಮಾಡಿದವನಂತೆ ಆಗಿ ತಾಮಿಸ್ರ ಎಂಬ ನರಕಕ್ಕೆ ಹೋಗುವನು. ಯಾವ ತಿಥಿಯು ಪರಮಾತ್ಮನಿಗೆ ಪ್ರಿಯವಾದದ್ದೋ ಆ ತಿಥಿಯು ನನಗೂ ಪ್ರಿಯವಾದದ್ದು. ಯಾರು ಅಂತಹ ಏಕಾದಶಿಯಲ್ಲಿ ಉಪವಾಸ ಮಾಡುವುದಿಲ್ಲವೋ ಅವನು ಚಂಡಾಲನಿಗಿಂತಲೂ ಅಧಿಕ ಪಾಪಿಯು. ಶಾಲಗ್ರಾಮದಲ್ಲಿ ನಾನು ಯಾವಾಗಲೂ ವಾಸಿಸುವೆನು. ನನ್ನ ಭಕ್ತಿಯಿಂದ ಸಂತುಷ್ಟನಾಗಿ ಪರಮಾತ್ಮನು ನನಗೆ ಆ ಸ್ಥಾನವನ್ನು ಕೊಟ್ಟಿದ್ದನು. ನನಗೆ ಸಾವಿರ ಕೋಟಿ ಪದ್ಮಗಳಿಂದ ಪೂಜಿಸಿದರೆ ಏನು ಫಲವೋ ಅದರ ಕೋಟಿ ಪಾಲು ಅಧಿಕವಾದ ಪುಣ್ಯವು ಶಾಲಗ್ರಾಮಪೂಜೆಯಿಂದ ಉಂಟಾಗುತ್ತದೆ. ಯಾರು ಶಾಲಗ್ರಾಮ ಪೂಜೆಯನ್ನು ಮಾಡುವುದಿಲ್ಲವೋ, ನನ್ನ ಪೂಜೆಯನ್ನು ಮಾಡಿದ, ನನ್ನನ್ನು ನಮಸ್ಕರಿಸಿದ ಪುಣ್ಯವು ಬರಲಾರದು. ಶಾಲಗ್ರಾಮದ ಮುಂಭಾಗದಲ್ಲಿ ಯಾರು ನನ್ನನ್ನು ಪೂಜಿಸುವನೋ ಅವನು ನನ್ನನ್ನು ಇಪ್ಪತ್ತೊಂದು ಯುಗಗಳಲ್ಲಿ ನನಗೆ ಪೂಜಾ ಮಾಡಿದ ಫಲವನ್ನು ಹೊಂದುವನು. ಶಾಲಗ್ರಾಮ ಪೂಜೆಯನ್ನು ಮಾಡದೆ ನನ್ನ ನೈವೇದ್ಯವು ಪತ್ರ ಪುಷ್ಪ ಜಲಗಳೂ ಸ್ವೀಕಾರಕ್ಕೆ ಅರ್ಹವಾಗುವುದಿಲ್ಲ. ಶಾಲಗ್ರಾಮ ಶಿಲೆಯ ಮುಂಭಾಗದಲ್ಲಿ ಎಲ್ಲವೂ ಪವಿತ್ರವಾಗಿ ಆಗುವುದು.

ದ್ವಿಜನು ಇತರರ ನೈವೇದ್ಯವನ್ನು ಭೋಜನ ಮಾಡಿದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು. ಭಗವಂತನ ನೈವೇದ್ಯವನ್ನು ಭೋಜನ ಮಾಡಿದರೆ ಕೋಟಿ ಯಜ್ಞಗಳ ಫಲವು ಬರುವುದು. ಕೋಟಿ ಹತ್ಯೆಯ ಪಾಪವುಳ್ಳ ಜನರು ಭಗವಂತನ ಪಾದೋದಕ ದಿಂದಲೂ ಶಂಖೋದಕದಿಂದಲೂ ಪವಿತ್ರರಾಗುತ್ತಾರೆ. ಯಾರು ಶಿವಭಕ್ತನಾಗಿದ್ದು ಕೊಂಡು ವಿಷ್ಣುಭಕ್ತನನ್ನು ಪೂಜಿಸುವುದಿಲ್ಲವೋ ಅವನು ನರಕವನ್ನು ಹೊಂದುವನು. ಪರಮಾತ್ಮನ ಆರಾಧನೆಯನ್ನು ಮಾಡದೆ ಇದ್ದವರು ಸಾವಿರ ಕೋಟಿ ವರ್ಷ ದುಃಖ ಸಂಸಾರದಲ್ಲಿ ಮುಳುಗಿರುವರು. ನಿತ್ಯವೂ ಯಾರು ಹನ್ನೆರಡು ಶಾಲಗ್ರಾಮಗಳನ್ನು ಪೂಜಿಸುವನೋ ಅವನಿಗೆ ಕೋಟಿ ಸಾವಿರ ಲಿಂಗಗಳನ್ನು ಪೂಜಿಸಿದ ಫಲವು ಬರುವುದು. ಆದುದರಿಂದ ಭಕ್ತಿಯಿಂದ ಶಾಲಗ್ರಾಮಪೂಜೆಯನ್ನು ಮಾಡಬೇಕು. ಎಲ್ಲಿ ಶಾಲಗ್ರಾಮದಲ್ಲಿ ಸನ್ನಿಹಿತನಾದ ಪರಮಾತ್ಮನು ಇರುವನೋ ಅಲ್ಲಿ ದೇವತೆಗಳೂ ಯಕ್ಷರೂ ಹದಿನಾಲ್ಕು ಲೋಕಗಳೂ ಇರುವುವು.

ಕಲಿಯುಗದಲ್ಲಿ ದೇವತೆಗಳ ಕೋಟಿ ಕೀರ್ತನಗಳಿಂದ ಉಂಟಾಗುವ ಫಲವು ಪರಮಾತ್ಮನ ಕೀರ್ತನೆಯಿಂದಲೇ ಉಂಟಾಗುತ್ತದೆ. ಶಾಲಗ್ರಾಮದ ಮುಂಭಾಗದಲ್ಲಿ ಒಂದು ಬಾರಿ ಪಿಂಡಪ್ರದಾನ ಮಾಡುವುದರಿಂದ ಬಹುಸಮಯ ಪಿತೃಗಳು ತೃಪ್ತಿಯನ್ನು ಹೊಂದುತ್ತಾರೆ. ಯಾರು ನಿತ್ಯವೂ ಶಾಲಗ್ರಾಮ ತೀರ್ಥವನ್ನು ತೆಗೆದು ಕೊಳ್ಳುತ್ತಾರೆ. ಅವರಿಗೆ ಸಾವಿರಬಾರಿ ಪಂಚಗವ್ಯಗಳನ್ನು ಸ್ವೀಕರಿಸಿ ಏನಾಗಬೇಕು? ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದ ಸಂದರ್ಭದಲ್ಲಿ ದಾನ ಉಪವಾಸ ಚಾಂದ್ರಾಯಣಾದಿ ವ್ರತಗಳಿಂದಲೂ ಪರಮಾತ್ಮನ ಪಾದೋದಕವನ್ನು ಸ್ವೀಕರಿಸುವುದು ಶ್ರೇಷ್ಠವಾದದ್ದು. ಎಲ್ಲಾ ಪುಣ್ಯಗಳಿಗೂ ಪರಿಮಿತಿಯಿದೆ. ಶಾಲಗ್ರಾಮದ ಪೂಜೆಯಿಂದ ಉಂಟಾಗುವ ಪುಣ್ಯಕ್ಕೆ ಪರಿಮಿತಿಯಿರುವುದಿಲ್ಲ. ಯಾರು ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಶಾಲಗ್ರಾಮಗಳನ್ನು ದಾನಮಾಡುತ್ತಾನೋ ಅವನು ನೂರು ಯಾಗಗಳನ್ನು ಮಾಡಿದ ಪುಣ್ಯವನ್ನು ಹೊಂದುವನು. ಅವನಿಗೆ ಮನೆಯಲ್ಲಿ ವಾಸಮಾಡುವವನಿಗೇ ನಿತ್ಯವೂ ಗಂಗಾಸ್ನಾನವನ್ನು ಮಾಡಿದ ಪುಣ್ಯವು ಬರುವುದು. ಯಾರು ಶಾಲಗ್ರಾಮತೀರ್ಥದಿಂದ ಅಭಿಷೇಕವನ್ನು ಮಾಡಿಕೊಳ್ಳುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನೂ ಸರ್ವಯಜ್ಞಗಳಲ್ಲಿ ದೀಕ್ಷೆಯನ್ನು ಹೊಂದಿದ ಫಲವನ್ನು ಹೊಂದುವನು. ಶಾಲಗ್ರಾಮಕ್ಕೆ ಸಮಾನವಾದ ಶಿಲೆಯೇ ಇರುವುದಿಲ್ಲ. ನಿತ್ಯವೂ ಭಕ್ತಿಯಿಂದ ನೂರುಪಡಿ ಎಳ್ಳನ್ನು ದಾನ ಮಾಡಿದ ಪುಣ್ಯವು ಶಾಲಗ್ರಾಮವನ್ನು ಪೂಜಿಸುವುದರಿಂದ ಉಂಟಾಗುವುದು. ಶಾಲಗ್ರಾಮಕ್ಕೆ ಸಮರ್ಪಿಸಿದ ಪತ್ರವೂ ಪುಷ್ಪವೂ ಫಲವೂ ನೀರು ಗೆಡ್ಡೆಯೂ ಗರಿಕೆ ಹುಲ್ಲು ಮೇರುಪರ್ವತಕ್ಕೆ ಸಮಾನವಾಗುವುದು. ವಿಧಿಯನ್ನು ತಿಳಿಯದೆ ಇದ್ದವನಾಗಿದ್ದರೂ ಮಂತ್ರಗಳನ್ನು ತಿಳಿಯದೆ ಇದ್ದವನಾಗಿದ್ದರೂ ತಪ್ತಚಕ್ರಮುದ್ರೆಯನ್ನು ಧರಿಸಿದವನಾಗಿ ಪೂಜಿಸಿದರೆ ಸರ್ವಶಾಸ್ತ್ರದಲ್ಲಿ ಹೇಳಿದ ಫಲವನ್ನು ಹೊಂದುವನು.

ನಾನು ಪರಮಾತ್ಮನೊಡನೆ 'ಭಗವಂತನೇ! ಸರ್ವಾಧಾರನಾದ ನೀನು ಎಲ್ಲಿ ವಾಸಮಾಡುವಿ? ಹೇಗೆ ಸಂತೋಷವನ್ನು ಹೊಂದುವಿ?' ಎಂದು ಕೇಳಿದೆನು.

ಅದಕ್ಕೆ ಪರಮಾತ್ಮನು 'ನಾನು ಯಾವಾಗಲೂ ಶಾಲಗ್ರಾಮದಲ್ಲಿ ವಾಸಮಾಡುವೆನು.

ಶಾಲಗ್ರಾಮದಲ್ಲಿ ದ್ವಾರದೇಶದಲ್ಲಿಯೇ ಸಮವಾಗಿ ಎರಡು ಚಕ್ರಗಳು ಇದ್ದರೆ ಅದಕ್ಕೆ ವಾಸುದೇವಮೂರ್ತಿಯೆಂದು ಹೆಸರು. ಅದು ಬೆಳ್ಳಗಿದ್ದರೆ ಶ್ರೇಷ್ಠವು.

ಮೇಲೆ ಚಕ್ರವಿದ್ದು ನೀಲವಾದ ಕಾಂತಿಯಿದ್ದು ಬಹಳ ದ್ವಾರವಿದ್ದು ಉದ್ದವಾಗಿದ್ದರೆ ಅದಕ್ಕೆ ಪ್ರದ್ಯುಮ್ನಮೂರ್ತಿಯೆಂದು ಹೆಸರು.

ಅರಸಿನ ಕಾಂತಿಯಿದ್ದು ಗುಂಡಗೆ ಇದ್ದು ಮೂರು ರೇಖೆಗಳಿದ್ದು ದ್ವಾರದಲ್ಲಿ ಪದ್ಮದ ಚಿಹ್ನೆಯುಳ್ಳದ್ದು ಅನಿರುದ್ಧ ಮೂರ್ತಿಯು.

ನೀಲವಾಗಿದ್ದು ನಾಭಿಚಕ್ರವಿದ್ದು ದೀರ್ಘರೇಖೆಯಿದ್ದು ಬಲಪಾರ್ಶ್ವದಲ್ಲಿ ವದನವಿದ್ದರೆ ನಾರಾಯಣಮೂರ್ತಿಯು.

ಮೇಲೆ ಮುಖವುಳ್ಳ ಸುಂದರವಾದ ಶಾಲಗ್ರಾಮವು ಹರಿಮೂರ್ತಿಯು.

ಬೆಳ್ಳಗಿದ್ದು ಪದ್ಮಚಕ್ರದಿಂದ ಕೂಡಿದ ಹಿಂದಿನ ಪಾರ್ಶ್ವದಲ್ಲಿ ವದನವುಳ್ಳ ಮೂರ್ತಿಯು ಪರಮೇಷ್ಠಿಮೂರ್ತಿಯು.

ಕೃಷ್ಣವರ್ಣವಿದ್ದು ಬುಡದಲ್ಲಿ ಚಕ್ರವಿದ್ದು ಮೇಲೆ ದ್ವಾರವಿದ್ದು ಮಧ್ಯದಲ್ಲಿ ರೇಖೆಯಿದ್ದರೆ ವಿಷ್ಣುಮೂರ್ತಿಯೆಂದು ಹೆಸರು.

ಕಪಿಲ ಬಣ್ಣವಿದ್ದು ದೊಡ್ಡಚಕ್ರವಿದ್ದರೆ ನರಸಿಂಹಮೂರ್ತಿಯು. ಅದನ್ನು ಬ್ರಹ್ಮಚರ್ಯದಿಂದ ಪೂಜಿಸಬೇಕು. ಇಲ್ಲದಿದ್ದರೆ ವಿಘ್ನವುಂಟಾಗುವುದು.

ವಿಷಮವಾಗಿ ಚಕ್ರವಿದ್ದು ಇಂದ್ರನೀಲದಂತೆ ಕಾಂತಿಯಿದ್ದು ದೊಡ್ಡ ಮೂರು ರೇಖೆಗಳಿದ್ದರೆ ವಾರಾಹಮೂರ್ತಿಯು.

ಉದ್ದವಾಗಿ ಬಂಗಾರದ ಬಣ್ಣವಿದ್ದು ಮೂರು ಬಿಂದುಗಳಿಂದ ಅಲಂಕೃತವಾದದ್ದು ಮತ್ಸ್ಯಮೂರ್ತಿಯು.

ವಿಸ್ತರವಾಗಿದ್ದು ಬೆನ್ನಿನಲ್ಲಿ ವರ್ತುಲವಾದ ಸುಳಿಯಿದ್ದು ಕೌಸ್ತುಭದಿಂದ ಚಿಹ್ನಿತವಾಗಿ ಹಸುರು ಬಣ್ಣವುಳ್ಳದ್ದಾದರೆ ಕೂರ್ಮಸಾಲಿ ಗ್ರಾಮವು.

ಕುದುರೆಯ ಆಕಾರವಿದ್ದು ಐದು ರೇಖೆಗಳಿಂದ ಅಲಂಕೃತವಾಗಿ ಬಹುಬಿಂದು ಗಳಿಂದ ಕೂಡಿದ್ದು ಮೇಲೆ ನೀಲವಾಗಿದ್ದರೆ ಹಯಗ್ರೀವಸಾಲಗ್ರಾಮವು. ಕತ್ತಿಯಿಂದ ಭಿನ್ನವಾದಂತೆ ತೋರಿಕೊಂಡು ಒಂದು ಚಕ್ರವಿದ್ದು ಧ್ವಜವಿದ್ದು ದ್ವಾರದ ಮೇಲೆ ಗುರುಗುಂಜಿಯ ಆಕಾರವಾಗಿ ರೇಖೆಯಿದ್ದರೆ ಅದು ವೈಕುಂಠಮೂರ್ತಿಯು.

ವನಮಾಲೆಯ ಚಿಹ್ನೆಯುಳ್ಳದ್ದಾಗಿ ಕದಂಬಪುಷ್ಪದ ಆಕಾರವುಳ್ಳ ಐದು ರೇಖೆಗಳಿಂದ ಅಲಂಕೃತವಾದದ್ದು ಶ್ರೀಧರಮೂರ್ತಿಯು.

ಗುಂಡಗಾಗಿ ಗಿಡ್ಡಾಗಿ ಇದ್ದು ಅಗಸೀಪುಷ್ಪದಂತೆ ಇದ್ದು ಬಿಂದುವಿನಿಂದ ಶೋಭಿಸಿದ್ದರೆ ವಾಮನಮೂರ್ತಿಯು.

ನೀಲವರ್ಣವಿದ್ದು ಮಹಾಕಾಂತಿಯಿದ್ದು ಎಡಪಾರ್ಶ್ವದಲ್ಲಿ ಗದಾಚಕ್ರಗಳಿದ್ದರೆ ಬಲಪಾರ್ಶ್ವದಲ್ಲಿ ರೇಖೆಯೂ ಇದ್ದರೆ ಸುದರ್ಶನಮೂರ್ತಿಯು.

ದೊಡ್ಡದಾಗಿದ್ದು ಮಧ್ಯದಲ್ಲಿ ಚಕ್ರವಿದ್ದು ಗರಿಕೆ ಹುಲ್ಲಿನಂತೆ ಬಣ್ಣವಿದ್ದು ದ್ವಾರವು ಸೇರಿಕೊಂಡಿದ್ದು ಅರಸಿನಬಣ್ಣದ ರೇಖೆಯಿದ್ದರೆ ದಾಮೋದರಮೂರ್ತಿಯು.

ನಾನಾ ಬಣ್ಣವಿದ್ದು ನಾನಾ ಭೋಗದಿಂದ ಚಿಹ್ನೆಯಿದ್ದು ಅನೇಕ ಮೂರ್ತಿಯಿಂದ ಕೂಡಿದ್ದರೆ ಅನಂತಮೂರ್ತಿಯು.

ದಿಕ್ಕುವಿದಿಕ್ಕುಗಳಲ್ಲಿ ಮೇಲೆ ವದನವು ಕಾಣಿಸುತ್ತಿದ್ದರೆ ಅದು ಪುರುಷೋತ್ತಮಮೂರ್ತಿಯು.

ಶಿಖರದಲ್ಲಿ ಲಿಂಗವು ಕಂಡರೆ ಯೋಗೇಶ್ವರ ಮೂರ್ತಿಯೆಂದು ಹೆಸರು. ಅದನ್ನು ಪೂಜಿಸಿದರೆ ಬ್ರಹ್ಮಹತ್ಯೆಯು ಪರಿಹೃತವಾಗುವುದು.

ಸ್ವಲ್ಪ ಕೆಂಪಾಗಿ ಕಮಲಚಕ್ರಯುಕ್ತವಾದದ್ದು ಪದ್ಮನಾಭಮೂರ್ತಿಯು. ಅದನ್ನು ನಿತ್ಯವೂ ಪೂಜಿಸುವುದರಿಂದ ದರಿದ್ರನು ಹಣವಂತನಾಗುವನು.

ಬಂಗಾರದಂತೆ ಅಂಗವುಳ್ಳ ಕಿರಣಗಳಿಂದ ಕೂಡಿದ ಅನೇಕ ಬಂಗಾರ ರೇಖಾವುಳ್ಳ ಸ್ಫಟಿಕದಂತೆ ಕಾಂತಿಯುಳ್ಳದ್ದು ಚಕ್ರಾಕೃತಿಯೆಂದು ಹೇಳುವರು.

ಅತಿಮೃದುವಾದದ್ದು ಸಿದ್ಧಿಗೆ ಕಾರಣವಾಗುವುದು. ಕಪ್ಪಾಗ ಸಾಲಿಗ್ರಾಮವು ಕೀರ್ತಿಯನ್ನು ಉಂಟು ಮಾಡುವುದು. ಬಿಳಿಛಾಯೆಯುಳ್ಳದ್ದು ಪಾಪಪರಿಹಾರಕ ವಾದದ್ದು. ಅರಸಿನಬಣ್ಣದ್ದು ಪುತ್ರಫಲಪ್ರದವಾದದ್ದು. ನೀಲವಾದದ್ದು ಸಂಪತ್ತನ್ನು ಉಂಟುಮಾಡುವುದು. ಕೆಂಪಾದದ್ದು ರೋಗಕ್ಕೆ ಕಾರಣವಾದದ್ದು. ಕ್ರೂರವಾದದ್ದು ಭಯವನ್ನು ಉಂಟುಮಾಡುವುದು. ವಕ್ರವಾದದ್ದು ದಾರಿದ್ರ್ಯಕ್ಕೆ ಕಾರಣವಾದದ್ದು.

ಒಂದು ಚಕ್ರವಿದ್ದರೆ ಸುದರ್ಶನವೆನ್ನಿಸುವುದು. ಎರಡು ಚಕ್ರವಿದ್ದರೆ ಲಕ್ಷ್ಮೀ ನಾರಾಯಣ ಸಾಲಿಗ್ರಾಮವು; ಮೂರು ಚಕ್ರವಿದ್ದರೆ ವಾಸುದೇವಮೂರ್ತಿಯು, ಆರು ಚಕ್ರವಿದ್ದರೆ ಪ್ರದ್ಯುಮ್ನಮೂರ್ತಿಯು, ಏಳು ಚಕ್ರವಿದ್ದರೆ ಸಂಕರ್ಷಣಮೂರ್ತಿಯು, ಎಂಟು ಚಕ್ರವಿದ್ದರೆ ಪುರುಷೋತ್ತಮಮೂರ್ತಿಯು, ಒಂಭತ್ತು ಚಕ್ರವಿದ್ದರೆ ಶ್ರೀಧರ ಮೂರ್ತಿಯು, ಹತ್ತು ಚಕ್ರವಿದ್ದರೆ ಹೃಷೀಕೇಶಮೂರ್ತಿಯು, ಹನ್ನೊಂದು ಚಕ್ರವಿದ್ದರೆ ಅನಿರುದ್ಧಮೂರ್ತಿಯು, ಹನ್ನೆರಡು ಚಕ್ರವಿದ್ದರೆ ದಾಮೋದರಮೂರ್ತಿಯು, ಇನ್ನೂ ಹೆಚ್ಚಿಗೆ ಚಕ್ರಗಳಿದ್ದರೆ ಅನಂತಮೂರ್ತಿಯೆಂದು ತಿಳಿಯಬೇಕು.

ಸಾಲಿಗ್ರಾಮವು ಒಡೆದು ಹೋದರೂ ಅದರ ಪೂಜೆ ಮಾಡುವುದರಿಂದ ದೋಷವಿದ್ದರೆ **(ಪ್ರತಿಮೆಗಳು ಅಂಗಹೀನವಾದರೆ ಪೂಜಿಸಬಾರದು. ಶಾಲಿಗ್ರಾಮಕ್ಕೆ ಹಾಗೆ ನಿಯಮವಿಲ್ಲ. ಒಡೆದುಹೋದ ಶಾಲಗ್ರಾಮವನ್ನು ಇತರ ಶಾಲಗ್ರಾಮಗಳ ಒಟ್ಟಿಗೆ**

**ಇಟ್ಟುಕೊಂಡು ಪೂಜಿಸಬಹುದು.) ಯಾರಿಗೆ ಯಾವ ಮೂರ್ತಿಯು ಇಷ್ಟವೋ ಆ ಮೂರ್ತಿಯನ್ನು ಪೂಜಿಸಬೇಕು. ಯಾರು ಶಾಲಗ್ರಾಮವನ್ನು ಹೆಗಲಲ್ಲಿ ಹೊತ್ತುಕೊಂಡು ದಾರಿಯಲ್ಲಿ ಹೋಗುವನೋ ಅವನಿಗೆ ಮೂರುಲೋಕವೂ ವಶವಾಗುವುದು.** ಶಾಲಗ್ರಾಮವು ಎಲ್ಲಿ ಇರುವುದೋ ಅಲ್ಲಿ ಪರಮಾತ್ಮನ ಸನ್ನಿಧಾನವು ಇರುವುದು. ಅಲ್ಲಿ ಸ್ನಾನದಾನಗಳನ್ನು ಮಾಡಿದರೆ ಕಾಶಿಯಲ್ಲಿ ಮಾಡಿದ್ದಕ್ಕಿಂತಲೂ ಹೆಚ್ಚಾದ ಫಲವು ಬರುವುದು.

ಬ್ರಹ್ಮಹತ್ಯಾದಿ ಯಾವ ಪಾಪವನ್ನು ಮಾಡಿದ್ದರೂ ಆ ಪಾಪವೆಲ್ಲವನ್ನೂ ಶಾಲಗ್ರಾಮ ಪೂಜೆಯು ಪರಿಹರಿಸುವುದು. ಶಾಲಗ್ರಾಮವೂ ಚಕ್ರಾಣಿಯೂ ಎರಡು ಸೇರಿದ್ದರೆ ಅಲ್ಲಿ ಪಾಪಪರಿಹಾರವಾಗುವುದು. ಬ್ರಹ್ಮಚಾರಿಗಳೂ ಗೃಹಸ್ಥರೂ ವಾನಪ್ರಸ್ಥರೂ ಸನ್ಯಾಸಿಗಳೂ ಎಲ್ಲರೂ ಶಾಲಗ್ರಾಮ ನೈವೇದ್ಯವನ್ನು ಭೋಜನ ಮಾಡಬೇಕು. ಮಂತ್ರಗಳು ಜಪವು ಧ್ಯಾನ ಸ್ತುತಿಯು ಆಚಾರವು ಇಲ್ಲದಿದ್ದರೂ ಶಾಲಗ್ರಾಮವನ್ನು ಪೂಜಿಸಬೇಕು. ಕಾರ್ತಿಕಮಾಸದಲ್ಲಿ ಶಾಲಗ್ರಾಮದ ಮುಂಭಾಗ ದಲ್ಲಿ ರಂಗೋಲೆ ಹಾಕಿದರೆ ವಿಶೇಷವಾಗಿ ಪಾಪಪರಿಹಾರವಾಗುವುದು. ಶಾಲಗ್ರಾಮದ ಮುಂದೆ ಒಂದು ಚಿಕ್ಕದಾಗಿ ರಂಗೋಲೆ ಹಾಕಿ ನಾನಾ ಬಣ್ಣಗಳಿಂದ ಅಲಂಕರಿಸಿದರೆ ಬಹುಪುಣ್ಯವು ಬರುವುದು. ಒಂದು ವರ್ಷ ನಿತ್ಯವೂ ಅಗ್ನಿಹೋತ್ರ ವನ್ನು ಮಾಡಿದವನಿಗೆ ಬರುವ ಪುಣ್ಯವು ಕಾರ್ತಿಕಮಾಸದಲ್ಲಿ ಶಾಲಿಗ್ರಾಮದ ಮುಂದೆ ರಂಗೋಲೆ ಹಾಕುವವನಿಗೆ ಬರುವುದು. ಅಗಮ್ಯಾಗಮನದಿಂದಲೂ ನಿಷಿದ್ಧಭಕ್ಷಣೆ ಯಿಂದಲೂ ಉಂಟಾದ ಪಾಪವೂ ದೇವರ ಮನೆಯನ್ನು ಅಲಂಕಾರ ಮಾಡುವುದ ರಿಂದ ಪರಿಹೃತವಾಗುತ್ತದೆ. ಯಾವ ಹೆಂಗಸು ನಿತ್ಯವೂ ದೇವರ ಮುಂದೆ ರಂಗೋಲೆ ಯನ್ನು ಹಾಕುತ್ತಾಳೋ ಅವಳಿಗೆ ಏಳು ಜನ್ಮಗಳಲ್ಲಿ ವೈಧವ್ಯವುಂಟಾಗುವುದಿಲ್ಲ.

ಶಾಲಗ್ರಾಮವು ಪರಮಪವಿತ್ರವಾದದ್ದು. ಪುಣ್ಯಕ್ಕೆ ಕಾರಣವಾದದ್ದು. ಅದನ್ನು ನೋಡುವ ಮಾತ್ರದಿಂದಲೇ ಬ್ರಹ್ಮಹತ್ಯೆಯು ಪರಿಹೃತವಾಗುತ್ತದೆ. ಯಾವ ಮನೆಯಲ್ಲಿ ಶಾಲಗ್ರಾಮವು ಇರುತ್ತದೋ ಆ ಮನೆಯು ತೀರ್ಥರೂಪವಾದದ್ದು. ಬ್ರಾಹ್ಮಣರು ಐದು ಶಾಲಗ್ರಾಮಗಳನ್ನೂ ಕ್ಷತ್ರಿಯರು ನಾಲ್ಕು ಶಾಲಗ್ರಾಮಗಳನ್ನು ವೈಶ್ಯರು ಮೂರು ಶಾಲಗ್ರಾಮಗಳನ್ನೂ ಪೂಜಿಸಬೇಕು. (ಶೂದ್ರರು ಒಂದು ಶಾಲಗ್ರಾಮವನ್ನು ಪೂಜಿಸಬಹುದು) ಈರೀತಿಯಾಗಿ ಶಾಲಗ್ರಾಮವನ್ನು ಭಕ್ತಿಯಿಂದ ಪೂಜಿಸುವುದರಿಂದ ಈ ಲೋಕದಲ್ಲಿ ಭೋಗಗಳನ್ನು ಅನುಭವಿಸಿ ವಿಷ್ಣುಲೋಕವನ್ನು ಹೊಂದುವರು. ಶಾಲಗ್ರಾಮವು ಅತಿಶ್ರೇಷ್ಠವಾದ ಪ್ರತಿಮೆಯು. ಅದನ್ನು ಪೂಜಿಸಿದರೆ

ಕ್ರಮದಿಂದ ಮೋಕ್ಷವೇ ಆಗುವುದು. ಶಾಲಗ್ರಾಮವಿರುವಲ್ಲಿ ಗಂಗಾ ಯಮುನಾ ಗೋದಾವರೀ ಸರಸ್ವತೀ ಇತ್ಯಾದಿ ನದಿಗಳ ಅಭಿಮಾನಿದೇವತೆಗಳು ಇರುವರು. ಮತ್ತೂ ಮತ್ತೂ ಹೆಚ್ಚಿಗೆ ಏಕೆ ಹೇಳಬೇಕು. ಮೋಕ್ಷವನ್ನು ಇಚ್ಛಿಸುವವರು ಶಾಲಗ್ರಾಮ ಪೂಜೆಯನ್ನು ಮಾಡಬೇಕು.

ಭಕ್ತಿಯಿಂದ ಯಾರು ಶಾಲಗ್ರಾಮಪೂಜೆಯನ್ನು ಮಾಡುತ್ತಾರೋ ಅವರನ್ನು ನೋಡುವುದರಿಂದಲೇ ಬ್ರಹ್ಮಹತ್ಯೆಯು ಪರಿಹೃತವಾಗು ವುದು. ನಾನು ದಾಸನೆಂಬ ಭಾವನೆಯಿಂದ ಯಾವ ಬ್ರಾಹ್ಮಣನು ಶಾಲಗ್ರಾಮವನ್ನು ಪೂಜಿಸುವನೋ ಅವನು ನೂರುಜನ್ಮಗಳಲ್ಲಿ ತನ್ನ ಇಪ್ಪತ್ತೊಂದು ತಲೆಯವರನ್ನು ಉದ್ಧರಿಸುವನು. ಶಂಕಚಕ್ರಮುದ್ರೆಯನ್ನು ಧರಿಸಿಕೊಂಡು ಯಾರು ಶಾಲಗ್ರಾಮವನ್ನು ಪೂಜಿಸುವನೋ ಅವನು ಆದರಿಂದ ಎಲ್ಲಾ ಲೋಕವನ್ನು ಹೊಂದುವನು. ಪಿತೃಗಳೂ 'ತಮ್ಮ ವಂಶದಲ್ಲಿ ವಿಷ್ಣುಭಕ್ತರು ಹುಟ್ಟಲಿ. ಅವರು ನಮ್ಮನ್ನು ಉದ್ಧರಿಸಿ ವಿಷ್ಣುಲೋಕಕ್ಕೆ ಕಳುಹಿಸುವರು' ಎಂದು ಸಂಭಾಷಣೆ ಮಾಡಿಕೊಂಡು ಇರುವರು. ಯಾರು ಯಾವ ದಿವಸದಲ್ಲಿ ಶಾಲಗ್ರಾಮ ಪೂಜೆಯನ್ನು ಮಾಡುವನೋ ಆ ದಿವಸವೇ ಧನ್ಯವು. ಅವನ ತಾಯಿಯೂ ಬಂಧುಗಳೂ ತಂದೆಯೂ ಧನ್ಯರು. ವಿಷ್ಣುಭಕ್ತಿಯುಳ್ಳವರೆಲ್ಲರೂ ಅತಿಧನ್ಯರೆಂದು ತಿಳಿಯಬೇಕು. ಅವರನ್ನು ನೋಡುವ ಮಾತ್ರದಿಂದಲೇ ಮಹಾಪಾಪ ಗಳು ಪರಿಹೃತವಾಗುವುವು. ಉಪಪಾತಕಗಳೂ ಮಹಾಪಾಪಗಳೂ ಎಲ್ಲಾ ಪಾಪ ಗಳೂ ವೈಷ್ಣವರ ದರ್ಶನದಿಂದಲೇ ಪರಿಹೃತವಾಗುವುವು. ಪರಮಾತ್ಮನನ್ನು ಪೂಜಿಸು ವವರು ಅಗ್ನಿಯಂತೆ ಪ್ರಕಾಶಿಸುವರು. ವಿಷ್ಣುಭಕ್ತರನ್ನು ಪೂಜಿಸುವುದರಿಂದ ಎಲ್ಲಾ ಪಾಪಗಳೂ ಪರಿಹೃತವಾಗುವುವು. ತಿಳಿದೋ ತಿಳಿಯದೆಯೋ ಮಾಡಿದ ಎಲ್ಲಾ ಪಾಪ ಗಳೂ ವೈಷ್ಣವರೊಡನೆ ಮಾತಾಡುವುದರಿಂದ ಪರಿಹೃತವಾಗುವುವು. ಪಾಪಮಾಡಿ ದವರೂ ವಿಷ್ಣುಭಕ್ತರ ದರ್ಶನದಿಂದ ಪಾಪರಹಿತರಾಗಿ ಸ್ವರ್ಗಕ್ಕೆ ಹೋಗುವರು. ವಿಷ್ಣುಭಕ್ತರು ಸಂಸಾರವೆಂಬ ಕೆಸರಿನಿಂದ ಶುದ್ಧ ಮಾಡುವರು. ಅತಿ ಪವಿತ್ರರು.

ನಿತ್ಯವೂ ಯಾರು ಪರಮಾತ್ಮನನ್ನು ಸ್ಮರಿಸುತ್ತಿರುವರೋ ಅವರಲ್ಲಿ ಪರಮಾತ್ಮನ ಸನ್ನಿಧಾನವಿರುವುದು. ಯಾರು ನಿತ್ಯವೂ ಸರ್ವಾಯುಧಧಾರಿಯಾದ ಸರ್ವಾಭರಣ ಭೂಷಿತನಾದ ಸರ್ವಾಂಗಸುಂದರನಾದ ಭಗವಂತನನ್ನು ಧ್ಯಾನ ಮಾಡುತ್ತಿರುವರೋ ಪರಮಾತ್ಮನಲ್ಲಿ ಭಕ್ತಿಉಳ್ಳವರಾಗಿರುವರೋ ಅವರನ್ನು ಭಕ್ತಿಯಿಂದ ನೋಡುವುದ ರಿಂದಲೂ ಅವರಿಗೆ ಭೋಜನ ಮಾಡಿಸುವುದರಿಂದಲೂ ಅವರನ್ನೂ ಪೂಜಿಸುವುದ ರಿಂದಲೂ ಕ್ರಮದಿಂದ ವೈಕುಂಠಲೋಕವೇ ಲಭಿಸುವುದು.

# ತೀರ್ಥಪ್ರಾಶನೆಯು [1]

ಗುರುಗಳಿಗೆ ಶಂಖತೀರ್ಥವನ್ನೂ ತೀರ್ಥವನ್ನೂ ಕೊಟ್ಟು ಕೂತುಕೊಂಡು ಪ್ರಾರ್ಥನೆಯನ್ನು ಮಾಡಿ ತೀರ್ಥವನ್ನು ತೆಗೆದುಕೊಳ್ಳಬೇಕು. ಸಮಸ್ತ ಜಗತ್ತಿಗೆ ಆಧಾರನಾದ ಶಂಖಚಕ್ರಗದಾಧಾರಿಯಾದ ಪರಮಾತ್ಮನೇ! ನಿನ್ನ ತೀರ್ಥವನ್ನು ಸೇವಿಸಲಿಕ್ಕೆ ಅನುಜ್ಞೆಯನ್ನು ಕೊಡು ಎಂದು ಪ್ರಾರ್ಥಿಸಬೇಕು. ಶಂಖೋದಕವನ್ನು ತಲೆಯಮೇಲೆ ಹಾಕಿಕೊಳ್ಳಬೇಕು. ಕೂಷ್ಮಾಂಡಗಳೂ ಪಿಶಾಚಗಳೂ ರಾಕ್ಷಸರೂ ತಲೆಯಲ್ಲಿ ಶಂಖೋದಕವನ್ನು ನೋಡಿ ಹತ್ತು ದಿಕ್ಕುಗಳಿಗೆ ಓಡುವುವು. ಶಂಖತೀರ್ಥವನ್ನು ದೇಹದಲ್ಲಿ ಧರಿಸಿದರೆ ಹತ್ತು ಸಾವಿರ ಬ್ರಹ್ಮಹತ್ಯೆಗಳು ನಾಶವನ್ನು ಹೊಂದುವುವು. ಸಾಲಿಗ್ರಾಮತೀರ್ಥವೂ ದ್ವಾರಕಾತೀರ್ಥವೂ ತುಲಸೀಯ ಬುಡದ ತೀರ್ಥವೂ ಪುಷ್ಕರತೀರ್ಥವೂ ಗಂಗಾತೀರ್ಥವೂ ಈ ಐದು ತೀರ್ಥಗಳು ಐದು ಇಂದ್ರಿಯಗಳಿಂದ ಮಾಡುವ ಪಾಪಗಳನ್ನು ಪರಿಹರಿಸುವುವು. 'ತೀ' ಎಂದರೆ ದೈತ್ಯರ ನಾಶವಾಗುವುದು. 'ಥ' ಎನ್ನುವುದು ಮೋಕ್ಷಕ್ಕೆ ಕಾರಣವು. ಈ 'ಅಕ್ಷರ ಎರಡರಿಂದ' ಸೇರಿದ್ದು ತೀರ್ಥ ಎಂದು ಹೆಸರು. ಜನ್ಮವನ್ನು ಆರಂಭಿಸಿ ಮಾಡಿರುವ ಪಾಪಗಳ ಪರಿಹಾರವನ್ನು ಅಪೇಕ್ಷಿಸುವುದಾದರೆ ಪಾಪಪರಿಹಾರಕವಾದ ಶಾಲಿಗ್ರಾಮತೀರ್ಥ ವನ್ನು ಪಾನಮಾಡಬೇಕು. ಯಾರು ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳುವನೋ ಅವನು ಬ್ರಹ್ಮಹತ್ಯೆಯಿಂದ ರಹಿತನಾಗುವನು. ಸ್ನಾನವಾದ ಮೇಲೆ ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯಮೇಲೆ ಧರಿಸಬೇಕು. ಆದರಿಂದ ಸಮಸ್ತ ಪಾಪಗಳಿಂದ ರಹಿತನಾಗಿ ವಿಷ್ಣುಲೋಕವನ್ನು ಹೊಂದುವನು. ಸಾಲಿಗ್ರಾಮತೀರ್ಥವನ್ನು ಮೊದಲು ತಲೆಯಮೇಲೂ ಕಣ್ಣಿಗೂ ಹಾಕಿಕೊಂಡು ಮೂರುಸಲ ತೀರ್ಥವನ್ನು ತೆಗೆದುಕೊಳ್ಳಬೇಕು. ಯಾರು ನಿತ್ಯವೂ ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯಮೇಲೆ ಧರಿಸುವನೋ ಅವನು ಉತ್ತಮವಾದ ಗತಿಯನ್ನು ಹೊಂದುವನು. ಸಾಲಿಗ್ರಾಮತೀರ್ಥವನ್ನು ವಿಷ್ಣುಭಕ್ತರಿಗೆ ಕೊಟ್ಟು ತಾನು ಪಾನಮಾಡಿ ಶಿರಸ್ಸಿನಲ್ಲಿ ಧರಿಸಬೇಕು. ಆದರಿಂದ ಶುದ್ಧನಾಗುವನು. ಯಾರು ಪಾಪ ಸಂದೇಹದಿಂದ ಭಗವಂತನ ತೀರ್ಥವನ್ನು ಪಾನಮಾಡುವುದಿಲ್ಲವೋ ತಲೆಯಲ್ಲಿ ಮಾತ್ರಧರಿಸುವನೋ ಅವನು ನಿಶ್ಚಯವಾಗಿಯೂ ನರಕವನ್ನು ಹೊಂದುವನು. ಯಾರು ಮಂದಬುದ್ಧಿಯುಳ್ಳವನಾಗಿ ತೀರ್ಥವನ್ನು ಪಾನ

---

1. (1) ಸ.ಸ್ಮೃ (2) ಕೃ.ಮು.

ಕ್ರಮದಿಂದ ಮೋಕ್ಷವೇ ಆಗುವುದು. ಶಾಲಗ್ರಾಮವಿರುವಲ್ಲಿ ಗಂಗಾ ಯಮುನಾ ಗೋದಾವರೀ ಸರಸ್ವತೀ ಇತ್ಯಾದಿ ನದಿಗಳ ಅಭಿಮಾನಿದೇವತೆಗಳು ಇರುವರು. ಮತ್ತೂ ಮತ್ತೂ ಹೆಚ್ಚಿಗೆ ಏಕೆ ಹೇಳಬೇಕು. ಮೋಕ್ಷವನ್ನು ಇಚ್ಛಿಸುವವರು ಶಾಲಗ್ರಾಮ ಪೂಜೆಯನ್ನು ಮಾಡಬೇಕು.

ಭಕ್ತಿಯಿಂದ ಯಾರು ಶಾಲಗ್ರಾಮಪೂಜೆಯನ್ನು ಮಾಡುತ್ತಾರೋ ಅವರನ್ನು ನೋಡುವುದರಿಂದಲೇ ಬ್ರಹ್ಮಹತ್ಯೆಯು ಪರಿಹೃತವಾಗು ವುದು. ನಾನು ದಾಸನೆಂಬ ಭಾವನೆಯಿಂದ ಯಾವ ಬ್ರಾಹ್ಮಣನು ಶಾಲಗ್ರಾಮವನ್ನು ಪೂಜಿಸುವನೋ ಅವನು ನೂರುಜನ್ಮಗಳಲ್ಲಿ ತನ್ನ ಇಪ್ಪತ್ತೊಂದು ತಲೆಯವರನ್ನು ಉದ್ಧರಿಸುವನು. ಶಂಕಚಕ್ರಮುದ್ರೆಯನ್ನು ಧರಿಸಿಕೊಂಡು ಯಾರು ಶಾಲಗ್ರಾಮವನ್ನು ಪೂಜಿಸುವನೋ ಅವನು ಅದರಿಂದ ಎಲ್ಲಾ ಲೋಕವನ್ನು ಹೊಂದುವನು. ಪಿತೃಗಳೂ 'ತಮ್ಮ ವಂಶದಲ್ಲಿ ವಿಷ್ಣುಭಕ್ತರು ಹುಟ್ಟಲಿ. ಅವರು ನಮ್ಮನ್ನು ಉದ್ಧರಿಸಿ ವಿಷ್ಣುಲೋಕಕ್ಕೆ ಕಳುಹಿಸುವರು' ಎಂದು ಸಂಭಾಷಣೆ ಮಾಡಿಕೊಂಡು ಇರುವರು. ಯಾರು ಯಾವ ದಿವಸದಲ್ಲಿ ಶಾಲಗ್ರಾಮ ಪೂಜೆಯನ್ನು ಮಾಡುವನೋ ಆ ದಿವಸವೇ ಧನ್ಯವು. ಅವನ ತಾಯಿಯೂ ಬಂಧುಗಳೂ ತಂದೆಯೂ ಧನ್ಯರು. ವಿಷ್ಣುಭಕ್ತಿಯುಳ್ಳವರೆಲ್ಲರೂ ಅತಿಧನ್ಯರೆಂದು ತಿಳಿಯಬೇಕು. ಅವರನ್ನು ನೋಡುವ ಮಾತ್ರದಿಂದಲೇ ಮಹಾಪಾಪ ಗಳು ಪರಿಹೃತವಾಗುವುವು. ಉಪಪಾತಕಗಳೂ ಮಹಾಪಾಪಗಳೂ ಎಲ್ಲಾ ಪಾಪ ಗಳೂ ವೈಷ್ಣವರ ದರ್ಶನದಿಂದಲೇ ಪರಿಹೃತವಾಗುವುವು. ಪರಮಾತ್ಮನನ್ನು ಪೂಜಿಸು ವವರು ಅಗ್ನಿಯಂತೆ ಪ್ರಕಾಶಿಸುವರು. ವಿಷ್ಣುಭಕ್ತರನ್ನು ಪೂಜಿಸುವುದರಿಂದ ಎಲ್ಲಾ ಪಾಪಗಳೂ ಪರಿಹೃತವಾಗುವುವು. ತಿಳಿದೋ ತಿಳಿಯದೆಯೋ ಮಾಡಿದ ಎಲ್ಲಾ ಪಾಪ ಗಳೂ ವೈಷ್ಣವರೊಡನೆ ಮಾತಾಡುವುದರಿಂದ ಪರಿಹೃತವಾಗುವುವು. ಪಾಪಮಾಡಿ ದವರೂ ವಿಷ್ಣುಭಕ್ತರ ದರ್ಶನದಿಂದ ಪಾಪರಹಿತರಾಗಿ ಸ್ವರ್ಗಕ್ಕೆ ಹೋಗುವರು. ವಿಷ್ಣುಭಕ್ತರು ಸಂಸಾರವೆಂಬ ಕೆಸರಿನಿಂದ ಶುದ್ಧ ಮಾಡುವರು. ಅತಿ ಪವಿತ್ರರು.

ನಿತ್ಯವೂ ಯಾರು ಪರಮಾತ್ಮನನ್ನು ಸ್ಮರಿಸುತ್ತಿರುವರೋ ಅವರಲ್ಲಿ ಪರಮಾತ್ಮನ ಸನ್ನಿಧಾನವಿರುವುದು. ಯಾರು ನಿತ್ಯವೂ ಸರ್ವಾಯುಧಧಾರಿಯಾದ ಸರ್ವಾಭರಣ ಭೂಷಿತನಾದ ಸರ್ವಾಂಗಸುಂದರನಾದ ಭಗವಂತನನ್ನು ಧ್ಯಾನ ಮಾಡುತ್ತಿರುವರೋ ಪರಮಾತ್ಮನಲ್ಲಿ ಭಕ್ತಿಉಳ್ಳವರಾಗಿರುವರೋ ಅವರನ್ನು ಭಕ್ತಿಯಿಂದ ನೋಡುವುದ ರಿಂದಲೂ ಅವರಿಗೆ ಭೋಜನ ಮಾಡಿಸುವುದರಿಂದಲೂ ಅವರನ್ನೂ ಪೂಜಿಸುವುದ ರಿಂದಲೂ ಕ್ರಮದಿಂದ ವೈಕುಂಠಲೋಕವೇ ಲಭಿಸುವುದು.

# ತೀರ್ಥಪ್ರಾಶನೆಯು [1]

ಗುರುಗಳಿಗೆ ಶಂಖತೀರ್ಥವನ್ನೂ ತೀರ್ಥವನ್ನೂ ಕೊಟ್ಟು ಕೂತುಕೊಂಡು ಪ್ರಾರ್ಥನೆಯನ್ನು ಮಾಡಿ ತೀರ್ಥವನ್ನು ತೆಗೆದುಕೊಳ್ಳಬೇಕು. ಸಮಸ್ತ ಜಗತ್ತಿಗೆ ಆಧಾರನಾದ ಶಂಖಚಕ್ರಗದಾಧಾರಿಯಾದ ಪರಮಾತ್ಮನೇ! ನಿನ್ನ ತೀರ್ಥವನ್ನು ಸೇವಿಸಲಿಕ್ಕೆ ಅನುಜ್ಞೆಯನ್ನು ಕೊಡು ಎಂದು ಪ್ರಾರ್ಥಿಸಬೇಕು. ಶಂಖೋದಕವನ್ನು ತಲೆಯಮೇಲೆ ಹಾಕಿಕೊಳ್ಳಬೇಕು. ಕೂಷ್ಮಾಂಡಗಳೂ ಪಿಶಾಚಗಳೂ ರಾಕ್ಷಸರೂ ತಲೆಯಲ್ಲಿ ಶಂಖೋದಕವನ್ನು ನೋಡಿ ಹತ್ತು ದಿಕ್ಕುಗಳಿಗೆ ಓಡುವುವು. ಶಂಖತೀರ್ಥವನ್ನು ದೇಹದಲ್ಲಿ ಧರಿಸಿದರೆ ಹತ್ತು ಸಾವಿರ ಬ್ರಹ್ಮಹತ್ಯೆಗಳು ನಾಶವನ್ನು ಹೊಂದುವುವು. ಸಾಲಿಗ್ರಾಮತೀರ್ಥವೂ ದ್ವಾರಕಾತೀರ್ಥವೂ ತುಲಸೀಯ ಬುಡದ ತೀರ್ಥವೂ ಪುಷ್ಕರತೀರ್ಥವೂ ಗಂಗಾತೀರ್ಥವೂ ಈ ಐದು ತೀರ್ಥಗಳು ಐದು ಇಂದ್ರಿಯಗಳಿಂದ ಮಾಡುವ ಪಾಪಗಳನ್ನು ಪರಿಹರಿಸುವುವು. 'ತೀ' ಎಂದರೆ ದೈತ್ಯರ ನಾಶವಾಗುವುದು. 'ಥ' ಎನ್ನುವುದು ಮೋಕ್ಷಕ್ಕೆ ಕಾರಣವು. ಈ 'ಅಕ್ಷರ ಎರಡರಿಂದ' ಸೇರಿದ್ದು ತೀರ್ಥ ಎಂದು ಹೆಸರು. ಜನ್ಮವನ್ನು ಆರಂಭಿಸಿ ಮಾಡಿರುವ ಪಾಪಗಳ ಪರಿಹಾರವನ್ನು ಅಪೇಕ್ಷಿಸುವುದಾದರೆ ಪಾಪಪರಿಹಾರಕವಾದ ಶಾಲಿಗ್ರಾಮತೀರ್ಥ ವನ್ನು ಪಾನಮಾಡಬೇಕು. ಯಾರು ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳುವನೋ ಅವನು ಬ್ರಹ್ಮಹತ್ಯೆಯಿಂದ ರಹಿತನಾಗುವನು. ಸ್ನಾನವಾದ ಮೇಲೆ ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯಮೇಲೆ ಧರಿಸಬೇಕು. ಆದರಿಂದ ಸಮಸ್ತ ಪಾಪಗಳಿಂದ ರಹಿತನಾಗಿ ವಿಷ್ಣುಲೋಕವನ್ನು ಹೊಂದುವನು. ಸಾಲಿಗ್ರಾಮತೀರ್ಥವನ್ನು ಮೊದಲು ತಲೆಯಮೇಲೂ ಕಣ್ಣಿಗೂ ಹಾಕಿಕೊಂಡು ಮೂರುಸಲ ತೀರ್ಥವನ್ನು ತೆಗೆದುಕೊಳ್ಳಬೇಕು. ಯಾರು ನಿತ್ಯವೂ ಸಾಲಿಗ್ರಾಮತೀರ್ಥವನ್ನು ಪಾನಮಾಡಿ ತಲೆಯಮೇಲೆ ಧರಿಸುವನೋ ಅವನು ಉತ್ತಮವಾದ ಗತಿಯನ್ನು ಹೊಂದುವನು. ಸಾಲಿಗ್ರಾಮತೀರ್ಥವನ್ನು ವಿಷ್ಣುಭಕ್ತರಿಗೆ ಕೊಟ್ಟು ತಾನು ಪಾನಮಾಡಿ ಶಿರಸ್ಸಿನಲ್ಲಿ ಧರಿಸಬೇಕು. ಆದರಿಂದ ಶುದ್ಧನಾಗುವನು. ಯಾರು ಪಾಪ ಸಂದೇಹದಿಂದ ಭಗವಂತನ ತೀರ್ಥವನ್ನು ಪಾನಮಾಡುವುದಿಲ್ಲವೋ ತಲೆಯಲ್ಲಿ ಮಾತ್ರಧರಿಸುವನೋ ಅವನು ನಿಶ್ಚಯವಾಗಿಯೂ ನರಕವನ್ನು ಹೊಂದುವನು. ಯಾರು ಮಂದಬುದ್ಧಿಯುಳ್ಳವನಾಗಿ ತೀರ್ಥವನ್ನು ಪಾನ

---

1. (1) ಸ.ಸ್ಮೃ (2) ಕೃ.ಮು.

ಮಾಡುವವನಾಗಿ ಶಿರಸ್ಸಿನ ಮೇಲೆ ಹಾಕಿಕೊಳ್ಳುವುದಿಲ್ಲವೋ ಅವನು ಬ್ರಹ್ಮಹತ್ಯೆಯನ್ನು ಮಾಡಿದ ಪಾಪವನ್ನು ಹೊಂದುವನು. ರುದ್ರದೇವರೂ ಪರಮಾತ್ಮನ ಪಾದೋದಕವನ್ನು ನಮಸ್ಕರಿಸಿ ಪಾನಮಾಡಿ ಶಿರಸಾ ಧರಿಸಿರುವರು. ಪರಮಾತ್ಮನ ಪಾದೋದಕವು ಅತಿಪವಿತ್ರವಾದದ್ದು. ಪರಮಾತ್ಮನ ದಿವ್ಯವಾದ ತೀರ್ಥವನ್ನು ಯಾರು ನಿತ್ಯವೂ ಪಾನಮಾಡುವರೋ ಅವನು ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಸರ್ವಯಜ್ಞಗಳಲ್ಲಿ ದೀಕ್ಷೆಯನ್ನು ಹೊಂದಿದ ಫಲವನ್ನು ಹೊಂದುವನು. ಆದರಿಂದ ಕೇವಲ ಆನಂದವನ್ನು ಹೊಂದುವನು. ಯಾರು ವಿಷ್ಣುಭಕ್ತರು ಕೊಟ್ಟ ತೀರ್ಥವನ್ನು ತಲೆಯಲ್ಲಿ ಧರಿಸುವನೋ ಅವನು ಸರ್ವಪಾಪಗಳಿಂದ ರಹಿತನಾಗಿ ವಿಷ್ಣುಲೋಕವನ್ನು ಹೊಂದುವನು. ಪರಮಾತ್ಮನ ತೀರ್ಥವು ಸದ್ಯ ಫಲವನ್ನು ಉಂಟುಮಾಡುವುದು ಪುಣ್ಯಕರವಾದದ್ದು. ಮಹಾಪಾಪಪರಿಹಾರಕವಾದದ್ದು. ಸರ್ವಮಂಗಲಪ್ರದವಾದದ್ದು. ಅತಿಪ್ರವಿತ್ರವಾದದ್ದು. ಪವಿತ್ರವನ್ನಾಗಿ ಮಾಡತಕ್ಕದ್ದು. ದುಷ್ಟಗ್ರಹಗಳನ್ನು ಪರಿಹರಿಸುವುದು. ಸರ್ವರೋಗ ಪರಿಹಾರಕವಾದದ್ದು. ಸರ್ವ ದುಃಖಪರಿಹಾರಕವಾದದ್ದು. ಸರ್ವಾಭೀಷ್ಟಪ್ರದವಾದದ್ದು. ಸರ್ವಸೌಭಾಗ್ಯದಾಯಕವಾದದ್ದು. ಸರ್ವಶತ್ರು ಪರಿಹಾರಕವಾದದ್ದು. ಸರ್ವದೋಷಪರಿಹಾರಕವಾದದ್ದು. ಸರ್ವತೀರ್ಥಗಳ ಫಲವನ್ನು ಉಂಟುಮಾಡುವುದು. ಪರಮಾತ್ಮನ ತೀರ್ಥವನ್ನು ಭಗವದ್ಭಕ್ತರಿಗೆ ಕೊಟ್ಟು ನಿಂತುಕೊಂಡೋ ಕೂತುಕೊಂಡೋ ತಾನು ಪಾನ ಮಾಡಬೇಕು. ಕೈಯಕೆಳಗೆ ವಸ್ತ್ರವನ್ನು ಇಟ್ಟುಕೊಂಡು ತೀರ್ಥವನ್ನು ತೆಗೆದುಕೊಳ್ಳಬೇಕು. ವಸ್ತ್ರವನ್ನು ಮೂರಾಗಿ ಮಡಿಸಿ ಅದರ ಮೇಲೆ ಒಂದು ಕೈಯಿಟ್ಟು ಅದರ ಮೇಲೆ ಮತ್ತೊಂದು ಕೈಯನ್ನು ಇಟ್ಟುಕೊಂಡು ಆ ಕೈಯಿಂದ ಶಬ್ದಮಾಡದೆ ಮೂರುಸಲ ತೀರ್ಥವನ್ನು ತೆಗೆದುಕೊಳ್ಳಬೇಕು. ಮೊದಲು ದೇಹಶುದ್ಧಿಗಾಗಿಯೂ ಎರಡನೇ ಸಲ ಧರ್ಮಕ್ಕೆ ಸಾಧನವಾಗಿಯೂ ಮೂರನೇ ಸಲ ಮೋಕ್ಷಕ್ಕೆ ಕಾರಣವಾಗಿಯೂ ಹೀಗೆ ಮೂರು ಸಲ ತೀರ್ಥವನ್ನು ತೆಗೆದುಕೊಳ್ಳಬೇಕು. ಪರಮಾತ್ಮನ ತೀರ್ಥವು ಅಕಾಲಮೃತ್ಯುವನ್ನು ಪರಿಹರಿಸುವುದು. ಸರ್ವರೋಗವನ್ನು ಪರಿಹರಿಸುವುದು. ಸರ್ವಪಾಪವನ್ನು ಪರಿಹರಿಸುವುದು. ತೀರ್ಥವನ್ನು ಪಾನಮಾಡಿ ಅಶುಚಿಸಂದೇಹದಿಂದ ಮೋಹದಿಂದ ಆಚಮನೆಯನ್ನು ಮಾಡಿದರೆ ಅವನು ಬ್ರಹ್ಮಹತ್ಯೆಯನ್ನು ಮಾಡಿದ ಪಾಪವನ್ನು ಹೊಂದುವನು. **ತೀರ್ಥವನ್ನು ಒಂದು ಪರಮಾಣುವಿನಷ್ಟಾದರೂ ನೆಲದಲ್ಲಿ ಬೀಳಿಸಿದರೆ ಬ್ರಹ್ಮಹತ್ಯೆಗೆ ಸಮವಾದ ಪಾಪವು ಬರುವುದು. ಪರಮಾಣುವಿನಷ್ಟು ತೀರ್ಥವನ್ನು ಕೆಳಗೆ ಹಾಕದರೆ ಅರುವತ್ತು ಸಾವಿರ**

**ವರ್ಷ ಮಲದಲ್ಲಿ ಕ್ರಿಮಿಯಾಗುವನು.** ಸಾಲಗ್ರಾಮತೀರ್ಥವನ್ನು ಪಾನಮಾಡಿದರೆ ಕೋಟಿ ಯಜ್ಞವನ್ನು ಮಾಡಿದ ಫಲವು ಬರುವುದು. ಅದರ ಒಂದು ಜೊಟ್ಟನ್ನಾದರೂ ಕೆಳಗೆ ಹಾಕಿದರೆ ಅದಕ್ಕಿಂತ ಎಂಟುಪಾಲು ಪಾಪವನ್ನು ಹೊಂದುವನು. ಏಕಾದಶಿಯಲ್ಲಿ ತುಳಸೀದಳ ಸಹಿತವಾಗಿ ವಿಷ್ಣುಭಕ್ತರು ತೆಗೆದುಕೊಳ್ಳಬಾರದು. ತೆಗೆದುಕೊಂಡರೆ ಏಕಾದಶೀವ್ರತವು ನಷ್ಟವಾಗುವುದು. ಏಕಾದಶಿಯಲ್ಲಿ ಯಾರು ತುಲಸೀಭಕ್ಷಣೆಯನ್ನು ಮಾಡುವರೋ ಅವರು ಭಗವಂತನ ದ್ರೋಹಮಾಡಿದಂತಾಗಿ ಘೋರವಾದ ನರಕವನ್ನು ಹೊಂದುವರು. ಅವೈಷ್ಣವನ ಕೈಯಿಂದ ತೀರ್ಥವನ್ನು ಪ್ರಸಾದವನ್ನು ತೆಗೆದುಕೊಳ್ಳಬಾರದು. ಪರಮಾತ್ಮನ ತೀರ್ಥವನ್ನು ತೆಗೆದುಕೊಂಡು ಪ್ರೋಕ್ಷಣೆ ಮಾಡಿಕೊಂಡರೆ ಸರ್ವಪಾಪ ಪರಿಹಾರವಾಗುವುದು. ತಲೆಯಲ್ಲಿ ಪರಮಾತ್ಮನ ತೀರ್ಥವನ್ನು ಧರಿಸುವುದರಿಂದ ಪಿತೃಗಳು ಪಿತಾಮಹರೂ ನರ್ತನ ಮಾಡುವರು. ಪರಮಾತ್ಮನ ತೀರ್ಥವನ್ನು ತಲೆಯಮೇಲೆ ಧರಿಸುವುದರಿಂದ ಬ್ರಹ್ಮಾವರ್ತ ಕೇದಾರ ಕುರುಕ್ಷೇತ್ರ ಗಂಗಾದ್ವಾರ ಕುಶಾವರ್ತಬಿಲ್ವಕ ನಿಂಬಕ ನೀಲಪರ್ವತ ದಶಾಶ್ವಮೇಧ ಕುಶಶರ ಗಂಗಾಸಾಗರ ಮಧ್ಯ ಉತ್ತರಮಾನಸ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಉಂಟಾಗುವುದು. ಯಾರು ನಿಷಿದ್ಧವಾದ ಪಾನೀಯವನ್ನು ಪಾನಮಾಡುವನೋ ನಿಷಿದ್ಧವಾದ ಪದಾರ್ಥವನ್ನು ತಿನ್ನುವನೋ ಅಗಮ್ಯಾಗಮನವನ್ನು ಮಾಡುವನೋ ದುರಾಚಾರವುಳ್ಳವನಾಗಿರುವನೋ ಅವನೂ ಕೂಡ ಸಾಲಿಗ್ರಾಮತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದರೆ ಪವಿತ್ರನಾಗುವನು. ತಪ್ತಕೃಚ್ಛ್ರ ಮಹಾಕೃಚ್ಛ್ರ ಎಂಬ ವ್ರತಗಳಿಂದಲೂ ಪಂಚಗವ್ಯಪ್ರಾಶನಕ್ಕಿಂತಲೂ ಚಾಂದ್ರಾಯಣ ವ್ರತಕ್ಕಿಂತಲೂ ತೀರ್ಥವನ್ನು ತೆಗೆದುಕೊಳ್ಳುವುದು ಪರಮಶ್ರೇಷ್ಠವಾದದ್ದು. ಭಕ್ತಿಯಿಂದ ತೀರ್ಥವನ್ನು ತೆಗೆದುಕೊಳ್ಳುವುದರಿಂದ ಸಾವಿರಬಾರಿ ಪಂಚಗವ್ಯವನ್ನು ತೆಗೆದುಕೊಳ್ಳುವುದಕ್ಕಿಂತಲೂ ಹೆಚ್ಚಾದ ಪುಣ್ಯವುಂಟಾಗುವುದು. **ನಿತ್ಯವೂ ತೀರ್ಥವನ್ನು ತೆಗೆದುಕೊಂಡರೆ ಹನ್ನೆರಡು ವರ್ಷ ಉಪವಾಸ ಮಾಡಿದ ಫಲವನ್ನು ಹೊಂದುವನು.** ಮತ್ತು ಅಯೋಗ್ಯಸ್ತ್ರೀಯರೊಡನೆ ಮಾತಾಡಿದ ದೋಷವೂ ಹಿಂಸಾಮಾಡಿದ ದೋಷವೂ ಅಭಕ್ಷ್ಯಭಕ್ಷಣೆಯ ದೋಷವೂ ಪರಿಹೃತವಾಗುವುದು. ನಿತ್ಯವೂ ಮೂರು ಹೊತ್ತು ತೀರ್ಥವನ್ನು ತೆಗೆದುಕೊಂಡರೆ ಧನ್ಯನಾಗುವನು.

ಸಮುದ್ರಕ್ಕೆ ಹೋಗಿ ಸೇರದ ನದಿಗಳು ಮೂರು ರಾತ್ರಿಯಾಗ ಮಾಡಿದ ಫಲವನ್ನು ಉಂಟುಮಾಡುವುವು. ಸಮುದ್ರಕ್ಕೆ ಸೇರುವ ನದಿಗಳು ಹದಿನೈದುದಿನ ಯಾಗಮಾಡಿದ ಫಲವನ್ನು, ಸಮುದ್ರವು ಒಂದು ತಿಂಗಳು ಯಾಗಮಾಡಿದ

ಫಲವನ್ನು. ಗೋದಾವರೀನದಿಯು ಆರುತಿಂಗಳು ಯಾಗಮಾಡಿದ ಫಲವನ್ನೂ, ಗಂಗಾನದಿಯು ಒಂದು ವರ್ಷ ಯಾಗ ಮಾಡಿದ ಫಲವನ್ನು ಉಂಟುಮಾಡುವುವು. ಇವೆಲ್ಲವೂ ವಿಷ್ಣುಪಾದೋದಕದ ಅಂದರೆ ಸಾಲಿಗ್ರಾಮತೀರ್ಥದ ಹದಿನಾರನೇ ಒಂದಂಶ ಪುಣ್ಯವನ್ನು ಉಂಟುಮಾಡಲಾರವು. ಗಂಗಾದಿ ತೀರ್ಥಗಳನ್ನು ಕ್ಷೇತ್ರಗಳನ್ನು ಸೇವಿಸಿದರೆ ಬಹುಕಾಲದ ಮೇಲೆ ಪವಿತ್ರವನ್ನಾಗಿ ಮಾಡುವುವು. ಸಾಲಿಗ್ರಾಮ ತೀರ್ಥವು ಆಗಲೇ ಪವಿತ್ರೀಕರಿಸುವುದು. ಬ್ರಹ್ಮಾಂಡದಲ್ಲಿ ಇರುವ ತೀರ್ಥಗಳೂ ಸಾಲಿಗ್ರಾಮತೀರ್ಥದ ಹದಿನಾರನೇ ಒಂದು ಅಂಶ ಪುಣ್ಯವನ್ನು ಉಂಟು ಮಾಡಲಾರವು. **ಅಂತ್ಯಕಾಲದಲ್ಲಿ ಸಾಲಿಗ್ರಾಮತೀರ್ಥವನ್ನು ಪಾನಮಾಡಿದರೆ ಸದ್ಗತಿಯನ್ನು ಹೊಂದುವನು.** ತೀರ್ಥವು ಸರ್ವಕಾಲದಲ್ಲಿ ಪವಿತ್ರೀಕರಿಸುವುದು.



## ವಿಷ್ಣು ಅರ್ಪಿತ ಸ್ವೀಕಾರ ಫಲವು [1]

ಹೇಗೆ ಪರಮಾತ್ಮನ ಪಾದೋದಕವು ಸ್ವೀಕಾರ ಮಾಡಲಿಕ್ಕೆ ಅರ್ಹವೋ ಹಾಗೆಯೇ ಪರಮಾತ್ಮನಿಗೆ ಸಮರ್ಪಿಸಿದ ನಿರ್ಮಾಲ್ಯವೂ ಗಂಧವೂ ನೈವೇದ್ಯವೂ ಅಂಗಾರವೂ ಮಂಗಳಾರತಿಯೂ ಸ್ವೀಕಾರಕ್ಕೆ ಅರ್ಹವಾದವುಗಳು. ತುಲಸಿಯ ದಳದಿಂದ ಕೂಡಿದ ಪರಮಾತ್ಮನ ನೈವೇದ್ಯವನ್ನು ಭಕ್ಷಿಸಬೇಕು. ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಬೇಕು. ಇದರಿಂದ ಮಹಾಪಾಪ ಪರಿಹಾರವಾಗುವುದು. ಪರಮಾತ್ಮನಿಗೆ ಸಮರ್ಪಿಸಿದ ಪುಷ್ಪಗಳನ್ನು ಮೂಗಿನಿಂದ ಮೂಸಿನೋಡಬೇಕು. ತಲೆಯಲ್ಲಿಯೂ ಕಿವಿಗಳಲ್ಲಿಯೂ ಧರಿಸಬೇಕು. ಯಾರು ದೇವರಿಗೆ ಸಮರ್ಪಿಸಿದ ಪುಷ್ಪಗಳನ್ನು ಕಿವಿಗಳಲ್ಲಿಯೋ ತಲೆಯಲ್ಲಿಯೋ ಕುತ್ತಿಗೆಯಲ್ಲಿಯೋ ಧರಿಸುವನೋ ವಿಶೇಷವಾಗಿ ತುಲಸಿಯನ್ನು ಧರಿಸುವನೋ ಅವನಿಗೆ ಯಮದೂತರು ಏನು ಮಾಡುವರು? ದೇವರಿಗೆ ಸಮರ್ಪಿಸಿದ ತುಲಸಿಯನ್ನು ತಲೆಯಲ್ಲಿ ಧರಿಸಿದರೆ ನೂರುಜನ್ಮಗಳಲ್ಲಿ ಮಾಡಿದ ಪಾಪವು ಪರಿಹೃತವಾಗುವುದು. ದೇವರಿಗೆ ಸಮರ್ಪಿಸಿದ ತುಲಸೀದಳಗಳ ಮಾಲೆಯನ್ನು ಯಾರು ಕುತ್ತಿಗೆಯಲ್ಲಿ ಧರಿಸುವನೋ ಅವನು ಒಂದೊಂದು ಹೆಜ್ಜೆಗೂ ಹತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಹೊಂದುವನು. ತುಲಸೀದಲದ ಮಾಲೆಯನ್ನು ಕಿವಿಗಳಲ್ಲಿ ಧರಿಸಿದರೆ ಅವನ ಪಾಪಗಳು ನಾಶವನ್ನು ಹೊಂದುವುವು.

---

1. (1) ಸ.ಸ್ಮೃ (2) ಕೃ.ಮು.

ಪರಮಾತ್ಮನಿಗೆ ಸಮರ್ಪಿಸಿದ ಮಾಲೆಯನ್ನು ಗಂಧವನ್ನೂ ರಾತ್ರಿಹಗಲು ಧರಿಸುವವರಿಗೆ ಪುನಃ ಜನ್ಮವುಂಟಾಗಲಾರದು. ಯಾರ ಹೊಟ್ಟೆಯಲ್ಲಿ ದೇವರ ನೈವೇದ್ಯವಿರುವುದೋ ಮುಖದಲ್ಲಿ ಭಗವಂತನ ನಾಮವಿರುವುದೋ ಪಾದೋದಕವೂ ನಿರ್ಮಾಲ್ಯವೂ ಶಿರಸ್ಸಿನಲ್ಲಿ ಇರುವುದೋ ಅವನು ಭಗವಂತನ ಸನ್ನಿಧಾನವುಳ್ಳವನಾಗುವನು. ಪರಮಾತ್ಮನ ನಿರ್ಮಾಲ್ಯವನ್ನು ಅಂಗಗಳಿಗೆ ಹಚ್ಚಿಕೊಂಡರೆ ಪಾಪಗಳು ನಾಶವನ್ನು ಹೊಂದುವುವು. ರೋಗಗಳೂ ಪರಿಹೃತವಾಗುವುವು. ಯಾರು ಪರಮಾತ್ಮನಿಗೆ ಸಮರ್ಪಿಸಿದ ಅಂಗಾರವನ್ನು ದೇಹಕ್ಕೆ ಹಚ್ಚಿಕೊಳ್ಳುವನೋ ಅವನಿಗೆ ಸ್ವರ್ಗದಿಂದಲೂ ಅಂತರಿಕ್ಷದಿಂದಲೂ ಭೂಮಿಯಿಂದಲೂ ಭಯವುಂಟಾಗಲಾರದು. ಅವನಿಗೆ ಸಂಪತ್ತುಗಳು ಉಂಟಾಗುವುವು. ಆಪತ್ತುಗಳು ಉಂಟಾಗಲಾರವು. ಅವನಿಗೆ ಪಿಶಾಚಗಳಿಂದಲೂ ಕಳ್ಳರಿಂದಲೂ ಭಯವುಂಟಾಗಲಾರದು. ಪರಮಾತ್ಮನಿಗೆ ಸಮರ್ಪಿಸಿದ ಅಂಗಾರವನ್ನು ನಿರ್ಮಾಲ್ಯವನ್ನೂ ತೀರ್ಥವನ್ನೂ ಮಂಗಳಾರತಿಯನ್ನೂ ಸ್ವೀಕರಿಸಿದರೆ ನೂರುಕೋಟಿ ವರ್ಷ ಪರಮಾತ್ಮನ ಲೋಕದಲ್ಲಿ ವಾಸಮಾಡುವನು. ದೇವರ ಮಂಗಳಾರತಿಯಲ್ಲಿ ಮೈಯನ್ನು ಕಾಸಿಕೊಂಡರೆ ಬ್ರಹ್ಮಹತ್ಯಾದಿ ಪಾಪವು ನಾಶವನ್ನು ಹೊಂದುವುದು. ಪರಮಾತ್ಮನಿಗೆ ಸಮರ್ಪಿಸಿದ ಪುಷ್ಪ ಗಂಧವಸ್ತ್ರಾದಿಗಳನ್ನು ಧರಿಸಿದ ಪರಮಾತ್ಮನ ನೈವೇದ್ಯವನ್ನು ಭೋಜನ ಮಾಡುವ ಪರಮಾತ್ಮನ ದಾಸರು ಪರಮಾತ್ಮನ ಅನುಗ್ರಹದಿಂದ ಬಂಧಕಶಕ್ತಿಯನ್ನು ಪರಿಹರಿಸಿಕೊಳ್ಳುವರು.



## ಅನರ್ಪಿತನಿಷೇಧವು [1]

ಪರಮಾತ್ಮನಿಗೆ ಸಮರ್ಪಿಸದೆ ಯಾವುದನ್ನೂ ತಿನ್ನಬಾರದು. ದೇವರಿಗೆ ಸಮರ್ಪಿಸದೆ ತಿಂದರೆ ಅಥವಾ ಕುಡಿದರೆ ತಿಂದ ಅನ್ನವು ಮಲಕ್ಕೆ ಸಮಾನವು. ಕುಡಿದ ನೀರು ಮದ್ಯಕ್ಕೆ ಸಮಾನವಾಗುವುದು. ಪರಮಾತ್ಮನಿಗೆ ಸಮರ್ಪಿಸದೆ ಇತರ ದೇವತೆಗಳಿಗೆ ಸಮರ್ಪಿಸಿದರೂ ಅದು ಮದ್ಯಮಾಂಸಕ್ಕೆ ಸಮಾನವಾಗುವುದು. ಅದನ್ನು ಯಾವಾಗಲೂ ತಿನ್ನಬಾರದು. ಇತರ ದೇವತೆಗಳಿಗೆ ಸಮರ್ಪಿಸಿದ್ದನ್ನು ನಿಂದ್ಯವೆಂದು ತಿಳಿಯಬೇಕು. ರುದ್ರಾದಿದೇವತೆಗಳಿಗೆ ಸಮರ್ಪಿಸಿದ್ದನ್ನು ಒಂದುಬಾರಿ

---

1. (1) ಸ.ಸ್ಮೃ (2) ಕೃ.ಮ.

ಯಾದರೂ ಯಾರು ಬ್ರಾಹ್ಮಣನು ತಿನ್ನುವನೋ ಅವನು ನಿಶ್ಚಯವಾಗಿಯೂ ಚಂಡಾಲನಾಗುವನು. ಇತರ ದೇವತೆಗಳಿಗೆ ಸಮರ್ಪಿಸಿದ್ದನ್ನು ತಿಂದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು. ದೇವರಿಗೆ ಸಮರ್ಪಣೆ ಮಾಡದೆ ಇರುವ ಅನ್ನಾದಿಗಳನ್ನೋ ವ್ಯಂಜನವನ್ನೋ ನೀರನ್ನು ಅಪ್ಪ ಮೊದಲಾದ ಭಕ್ಷಗಳನ್ನೋ ಹಣ್ಣುಗಳನ್ನೋ ತಿನ್ನಬಾರದು. ಅದು ಮದ್ಯಕ್ಕೆ ಸಮಾನವಾದದ್ದು. ತಿನ್ನುವವನು ಮತ್ತು ಪರಮಾತ್ಮನಿಗೆ ಸಮರ್ಪಿಸದೆ ಇರುವ ಗಂಧ ಪುಷ್ಪ ತಾಂಬೂಲಾದಿಗಳನ್ನು ಸ್ವೀಕರಿಸುವವನೂ ಕೋಟಿ ಸಾವಿರ ಮತ್ತು ಕೋಟಿನೂರು ಕಲ್ಪ ಘೋರವಾದ ನರಕದಲ್ಲಿ ಮುಳುಗಿ ರೇತಸ್ಸನ್ನು ಮಲಮೂತ್ರಗಳನ್ನು ತಿನ್ನುತ್ತಾ ಇರುವನು. ತಾಂಬೂಲವನ್ನೋ ಗಂಧಪುಷ್ಪಾದಿಗಳನ್ನೋ ನೀರನ್ನೋ ಹಾಲನ್ನೋ ತುಪ್ಪವನ್ನೋ ಜೇನುತುಪ್ಪವನ್ನೋ ಹಣ್ಣುಗಳನ್ನೋ ಭಕ್ಷಭೋಜ್ಯಗಳ್ನೋ ವಸ್ತ್ರಾಭರಣಾದಿಗಳನ್ನೋ ಪರಮಾತ್ಮನಿಗೆ ಸಮರ್ಪಿಸದೆ ಸ್ವೀಕರಿಸಿದ ಪಾಪಿಯು ಕೋಟಿಸಾವಿರಕಲ್ಪ ಮತ್ತು ಕೋಟಿನೂರುಕಲ್ಪ ಕೃಮಿರಾಶಿಗಳಿಂದ ಕೂಡಿದ ಕೀವುರಕ್ತದಿಂದ ಕೂಡಿದ ಘೋರವಾದ ನರಕದಲ್ಲಿ ಪಿತೃಗಳಿಂದ ಸಹಿತನಾಗಿ ಮುಳುಗುವನು. ಆಮೇಲೆ ಮುನ್ನೂರುಕಲ್ಪ ಮಲದಲ್ಲಿ ಕೃಮಿಯಾಗಿ ಹುಟ್ಟಿ ಚಂಡಾಲನಾಗುವನು. ಆದುದರಿಂದ ವಿಷ್ಣುವಿಗೆ ಸಮರ್ಪಿಸದೆ ಇರುವ ಯಾವ ವಸ್ತುವನ್ನು ಸ್ವೀಕರಿಸಬಾರದು. ಅತ್ಯಂತ ಆಪತ್ಕಾಲದಲ್ಲಿಯಾಗಲೀ ಮಹೋತ್ಸವಕಾಲದಲ್ಲಿಯೋ ಪರಮಾತ್ಮನಿಗೆ ಸಮರ್ಪಿಸದೆ ಇದ್ದದ್ದನ್ನು ತಿಂದರೆ ಅದು ಮದ್ಯಕ್ಕೆ ಸಮಾನವಾಗುವುದು. ಇತರ ದೇವತೆಗಳಿಗೆ ಸಮರ್ಪಿಸಿದ ಅಂಗಾರವನ್ನೋ ಅನ್ನಾದಿಗಳನ್ನೋ ಸ್ವೀಕರಿಸಿದರೆ ಬ್ರಹ್ಮಹತ್ಯೆ ಮಾಡಿದ ದೋಷವನ್ನು ಹೊಂದುವನು. ಪರಮಾತ್ಮನಿಗೆ ಸಮರ್ಪಿಸಿದ ಅನ್ನಾದಿಗಳನ್ನು ಯಾರು ಅಜ್ಞಾನದಿಂದ ಅವಮಾನ ಮಾಡುವನೋ ಅವನು ಹಂದಿಯಾಗಿ ಹುಟ್ಟಿ ನಾಯಿಯಾಗಿ ಹುಟ್ಟುವನು. ಅವೈಷ್ಣವರ ಅನ್ನವೂ, ಯತಿಗಳ ಅನ್ನವೂ, ಪತಿತರ ಅನ್ನವೂ, ವಿಷ್ಣುವಿಗೆ ಸಮರ್ಪಿಸದೆ ಇರುವ ಅನ್ನವೂ, ನಾಯಿಯ ಮಾಂಸಕ್ಕೆ ಸಮಾನವಾದದ್ದು. ಯಕ್ಷರಾಕ್ಷಸ ಭೂತಗಳಿಗೆ ಸಮರ್ಪಿಸಿದ ಅನ್ನವನ್ನು ಮದ್ಯಮಾಂಸವನ್ನು ಯಾರು ತಿನ್ನುವನೋ ಅವನು ಘೋರವಾದ ಕೀವುರಕ್ತದಿಂದ ಕೂಡಿದ ನರಕವನ್ನು ಹೊಂದುವನು. ಶೂದ್ರನು ಮುಟ್ಟಿದ್ದೂ, ಶೂದ್ರನು ನೋಡಿದ್ದೂ, ಶೂದ್ರನು ತಂದದ್ದೂ, ಶೂದ್ರನು ಊಟಕ್ಕೆ ಬರಬೇಕೆಂದು ಕರೆದುಹೋದಾಗ ಹಾಕಿದ ಅನ್ನವೂ, ಶೂದ್ರನಿಂದ ಪ್ರೇರಿತವಾದ ಅನ್ನವೂ, ಶೂದ್ರನು ಅಡಿಗೆ ಮಾಡಿದ ಅನ್ನವೂ ಆರು ವಿಧವಾಗಿ ಶೂದ್ರಾನ್ನವೆನಿಸುವುದು. ಯತಿಗೆ ಸೇರಿದ ಅನ್ನವೂ ಯತಿಯ ಪಾತ್ರೆಯಲ್ಲಿ

ಇರುವ ಅನ್ನವೂ ಯತಿಯಿಂದ ಪ್ರೇರಿತವಾದ ಅನ್ನವೂ ಈ ಮೂರು ಅನ್ನವನ್ನು ಶೂದ್ರಾನ್ನವನ್ನು ಭೋಜನ ಮಾಡಬಾರದು. ಮಾಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ಆದುದರಿಂದ ಪರಮಾತ್ಮನಿಂದ ಸಮರ್ಪಿತವಾದುದನ್ನೇ ಭೋಜನ ಮಾಡಬೇಕು.

ನಾರಾಯಣನು ಪರಬ್ರಹ್ಮನು. ಬ್ರಾಹ್ಮಣರಿಗೆ ದೇವತೆಯು. ಆ ನಾರಾಯಣನಿಗೆ ಸಮರ್ಪಿತವಾದದ್ದು ಪರಮಪವಿತ್ರವಾದದ್ದು. ಬ್ರಹ್ಮಚಾರಿಗಳೂ ಗೃಹಸ್ಥರೂ ವಾನಪ್ರಸ್ಥರೂ ಸನ್ಯಾಸಿಗಳೂ ಪರಮಾತ್ಮನ ನೈವೇದ್ಯವನ್ನು ಭೋಜನ ಮಾಡಬೇಕು. **ವರಾಹಪುರಾಣದಲ್ಲಿ** ಪರಮಾತ್ಮನಿಗೆ ಸಮರ್ಪಿಸದೆ ಭೋಜನ ಮಾಡಿದರೆ ದೋಷವನ್ನು ಹೇಳಿರುವರು. ರಾಜನು ಒಬ್ಬನು ಬ್ರಹ್ಮಹತ್ಯೆಯನ್ನು ಮಾಡಿದನು. ಅವನು ಬ್ರಹ್ಮಪಾರಸ್ತೋತ್ರದಿಂದ ಸ್ತೋತ್ರ ಮಾಡಲು ಅವನ ದೇಹದಿಂದ ಬ್ರಹ್ಮಹತ್ಯೆಯ ಅಭಿಮಾನಿಯು ಅವನ ದೇಹದಿಂದ ಹೊರಗೆ ಹೋಯಿತು. ಆ ಸ್ತೋತ್ರದ ಮಹಿಮೆಯಿಂದ ಬೇಡನಾಗಿ ಹುಟ್ಟಿತು. ಬೇಡನಾಗಿರುವಾಗಲೂ ಅವನು ಒಳ್ಳೇ ಧರ್ಮವನ್ನು ತಿಳಿದವನಾಗಿದ್ದನು. ಅವನು ಒಂದು ಅಮಾವಾಸ್ಯೆಯ ದಿವಸದಲ್ಲಿ ತನ್ನ ಮಗಳ ಮಾವನ ಮನೆಗೆ ಹೋಗಿ ಹಿಂಸಾಮಾಡದೆ ಭೋಜನ ಮಾಡಲಿಕ್ಕೆ ಬಂದಿರುವೆನು. ಹಿಂಸಾಮಾಡದೆ ಭೋಜನ ಮಾಡಲಿಕ್ಕೆ ಏನಾದರೂ ಇರುವುದೇ? ಎಂದು ಕೇಳಿದನು. ಆಗ ಮಗಳ ಮಾವನು ನೆಲ್ಲುಗಳನ್ನು ತೋರಿಸಿದನು. ನೆಲ್ಲುಗಳಲ್ಲಿ ಜೀವರು ಇರುವರು. ಅವರ ಹಿಂಸೆಯು ಏರ್ಪಡುವುದು. ಆದುದರಿಂದ ಬೇಡವೆಂದನು. ಆಮೇಲೆ ಹಾಗೆಯೇ ಬೇರೆಬೇರೆ ಪದಾರ್ಥಗಳನ್ನು ತೋರಿಸಲು ಎಲ್ಲದರಲ್ಲಿಯೂ ಜೀವರಿರುವರೆಂದೂ ಅವುಗಳನ್ನು ತಿಂದರೆ ಜೀವರ ಹಿಂಸೆಯಾಗುವುದೆಂದು ಹೇಳಿದನು. ಆಗ ಮಗಳ ಮಾವನು ಬ್ರಹ್ಮದೇವರು ಎಲ್ಲಾ ಪದಾರ್ಥಗಳನ್ನು ಪರಮಾತ್ಮನ ಪೂಜೆಗಾಗಿ ಸೃಷ್ಟಿ ಮಾಡಿದರು. ಅವುಗಳನ್ನು ಪರಮಾತ್ಮನಿಗೆ ಸಮರ್ಪಿಸಿದರೆ ದೋಷವಿರುವುದಿಲ್ಲ. ನಾನು ನಿತ್ಯವೂ ಒಂದು ಮೃಗವನ್ನು ಸಂಹರಿಸುವೆನು. ಅದನ್ನು ಭಗವಂತನಿಗೆ ಸಮರ್ಪಿಸುವೆನು. ಆಮೇಲೆ ಅತಿಥಿಗಳಿಂದಲೂ ಸ್ವಕೀಯರಿಂದಲೂ ಸಹಿತನಾಗಿ ಭೋಜನ ಮಾಡುವೆನು' ಎಂದು ಹೇಳಿದನು. ತರುವಾಯ ಬೇಡನು ಹಾಗೆಯೇ ಮಾಡಿ ಉತ್ತಮಲೋಕವನ್ನು ಹೊಂದಿನು ಎಂದು ಹೇಳಿರುವುದು.

ಪರಮಾತ್ಮನ ನೈವೇದ್ಯವನ್ನು ಭೋಜನ ಮಾಡಿದರೆ ಕೋಟಿ ಚಾಂದ್ರಾಯಣ ವ್ರತವನ್ನು ಮಾಡಿದ ಫಲವು ಬರುವುದು. ಪರಮಾತ್ಮನ ನೈವೇದ್ಯವನ್ನು ಭಕ್ಷಣೆ

ಮಾಡುವುದರಿಂದ ಸಾವಿರ ಅಗ್ನಿಷ್ಟೋಮವನ್ನು ನೂರು ವಾಜಪೇಯಯಾಗವನ್ನು ಮಾಡಿದ ಫಲವು ಬರುವುದು. ದೇವರಿಗೆ ನೈವೇದ್ಯ ಮಾಡಿದ ಅನ್ನಕ್ಕೆ ತುಲಸಿಯನ್ನು ಹಾಕಿಕೊಂಡು ತೀರ್ಥವನ್ನು ಹಾಕಿಕೊಂಡು ದೇವರ ಮುಂಭಾಗದಲ್ಲಿ ಭೋಜನ ಮಾಡಿದರೆ ಹತ್ತು ಸಾವಿರ ಯಾಗಗಳನ್ನು ಮಾಡಿದ ಪುಣ್ಯವನ್ನು ಹೊಂದುವನು.



# ಸತ್ಸಂಗದ ಮಹಿಮೆ

ಪೂರ್ವದಲ್ಲಿ ನಕ್ಷತ್ರವರ್ಮ ಎಂದು ಹೆಸರುಳ್ಳ ಲೋಕಕಂಟಕನಾದ ಕ್ಷತ್ರಿಯ ನಿದ್ದನು. ಅವನು ಯಾವಾಗಲೂ ಪರಸ್ತ್ರೀಯರನ್ನು ಅಪಹರಿಸುವನು. ಇನ್ನೊಬ್ಬರ ದ್ರವ್ಯವನ್ನು ಅಪಹರಿಸುವನು. ಅಧರ್ಮದಲ್ಲಿ ಆಸಕ್ತನಾಗಿದ್ದನು. ಜನರಲನ್ನೆಲ್ಲಾ ಪೀಡಿಸುತ್ತಿದ್ದನು. ಬಹುಬ್ರಾಹ್ಮಣರನ್ನು ಕೊಂದನು. ಸಾವಿರಾರು ದನಗಳನ್ನು ಸಂಹರಿಸಿದನು. ದೇವರ ಸೊತ್ತನ್ನು ಅಪಹರಿಸಿದನು. ಅನೇಕ ಕಳ್ಳರನ್ನೂ ಬೇಡರನ್ನೂ ಸೇರಿಸಿಕೊಂಡು ಅನೇಕ ಪಾಪಕಾರ್ಯಗಳನ್ನು ಮಾಡಿಸಿದನು. ಅವನು ಮಾಡಿದ ಪಾಪಗಳನ್ನು ಲೆಕ್ಕ ಮಾಡಲಿಕ್ಕೆ ಆಗಲಾರದು. ಒಂದು ದಿವಸದಲ್ಲಿ ಯಮದೇವರಂತೆ ಇದ್ದ ಅವನು ಸರ್ವಸಂಪತ್ತಿನಿಂದ ಕೂಡಿದ ಮನೋಹರವಾದ ವಿದೇಹನಗರಕ್ಕೆ ಹೋದನು ಅದರ ಹತ್ತಿರವೇ ಬಂಗಾರದ ಕಲಶಗಳಿಂದ ಅಲಂಕೃತವಾದ ಅನೇಕ ಬಂಗಾರದಿಂದ ಕೂಡಿದ ದೇವಾಲಯವನ್ನು ನೋಡಿದನು. ಇಲ್ಲಿ ಬಹುಬಂಗಾರ ವನ್ನು ಕದ್ದುಕೊಳ್ಳುವೆನೆಂದು ನಿಶ್ಚಯಿಸಿ ಆ ದೇವಾಲಯಕ್ಕೆ ಹೋದನು.

ಅಲ್ಲಿ ಉದಕ ಎಂದು ಹೆಸರುಳ್ಳ ಬ್ರಾಹ್ಮಣನು ಒಬ್ಬನೇ ಧ್ಯಾನ ಮಾಡುತ್ತಾ ಕೂತಿದ್ದನು. ನಕ್ಷತ್ರವರ್ಮನು ತಾನು ಕಳವು ಮಾಡಲಿಕ್ಕೆ ಹೋದವನು ತನಗೆ ವಿಘ್ನಕಾರಿ ಯಾಗಿರುವನೆಂದು ತಿಳಿದು ಆ ಉದಕ ಎಂಬ ಬ್ರಾಹ್ಮಣನನ್ನು ಕೊಲ್ಲುವೆನೆಂದು ಆರಂಭಿಸಿದನು. ಅವನ ಎದೆಯ ಮೇಲೆ ಕಾಲನ್ನು ಇಟ್ಟು ಕೈಯಿಂದ ಅವನ ಜಟೆಯನ್ನು ಹಿಡಿದುಕೊಂಡು ಕೊಲ್ಲಲಿಕ್ಕೆ ಅಭಿಪ್ರಾಯವುಳ್ಳ ಕ್ರೂರನಾದ ಅವನನ್ನು ನೋಡಿ ಉದಕನು -

'ನಿರಪರಾಧಿಯಾದ ನನ್ನನ್ನು ಯಾಕೆ ಸುಮ್ಮನೆ ಕೊಲ್ಲುವಿ? ನಾನು ನಿನಗೆ ಏನು ಅಪರಾಧ ಮಾಡಿದೆನು? ಅಪರಾಧ ಮಾಡಿದವರನ್ನು ಶಿಕ್ಷಾ ಮಾಡುವುದು ನ್ಯಾಯ. ಸಜ್ಜನರು ಪಾಪಿಯನ್ನೂ ಕೂಡ ಸುಮ್ಮನೆ ಕೊಲ್ಲಲಾರರು. ತನ್ನನ್ನು ಇತರರು

ಅನೇಕವಾಗಿ ಪೀಡಿಸಿದರೂ ಯಾವಾತನು ಕ್ಷಮಿಸುವನೋ ಅವನನ್ನು ಉತ್ತಮ ಪುರುಷನೆನ್ನುವರು. ಲೋಕದಲ್ಲಿ ಪಾಪಿಗಳು ನಿಷ್ಕಾರಣವಾಗಿ ಇನ್ನೊಬ್ಬರನ್ನು ಪೀಡಿಸುವರಲ್ಲಾ' ಎಲಾ! ನೀನು ಇನ್ನೊಬ್ಬರ ದ್ರವ್ಯವನ್ನು ಅಪಹರಿಸಿ ಹೆಂಡತಿಯನ್ನು ಪೋಷಿಸುವಿ. ಕೊನೆಗೆ ಎಲ್ಲವನ್ನು ಬಿಟ್ಟು ನೀನೊಬ್ಬನೇ ಸಾಯುವಿ. ನನ್ನ ತಾಯಿ ನನ್ನ ತಂದೆ ನನ್ನ ಹೆಂಡತಿ ಎಂದು ಜನರಿಗೆ ಮಮತೆಯು ಪೀಡಿಸುತ್ತಿದೆ. ಹಣವನ್ನು ಸಂಪಾದಿಸುವವರೆಗೆ ಮಾತ್ರ ಬಂಧುಗಳು ಪುಣ್ಯ ಪಾಪಿಗಳು ಯಾವಾಗಲೂ ಇರುವುವು. ಮಮತೆಯಿಂದ ಕೂಡಿದ ಮನಸ್ಸುಳ್ಳ ಜನರಿಗೆ ಏನು ದುಃಖವು. ಮಹಾಪಾಪಿಗಳನ್ನು ಮಾಡಿ ಬಂಧುಗಳನ್ನು ರಕ್ಷಿಸುವರು. ಸಂಪಾದಿಸಿದ ಹಣವನ್ನೆಲ್ಲಾ ಬಂಧುಗಳು ತಿಂದುಹಾಕುವರು. ತಾನೊಬ್ಬನೇ ಆ ಪಾಪದ ಫಲವನ್ನು ಅನುಭವಿಸು ವನು' ಈರೀತಿಯಾಗಿ ಹೇಳುತ್ತಿದ್ದ ಆ ಉದಕನನ್ನು ಬಿಟ್ಟು ಬಿಡವವನಾಗಿ ಕೈಮುಗಿದು ಕೊಂಡು ಪುನಃ ಪುನಃ ಕ್ಷಮಿಸಬೇಕು ಎಂದು ಹೇಳಿದನು.

ಸತ್ಸಂಗಪ್ರಭಾವದಿಂದ ಈರೀತಿಯಾಗಿ ಬ್ರಾಹ್ಮಣನೊಡನೆ ಹೇಳಿದನು. ಮೂಢನಾದ ನಾನು ಬಹಳ ಪಾಪಗಳನ್ನು ಮಾಡಿರುವೆನು. ನಿಮ್ಮನ್ನು ನೋಡಿದ ಮಾತ್ರದಿಂದ ಅವುಗಳೆಲ್ಲ ನಾಶವನ್ನು ಹೊಂದಿದವು. ನಾನು ಪಾಪಿಯು. ಮಹಾಪಾಪಗಳನ್ನು ಮಾಡಿದೆನು. ನನಗೆ ಹೇಗೆ ಪ್ರಾಯಶ್ಚಿತ್ತವು ಉಂಟಾಗುವುದು? ಪೂರ್ವಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಲೋಭವನ್ನು ಹೊಂದಿರುವೆನು. ಕ್ಷತ್ರಿಯನಾಗಿದ್ದರೂ ಪಾಪಗಳನ್ನು ಮಾಡಿ ಯಾವ ಗತಿಯನ್ನು ಹೊಂದುವೆನೋ! ಆಹಾ! ನನ್ನ ಆಯುಷ್ಯವು ಕ್ಷಯವನ್ನು ಹೊಂದಿತು. ಅನೇಕ ಪಾಪಗಳನ್ನು ಮಾಡಿದೆನು. ಒಂದು ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಲಿಲ್ಲ. ಭೂಮಿಗೆ ಅತ್ಯಂತ ಭಾರಭೂತನಾದ ನನ್ನನ್ನು ಬ್ರಹ್ಮದೇವರು ಏಕೆ ಸೃಷ್ಟಿಸಿದರೋ?' ಈ ಪ್ರಕಾರವಾಗಿ ನಕ್ಷತ್ರವರ್ಮನು ತನ್ನನ್ನೇ ನಿಂದಿಸಿಕೊಂಡು ಪಶ್ಚಾತ್ತಾಪದಿಂದ ದಗ್ಧನಾಗಿ ಹಾಗೆಯೇ ಮರಣವನ್ನು ಹೊಂದಿದನು.

ಆ ಉದಕನು ಬಿದ್ದಿರುವ ನಕ್ಷತ್ರವರ್ಮನನ್ನು ನೋಡಿ ದಯೆಯುಳ್ಳವನಾಗಿ ದೇವರ ಪಾದೋಕವನ್ನು ಅವನ ಮೇಲೆ ಹಾಕಿದನು. ಇದರಿಂದ ನಕ್ಷತ್ರವರ್ಮನು ದೋಷರಹಿತನಾಗಿ ದಿವ್ಯವಿಮಾನವನ್ನು ಏರಿದವನಾಗಿ ಉದಕನೊಡನೆ 'ಮುನಿಶ್ರೇಷ್ಠನೇ! ನೀನು ನನಗೆ ಗುರುವು. ನಿನ್ನ ಅನುಗ್ರಹದಿಂದ ನಾನು ಪಾಪದಿಂದ ರಹಿತನಾದೆನು. ನಿನ್ನ ಉಪದೇಶದಿಂದ ನನಗೆ ಜ್ಞಾನೋದಯವಾಯಿತು. ಅದರಿಂದ ನನ್ನ ಪಾಪಪರಿಹಾರವಾಯಿತು. ನನ್ನ ಮೇಲೆ ಪರಮಾತ್ಮನ ಪಾದೋದಕವನ್ನು ಹಾಕಿದ

ಕಾರಣ ನನಗೆ ಭಗವಂತನ ಲೋಕವು ಲಭಿಸಿತು. ನಿನಗೆ ನಾನು ನಮಸ್ಕರಿಸುವೆನು. ನನ್ನ ಅಪರಾಧವನ್ನು ಕ್ಷಮಿಸು' ಹೀಗೆಂದು ಹೇಳಿ ಉದಕನ ಮೇಲೆ ಹೂವನ್ನು ಸುರಿಸಿದನು. ಮೂರು ಪ್ರದಕ್ಷಿಣೆ ಬಂದು ನಮಸ್ಕಾರ ಮಾಡಿದನು. ಆಮೇಲೆ ಸರ್ವಾಭೀಷ್ಟದಿಂದ ಕೂಡಿರುವ ವಿಮಾನದಲ್ಲಿ ಕೂತುಕೊಂಡು ಪರಮಾತ್ಮನ ಲೋಕವನ್ನು ಹೊಂದಿದನು. ಉದಕಮುನಿಗಳು ಇದನ್ನು ನೋಡಿ ಆಶ್ಚರ್ಯವುಳ್ಳವರಾಗಿ ತಲೆಯಮೇಲೆ ಕೈಮುಗಿದುಕೊಂಡು ಭಗವಂತನನ್ನು ಸ್ತೋತ್ರ ಮಾಡಿದರು. ಪರಮಾತ್ಮನು ಅವರಿಗೆ ತನ್ನ ಸ್ವರೂಪವನ್ನು ತೋರಿಸಿ ಅವರನ್ನು ಕರೆದುಕೊಂಡು ತನ್ನ ಲೋಕಕ್ಕೆ ಹೋಗಿ ಸಾರೂಪ್ಯವನ್ನು ಕೊಟ್ಟನು. ಆದುದರಿಂದ ಯಾವಾಗಲೂ ಸಜ್ಜನರ ಸಂಗವನ್ನು ಮಾಡಬೇಕು. ಸಜ್ಜನರ ಸಹವಾಸದಿಂದ ಕ್ರಮದಿಂದ ಮೋಕ್ಷವೇ ಲಭಿಸುವುದು.



## ಸತ್ಯವಚನದ ಮಹಿಮೆ

ಪೂರ್ವದಲ್ಲಿ ಕೃತಯುಗದಲ್ಲಿ ಕಾವೇರೀನದಿಯ ತೀರದಲ್ಲಿ ಶಂಖತೀರ್ಥವೆಂದು ಪ್ರಸಿದ್ಧವಾದ ಪವಿತ್ರವಾದ ಸ್ಥಳವಿದ್ದಿತು. ಅಲ್ಲಿ ಸುಮತಿಯೆಂದು ಹೆಸರುಳ್ಳ ವೇದವೇದಾಂಗ ಪಾರಂಗತನಾದ ಬ್ರಾಹ್ಮಣನು ಶಿಷ್ಯಪ್ರಶಿಷ್ಯರಿಂದ ಕೂಡಿಕೊಂಡು ವಾಸಮಾಡುತ್ತಿದ್ದನು. ಒಂದು ದಿವಸದಲ್ಲಿ ಸುಮತಿಯು ಶಿಷ್ಯರಿಂದ ಕೂಡಿಕೊಂಡು ಹಣ್ಣುಗಳನ್ನು ಕಟ್ಟಿಗೆಗಳನ್ನೂ ತರಲಿಕ್ಕೆ ಕಾಡಿಗೆ ಹೋದನು. ಕಾಡಿನಲ್ಲಿ ಸುಮತಿಯು ಶಿಷ್ಯರೊಡನೆ ನೀವು ಹೂವನ್ನು ಕಟ್ಟಿಗೆಯನ್ನೂ ತನ್ನಿರಿ. ಅಷ್ಟರವರೆಗೆ ನಾನು ಇಲ್ಲಿ ಹೂಗಳನ್ನು ದರ್ಭೆಗಳನ್ನೂ ಕೊಯ್ಯುತ್ತಿರುವೆನು. ನೀವು ಹುಲಿಯಿಂದ ಭಯಪಡ ಬೇಕಾಗಿಲ್ಲ' ಎಂದು ಹೇಳಿ ಎಲ್ಲರನ್ನೂ ಕಳುಹಿಸಿದನು. ವನವನ್ನು ನೋಡುತ್ತಾ ಪುಷ್ಪಕ್ಕೋಸ್ಕರ ಒಬ್ಬನೇ ಸಂಚರಿಸುತ್ತಿದ್ದನು. ಭಗವಂತನನ್ನು ಸ್ಮರಿಸುತ್ತಾ ನಡೆಯು ತ್ತಿದ್ದನು. ಆ ಸಮಯದಲ್ಲಿ ಒಂದು ಹುಲಿಯು ಕುಣಿಯುತ್ತಾ ಅವನ ಹತ್ತಿರಕ್ಕೆ ಬಂದಿತು ಸುಮತಿಯು ಭಯಂಕರವಾದ ಹುಲಿಯನ್ನು ನೋಡಿ ತಾನು ಹೋಗಲಿಕ್ಕೆ ಆರಂಭಿಸಿದನು. ಹೋಗುತ್ತಿರುವ ಬ್ರಾಹ್ಮಣನು ಹತ್ತಿರ ಹೋಗಿ ಎರಡು ಪಾದಗಳಿಂದ ಅವನ ಬಲಭುಜವನ್ನು ಹಿಡಿಯಿತು. ಕೊಲ್ಲುವ ಅಭಿಪ್ರಾಯವುಳ್ಳ ಹುಲಿಯನ್ನು ನೋಡಿ ಸುಮತಿಯು ನಿರಪರಾಧಿಯಾದ ನನ್ನನ್ನು ವ್ಯರ್ಥವಾಗಿ ಏಕೆ ಕೊಲ್ಲುವೆ? ಮಾತ್ರವಲ್ಲದೆ ನಾನು ತಪಸ್ಸು ಮಾಡಿ ನನ್ನ ದೇಹದಲ್ಲಿ ಎಲುಬು ಚರ್ಮಮಾತ್ರವೇ

ಇರುವುದು. ಈ ಒಣಗಿದ ದೇಹದಿಂದ ನಿನಗೇನು ಪ್ರಯೋಜನವಿದೆ?' ಎಂದು ಕೇಳಿದನು.

ಬ್ರಾಹ್ಮಣನ ಮಾತನ್ನು ಕೇಳಿ ಹುಲಿಯು 'ಬ್ರಾಹ್ಮಣ! ನನ್ನ ಮಾತನ್ನು ಕೇಳು. ನನಗೆ ಈಗ ಒಳ್ಳೆ ಹಸಿವೆಯಾಗಿದೆ. ಹಸಿದಿರುವ ನನಗೆ ಎಲುಬೋ ಚರ್ಮವೋ ಏನು ಸಿಕ್ಕಿದರೂ ಸಾಕು. ಮಹಾಪಾಪವನ್ನು ಮಾಡಿಯೋ ಪರರನ್ನು ಪೀಡಿಸಿಯೋ ತನ್ನನ್ನು ರಕ್ಷಣೆ ಮಾಡಿಕೊಳ್ಳಬೇಕು' ಎಂದು ಹೇಳಿತು. ಈರೀತಿಯಾಗಿ ಘೋರವಾದ ಹುಲಿಯ ಮಾತನ್ನು ಕೇಳಿ ಸುಮತಿಯು ನಗುತ್ತಾ 'ರಕ್ತಮಾಂಸಗಳಿಂದ ತುಂಬಿರುವ ಈ ದೇಹವು ತುಚ್ಛವಾದದ್ದು. ಎಲುಬು ಚರ್ಮಗಳಿಂದ ಕೂಡಿರುವ ಈ ದೇಹದಿಂದ ನಿನಗೆ ತೃಪ್ತಿಯಾಗುವ ಪಕ್ಷದಲ್ಲಿ ನನ್ನಿಂದ ಧನ್ಯನಾದವನು ಯಾರಿರುವನು? ನಾನು ಕೃತಾರ್ಥನಾದೆನು. ನಾನು ಹೇಳುವ ಮಾತನ್ನು ಕೇಳು. ಆಶ್ರಮಕ್ಕೆ ಹೋಗಿ ಬೇಗನೇ ಬಂದು ಬಿಡುತ್ತೇನೆ' ಎಂದಿತು. ಅದಕ್ಕೆ ಹುಲಿಯು 'ಬಂಧುಗಳಿಂದ ದೂರವಾಗಿ ಮೃತ್ಯುವಿನ ಬಾಯಿಗೆ ಸಿಕ್ಕಿರುವ ನಿನಗೆ ಆಶ್ರಮದಲ್ಲಿ ಏನು ಕಾರ್ಯವಿದೆ?' ಎಂದಿತು. ಸುಮತಿಯು 'ಅಗ್ನಿಹೋತ್ರಗೃಹದಲ್ಲಿರುವ ಅಗ್ನಿಗಳನ್ನು ಸಮಾರೋಪಣೆ ಮಾಡಿ ಕೊಂಡು ಶಿಷ್ಯರಿಗೆ ಸಮಾಧಾನವನ್ನು ಹೇಳಿ ನೀನಿದ್ದಲ್ಲಿಗೆ ಬರುವೆನು' ಎಂದರು. ಹುಲಿಯು 'ನನಗೆ ಒಳ್ಳೇ ಹಸಿವೆಯಾಗಿದೆ. ನೀನು ಪುನಃ ಬಾರದೆ ಇದ್ದರೆ ನಾನೇನು ಮಾಡಲಿ' ಎಂದಿತು.

ಆಗ ಸುಮತಿಯು 'ನಾನು ಇಲ್ಲಿಗೆ ಪುನಃ ಬಂದು ಸೇರದೆ ಇದ್ದರೆ ಬ್ರಾಹ್ಮಣರನ್ನು ಕೊಂದವರಿಗೂ, ಮಧ್ಯಪಾನ ಮಾಡಿದವರಿಗೂ, ಬಂಗಾರವನ್ನು ಕದ್ದುಕೊಂಡವ ರಿಗೂ, ಗುರುಸ್ತ್ರೀಯರನ್ನು ಅಪಹರಿಸಿದವರಿಗೂ, ಈ ನಾಲ್ಕು ವಿಧ ಜನರ ಸಹವಾಸ ಮಾಡಿದವರಿಗೂ ಮಾತೃಹತ್ಯ ಗುರುಹತ್ಯ ಆತ್ಮಹತ್ಯೆ ಭ್ರೂಣಹತ್ಯ ಗೋಹತ್ಯ ಇತ್ಯಾದಿ ಪಾಪಗಳನ್ನು ಮಾಡಿದವರಿಗೂ, ಸ್ತ್ರೀಹತ್ಯ ಪುತ್ರಹತ್ಯ ಭ್ರಾತೃಹತ್ಯೆಗಳನ್ನು ಮಾಡಿದವರಿಗೂ, ಇನ್ನೊಬ್ಬರ ಸ್ತ್ರೀಯನ್ನೂ ದ್ರವ್ಯವನ್ನೂ ಕ್ಷೇತ್ರವನ್ನೂ ಅಪಹರಿಸಿದವರಿಗೂ, ವಿಶ್ವಾಸಘಾತಕರಿಗೂ, ದೀನರಿಗೆ ದುಃಖವನ್ನು ಕೊಡುವವರಿಗೂ, ಸುಳ್ಳು ಹೇಳುವವರಿಗೂ, ಚಾಡಿ ಹೇಳುವವರಿಗೂ, ವಿಷಹಾಕು ವವರಿಗೂ, ಹವ್ಯಕವ್ಯರಹಿತರಾಗಿ ಮನೆಗೆ ಬೆಂಕಿಕೊಟ್ಟವರಿಗೂ, ಏನು ಗತಿಯಾಗು ವುದೋ ಆ ಗತಿಯು ನನಗೆ ಬರಲಿ. ವಿಧವಾಸ್ತ್ರೀಗಮನ ಮಾಡಿದರೆ, ರಜಸ್ವಲಾ ಸ್ತ್ರೀಗಮನ ಮಾಡಿದರೆ, ಮಾತೃಗಾಮಿಯಾದರೆ ಪುತ್ರಸ್ತ್ರೀಗಮನಮಾಡಿದರೆ, ಶೂದ್ರಸ್ತ್ರೀಗಮನಮಾಡಿದರೆ, ಭ್ರಷ್ಟಸ್ತ್ರೀಗಮನ ಮಾಡಿದರೆ, ಯಾವ ಪಾಪವು

ಬರುವುದೋ ಆ ಪಾಪವು ನಾನು ಬರದಿದ್ದರೆ ಬರಲಿ. ಸ್ತ್ರೀಯು ಗಂಡನನ್ನು ಬಿಟ್ಟು ಅನ್ಯಪುರುಷನನ್ನು ಹೊಂದಿದರೆ, ಗಂಡನಿಗೆ ವಿರುದ್ಧಳಾಗಿದ್ದರೆ, ಬಹು ಮಾತಾಡು ವವಳಾಗಿದ್ದರೆ, ಯಾವಾಗಲು ಜಗಳವಾಡುವವಳಾಗಿದ್ದರೆ, ಯಾವಾಗಲೂ ಕಠಿಣ ಮಾತಾವವಳಾಗಿದ್ದರೆ, ದಾನಕ್ಕೆ ವಿಘ್ನ ಮಾಡುವವಳಾಗಿದ್ದರೆ, ತಲೆಬಾಚಿಕೊಳ್ಳದೆ ಇದ್ದರೆ ಮಲಿನವಾದ ವಸ್ತ್ರವನ್ನೇ ಧರಿಸಿಕೊಂಡಿದ್ದರೆ, ಯಾವಾಗಲೂ ಗಂಧವನ್ನು ಹಚ್ಚಿಕೊಳ್ಳದೆ ಇದ್ದರೆ ತಾಂಬೂಲವನ್ನು ಹಾಕಿಕೊಳ್ಳದೆ ಇದ್ದರೆ, ಯಾವಾಗಲೂ ಅಳುತ್ತಾ ಇರುವವಳಾಗಿದ್ದರೆ, ಯಾವಾಗಲೂ ಮನೆಯ ಬಾಗಿಲಲ್ಲೆ ನಿಂತು ನೋಡುತ್ತಿರುವವಳಾಗಿದ್ದರೆ, ಗಂಡನು ಏಳುವ ಪೂರ್ವದಲ್ಲಿಯೇ ಹಾಸಿಗೆಯಿಂದ ಏಳದೆ ಇದ್ದವಳಾದರೆ, ಗಂಡನ ಮಲಗುವ ಮೊದಲೇ ನಿದ್ರೆಯನ್ನು ಮಾಡುವವ ಳಾಗಿದ್ದರೆ, ದೀರ್ಘನಿದ್ರೆಯನ್ನು ಮಾಡುವವಳಾಗಿದ್ದರೆ, ಮಕ್ಕಳನ್ನು ಹೊಡೆಯುವ ಸ್ವಭಾವವುಳ್ಳವಳಾಗಿದ್ದರೆ, ಮಕ್ಕಳಲ್ಲಿ ದ್ವೇಷವುಳ್ಳವಳಾಗಿದ್ದರೆ, ಇನ್ನೊಬ್ಬ ಪುರುಷ ನೊಡನೆ ಮಾತಾಡುವವಳಾಗಿದ್ದರೆ, ಇನ್ನೊಬ್ಬರ ಮನೆಯಲ್ಲಿ ಇರುವವಳಾಗಿದ್ದರೆ, ವೇಶ್ಯಾಸ್ತ್ರೀಯಂತೆ ಅಲಂಕಾರ ಮಾಡಿಕೊಳ್ಳುವಳಾದರೆ, ದೀರ್ಘ ರೋಷವುಳ್ಳವ ಳಾಗಿದ್ದರೆ, ತನ್ನನ್ನೇ ಬಡೆದು ಕೊಳ್ಳುವವಳಾಗಿದ್ದರೆ, ಅಸೂಯೆಯುಳ್ಳವಳಾಗಿದ್ದರೆ, ವಿಧವೆಯ ಸಹವಾಸ ಮಾಡುವವಳಾಗಿದ್ದರೆ, ಇನ್ನೊಬ್ಬರ ಕೆಲಸವನ್ನು ಮಾಡುವವ ಳಾದರೆ, ಸಹೋದರರ ಹೆಂಡತಿಯರನ್ನೂ ಸಹೋದರರನ್ನು ನಿಂದಿಸುವವ ಳಾಗಿದ್ದರೆ, ತಾಯಿಯನ್ನು ನಿಂದಿಸುವವಳಾಗಿದ್ದರೆ, ಅಡಿಗೆಯನ್ನು ಮಾಡಿ ತಾನೇ ಮೊದಲು ಊಟ ಮಾಡುವವಳಾಗಿದ್ದರೆ, ಕದ್ದುಕೊಳ್ಳುವ ಸ್ವಭಾವವುಳ್ಳವಳಾಗಿದ್ದರೆ, ಮನೆಗೆ ಬೆಂಕಿ ಕೊಡುವವಳಾದರೆ, ವಿಷವನ್ನು ಹಾಕುವವಳಾದರೆ, ಹಗ್ಗವನ್ನು ಕುತ್ತಿಗೆಗೆ ಹಾಕಿಕೊಂಡು ಸಾಯುವವಳಾದರೆ, ಭಾವಿಯಲ್ಲಿ ಬೀಳುವವಳಾದರೆ, ಸರೋವರ ದಲ್ಲಿ ಬಿದ್ದು ಪ್ರಾಣಬಿಡುವವಳಾದರೆ, ವಿಷವನ್ನು ತಿಂದು ಬೆಂಕಿಯಲ್ಲಿ ಹಾರಿ ಪ್ರಾಣಬಿಡುವವಳಾದರೆ, ಏನು ಪಾಪವನ್ನು ಹೊಂದುವಳೋ ಆ ಪಾಪವು ನಾನು ಇಲ್ಲಿಗೆ ಪುನಃ ಬರದೆ ಇದ್ದರೆ ನನಗೆ ಬರಲಿ. ಮತ್ತು ಯಾವ ಗಂಡನು ಮೃತನಾದ ಅಂದರೆ ವಿಧವೆಯಾದ ಸ್ತ್ರೀಯು ವಿಷಯ ಸೇವೆಯಲ್ಲಿ ಆಸಕ್ತಳಾಗಿರುವಳೋ ದಾನ ಮಾಡುವುದಿಲ್ಲವೋ ದೇವರ ಸೇವೆಯನ್ನು ಮಾಡುವುದಿಲ್ಲವೋ ತಲೆಕೂದಲನ್ನು ಇಟ್ಟುಕೊಳ್ಳುವಳೋ ಏಕಾದಶ್ಯಾದಿ ಉಪವಾಸ ಮಾಡುವುದಿಲ್ಲವೋ, ವ್ರತಗಳನ್ನು ಮಾಡುವುದಿಲ್ಲವೋ, ಕಲಹ ಮಾಡುವಳೋ ತಾಂಬೂಲವನ್ನು ತಿನ್ನುವಳೋ, ಅಲಂಕಾರ ಮಾಡಿಕೊಳ್ಳುವಳೋ, ಯಾವಾಗಲೂ ಅಳುತ್ತಿರುವಳೋ, ಮಲಿನ

ವಸ್ತ್ರವನ್ನು ಧರಿಸುವವಳೋ, ಬಿಸಿನೀರಿನಿಂದ ಸ್ನಾನಮಾಡುವವಳೋ, ಜಪವನ್ನು ಮಾಡುವುದಿಲ್ಲವೋ, ತಾಯಿಯ ಮಾತಿಗೆ ವಿರೋಧ ಮಾಡುವವಳೋ, ಬ್ರಾಹ್ಮಣರ ಪಾದಜಲವನ್ನು ಶಿರಸಾ ಧರಿಸುವುದಿಲ್ಲವೋ, ದೇವರ ಮನೆಯಲ್ಲಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುವುದಿಲ್ಲವೋ, ಬೆಳಿಗ್ಗೆ ಊಟ ಮಾಡುತ್ತಾಳೋ, ಎರಡು ಹೊತ್ತು ಊಟ ಮಾಡುವವಳೋ, ವಿಧವೆಯಾಗಿದ್ದುಕೊಂಡು ಗರ್ಭಿಣಿಯಾಗಿ ಅಪವಾದ ಭಯದಿಂದ ಪ್ರಾಣಬಿಡುವವಳೋ, ಕೆಂಪುವಸ್ತ್ರವನ್ನು ಧರಿಸುವುದಿಲ್ಲವೋ, ನಾನಾ ಬಣ್ಣದ ಸೀರೆಯನ್ನು ಉಡುವವಳೋ, ತಲೆಗೆ ಮೈಗೆ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡುವವಳೋ, ದೇವರನ್ನು ನಿಂದಿಸುವವಳೋ, ಗಂಡನನ್ನು ನಿಂದಿಸುವವಳೋ, ಅತ್ತೆ ಮಾವಂದಿರನ್ನೂ ಮಕ್ಕಳನ್ನೂ ನಿಂದಿಸುವವಳೋ, ಗಂಡನ ಬಂಧುಗಳಲ್ಲಿ ಉದಾಸೀನಳಾಗಿರುವವಳೋ, ಗಂಡನನ್ನು ವಂಚಿಸಿ ಹಣವನ್ನು ಸಂಗ್ರಹಿಸುವವಳೋ, ಒಳ್ಳೆ ಸೀರೆ ಇತ್ಯಾದಿಗಳಿಂದ ಅಲಂಕಾರ ಮಾಡಿಕೊಳ್ಳುವವಳೋ, ಸತ್ಪಾತ್ರರಲ್ಲಿ ದಾನ ಮಾಡುವುದಿಲ್ಲವೋ, ತನ್ನ ಪಾದದ ಅಡಿಯನ್ನೇ ನೋಡದೆ ವಕ್ರದೃಷ್ಟಿಯಿಂದ ಆಚೆ ಈಚೆ ನೋಡಿಕೊಂಡು ನಡೆಯುತ್ತಾಳೋ, ಕಂಚಿನ ಬಟ್ಟಲಲ್ಲಿ ಊಟಮಾಡುವವಳೋ, ಎಷ್ಟು ಹೊತ್ತಿಗೂ ಮಲಗಿಕೊಂಡೇ ಇರುವವಳೋ, ಯಾವಾಗಲೂ ಮನೆಯ ಕೆಲಸವನ್ನು ಮಾಡದೆ ಇರುತ್ತಾಳೋ, ಯಾವಾಗ ಹರಟೆ ಮಾತಾಡುತ್ತಾ ಇರುವವಳೋ, ಅವಳಿಗೆ ಯಾವ ಪಾಪವು ಬರುವುದೋ, ಆ ಪಾಪವು ನಾನು ಪುನಃ ಇಲ್ಲಿಗೆ ಬರದೆ ಇದ್ದರೆ ನನಗೆ ಬರಲಿ' ಎಂದು ಹೇಳಿದನು.

ಈರೀತಿಯಾಗಿ ಬ್ರಾಹ್ಮಣನ ಪ್ರತಿಜ್ಞೆಯನ್ನು ಕೇಳಿ ಹುಲಿಯು ಬ್ರಾಹ್ಮಣನಿಗೆ ನಮಸ್ಕರಿಸಿ 'ಹಾಗಾದರೆ ಆಶ್ರಮಕ್ಕೆ ಹೋಗಿ ಪುನಃ ಇಲ್ಲಿಗೆ ಬನ್ನಿರಿ. ನನ್ನ ಪ್ರಾಣವನ್ನು ರಕ್ಷಿಸಿರಿ. ನಿಮಗೆ ನಮಸ್ಕಾರವು' ಎಂದಿತು. ಆಗ ಸುಮತಿಯು ತನ್ನ ಬಲಕೈಯನ್ನು ಹುಲಿಯ ತಲೆಯ ಮೇಲೆ ಇಟ್ಟು ನೀನು ಭಯಪಡಬೇಡ. ನಾನು ಬರುವೆನು' ಎಂದು ಹೇಳಿ ತನ್ನ ಆಶ್ರಮಕ್ಕೆ ಹೋದನು.

ಸುಮತಿಯು ಪರಮಾತ್ಮನನ್ನು ಧ್ಯಾನಮಾಡುತ್ತಾ ಪುರುಷಸೂಕ್ತವೆಂಬ ಮಂತ್ರವನ್ನು ಪಠಿಸುತ್ತಾ ಆಶ್ರಮಕ್ಕೆ ಹೋದನು. ಆಶ್ರಮದಲ್ಲಿ ತನ್ನ ಶಿಷ್ಯರನ್ನೂ ಹೆಂಡತಿಯನ್ನೂ ಮಕ್ಕಳನ್ನೂ ಕರೆದು 'ನೀವೆಲ್ಲರೂ ನನ್ನ ಮಾತನ್ನು ಕೇಳಿರಿ. ನಿಮಗೆ ಹಿತವನ್ನು ಹೇಳುತ್ತೇನೆ. ವೇದದಲ್ಲಿಯೂ ಧರ್ಮಶಾಸ್ತ್ರದಲ್ಲಿಯೂ ಹೇಳಿದಂತೆ ನಡೆಯಿರಿ. ಜಗತ್ತಿನಲ್ಲೇ ದೇವರು ಇರುವನೆಂದು ತಿಳಿದುಕೊಳ್ಳಿರಿ. ಪರಸ್ತ್ರೀಯರನ್ನೂ ಪರರ ದ್ರವ್ಯವನ್ನು ಸ್ವಪ್ನದಲ್ಲೂ ಸ್ಮರಿಸಬೇಡಿರಿ ಎಂದು ಹೇಳಿ ಅಗ್ನಿಹೋತ್ರ ಮಾಡುವ

ಮನೆಗೆ ಹೋದನು. ಅಲ್ಲಿ ಅಗ್ನಿಯಲ್ಲಿ ಹೋಮಮಾಡಿ ನಮಸ್ಕಾರ ಮಾಡಿ ಅಗ್ನಿಯನ್ನು ತನ್ನಲ್ಲಿ ಸಮಾರೋಪಣೆ ತನ್ನ ಹೆಂಡತಿಯನ್ನು ಕರೆದು 'ಪ್ರಿಯೆ! ನೀನು ಮಕ್ಕಳನ್ನು ಧರ್ಮದಿಂದ ರಕ್ಷಣೆ ಮಾಡುತ್ತಿರು. ಧರ್ಮವನ್ನು ಮಾಡು. ಪ್ರಾಣಿಗಳನ್ನು ಹಿಂಸಿಸದಿರು. ಸಜ್ಜನರ ಸಹವಾಸವನ್ನು ಮಾಡು. ದೇವರನ್ನು ಪೂಜಿಸು. ಸತ್ಯವನ್ನೇ ಹೇಳು' ಎಂದೆಲ್ಲಾ ಹೇಳಿದನು. ಅದಕ್ಕೆ ಅವಳು ಕೈಮುಗಿದುಕೊಂಡು ದುಃಖದಿಂದ 'ನೀವು ಇಷ್ಟರವರೆಗೆ ಇಂತಹ ಮಾತನ್ನು ಹೇಳಿದ್ದಿಲ್ಲ. ನನಗೇನೋ ಭಯವಾಗುತ್ತದೆ. ಯಾಕೆ ಹೀಗೆ ಹೇಳುತ್ತಿರುವಿರಿ?' ಎಂದು ಕೇಳಿದಳು.

ಸುಮತಿಯು 'ಸಮಿಧೆಗಳನ್ನು ದರ್ಭೆಗಳನ್ನು ತರಲಿಕ್ಕೆ ಕಾಡಿಗೆ ಹೋದ ನಾನು ಹಸಿದಿರುವ ಹುಲಿಗೆ ನನ್ನ ದೇಹವನ್ನು ದಾನಮಾಡಿರುವೆನು. ಆದುದರಿಂದ ಈ ಪ್ರಕಾರವಾಗಿ ಹೇಳಿದೆನು' ಎಂದನು. ಆ ಮಾತನ್ನು ಕೇಳಿ ಹೆಂಡತಿಯು ಹಾ ಸತ್ತೆನು ಎನ್ನುತ್ತಾ ಬಿದ್ದು ಬಿಟ್ಟಳು. ಸುಮತಿಯು ಹೆಂಡತಿಯನ್ನು ಎಬ್ಬಿಸಿ ಸಮಾಧಾನಪಡಿಸಿ ಹೋದನು. ಅವಳು ಆಶ್ರಮದಲ್ಲೇ ನನಗೆ ಗಂಡನನ್ನು ಉಳಿಸಿರಿ ಎಂದು ಭಗವಂತನನ್ನು ಪ್ರಾರ್ಥಿಸುತ್ತಾ ಇದ್ದಳು. ಸುಮತಿಯು ಶಿಷ್ಯರಿಂದ ಸಹಿತನಾಗಿ ಬೇಗನೇ ಹೋದನು. ಶಿಷ್ಯರನ್ನು ದೂರದಲ್ಲಿಯೇ ನಿಲ್ಲಿಸಿ ಹುಲಿಯ ಬಳಿಗೆ ಹೋದನು.

ಆ ಸಮಯದಲ್ಲಿ ಶಿಷ್ಯರು ವಿಷ್ಣುಸೂಕ್ತವೇ ಮೊದಲಾದ ಮಂತ್ರಗಳನ್ನು ಜಪಿಸುತ್ತಾ ನಮ್ಮ ಗುರುಗಳನ್ನು ಹುಲಿಯಿಂದ ರಕ್ಷಿಸಿರಿ ಎಂದು ದೇವತೆಗಳನ್ನೆಲ್ಲಾ ಪ್ರಾರ್ಥಿಸಿದರು. ತರುವಾಯ ಹುಲಿಯಿದ್ದಲ್ಲಿಗೆ ದೇವತೆಗಳು ಗಂಧರ್ವರಿಂದ ಕೂಡಿಕೊಂಡು ಹಾರಿಕೊಂಡು ಬಂದರು. ಸುಮತಿಯನ್ನು ನೋಡಿ ಎಲ್ಲರೂ ಆಶ್ಚರ್ಯವನ್ನು ಹೊಂದಿದರು. ಸುಮತಿಯು 'ಹುಲಿಯೇ! ತುಂಬಾ ಹಸಿದಿರುವೆ. ನನ್ನ ಶರೀರವನ್ನು ಸ್ವೀಕರಿಸು' ಎಂದು ಹೇಳಿದನು. ತರುವಾಯ ಎಲ್ಲಾ ದೇವತೆಗಳೂ ಇಂದ್ರದೇವರಿಗೆ ನಮಸ್ಕರಿಸಿ 'ಹುಲಿಗೆ ತೃಪ್ತಿಯನ್ನು ಕೊಡಬೇಕು. ಸುಮತಿಗೆ ಸ್ವರ್ಗವನ್ನು ಕೊಡಬೇಕು' ಎಂದರು. ಇಂದ್ರದೇವರು ಹಾಗೇ ಆಗಲಿ ಎಂದು ಹೇಳಿ ಸುಮತಿಯೊಡನೆ 'ಸುಮತಿಯೇ ನಿನ್ನ ಸತ್ಯ ಪ್ರತಿಜ್ಞೆಯನ್ನು ನೋಡಿದೆನು. ನಿನಗೆ ಸ್ವರ್ಗವನ್ನು ಕೊಡುವೆನು. ಅಲ್ಲಿ ಸತ್ಯವಚನದ ಫಲಗಳಾದ ನಾನಾ ಭೋಗಗಳನ್ನು ಅನುಭವಿಸು. ನಿನಗೆ ಕೊಟ್ಟಿರುವ ವಿಮಾನವನ್ನು ಏರು' ಎಂದರು. ಇಂದ್ರದೇವರ ಮಾತನ್ನು ಕೇಳಿ ಸುಮತಿಯು ದೇವತೆಗಳೆಲ್ಲರನ್ನೂ ನೋಡಿ ಆಶ್ಚರ್ಯಪಟ್ಟು ನಮಸ್ಕರಿಸಿದನು. 'ನನ್ನ ಎಲ್ಲಾ ಶಿಷ್ಯರಿಗೂ ನನ್ನ ಹೆಂಡತಿಗೂ ಈ ಹುಲಿಗೂ

ಸ್ವರ್ಗವನ್ನು ಕೊಡುವ ಪಕ್ಷದಲ್ಲಿ ನಾನು ಸ್ವರ್ಗವನ್ನು ಹೊಂದುವೆನು' ಎಂದು ಹೇಳಿದನು.

ಸುಮತಿಯ ಮಾತನ್ನು ಕೇಳಿ ಬೇಕಾದ ಭೋಗಗಳನ್ನು ಅನುಭವಿಸಿ ಶಿಷ್ಯರಿಂದಲೂ ಹೆಂಡತಿಯಿಂದಲೂ ಕೂಡಿಕೊಂಡು ಸ್ವರ್ಗವನ್ನು ಹೊಂದು. ಶತ್ರುವಾದ ಹುಲಿಯಲ್ಲಿಯೂ ಮಿತ್ರಬುದ್ಧಿಯು ನಿನಗೆ ಮಾತ್ರವಲ್ಲದೆ ಇನ್ನೊಬ್ಬರಿಗೆ ಇರಲಾರರು. ಆದುದರಿಂದ ನಿನಗೆ ಬೇಕಾದ ವರವನ್ನು ಕೇಳಿಕೊ. ನಿನ್ನನ್ನು ಪರೀಕ್ಷಿಸಲು ದೇವತೆಗಳೆಲ್ಲರೂ ಬಂದಿರುವರು. ಎಲ್ಲರೂ ಸಂತೋಷವನ್ನು ಹೊಂದಿರುವರು' ಎಂದು ಹೇಳಿದರು. ಸುಮತಿಯು ಆಶ್ಚರ್ಯವುಳ್ಳವನಾಗಿ ಶಿಷ್ಯರಿಂದ ಸಹಿತನಾಗಿ ಆಶ್ರಮಕ್ಕೆ ಬಂದು ಹೆಂಡತಿಯೊಡನೆ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ಭಗವತ್ಪ್ರೀತಿಕರವಾದ ಕರ್ಮವನ್ನು ಮಾಡಿ ಶಿಷ್ಯರಿಗೆ ಮದುವೆ ಮಾಡಿಸಿ ಬೇಕಾದ ಸುಖಗಳನ್ನು ಅನುಭವಿಸಿ ಶಿಷ್ಯರಿಂದ ಕೂಡಿಕೊಂಡು ಸ್ವರ್ಗವನ್ನು ಹೊಂದಿದನು. ಆದುದರಿಂದ ಸತ್ಯವನ್ನು ಹೇಳುವುದು ಪರಮಧರ್ಮವು ಸ್ವರ್ಗಕ್ಕೆ ಕಾರಣವಾದದ್ದು.



# ಗೃಹಸ್ಥಧರ್ಮವು [1]

ಗೃಹಸ್ಥನು ಬ್ರಾಹ್ಮಮುಹೂರ್ತದಲ್ಲಿ (ನಾಲ್ಕುವರೆ ಗಂಟೆಗೆ) ಏಳಬೇಕು. ಧರ್ಮ ಅರ್ಥಗಳನ್ನು ಯೋಚಿಸಬೇಕು. ಸ್ವಲ್ಪಹೊತ್ತು ಪರಮಾತ್ಮನನ್ನು ಧ್ಯಾನ ಮಾಡಬೇಕು. ಆಮೇಲೆ ಮನೆಯಿಂದ ನೈಋತ್ಯದಿಕ್ಕಿಗೆ ಒಂದು ಬಾಣವನ್ನು ಬಿಟ್ಟರೆ ಎಷ್ಟು ದೂರದಲ್ಲಿ ಬೀಳುವುದೋ ಅದಕ್ಕಿಂತಲೂ ದೂರಕ್ಕೆ ಮಲಮೂತ್ರ ವಿಸರ್ಜನ ಮಾಡಲಿಕ್ಕೆ ಹೋಗಬೇಕು. ಕಿವಿಗೆ ಯಜ್ಞೋಪವೀತವನ್ನು ಸಿಕ್ಕಿಸಿಕೊಂಡು ಹಗಲಲ್ಲಿಯೂ ಸಂಧ್ಯಾ ಕಾಲದಲ್ಲಿಯೂ ಉತ್ತರಾಭಿಮುಖವಾಗಿ ಕೂತುಕೊಂಡು ಮಲಮೂತ್ರ ವಿಸರ್ಜನೆ ಮಾಡಬೇಕು. ರಾತ್ರಿಯಲ್ಲಿ ಆದರೆ ದಕ್ಷಿಣಾಭಿಮುಖವಾಗಿ ಕೂತುಕೊಳ್ಳಬೇಕು. ಆಗ ತಲೆಗೆ ವಸ್ತ್ರವನ್ನು ಸುತ್ತಿಕೊಂಡು ಇರಬೇಕು. ನೆಲದ ಮೇಲೆ ಎಲೆಗಳನ್ನೋ ಹುಲ್ಲನ್ನೋ ಹಾಕಿ ಅದರ ಮೇಲೆ ಮಲವಿಸರ್ಜನೆ ಮಾಡಬೇಕು. ಮಲವಿಸರ್ಜನೆ ಮಾಡುವಾಗ ಬಾಯಿಮುಚ್ಚಿಕೊಂಡು ಇರಬೇಕು. ಉಗುಳಬಾರದು. ಶ್ವಾಸ ತೆಗೆದುಕೊಳ್ಳಬಾರದು.

---

1. ಪ.ಪು., ಸದಾಚಾರ ಸ್ಮೃತಿ

ಬಹುಹೊತ್ತು ಕೂತುಕೊಳ್ಳಬಾರದು. ಮಲವನ್ನು ನೋಡಬಾರದು. ಗುಹ್ಯೇಂದ್ರಿಯವನ್ನು ಹಿಡಿದುಕೊಂಡು ಎದ್ದು ಬಂದು ಶೌಚವನ್ನು ಮಾಡಿಕೊಳ್ಳಬೇಕು. ಮಣ್ಣನ್ನು ತಂದು ಅದರಿಂದ ಶೌಚ ಮಾಡಿಕೊಳ್ಳಬೇಕು. **ತಂಬಿಗೆಯಲ್ಲಿ ನೀರನ್ನು ತಂದು ಆ ತಂಬಿಗೆಯ ನೀರಿನಿಂದಲೇ ಶೌಚವನ್ನು ಮಾಡಿಕೊಳ್ಳಬೇಕಲ್ಲದೆ ನದೀ ಸರೋವರಾದಿಗಳಲ್ಲಿಯೇ ಇಳಿದು ಶೌಚವನ್ನು ಮಾಡಿಕೊಳ್ಳಬಾರದು.** ಗುಹ್ಯೇಂದ್ರಿಯಕ್ಕೆ ಒಂದು ಸಲವೂ ಗುದದ್ವಾರಕ್ಕೆ ಐದು ಸಲವೂ ಎಡಕೈಗೆ ಹತ್ತು ಸಲವೂ ಎರಡು ಕೈಗಳಿಗೂ ಒಟ್ಟಿಗೆ ಏಳು ಸಲವೂ ಕಾಲುಗಳಿಗೆ ಐದು ಐದು ಸಲವೂ ಮಣ್ಣು ಹಚ್ಚಿಕೊಳ್ಳಬೇಕು. ಆಮೇಲೆ ನೀರಿನಿಂದ ತೊಳೆದುಕೊಂಡು ಕೈಕಾಲುಗಳನ್ನು ತೊಳೆದುಕೊಂಡು ಕಚ್ಚೆಯನ್ನು ಕಟ್ಟಿಕೊಂಡು ಆಚಮನವನ್ನು ಮಾಡಬೇಕು.

ಆಮೇಲೆ ಹಲ್ಲುಕಡ್ಡಿಯನ್ನು ತರಬೇಕು. 'ವನಸ್ಪತಿದೇವತೆಯೇ! ನನಗೆ ಆಯುಷ್ಯ ವನ್ನು, ಬಲವನ್ನು, ಕೀರ್ತಿಯನ್ನು, ವರ್ಚಸ್ಸನ್ನು, ಪ್ರಜೆಗಳನ್ನು, ಪಶುಗಳನ್ನು, ಹಣವನ್ನು, ಬ್ರಹ್ಮಜ್ಞಾನವನ್ನು, ಬುದ್ಧಿಶಕ್ತಿಯನ್ನು ಕೊಡು' ಎಂದು ಪ್ರಾರ್ಥಿಸಿ ಹಲ್ಲು ಉಜ್ಜಿಕೊಳ್ಳಬೇಕು. ಹಲ್ಲು ಕಡ್ಡಿಯು ಹಾಲು ಸುರಿಯುವ ಅಥವಾ ಮುಳ್ಳು ಉಳ್ಳ ಮರದ್ದು ಆಗಬೇಕು. ಹನ್ನೆರಡು ಅಂಗುಲ ಉದ್ದವಿರಬೇಕು. ಅದರಲ್ಲಿ ಗಾಯವಿರಬಾರದು. ಕಿರುಬೆರಳಿನಷ್ಟು ದಪ್ಪವಿರಬೇಕು. ಆದಿತ್ಯವಾರದಲ್ಲಿ ಹಲ್ಲುಕಡ್ಡಿಯಿಂದ ಹಲ್ಲು ಉಜ್ಜಿಕೊಳ್ಳಬಾರದು. ಆದಿವಸ ಹನ್ನೆರಡು ಸಲ ಬಾಯಿಮುಕ್ಕಳಿಸಬೇಕು. ಆಮೇಲೆ ಆಚಮನಮಾಡಿ ಪ್ರಾತಃಸ್ನಾನವನ್ನು ಮಾಡಬೇಕು. ಸ್ನಾನವಾದ ಮೇಲೆ ದೇವ ಋಷಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಆಮೇಲೆ ಶುದ್ಧವಾದ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಹಾಗೆಯೇ ಶುದ್ಧವಾದ ವಸ್ತ್ರವನ್ನು ಹೊದ್ದುಕೊಳ್ಳಬೇಕು. ಬ್ರಾಹ್ಮಣನು ಯಾವಾಗಲೂ ವಸ್ತ್ರವನ್ನು ಹೊದ್ದುಕೊಂಡು ಇರಬೇಕು.

ಆಮೇಲೆ ಆಚಮನ ಮಾಡಿ ಗೋಪೀನಾಮ ಮುದ್ರೆಗಳನ್ನು ಹಚ್ಚಿಕೊಳ್ಳಬೇಕು. ಆಮೇಲೆ ಸಂಧ್ಯಾವಂದನೆಯನ್ನು ಮಾಡಬೇಕು. ನಕ್ಷತ್ರಗಳು ಇರುವಾಗಲೇ ಬೆಳಗಿನ ಸಂಧ್ಯಾ ವಂದನೆಯನ್ನು ಮಾಡಬೇಕು. ಸೂರ್ಯದರ್ಶನವಾಗುವವರೆಗೆ ಗಾಯತ್ರಿಯನ್ನು ಜಪಿಸುತ್ತಾ ಇರಬೇಕು. ಯಾರು ಶ್ರದ್ಧೆಯಿಂದ ವಿಧಿಪ್ರಕಾರವಾಗಿ ಸಂಧ್ಯಾವಂದನೆ ಯನ್ನು ಮಾಡುವನೋ ಅವನಿಗೆ ಮೂರುಲೋಕಗಳಲ್ಲಿಯೂ ದುರ್ಲಭವಾದ ವಸ್ತುವೇ ಇರುವುದಿಲ್ಲ. ಸಂಧ್ಯಾವಂದನೆಯು ಮುಗಿದ ಮೇಲೆ ಔಪಾಸನ ಹೋಮವನ್ನು ಮಾಡಬೇಕು. ದಾನವನ್ನು ಶೂನ್ಯಮಾಡಬಾರದು. ಏನಾದರೂ ಒಂದು ದಾನವನ್ನು ಮಾಡಬೇಕು. ದಿನದ ಮೊದಲಿನ ಭಾಗದಲ್ಲಿ ಇಷ್ಟು

ಕಾರ್ಯವನ್ನು ಮಾಡಬೇಕು.

ಎರಡನೇ ಭಾಗದಲ್ಲಿ ವೇದಾಭ್ಯಾಸವನ್ನು ಮಾಡಬೇಕು. ಸಮಿಧೆ ಪುಷ್ಪ ದರ್ಭೆ ಇತ್ಯಾದಿಗಳನ್ನು ಅದೇ ಸಮಯದಲ್ಲಿಯೇ ತರಬೇಕು. ಮೂರನೇ ಭಾಗದಲ್ಲಿ ನ್ಯಾಯದಿಂದ ಏನಾದರೂ ಸಂಪಾದಿಸಬೇಕು. ದೇಹಕ್ಕೆ ಶ್ರಮವಿಲ್ಲದೆ ದೈವೇಚ್ಛೆಯಿಂದ ಸಿಗುವುದನ್ನು ಸಂಪಾದಿಸಬೇಕು. ಬ್ರಾಹ್ಮಣ ಅಧ್ಯಯನ ಅಧ್ಯಾಪನ; ಜನ ಯಾಜನ-ದಾನ ಪ್ರತಿಗ್ರಹ ಎಂಬ ಕರ್ಮಗಳಲ್ಲಿ ಅಧ್ಯಾಪನ ಯಾಜನ ಪ್ರತಿಗ್ರಹ ಎಂಬ ಮೂರು ಕ್ರಮಗಳು ಜೀವನಕ್ಕೆ ಕಾರಣವಾದವು. ಹಗಲಿನ ನಾಲ್ಕನೇ ಭಾಗದಲ್ಲಿ ಪುನಃ ಸ್ನಾನವನ್ನು ಮಾಡಬೇಕು. ಬ್ರಹ್ಮ ಯಜ್ಞವನ್ನು ಮಾಡಬೇಕು. ಮಾಧ್ಯಾಹ್ನಿಕವನ್ನು ಮಾಡಬೇಕು.

ಆಮೇಲೆ ದೇವರ ಪೂಜೆಯನ್ನು ಮಾಡಬೇಕು. ಪಂಚಮಹಾ ಯಜ್ಞಗಳನ್ನು ಮಾಬೇಕು. ಕಾಕಬಲಿಯನ್ನು ಶ್ವಾನಬಲಿಯನ್ನು ಹಾಕಬೇಕು. ಸರ್ವಪ್ರಾಣಿಗಳಿಗೂ ಎಂದು ಉದ್ದೇಶಿಸಿ ಒಂದಿಷ್ಟು ಅನ್ನವನ್ನು ಹೊರಗೆ ಹಾಕಬೇಕು. ಆಮೇಲೆ ಆಚಮನ ಮಾಡಬೇಕು. ಆಮೇಲೆ ಮನೆಯ ಬಾಗಿಲಲ್ಲಿ ನಿಂತುಕೊಂಡು ಒಂದು ದನವನ್ನು ಹಾಲು ಕರೆಯುವಷ್ಟು ಹೊತ್ತು ಅತಿಥಿಯನ್ನು ನಿರೀಕ್ಷಿಸಬೇಕು. ಆ ಸಮಯದಲ್ಲಿ ಭಾಗ್ಯದಿಂದ ಯಾರಾದರೂ ಅತಿಥಿಯು ಬಂದರೆ ಅವನನ್ನು ಅನ್ನಪಾನಾದಿಗಳಿಂದ ದೇವತೆಯನ್ನು ಸತ್ಕರಿಸುವಂತೆ ಸತ್ಕರಿಸಬೇಕು. ಸಂನ್ಯಾಸಿಗಳು ಬಂದರೂ ಬ್ರಹ್ಮಚಾರಿಯು ಬಂದರೂ ಮಾಡಿದ ಅನ್ನದಿಂದ ಒಂದಿಷ್ಟು ಅನ್ನವನ್ನು ವ್ಯಂಜನದಿಂದ ಸಹಿತವಾಗಿ ಭಿಕ್ಷೆಯನ್ನು ಹಾಕಬೇಕು. ಯತಿಗಳೂ ಬ್ರಹ್ಮಚಾರಿಯೂ ಸಿದ್ಧವಾದ ಅನ್ನಕ್ಕೆ ಸ್ವಾಮಿಗಳು. ಅವರಿಗೆ ಅನ್ನವನ್ನು ಕೊಡದೆ ಗೃಹಸ್ಥನ ಭೋಜನ ಮಾಡಿದುದಾದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ಮೊದಲು ಯತಿಗಳ ಕೈಯಲ್ಲಿ ನೀರನ್ನು ಕೊಡಬೇಕು. ಆಮೇಲೆ ಅನ್ನರೂಪ ಭಿಕ್ಷೆಯನ್ನು ಹಾಕಬೇಕು. ಆಮೇಲೆ ಪುನಃ ನೀರನ್ನ ಹಾಕಬೇಕು. ಭಿಕ್ಷಾ ಹಾಕಿದ ಅನ್ನವು ಮೇರುಪರ್ವತಕ್ಕೆ ಸಮಾನವಾಗುವುದು. ನೀರು ಸಮುದ್ರಕ್ಕೆ ಸಮಾನವಾಗುವುದು. ಬಂದ ಯತಿಗಳಿಗೆ ಯಾರು ಸತ್ಕರಿಸಿ ಭಿಕ್ಷೆಯನ್ನು ಕೊಡುವನೋ ಅವನಿಗೆ ಗೋದಾನ ಮಾಡಿದರೆ ಬರುವ ಪುಣ್ಯವು ಬರುವುದೆಂದು ಯಮದೇವರು ಹೇಳುವರು.

**ತಂದೆ ತಾಯಿಗಳೂ ಗುರುಗಳೂ ಬಂಧುಗಳೂ ಗರ್ಭಿಣಿಯರೂ ಮುದುಕರೂ ಬಾಲಕರೂ ಅತಿಥಿಗಳೂ ಇತರ ಮನೆಗೆ ಬಂದವರೂ ಊಟ ಮಾಡಿದ ಮೇಲೆ ಗೃಹಸ್ಥನು ಊಟಮಾಡಬೇಕು.** ಸಾರಿಸಿದ ಶುದ್ಧವಾದ ಸ್ಥಳದಲ್ಲಿ ಕಾಲು

ಬಹುಹೊತ್ತು ಕೂತುಕೊಳ್ಳಬಾರದು. ಮಲವನ್ನು ನೋಡಬಾರದು. ಗುಹ್ಯೇಂದ್ರಿಯವನ್ನು ಹಿಡಿದುಕೊಂಡು ಎದ್ದು ಬಂದು ಶೌಚವನ್ನು ಮಾಡಿಕೊಳ್ಳಬೇಕು. ಮಣ್ಣನ್ನು ತಂದು ಅದರಿಂದ ಶೌಚ ಮಾಡಿಕೊಳ್ಳಬೇಕು. **ತಂಬಿಗೆಯಲ್ಲಿ ನೀರನ್ನು ತಂದು ಆ ತಂಬಿಗೆಯ ನೀರಿನಿಂದಲೇ ಶೌಚವನ್ನು ಮಾಡಿಕೊಳ್ಳಬೇಕಲ್ಲದೆ ನದೀ ಸರೋವರಾದಿ ಗಳಲ್ಲಿಯೇ ಇಳಿದು ಶೌಚವನ್ನು ಮಾಡಿಕೊಳ್ಳಬಾರದು.** ಗುಹ್ಯೇಂದ್ರಿಯಕ್ಕೆ ಒಂದು ಸಲವೂ ಗುದದ್ವಾರಕ್ಕೆ ಐದು ಸಲವೂ ಎಡಕೈಗೆ ಹತ್ತು ಸಲವೂ ಎರಡು ಕೈಗಳಿಗೂ ಒಟ್ಟಿಗೆ ಏಳು ಸಲವೂ ಕಾಲುಗಳಿಗೆ ಐದು ಐದು ಸಲವೂ ಮಣ್ಣು ಹಚ್ಚಿಕೊಳ್ಳಬೇಕು. ಆಮೇಲೆ ನೀರಿನಿಂದ ತೊಳೆದುಕೊಂಡು ಕೈಕಾಲುಗಳನ್ನು ತೊಳೆದುಕೊಂಡು ಕಚ್ಚೆಯನ್ನು ಕಟ್ಟಿಕೊಂಡು ಆಚಮನವನ್ನು ಮಾಡಬೇಕು.

ಆಮೇಲೆ ಹಲ್ಲುಕಡ್ಡಿಯನ್ನು ತರಬೇಕು. 'ವನಸ್ಪತಿದೇವತೆಯೇ! ನನಗೆ ಆಯುಷ್ಯ ವನ್ನು, ಬಲವನ್ನು, ಕೀರ್ತಿಯನ್ನು, ವರ್ಚಸ್ಸನ್ನು, ಪ್ರಜೆಗಳನ್ನು, ಪಶುಗಳನ್ನು, ಹಣವನ್ನು, ಬ್ರಹ್ಮಜ್ಞಾನವನ್ನು, ಬುದ್ಧಿಶಕ್ತಿಯನ್ನು ಕೊಡು' ಎಂದು ಪ್ರಾರ್ಥಿಸಿ ಹಲ್ಲು ಉಜ್ಜಿಕೊಳ್ಳಬೇಕು. ಹಲ್ಲು ಕಡ್ಡಿಯು ಹಾಲು ಸುರಿಯುವ ಅಥವಾ ಮುಳ್ಳ ಉಳ್ಳ ಮರದ್ದು ಆಗಬೇಕು. ಹನ್ನೆರಡು ಅಂಗುಲ ಉದ್ದವಿರಬೇಕು. ಅದರಲ್ಲಿ ಗಾಯವಿರ ಬಾರದು. ಕಿರುಬೆರಳಿನಷ್ಟು ದಪ್ಪವಿರಬೇಕು. ಆದಿತ್ಯವಾರದಲ್ಲಿ ಹಲ್ಲುಕಡ್ಡಿಯಿಂದ ಹಲ್ಲು ಉಜ್ಜಿಕೊಳ್ಳಬಾರದು. ಆದಿವಸ ಹನ್ನೆರಡು ಸಲ ಬಾಯಿಮುಕ್ಕಳಿಸಬೇಕು. ಆಮೇಲೆ ಆಚಮನಮಾಡಿ ಪ್ರಾತಃಸ್ನಾನವನ್ನು ಮಾಡಬೇಕು. ಸ್ನಾನವಾದ ಮೇಲೆ ದೇವ ಋಷಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಆಮೇಲೆ ಶುದ್ಧವಾದ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಹಾಗೆಯೇ ಶುದ್ಧವಾದ ವಸ್ತ್ರವನ್ನು ಹೊದ್ದುಕೊಳ್ಳಬೇಕು. ಬ್ರಾಹ್ಮಣನು ಯಾವಾಗಲೂ ವಸ್ತ್ರವನ್ನು ಹೊದ್ದುಕೊಂಡು ಇರಬೇಕು.

ಆಮೇಲೆ ಆಚಮನ ಮಾಡಿ ಗೋಪೀನಾಮ ಮುದ್ರೆಗಳನ್ನು ಹಚ್ಚಿಕೊಳ್ಳಬೇಕು. ಆಮೇಲೆ ಸಂಧ್ಯಾವಂದನೆಯನ್ನು ಮಾಡಬೇಕು. ನಕ್ಷತ್ರಗಳು ಇರುವಾಗಲೇ ಬೆಳಗಿನ ಸಂಧ್ಯಾ ವಂದನೆಯನ್ನು ಮಾಡಬೇಕು. ಸೂರ್ಯದರ್ಶನವಾಗುವವರೆಗೆ ಗಾಯತ್ರಿಯನ್ನು ಜಪಿಸುತ್ತಾ ಇರಬೇಕು. ಯಾರು ಶ್ರದ್ಧೆಯಿಂದ ವಿಧಿಪ್ರಕಾರವಾಗಿ ಸಂಧ್ಯಾವಂದನೆ ಯನ್ನು ಮಾಡುವನೋ ಅವನಿಗೆ ಮೂರುಲೋಕಗಳಲ್ಲಿಯೂ ದುರ್ಲಭವಾದ ವಸ್ತುವೇ ಇರುವುದಿಲ್ಲ. ಸಂಧ್ಯಾವಂದನೆಯು ಮುಗಿದ ಮೇಲೆ ಔಪಾಸನ ಹೋಮವನ್ನು ಮಾಡಬೇಕು. ದಾನವನ್ನು ಶೂನ್ಯಮಾಡಬಾರದು. ಏನಾದರೂ ಒಂದು ದಾನವನ್ನು ಮಾಡಬೇಕು. ದಿನದ ಮೊದಲಿನ ಭಾಗದಲ್ಲಿ ಇಷ್ಟು

ಕಾರ್ಯವನ್ನು ಮಾಡಬೇಕು.

ಎರಡನೇ ಭಾಗದಲ್ಲಿ ವೇದಾಭ್ಯಾಸವನ್ನು ಮಾಡಬೇಕು. ಸಮಿಧೆ ಪುಷ್ಪ ದರ್ಭೆ ಇತ್ಯಾದಿಗಳನ್ನು ಅದೇ ಸಮಯದಲ್ಲಿಯೇ ತರಬೇಕು. ಮೂರನೇ ಭಾಗದಲ್ಲಿ ನ್ಯಾಯದಿಂದ ಏನಾದರೂ ಸಂಪಾದಿಸಬೇಕು. ದೇಹಕ್ಕೆ ಶ್ರಮವಿಲ್ಲದೆ ದೈವೇಚ್ಛೆಯಿಂದ ಸಿಗುವುದನ್ನು ಸಂಪಾದಿಸಬೇಕು. ಬ್ರಾಹ್ಮಣ ಅಧ್ಯಯನ ಅಧ್ಯಾಪನ; ಜನ ಯಾಜನ-ದಾನ ಪ್ರತಿಗ್ರಹ ಎಂಬ ಕರ್ಮಗಳಲ್ಲಿ ಅಧ್ಯಾಪನ ಯಾಜನ ಪ್ರತಿಗ್ರಹ ಎಂಬ ಮೂರು ಕ್ರಮಗಳು ಜೀವನಕ್ಕೆ ಕಾರಣವಾದವು. ಹಗಲಿನ ನಾಲ್ಕನೇ ಭಾಗದಲ್ಲಿ ಪುನಃ ಸ್ನಾನವನ್ನು ಮಾಡಬೇಕು. ಬ್ರಹ್ಮ ಯಜ್ಞವನ್ನು ಮಾಡಬೇಕು. ಮಾಧ್ಯಾಹ್ನಿಕವನ್ನು ಮಾಡಬೇಕು.

ಆಮೇಲೆ ದೇವರ ಪೂಜೆಯನ್ನು ಮಾಡಬೇಕು. ಪಂಚಮಹಾ ಯಜ್ಞಗಳನ್ನು ಮಾಬೇಕು. ಕಾಕಬಲಿಯನ್ನು ಶ್ವಾನಬಲಿಯನ್ನು ಹಾಕಬೇಕು. ಸರ್ವಪ್ರಾಣಿಗಳಿಗೂ ಎಂದು ಉದ್ದೇಶಿಸಿ ಒಂದಿಷ್ಟು ಅನ್ನವನ್ನು ಹೊರಗೆ ಹಾಕಬೇಕು. ಆಮೇಲೆ ಆಚಮನ ಮಾಡಬೇಕು. ಆಮೇಲೆ ಮನೆಯ ಬಾಗಿಲಲ್ಲಿ ನಿಂತುಕೊಂಡು ಒಂದು ದನವನ್ನು ಹಾಲು ಕರೆಯುವಷ್ಟು ಹೊತ್ತು ಅತಿಥಿಯನ್ನು ನಿರೀಕ್ಷಿಸಬೇಕು. ಆ ಸಮಯದಲ್ಲಿ ಭಾಗ್ಯದಿಂದ ಯಾರಾದರೂ ಅತಿಥಿಯು ಬಂದರೆ ಅವನನ್ನು ಅನ್ನಪಾನಾದಿಗಳಿಂದ ದೇವತೆಯನ್ನು ಸತ್ಕರಿಸುವಂತೆ ಸತ್ಕರಿಸಬೇಕು. ಸಂನ್ಯಾಸಿಗಳು ಬಂದರೂ ಬ್ರಹ್ಮಚಾರಿಯು ಬಂದರೂ ಮಾಡಿದ ಅನ್ನದಿಂದ ಒಂದಿಷ್ಟು ಅನ್ನವನ್ನು ವ್ಯಂಜನದಿಂದ ಸಹಿತವಾಗಿ ಭಿಕ್ಷೆಯನ್ನು ಹಾಕಬೇಕು. ಯತಿಗಳೂ ಬ್ರಹ್ಮಚಾರಿಯೂ ಸಿದ್ಧವಾದ ಅನ್ನಕ್ಕೆ ಸ್ವಾಮಿಗಳು. ಅವರಿಗೆ ಅನ್ನವನ್ನು ಕೊಡದೆ ಗೃಹಸ್ಥನ ಭೋಜನ ಮಾಡಿದುದಾದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ಮೊದಲು ಯತಿಗಳ ಕೈಯಲ್ಲಿ ನೀರನ್ನು ಕೊಡಬೇಕು. ಆಮೇಲೆ ಅನ್ನರೂಪ ಭಿಕ್ಷೆಯನ್ನು ಹಾಕಬೇಕು. ಆಮೇಲೆ ಪುನಃ ನೀರನ್ನ ಹಾಕಬೇಕು. ಭಿಕ್ಷಾ ಹಾಕಿದ ಅನ್ನವು ಮೇರುಪರ್ವತಕ್ಕೆ ಸಮಾನವಾಗುವುದು. ನೀರು ಸಮುದ್ರಕ್ಕೆ ಸಮಾನವಾಗುವುದು. ಬಂದ ಯತಿಗಳಿಗೆ ಯಾರು ಸತ್ಕರಿಸಿ ಭಿಕ್ಷೆಯನ್ನು ಕೊಡುವನೋ ಅವನಿಗೆ ಗೋದಾನ ಮಾಡಿದರೆ ಬರುವ ಪುಣ್ಯವು ಬರುವುದೆಂದು ಯಮದೇವರು ಹೇಳುವರು.

**ತಂದೆ ತಾಯಿಗಳೂ ಗುರುಗಳೂ ಬಂಧುಗಳೂ ಗರ್ಭಿಣಿಯರೂ ಮುದುಕರೂ ಬಾಲಕರೂ ಅತಿಥಿಗಳೂ ಇತರ ಮನೆಗೆ ಬಂದವರೂ ಊಟ ಮಾಡಿದ ಮೇಲೆ ಗೃಹಸ್ಥನು ಊಟಮಾಡಬೇಕು.** ಸಾರಿಸಿದ ಶುದ್ಧವಾದ ಸ್ಥಳದಲ್ಲಿ ಕಾಲು

ತೊಳೆದುಕೊಂಡು ಬಂದು ಮೌನವುಳ್ಳವನಾಗಿ ಪೂರ್ವಕ್ಕೆ ಮುಖಮಾಡಿಕೊಂಡು ಪ್ರಶಸ್ತ ಶುದ್ಧ ಪಾತ್ರಗಳಲ್ಲಿ ಅನ್ನವನ್ನು ನಿಂದಿಸದೇ ಭೋಜನ ಮಾಡಬೇಕು. ಒಂದು ಪಾತ್ರೆಯಲ್ಲಿ ಒಬ್ಬನೇ ಭೋಜನ ಮಾಡಬೇಕು. ಇಬ್ಬರು ಮೂವರು ಸೇರಿ ಭೋಜನ ಮಾಡಬಾರದು. ಒಬ್ಬನೇ ಭೋಜನ ಮಾಡಿದುದಾದರೆ ಅವನಿಗೆ ಆಯುಷ್ಯವೂ ಜ್ಞಾನವೂ ಕೀರ್ತಿಯೂ ಬಲವೂ ಹೆಚ್ಚುವುದು. ಅನ್ನ ತುಪ್ಪ ವ್ಯಂಜನಗಳನ್ನು ಸುಟ್ಟುಗ-ಸೌಟುಗಳಿಂದಲೇ ಬಡಿಸಬೇಕು. ಊಟ ಮಾಡುವ ಮೊದಲು ಎಲೆಯಲ್ಲಿ ಹಾಕಿದ ಅನ್ನದಿಂದ ಯಮದೇವರಿಗೂ ಚಿತ್ರಗುಪ್ತನಿಗೂ ಸ್ವಲ್ಪ ಅನ್ನವನ್ನು ಹಾಕಿ ಎಲ್ಲಾ ಭೂತಗಳಿಗೂ ತೃಪ್ತಿಯಾಗಲೆಂದು ಒಂದಿಷ್ಟು ಅನ್ನವನ್ನು ಹಾಕಬೇಕು. ಪ್ರಾಣಾಯ ಸ್ವಾಹಾ ಇತ್ಯಾದಿ ಮಂತ್ರಗಳಿಂದ ಐದು ಪ್ರಾಣಾಹುತಿಗಳನ್ನು ಕೊಡಬೇಕು. ಪ್ರಾಣಾಹುತಿಗಳನ್ನು ನಾಲಿಗೆಯಿಂದ ಸ್ವೀಕರಿಸಬೇಕು. ಹಲ್ಲುಗಳಿಂದ ಜಗಿಯಬಾರದು. ಆಮೇಲೆ ಅನ್ಯತ್ರ ಯೋಚನೆಯಿಲ್ಲದೆ ಭೋಜನ ಮಾಡಬೇಕು. ಮೊದಲು ಸಿಹಿ ಪದಾರ್ಥವನ್ನು ಆಮೇಲೆ ಉಪ್ಪು ಹುಳಿಗಳನ್ನು ಅವುಗಳ ಮಧ್ಯದಲ್ಲಿ ಕಾರ ಕಹಿ ಪದಾರ್ಥವಗಳನ್ನೂ ಊಟ ಮಾಡಬೇಕು. ಮೊದಲು ನೀರಾಗಿರುವ ಪದಾರ್ಥವನ್ನು ಸ್ವೀಕರಿಸಬೇಕು. ಆಮೇಲೆ ಗಟ್ಟಿಯಾಗಿರುವ ಪದಾರ್ಥವನ್ನು ಪುನಃ ನೀರಾಗಿರುವ ಪದಾರ್ಥವನ್ನು ಭೋಜನ ಮಾಡಿದರೆ ಬಲವೂ ಆರೋಗ್ಯವೂ ಉಂಟಾಗುವುದು.

ಸನ್ಯಾಸಿಗಳು ಎಂಟು ತುತ್ತು ಅನ್ನವನ್ನು, ವಾನಪ್ರಸ್ಥರು ಹದಿನಾರು ತುತ್ತು ಅನ್ನವನ್ನು, ಗೃಹಸ್ಥರು ಮೂವತ್ತೆರಡು ತುತ್ತು ಅನ್ನವನ್ನು, ಬ್ರಹ್ಮಚಾರಿಯು ಯಥೇಚ್ಛವಾಗಿಯೂ ಭೋಜನ ಮಾಡಬೇಕು. ಶಾಸ್ತ್ರದಲ್ಲಿ ನಿಷಿದ್ಧಗಳಾದ ಭಕ್ಷ್ಯಭೋಜ್ಯಾದಿಗಳನ್ನು ತಿನ್ನಬಾರದು. ಒಣಗಿಹೋದ ಆಹಾರವನ್ನು ಹಳಸಿಹೋದ ಆಹಾರವನ್ನು ತಿನ್ನಬಾರದು. ವಿಧಿಪ್ರಕಾರವಾಗಿ ಭೋಜನ ಮಾಡಿ ಬಾಯಿ ಕೈಗಳನ್ನು ಚೆನ್ನಾಗಿ ಮಣ್ಣು ನೀರು ಹಾಕಿಕೊಂಡು ತಿಕ್ಕಿ ತೊಳೆದುಕೊಳ್ಳಬೇಕು. ಬಾಯಿ ಮುಕ್ಕಳಿಸಿಕೊಂಡು ಹಲ್ಲುಗಳ ಸಂದಿನಲ್ಲಿ ಏನಾದರೂ ಸಿಕ್ಕಿಕೊಂಡಿದೆಯಾ ಎಂದು ಶೋಧಿಸಬೇಕು. ಆಮೇಲೆ ಪುನಃ ಬಾಯಿ ಮುಕ್ಕಳಿಸಬೇಕು. ಆಮೇಲೆ ಊಟಮಾಡಿದ ಎಲೆಯನ್ನು ತೆಗೆದ ಮೇಲೆ ಸ್ವಲ್ಪ ಒದ್ದೆಯಾದ ಕೈಯಿಂದ ನಾಭಿ ಇತ್ಯಾದಿಗಳನ್ನು ಮುಟ್ಟಿಕೊಂಡು ಶಾಂತವಾದ ಮನಸ್ಸುಳ್ಳವನಾಗಿ ಆಸನದಲ್ಲಿ ಕೂತುಕೊಂಡು ಇಷ್ಟದೇವತೆಗಳ ಸ್ಮರಣೆಯನ್ನು ಮಾಡಬೇಕು. ಆಮೇಲೆ ಆಚಮನವನ್ನು ಮಾಡಬೇಕು.

ತರುವಾಯ ತಾಂಬೂಲ ಭಕ್ಷಣೆಯನ್ನು ಮಾಡಬೇಕು. ಕೂತುಕೊಂಡು ಸ್ವಲ್ಪ

ಶ್ರಮ ಪರಿಹಾರಮಾಡಿಕೊಂಡು ಆಮೇಲೆ ಸ್ವಲ್ಪ ಬ್ರಹ್ಮವಿಚಾರವನ್ನು ಮಾಡಬೇಕು. ದಿನದ ಆರನೇ ಏಳನೇ ಭಾಗಗಳಲ್ಲಿ ಸಚ್ಛಾಸ್ತ್ರವಿನೋದದಿಂದಲೂ ಇತಿಹಾಸ ಪುರಾಣಗಳಿಂದಲೂ ಕಳೆಯಬೇಕು. ಎಂಟನೇ ಭಾಗದಲ್ಲಿ ಸ್ವಲ್ಪ ಲೋಕವಿಚಾರವನ್ನು ಮಾಡಬೇಕು. ಆಮೇಲೆ ಸೂರ್ಯನು ಅಸ್ತಪರ್ವತಕ್ಕೆ ಹೋಗಲು ಕಾಲುಗಳನ್ನು ತೊಳೆದುಕೊಂಡು ಹೊರಗೆ ಸರೋವರಾದಿಗಳಲ್ಲಿ ಸಾಯಂ ಸಂಧ್ಯಾವಂದನೆಯನ್ನು ಮಾಡಬೇಕು. ಸೂರ್ಯನು ಕಾಣಿಸುತ್ತಿರುವಾಗಲೇ ಸಾಯಂಸಂಧ್ಯಾವಂದನೆಯನ್ನು ಮಾಡಬೇಕು. ಆಮೇಲೆ ಔಪಾಸನವನ್ನು ಮಾಡಿ ಭೃತ್ಯರಿಂದ ಕೂಡಿಕೊಂಡು ರಾತ್ರಿಭೋಜನ ಮಾಡಬೇಕು. ರಾತ್ರಿಭೋಜನವನ್ನು ಸ್ವಲ್ಪ ಕಡಿಮೆಯಾಗಿಯೇ ಮಾಡಬೇಕು. ಆಮೇಲೆ ಮಲಗಬೇಕು. ಸಾಯಂಕಾಲವೂ ಮಧ್ಯಾಹ್ನವೂ ವೈಶ್ವದೇವ ಬಲಿಹರಣಗಳನ್ನು ಮಾಡಬೇಕು. ತಾನು ಭೋಜನ ಮಾಡದೆ ಇದ್ದರೂ ವೈಶ್ವದೇವ ಬಲಿಹರಣಗಳನ್ನು ಮಾಡದೆ ಇರಬಾರದು. ಮಾಡದೆ ಇದ್ದರೆ ದೋಷಿಯಾಗುವನು. ಆಗಲೂ ಬಂದ ಅತಿಥಿಯನ್ನು ಶಕ್ತಿಯನ್ನು ಅನುಸರಿಸಿ ಭೋಜನ ಮಾಡಿಸಬೇಕು.

ಆಮೇಲೆ ತಾನು ಭೋಜನ ಮಾಡಿ ರಾತ್ರಿಯಲ್ಲಿ ಮಲಗಬೇಕು. ಮಲಗುವ ಹಾಸಿಗೆಯು ಮೃದುವಾಗಿರಬೇಕು. ತಲೆದಿಂಬು ಇರಬೇಕು. ತನ್ನ ಮನೆಯಲ್ಲಿ ಪೂರ್ವಕ್ಕೆ ತಲೆಯನ್ನು ಹಾಕಿ ಮಲಗಬೇಕು. ಮಾವನ ಮನೆಯಲ್ಲಿ ದಕ್ಷಿಣದಿಕ್ಕಿಗೆ ತಲೆಹಾಕಿಯೂ ಪರಸ್ಥಳದಲ್ಲಿ ಪಶ್ಚಿಮಕ್ಕೆ ತಲೆಹಾಕಿಯೂ ಮಲಗಬೇಕು. ಯಾವಾಗಲೂ ಉತ್ತರದಿಕ್ಕಿಗೆ ತಲೆಹಾಕಿ ಮಲಗಬಾರದು. ರಾತ್ರಿಯಲ್ಲಿ ರಾತ್ರಿ ಸೂಕ್ತವನ್ನು ಜಪಿಸಬೇಕು. ಸುಖಶಾಯಿಗಳಾದ ದೇವತೆಗಳನ್ನು ಸ್ಮರಿಸಬೇಕು. ಆಮೇಲೆ ಪರಮಾತ್ಮನಿಗೆ ನಮಸ್ಕರಿಸಿ ನಿದ್ರೆ ಮಾಡಬೇಕು. ಅಗಸ್ತ್ಯ ಮಾಧವ ಮುಚುಕುಂದ ಕಪಿಲ ಆಸ್ತೀಕ ಇವರು ಸುಖಶಾಯಿಗಳು. ತಲೆಯ ಹತ್ತಿರ ಪೂರ್ಣಕಶವನ್ನು ಇಡಬೇಕು. ವೈದಿಕ ಗಾರುಡ ಮಂತ್ರಗಳಿಂದ ಅದಕ್ಕೆ ರಕ್ಷೆಯನ್ನು ಮಾಡಬೇಕು. ಋತುಕಾಲದಲ್ಲಿ ಪರ್ವಕಾಲವನ್ನು ಬಿಟ್ಟು ತನ್ನ ಸ್ತ್ರೀಯನ್ನು ಅವಳ ಇಚ್ಛೆಯನ್ನು ಅನುಸರಿಸಿ ಹೊಂದಬೇಕು. ಮೊದಲಿನ ಮತ್ತು ಕೊನೆಯ ಎರಡು ಝಾಮಗಳನ್ನು ವೇದಾಭ್ಯಾಸಗಳಿಂದ ಕಳೆಯಬೇಕು. ಮಧ್ಯದ ಎರಡು ಝಾಮಗಳಲ್ಲಿ ಮಾತ್ರ ಮಲಗುವವನು ಭಗವಂತನನ್ನು ಹೊಂದಲಿಕ್ಕೆ ಸಮರ್ಥನಾಗುವನು. ಈರೀತಿಯಾಗಿ ಗೃಹಸ್ಥರು ಗೃಹಸ್ಥಧರ್ಮವನ್ನು ಮಾಡಬೇಕು.



# ಸ್ತ್ರೀಧರ್ಮ [1]

ಒಂದು ದಿವಸದಲ್ಲಿ ನಾರದರು ಸಂಚಾರ ಮಾಡುತ್ತಾ ಅದ್ಭುತವಾದ ಹಿಮವತ್ಪರ್ವತದಲ್ಲಿ ಇರುವ ಒಂದು ವನವನ್ನು ನೋಡಿದರು. ಅದು ನಾನಾ ವೃಕ್ಷಗಳಿಂದ ಶೋಭಿಸುತ್ತಿತ್ತು. ನಾನಾರತ್ನಗಳಿಂದ ಯುಕ್ತವಾಗಿತ್ತು. ದಿವ್ಯಗಂಧದಿಂದ ಕೂಡಿತ್ತು. ಸಿದ್ಧರೂ ಚಾರಣರೂ ಭೂತಗಳೂ ಇವರಿಂದ ಯುಕ್ತವಾಗಿತ್ತು. ಅಪ್ಸರಸ್ತ್ರೀಯರಿಂದ ಸಹಿತವಾಗಿತ್ತು. ಭೂತಗಳು ವಾದ್ಯಗಳನ್ನು ಬಾರಿಸುತ್ತಾ ಕುಣಿಯುತ್ತಾ ಇದ್ದವು. ಭೂತಗಳು ಭಯಂಕರವಾಗಿದ್ದವು. ಸಿಂಹ ಹುಲಿ ಹಾವು ಬೆಕ್ಕುಗಳ ಮುಖಗಳಂತೆ ಅವುಗಳ ಮುಖವಾಗಿತ್ತು. ಇನ್ನು ಕೆಲವಕ್ಕೆ ಕತ್ತೆ ಒಂಟೆ ಹುಲಿ ಆನೆ ಗೂಗೆ ಹದ್ದು ಕಾಗೆ ಮೊದಲಾದ ಪ್ರಾಣಿಗಳಂತೆ ಮುಖಗಳಿದ್ದವು. ಅಲ್ಲಿ ಅನೇಕ ರಾಕ್ಷಸರೂ ಇದ್ದರು. ಈಪ್ರಕಾರವಾದ ರುದ್ರದೇವರ ಸಭೆಯಲ್ಲಿ ಅಪ್ಸರಸ್ತ್ರೀಯರೂ ನರ್ತನ ಮಾಡುತ್ತಿದ್ದರು. ಕೋಗಿಲೆ ಮೊದಲಾದ ಪಕ್ಷಿಗಳು ಕೂಗುತ್ತಿದ್ದವು. ಒಳ್ಳೇ ಗಾಳಿಯು ಬರುತ್ತಿತ್ತು. ಇಂತಹ ಸಭೆಯಲ್ಲಿ ರುದ್ರದೇವರು ಕೂತಿದ್ದರು. ಋಷಿಗಳೂ ಭೂತಗಳೂ ರುದ್ರದೇವರಿಗೆ ಶಿರಸಾನಮಸ್ಕಾರ ಮಾಡಿ ಸ್ತೋತ್ರ ಮಾಡುತ್ತಿದ್ದರು. ಎಲ್ಲರೂ ರುದ್ರದೇವರನ್ನು ಸೇವಿಸುತ್ತಾ ಇದ್ದರು. ಆ ಸಮಯದಲ್ಲಿ ಪಾರ್ವತೀ ದೇವಿಯರು ರುದ್ರದೇವರಂತೆಯೇ ವಸ್ತ್ರವನ್ನೂ ಧರಿಸಿಕೊಂಡು ರುದ್ರದೇವರಂತೆ ವ್ರತವುಳ್ಳವಳಾಗಿ ಭೂತಸ್ತ್ರೀಯರಿಂದ ಸಹಿತರಾಗಿ ಸರ್ವತೀರ್ಥಗಳ ನೀರಿನಿಂದ ತುಂಬಿದ ಒಂದು ಬಂಗಾರದ ಕಳಸವನ್ನು ಹಿಡಿದುಕೊಂಡು ಹೂವಿನ ಮಳೆಯನ್ನು ಸುರಿಸುತ್ತಾ ದಿವ್ಯಗಂಧವುಳ್ಳವರಾಗಿ ನದೀದೇವತೆಗಳಿಂದ ಅನುಸೃತರಾಗಿ ರುದ್ರ ದೇವರನ್ನು ಸೇವಿಸಲಿಕ್ಕೆ ಬಂದರು.

ದೇವಿಯು ರುದ್ರದೇವರ ಹಿಂದಿನಿಂದ ಬಂದು ಅವರ ಕಣ್ಣುಗಳನ್ನು ಕ್ರೀಡೆಯಿಂದ ಮುಚ್ಚಿದರು. ಹಿಂದೆಯೇ ನಗುತ್ತಾ ನಿಂತುಕೊಂಡರು. ರುದ್ರದೇವರ ಕಣ್ಣನ್ನು ಮುಚ್ಚಲು ಲೋಕದಲ್ಲೆಲ್ಲಾ ಕತ್ತಲೆಯಾಯಿತು. ಎಲ್ಲರೂ ಭಯಪಟ್ಟರು. ಋಷಿಗಳೆಲ್ಲರೂ ಹಾಹಾಕಾರವನ್ನು ಮಾಡಿದರು. ಆಗ ರುದ್ರದೇವರ ಹಣೆಯಲ್ಲಿ ಮೂರನೇ ಕಣ್ಣು ತೆರೆಯಿತು. ಅದರಿಂದ ಅಗ್ನಿಯುಂಟಾಗಿ ಮುಂದೆ ಇದ್ದ ಹಿಮವತ್ಪರ್ವತವು ಸುಟ್ಟು ಹೋಯಿತು. ಮೃಗಪಕ್ಷಿಗಳಿಂದ ಕೂಡಿದ ವಿದ್ಯಾಧರ ಗಂಧರ್ವರಿಂದ ಸಹಿತವಾದ ದಿವ್ಯಮರ ಗಳಿಂದ ಕೂಡಿದ ಹಿಮವತ್ಪರ್ವತವು

---

1. ಮ.ಭಾ.ಅ.ಪ. ಅ-146

ಸುಡಲು ಪಾರ್ವತೀದೇವಿಯೂ ಆಶ್ಚರ್ಯವುಳ್ಳವರಾದರು. ಜಗತ್ತಿಗೇ ಆಶ್ಚರ್ಯವಾಯಿತು. ಎಲ್ಲರೂ ನೋಡುತ್ತಿರುವಂತೆ ರುದ್ರದೇವರ ಮೂರನೇ ಕಣ್ಣಿನ ಅಗ್ನಿಯಿಂದ ಹಿಮವತ್ಪರ್ವತವು ಸುಟ್ಟೇ ಹೋಯಿತು. ಪಾರ್ವತೀದೇವಿಯು ತಂದೆಯಾದ ಹಿಮವತ್ಪರ್ವತವು ಸುಟ್ಟುಹೋಗಲು ತಂದೆಯನ್ನು ಬಹುಮಾನಿಸು ವುದಕ್ಕಾಗಿ ರುದ್ರದೇವರ ಕಾಲಿಗೆ ಅಡ್ಡಬಿದ್ದರು. ರುದ್ರದೇವರು ಪಾರ್ವತೀದೇವಿಯ ಮಹತ್ತಾದ ದುಃಖವನ್ನು ನೋಡಿ ಪಾರ್ವತೀದೇವಿಯ ಪ್ರಿಯಕ್ಕಾಗಿ ಮತ್ತೊಮ್ಮೆ ಪರ್ವತವನ್ನು ನೋಡಿದರು. ಆ ಕ್ಷಣವೇ ಪರ್ವತವು ಪೂರ್ವದಂತೇ ಆಯಿತು. ಅದನ್ನು ನೋಡಿ ಪಾರ್ವತೀದೇವಿಯು ಸಂತೋಷಪಟ್ಟರು. ತರುವಾಯ ಪಾರ್ವತೀ ದೇವಿಯರು ಅಲ್ಲಿದ್ದ ಜನರಿಗೆಲ್ಲಾ ತಿಳಿಯಲಿ ಎಂದು ಹಿತಯೋಚನೆಯಿಂದ ರುದ್ರದೇವರೊಡನೆ ಅನೇಕ ಧರ್ಮಗಳನ್ನು ಕೇಳಿದರು. ರುದ್ರದೇವರು ಎಲ್ಲವನ್ನೂ ವಿವರಿಸಿ ಹೇಳಿದರು. ಕೊನೆಗೆ ರುದ್ರದೇವರು ಪಾರ್ವತೀದೇವಿಯೊಡನೆ ಸ್ತ್ರೀಧರ್ಮವನ್ನು ಹೇಳಲಿಕ್ಕೆ ಹೇಳಿದರು.

ಆಗ ಪಾರ್ವತಿದೇವಿಗೆ ಲಜ್ಜೆಯುಂಟಾಯಿತು. ಭಯವುಂಟಾದಂತೆ ಆಯಿತು. ಒಂದೂ ಮಾತಾಡದೆ ಸುಮ್ಮನೆ ಇದ್ದರು. ರುದ್ರದೇವರು ಪುನಃ ಪುನಃ ಹೇಳಿದರು. ಆಗ ಪಾರ್ವತೀದೇವಿಯರು 'ಸುರಾಸುರರಿಂದ ನಮಸ್ಕೃತರಾದ ಪೂಜ್ಯರೇ! ನಮ್ಮ ಬಳಿಯಲ್ಲಿ ಸ್ತ್ರೀಧರ್ಮವನ್ನು ನಾನು ಹೇಳಲಿಕ್ಕೆ ಹೇಗೆ ಉಗುವುದು' ಎಂದರು. ರುದ್ರದೇವರು 'ಪ್ರಿಯೆ! ನನ್ನ ಆಜ್ಞೆಯಿಂದ ನೀನು ಹೇಳಿಯೇ ಆಗಬೇಕು' ಎಂದರು.

ಪಾರ್ವತೀದೇವಿಯರು ಹಾಗಾದರೆ ನನ್ನೊಡನೆ ಇರುವ ಗಂಗಾದಿ ನದೀದೇವತೆಗಳೊಡನೆ ವಿಚಾರಿಸಿ ಹೇಳುವೆನು ಎಂದು ಹೇಳಿ 'ನದೀದೇವತೆಗಳೇ! ಯಜಮಾನರು ನನ್ನೊಡನೆ ಸ್ತ್ರೀಧರ್ಮವನ್ನು ಹೇಳಬೇಕೆನ್ನುವರು. ನಿಮ್ಮ ಬಳಿಯಲ್ಲಿ ವಿಚಾರಿಸಿ ಹೇಳಬೇಕು ಎಂದಿದ್ದೇನೆ' ಎಂದರು. ಅದಕ್ಕೆ ಗಂಗಾದಿ ದೇವಿಯರು ತಾವೇ ಸ್ತ್ರೀಧರ್ಮವನ್ನು ಹೇಳಲಿಕ್ಕೆ ಸಮರ್ಥರು. ನಾವೂ ಕೇಳಲಿಕ್ಕೆ ಆಸೆಪಡುವೆವು. ತಾವು ಅವಶ್ಯವಾಗಿ ಹೇಳಬೇಕು' ಎಂದರು.

ತರುವಾಯ ಪಾರ್ವತೀದೇವಿಯರು 'ಪೂಜ್ಯರೇ! ತಮ್ಮ ಅನುಗ್ರಹದಿಂದ ತಮ್ಮ ಪ್ರೀತಿಗೋಸ್ಕರ ಸ್ತ್ರೀಧರ್ಮವನ್ನು ಹೇಳುವೆನು. ಕೇಳಬೇಕು' ಎಂದು ಹೇಳಲಿಕ್ಕೆ ಆರಂಭಿಸಿದರು. ಈರೀತಿಯಾಗಿ ಪಾರ್ವತೀದೇವಿಯು ಹೇಳಲಿಕ್ಕೆ ಆರಂಭಿಸಲು ಋಷಿಗಂಧರ್ವಯಕ್ಷನಾಗರ ಸ್ತ್ರೀಯರೂ ನದೀದೇವತೆಗಳೂ ಕೇಳಲಿಕ್ಕೆ ಕುತೂಹಲ

ದಿಂದ ಬಂದು ಸೇರಿದರು. ತರುವಾಯ ಪಾರ್ವತೀದೇವಿಯರು ಸ್ತ್ರೀಯರ ಹಿತಕ್ಕಾಗಿ ರುದ್ರದೇವರಿಗೆ ಪ್ರಿಯಕ್ಕಾಗಿ ಸ್ತ್ರೀಧರ್ಮವನ್ನು ಹೇಳಲಿಕ್ಕೆ ಆರಂಭಿಸಿದರು.

''ಪೂಜ್ಯರೇ! ನನ್ನ ಮಾತನ್ನು ಕೇಳಬೇಕು. ಕನ್ಯೆಯನ್ನು ತಂದೆತಾಯಿ, ಅಣ್ಣ, ಸೋದರಮಾವ, ದೊಡ್ಡ ತಂದೆ ಈ ಐದು ಜನರು ದಾನ ಮಾಡಲಿಕ್ಕೆ ಅರ್ಹರು. ಮದುವೆಯಾದ ಮೇಲೆ ಸ್ತ್ರೀಯು ಲಜ್ಜೆಯಿಲ್ಲದೆ ಮನಸ್ಸಿನಿಂದಲೂ ಕರ್ಮದಿಂದಲೂ ಮಾತಿನಿಂದಲೂ ಗಂಡನಿಗೆ ಅನುಕೂಲಳಾಗಿ ಇರಬೇಕು. ಧರ್ಮ ಕಾಮ ಅರ್ಥ ವಿಷಯದಲ್ಲಿ ಪತಿಯು ಯಾವುದನ್ನು ಇಚ್ಛಿಸುವನೋ ಆ ಪ್ರಕಾರವಾಗಿ ಅನುಕೂಲಳಾಗಿ ಇರಬೇಕು ಗಂಡನಂತೆಯೇ ಹೆಂಡತಿಯಿರಬೇಕು. ಯಾರು ಸರ್ವಕಾಲದಲ್ಲಿ ಗಂಡನನ್ನು ದೇವತೆಯಂತೆ ಭಾವಿಸುವಳೋ ಅವಳಿಗೆ ಗಂಡನು ದೇವತೆಯಂತೆಯೇ ಆಗುವನು. ಈ ವಿಷಯದಲ್ಲಿ ನಿಮ್ಮ ಅನುಗ್ರಹದಿಂದ ಒಂದು ಇತಿಹಾಸವನ್ನು ಹೇಳುವೆನು. ಒಬ್ಬ ಬ್ರಾಹ್ಮಣನಿಗೆ ಇಬ್ಬರು ಹೆಂಡತಿಯರು ಇದ್ದರು. ಅವರಲ್ಲಿ ಒಬ್ಬಳು ಪತಿಯನ್ನು ಸೇವಿಸದೆ ಅವಮಾನಮಾಡಿ ಧರ್ಮಗಳನ್ನು ಮಾಡಿದಳು. ದೇವತಾಸೇವೆಯನ್ನು ಮಾಡಿದಳು. ಮತ್ತೊಬ್ಬಳು ಪತಿಯ ಸೇವೆಯನ್ನು ಮಾಡಿ ಪತಿಯನ್ನು ದೇವತೆಯೆಂದು ಭಾವನೆ ಮಾಡಿ ಪತಿಯನ್ನು ಉದ್ದೇಶಿಸಿ ಧರ್ಮಗಳನ್ನು ಮಾಡಿದಳು. ಗಂಡನ ಪ್ರಿಯವನ್ನೇ ಮಾಡಿದಳು. ಹೀಗಿರಲು ಇಬ್ಬರಿಗೂ ಏಕಕಾಲದಲ್ಲಿ ಮರಣವುಂಟಾಯಿತು. ಆಗ ಗಂಡನನ್ನು ಅವಮಾನ ಮಾಡಿ ದೇವತೆಗಳ ಸೇವೆಯನ್ನೂ ಧರ್ಮಗಳನ್ನೂ ಮಾಡುತ್ತಾ ಇದ್ದವಳು ಅಲ್ಲಿಯೇ ನಿಂತಿರುವಾಗಲೇ ಪತಿಯ ಸೇವೆಯನ್ನು ಮಾಡಿ ಧರ್ಮ ಮಾಡಿದವಳು ಪುಣ್ಯಲೋಕಕ್ಕೆ ಹೊರಟುಹೋದಳು. ಆಗ ದೇವತಾಸೇವೆ ಮಾಡಿರುವಳು. ವಿಲಾಪವನ್ನು ಮಾಡಿದಳು. ಆಗ ಯಮದೇವರು 'ನೀನು ದುಃಖಪಡಬೇಡ. ಹೊರಟುಹೋಗು. ನಿನಗೆ ಒಳ್ಳೇ ಲೋಕಗಳಿಲ್ಲ. ನೀನು ನಿನ್ನ ಧರ್ಮವನ್ನು ನೀನು ಮಾಡಲಿಲ್ಲ. ಆದುದರಿಂದ ನಿನಗೆ ಲೋಕದಲ್ಲಿ ಹೆಂಗಸಿಗೆ ಗಂಡನೇ ದೇವತೆಯೆಂದು ಎಲ್ಲಾ ದೇವತೆಗಳೂ ಮಾಡಿದ ನಿಯಮವು. ಅಂತಹ ಗಂಡನನ್ನು ಅವಮಾನ ಮಾಡಿದ ನಿನಗೆ ಉತ್ತಮಲೋಕಗಳು ಹೇಗೆ ಆಗಬೇಕು? ಮೋಹದಿಂದ ನೀನು ನಿನಗೆ ಸ್ವಾಮಿ ಯಾರು ಎಂಬುದನ್ನು ತಿಳಿಯಲಿಲ್ಲ. ಪತಿಯುಳ್ಳ ಸ್ತ್ರೀಯು ತಾನು ಮಾಡಿದ ಧರ್ಮವನ್ನು ಪತಿಯಲ್ಲಿರುವ ಭಗವಂತನಿಗೆ ಸಮರ್ಪಿಸಬೇಕು. ಆದುದರಿಂದ ನೀನು ಹಿಂದೆ ಹೋಗಿ ಗಂಡನಿಗೆ ಹಿತಕರವಾದ ಧರ್ಮವನ್ನು ಮಾಡು. ಆಗ ಪತಿವ್ರತೆಯರು ಹೊಂದುವ ಲೋಕಗಳನ್ನು ಹೊಂದುವಿ. ಇಲ್ಲದಿದ್ದರೆ

ನಿನಗೆ ಉತ್ತಮ ಲೋಕವನ್ನು ಹೊಂದಲು ಆಗಲಾರದು' ಎಂದು ಹೇಳಿದರು. ಈರೀತಿಯಾಗಿ ಯಮದೇವರು(ಹೇಳಲು) ಅವಳು ಪುನಃ ಬಂದು ಪತಿಯ ಸೇವೆ ಯನ್ನು ಮಾಡಿದಳು. ಆದುದರಿಂದ ಸ್ತ್ರೀಗೆ ಪತಿಯೇ ದೇವತೆಗೆ ಸಮಾನನು. ಅವಳು ಅವಶ್ಯವಾಗಿ ಪತಿಯನ್ನು ಸೇವಿಸಬೇಕು.

ಪತಿಯುಳ್ಳ ಸ್ತ್ರೀಯು ಪತಿಯು ಏಳುವ ಮೊದಲು ಎದ್ದು ಪ್ರಾತಃಕಾಲದ ಕರ್ಮಗಳನ್ನು ಮಾಡಬೇಕು. ಗಂಡನ ಅಭಿಪ್ರಾಯವನ್ನು ತಿಳಿದು ಅವನನ್ನು ಎಬ್ಬಿಸಬೇಕು. ಬೆಳಿಗ್ಗೆ ಮಾಡುವ ಕಾರ್ಯವನ್ನು ತಾನೇ ಸರಿಯಾಗಿ ಮಾಡಬೇಕು. ಪತಿಯೊಡನೆ ಯಾವ ಅಡಿಗೆಯನ್ನು ಮಾಡಲಿ ಎಂದು ಕೇಳಿಯೇ ಅಡಿಗೆ ಮಾಡಬೇಕು. ಪತಿಗೆ ಪ್ರಿಯವನ್ನು ಮಾಡಬೇಕು. ಪತಿಯು ಹೊರಗೆ ಹೋದವನು ಬಂದರೆ ಅವನಿಗೆ ಕಾಲಿಗೆ ನೀರನ್ನು ಕೊಡಬೇಕು. ಕೂತುಕೊಳ್ಳಲಿಕ್ಕೆ ಆಸನವನ್ನು ಕೊಡಬೇಕು. ಒಳ್ಳೆಯ ಮಾತನ್ನು ಆಡಬೇಕು. ಅತಿಥಿಗಳು ಬಂದರೆ ಸಂತೋಷವನ್ನು ಹೊಂದಬೇಕು. ಕಾರ್ಯದಿಂದಲೂ ಮಾತಿನಿಂದಲೂ ಅತಿಥಿಗಳನ್ನು ಸಂತೋಷ ಪಡಿಸಬೇಕು. ಮನೆಯಲ್ಲಿ ರಂಗೋಲೆ ಹಾಕೋಣ ಇತ್ಯಾದಿ ಮಂಗಲಕಾರ್ಯವನ್ನು ತಾನೇ ಮಾಡಬೇಕು. ಮನೆಯ ಶುದ್ಧಿಯನ್ನು ತಾನೇ ಮಾಡಬೇಕು. ಮನೆಯ ವಸ್ತುಗಳನ್ನೆಲ್ಲಾ ಸರ್ವಕಾಲದಲ್ಲಿಯೂ ತಾನೇ ನೋಡಿಕೊಳ್ಳಬೇಕು. ಧರ್ಮಕಾರ್ಯ ವನ್ನು ಮಾಡುವ ಸಂದರ್ಭದಲ್ಲಿ ಧರ್ಮಕಾರ್ಯವನ್ನು ಮಾಡಬೇಕು. ಹಣದ ವಿಷಯದಲ್ಲಿಯೂ ಮರೆತುಬಿಡೋಣ ಸೋಮಾರಿತನಗಳನ್ನು ಬಿಟ್ಟು ಪತಿಗೆ ಸಹಾಯವನ್ನು ಮಾಡಬೇಕು. ಧರ್ಮಾರ್ಥಗಳ ಭಾರವನ್ನು ತಾನು ವಹಿಸಲೇಬೇಕು. ವಿಹಾರಕಾಲದಲ್ಲಿ ಗಂಡನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡು ಅಲಂಕಾರ ಮಾಡಿಕೊಂಡು ಮಂದಹಾಸವುಳ್ಳವಳಾಗಿ ಮಧುರಗಳಾದ ಮಾತುಗಳಿಂದ ಸಂತೋಷಪಡಿಸಬೇಕು.

ಕಠಿಣ ಮಾತುಗಳನ್ನು ಪತಿಯನ್ನು ಕುರಿತು ಆಡಲೇಬಾರದು. ತನ್ನ ಪತಿಯು ಬೇರೆ ಸ್ತ್ರೀಯರಲ್ಲಿ ಪ್ರೀತಿಯುಳ್ಳವನಾಗಿದ್ದರೆ ಅವಳಲ್ಲಿಯೂ ಪ್ರೀತಿಯನ್ನು ಮಾಡಬೇಕು. ಸ್ವಲ್ಪವೂ ಮರೆಯದೆ ಮೊದಲು ಪತಿಯ ಭೋಜನಾದಿಗಳನ್ನು ನೋಡಿಕೊಳ್ಳಬೇಕು. ಆಮೇಲೆ ಇತರರ ಭೋಜನಾದಿಗಳನ್ನು ನೋಡಿ ಕೊಳ್ಳಬೇಕು. ಮನೆಯಲ್ಲಿರುವ ದಾಸಿಯರು ದಾಸರು ಎತ್ತುಗಳು ಚಂಡಾಲನು ನಾಯಿಯು ಇವರನ್ನು ಇತರ ಅನಾಥರನ್ನೂ ಭಿಕ್ಷುಕರನ್ನೂ ಉಪಚರಿಸಬೇಕು. ಪತಿಗೆ ಧರ್ಮವು ಹೆಚ್ಚಾಗುವಂತೆ ಮಾಡಬೇಕು. ಪತಿಯು ಕೋಪವುಳ್ಳವನಾಗಿರಲಿ. ಹಣವಿಲ್ಲದೆ

ಇದ್ದವನಾಗಲೀ ಶ್ರಮವುಳ್ಳವನಾಗಿರಲಿ ಅವನು ಸಂತೋಷಹೊಂದುವಂತೆ ಸ್ವಸ್ಥನಾಗುವಂತೆ ಉಪಚರಿಸಬೇಕು. ಕುಟುಂಬ ವಿಚಾರದಲ್ಲಿಯೇ ಯಾವುದಾದರೂ ಒಂದು ವಿವಾದದಲ್ಲಿಯೋ ಹಣ ಸಂಗ್ರಹಿಸುವ ವಿಷಯದಲ್ಲಿಯೋ ಗಂಡನು ತನ್ನನ್ನು ಸಹಾಯಕ್ಕೆ ಕರೆದರೆ ಹೋಗಿ ಪ್ರಿಯಹಿತವನ್ನು ಹೇಳಬೇಕು. ಧರ್ಮಾರ್ಥ ವಿಷಯದಲ್ಲಿ ಕೇಳಲಿಕ್ಕೆ ಅಪ್ರಿಯವಾಗಿದ್ದರೂ ಹಿತವನ್ನೇ ಹೇಳಬೇಕು. ಇತರ ಪುರುಷರೊಡನೆ ಏಕಾಂತದಲ್ಲಿ ಮಾತಾಡುತ್ತಾ ಇರಬಾರದು. ಇನ್ನೊಬ್ಬರ ಹತ್ತಿರ ಜಗಳವಾಡಬಾರದು. ಹೋಗಿ ನೋಡೋಣವನ್ನೂ, ಮೋಹವನ್ನೂ, ಲಜ್ಜೆಯನ್ನು, ಚಾಡಿಹೇಳೋಣವನ್ನು, ಹೆಚ್ಚಾಗಿ ಭೋಜನ ಮಾಡುವುದನ್ನೂ, ಹಗಲಲ್ಲಿ ಮಲಗುವುದನ್ನೂ, ಸ್ತ್ರೀಯು ಮಾಡಬಾರದು. ಸ್ತ್ರೀಯಾದವಳು ವಯಸ್ಸಾದ ಗಂಡುಮಕ್ಕಳೊಡನೆಯೂ ಕೂಡ ಒಂದೇ ಆಸನದಲ್ಲಿ ಕೂತುಕೊಳ್ಳಬಾರದು. ಪತಿಯು ಯಾವ ವಸ್ತುವನ್ನು ಒಳಗೆ ಇಡಲಿಕ್ಕೆ ಕೊಡುತ್ತಾನೋ ಅದನ್ನು ಚೆನ್ನಾಗಿ ರಕ್ಷಿಸಬೇಕು. ತನ್ನಲ್ಲಿ ಕೊಟ್ಟ ವಸ್ತುವನ್ನು ಪತಿಗೆ ಮರೆತುಹೋದರೂ ತಾನೇ ಕೊಡಬೇಕು. ಗಂಡನು ಏನು ಕೊಟ್ಟರೂ ಅದರಿಂದ ಸಂತೋಷವನ್ನು ಹೊಂದಬೇಕು. ಪತಿಯನ್ನು ಆಜ್ಞಾಮಾಡಬಾರದು. ಪತಿಯ ಮೇಲೆ ಅಸೂಯೆಯನ್ನು ಹೊಂದಬಾರದು. ಬಾಲಕರಂತೆಯೂ ವೃದ್ಧರಂತೆಯೂ ಯಾವಾಗಲೂ ಪತಿಯನ್ನು ಸೇವಿಸಬೇಕು. ಇದು ಪತಿವ್ರತೆಯರ ಧರ್ಮವು.

ಯಾವ ಸ್ತ್ರೀಗೆ ಭೋಗದಲ್ಲಿ ಐಶ್ವರ್ಯದಲ್ಲಿ ಸುಖದಲ್ಲಿ ಹಣದಲ್ಲಿ ಆಸೆ ಉಂಟಾಗುವುದೋ ಅವಳೇ ಸ್ತ್ರೀಯರಲ್ಲಿ ಪತಿವ್ರತೆ ಎನಿಸಿಕೊಳ್ಳುವಳು. ಸ್ತ್ರೀಯರಿಗೆ ಪತಿಯೇ ಬಂಧುವು. ಪತಿಯೇ ದೇವತೆಯು. ಪತಿಯೇ ಗತಿಯು. ಪತಿಯಂತೆ ಬೇರೆ ಗತಿಯು ಸತಿಗಿಲ್ಲ. ಜಾತಿಗಳಲ್ಲಿ ಸ್ತ್ರೀಜಾತಿಯೇ ಶ್ರೇಷ್ಠವೆಂದು ನನಗೆ ಕಾಣುತ್ತದೆ. ಏಕೆಂದರೆ ಪುರುಷರು ಬಹುದೇಹಶ್ರಮದಿಂದ ಪುಣ್ಯವನ್ನು ಸಂಪಾದಿಸಬೇಕು. ಸ್ತ್ರೀಯರು ಆ ಎಲ್ಲಾ ಪುಣ್ಯವನ್ನು ಪತಿಯ ಸೇವೆಯಿಂದಲೇ ಹೊಂದಬಹುದು. ಪತಿಗೆ ಅನುಕೂಲಳಾಗಿ ಇರುವುದೇ ಅವಳಿಗೆ ಪರಮಧರ್ಮವು. ತಪಸ್ಸು ದಾನ ಕೀರ್ತಿ ಇತ್ಯಾದಿ ಎಲ್ಲವೂ ಪತಿಯ ಅಧೀನವು. ಈ ಪ್ರಕಾರವಾದ ಆಚಾರವುಳ್ಳ ಹೆಂಗಸರು ತನ್ನ ಪತಿಯಿಂದ ಕೂಡಿಕೊಂಡು ಪುಣ್ಯಲೋಕಗಳನ್ನು ಹೊಂದುವರು. ಪತಿಯು ಮುದುಕನಾಗಿದ್ದರೂ ಕುರುಪಿಯಾಗಿದ್ದರೂ ಹಣವಂತನಾಗಿದ್ದರೂ ದರಿದ್ರನಾಗಿದ್ದರೂ ಹೆಂಡತಿಗೆ ಅವನೇ ಭೂಷಣನು. ಗಂಡನು ಹಣವಂತನಾಗಿರಲಿ, ದರಿದ್ರನಾಗಿರಲಿ, ಸುರೂಪಿಯಾಗಿರಲಿ, ಕುರೂಪಿಯಾಗಿರಲಿ, ಯಾವ ಸ್ತ್ರೀಯು

ಅವನನ್ನೇ ಸೇವಿಸುವಳೋ ಅವಳೇ ಶ್ರೇಷ್ಠಳು. ದರಿದ್ರರಾಗಿದ್ದರೂ ಕುರೂಪಿಗಳಾಗಿದ್ದರೂ ಮೂಢರಾಗಿದ್ದರೂ ಕುಷ್ಟರೋಗಿಗಳಾಗಿದ್ದರೂ ಯಾವ ಸ್ತ್ರೀಯು ಆ ಪತಿಯನ್ನೇ ಸೇವಿಸುವಳೋ ಅವಳು ಅಕ್ಷಯಲೋಕಗಳನ್ನು ಹೊಂದುವಳು. ಈ ಪ್ರಕಾರವಾಗಿರುವ ಸ್ತ್ರೀಯು ತನ್ನ ಪತಿಯು ಮೃತನಾದರೆ ಸಹಗಮನವನ್ನು ಮಾಡಬೇಕು. ಅಥವಾ ಧರ್ಮವನ್ನೇ ಮಾಡುತ್ತಾ ಇರಬೇಕು.

ಲೋಕದಲ್ಲಿ ದೇವತಾಸ್ತ್ರೀಯರು ದಾನವಸ್ತ್ರೀಯರು ಗಂಧರ್ವಸ್ತ್ರೀಯರು ಮನುಷ್ಯ ಸ್ತ್ರೀಯರು ಇತ್ಯಾದಿ ಅನೇಕ ವಿಧವಿರುವರು.

ಆಸುರಿಯರು ಪಿಶಾಚಿಗಳು ರಾಕ್ಷಸಿಯರು ಎಂಬ ಸ್ತ್ರೀಯರ ಚರಿತೆಯು ಹೀಗಿರುವುದು. ಪತಿಯು ನ್ಯಾಯವನ್ನು ಹೇಳಲಿ ಅನ್ಯಾಯವನ್ನು ಹೇಳಲಿ ಹೇಗೆ ಇದ್ದರೂ ರಾಗದ್ವೇಷದಿಂದ ಬುದ್ಧಿದೋಷವುಳ್ಳವರಾಗಿಯೇ ಪತಿಯನ್ನು ಉಪಚರಿಸುವರು. ತಮ್ಮ ಧರ್ಮವನ್ನು ಬಿಟ್ಟು ಕೆಟ್ಟು ಹೋಗುವರು. ವಿಷಯದಲ್ಲಿ ಆಸಕ್ತರಾಗಿ ಪತಿಗೆ ವಿರುದ್ಧವಾಗಿಯೇ ಮಾತಾಡುವರು. ಕಾರ್ಯವನ್ನು ಕೆಡಿಸುವರು. ಹಿತವನ್ನು ಹೇಳಿದರೆ ಕೇಳಲಾರರು. ತಮ್ಮ ಬುದ್ಧಿಗೆ ತೋರಿದಂತೆ ಜೀವಿಸುವರು. ಕೆಲವು ಸಮಯ ಗುಣವುಳ್ಳವರಂತೆ ಪತಿಯ ಧರ್ಮವನ್ನು ಅನುಸರಿಸುವಂತೆ ಆಗಿ ಆಮೇಲೆ ಪುನಃ ಪಾಪಿಗಳಾಗುವರು. ವಿರುದ್ಧ ವ್ಯಾಪಾರವನ್ನು ಮಾಡುವರು. ಮರ್ಯಾದೆಯನ್ನು ಬಿಡುವರು. ಬಹುವೇಷವುಳ್ಳವರಾಗುವರು. ಎಷ್ಟು ಸಿಕ್ಕಿದರೂ ಸಾಕು ಎಂಬ ಬುದ್ಧಿರಹಿತರಾಗಿರುವರು. ಅತಿ ಅಸೂಯಾ ಕೋಪವುಳ್ಳವರಾಗಿರುವರು. ಭೋಗದಲ್ಲಿ ಪ್ರೀತಿಯುಳ್ಳವರಾಗಿರುವರು. ಹಿತಮಾಡುವವರನ್ನು ದ್ವೇಷಿಸುವರು ಹೆಚ್ಚಾಗಿ ಸುಳ್ಳು ಹೇಳುವರು. ದೊಡ್ಡವರಿಗೆ ವಿರೋಧವನ್ನು ಮಾಡುತ್ತಿರುವರು. ಇವರು ಅಸುರಸ್ತ್ರೀಯರು.

ಯಾವಾಗಲೂ ಅಪಕಾರವನ್ನು ಮಾಡುವರು. ಯಾವಾಗಲೂ ಜಗಳ ಮಾಡುತ್ತಲೇ ಇರುವರು. ಕಠಿಣ ಮಾತನ್ನೇ ಆಡುವರು. ದಯಾ ಲಜ್ಜೆಗಳಿಂದ ರಹಿತರಾಗಿರುವರು. ಗಂಡನಲ್ಲಿಯೂ ಬಂಧುಗಳಲ್ಲಿಯೂ ಮಕ್ಕಳಲ್ಲಿಯೂ ಸ್ನೇಹರಹಿತರಾಗಿರುವರು. ಯಾವಾಗಲೂ ಕೋಪಿಸಿಕೊಳ್ಳುವರು. ಕ್ರೂರರಾಗಿರುವರು. ನಗುವರು. ಅಳುವರು. ಪತಿಯನ್ನು ಅತಿಕ್ರಮಿಸುವರು. ಬಂಧುಗಳು ಬೆದರಿಸಿದರೆ ಮಾತ್ರ ಮನೆಯ ಕೆಲಸವನ್ನು ಮಾಡುವರು. ಅಥವಾ ಬಂಧುಗಳು ಬೆದರಿಸಿದರೂ ಮನೆಯ ಕೆಲಸ ವನ್ನು ಮಾಡದೆ ಆತ್ಮಹತ್ಯೆಯನ್ನು ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸುವರು ದಯಾರಹಿತರು. ಕುಟುಂಬದ ಪ್ರಯೋಜನವನ್ನು ಕೆಡಿಸುವರು. ಅನರ್ಥದಲ್ಲಿ ಆಸಕ್ತ

ರಾಗಿರುವರು. ಇನ್ನೊಬ್ಬರ ದಯಾರಹಿತರಾಗಿರುವರು. ಹೀಗೆ ಇರುವವರು ಪಿಶಾಚಸ್ತ್ರೀಯರು.

ಇನ್ನು ಕೆಲವರು ಮೋಹವುಳ್ಳವರಾಗಿರುವರು. ನಾಚಿಕೆ ಬಿಟ್ಟವರು. ಯಾವಾಗಲೂ ಅಳುವರು. ಪಾನ ಮಾಂಸದಲ್ಲಿ ಆಸಕ್ತರಾಗಿರುವರು. ಸುಳ್ಳು ಹೇಳುವರು. ನಗುವರು. ಅಳುವರು. ಅವರನ್ನು ಸಂತೋಷಪಡಿಸುವುದು ಅದು ಕಷ್ಟ. ಎಷ್ಟು ಹೊತ್ತಿಗೂ ಕೋಪಿಸಿಕೊಳ್ಳುವರು. ಯಾವಾಗಲೂ ಮಲಗಿಕೊಂಡೇ ಇರುವರು. ತಾಮಸಸ್ವಭಾವವುಳ್ಳವರು. ತತ್ವಾರ್ಥವನ್ನು ತಿಳಿಯದೆ ಇದ್ದವರು. ದೊಡ್ಡ ಹೊಟ್ಟೆಯುಳ್ಳವರು. ಅಂದರೆ ಎಷ್ಟು ತಿಂದರೂ ಸಾಲದು. ಕಾರ್ಯಗಳನ್ನು ಮೆಲ್ಲನೆ ಮಾಡುವರು. ನಾನಾ ವಿಧವಾದ ಅನ್ನವನ್ನು ಇನ್ನೊಬ್ಬರನ್ನು ಹೊಂದುವರು. ಲಜ್ಜಾಹೀನರಾಗಿ ಧರ್ಮದಲ್ಲಿ ಸಂದೇಹವುಳ್ಳವರಾಗಿ ವಿರುದ್ಧರಾಗಿಯೇ ಇರುವರು. ಈರೀತಿಯಾಗಿ ಇರುವವರು ರಾಕ್ಷಸ ಸ್ತ್ರೀಯರು.

ಈರೀತಿಯಾಗಿರುವ ಸ್ತ್ರೀಯರಿಗೆ ಪರಲೋಕದಲ್ಲಿ ಸುಖವಿಲ್ಲ. ನರಕದಿಂದ ಬಂದವರಿಗೆ ಮನುಷ್ಯ ಜನ್ಮವೇ ಬರಲಾರದು. ಬಂದರೂ ಅಲ್ಲಿ ಬಹು ಕಷ್ಟವನ್ನು ಹೊಂದುವರು. ದರಿದ್ರರಾಗಿಯೂ ತುಂಬಾ ಕ್ಲೇಶ ಉಳ್ಳವರಾಗಿಯೂ ಕುರೂಪಿಗಳಾಗಿಯೂ ಇನ್ನೊಬ್ಬರಿಂದ ನಿಂದ್ಯರಾಗಿಯೂ ವಿಧವೆಯರಾಗಿಯೂ ಆಗಿ ದುಃಖವನ್ನು ಹೊಂದುವರು. ವ್ಯಭಿಚಾರಣಿಸ್ತ್ರೀಯು ಪತಿಗೂ ತನ್ನ ವಂಶಕ್ಕೂ ಪಾಪವನ್ನು ಉಂಟುಮಾಡಿ ನೂರು ಸಾವಿರವರ್ಷಕಾಲ ನರಕವನ್ನು ಹೊಂದುವಳು. ಇರುವಾಗ ಎಲ್ಲಾ ಗಂಡನನ್ನು ಅವಮಾನ ಮಾಡಿ ಗಂಡನಿಗೆ ವಿರುದ್ಧಳಾಗಿ ಇದ್ದು ಗಂಡನ ಮರಣಾನಂತರ ಸಹಗಮನ ಮಾಡಿದರೂ ಅವಳು ಅಪಹಾಸಕ್ಕೇ ವಿಷಯಳಾಗುವಳು.

ಮೊದಲಿನಿಂದಲೂ ಪತಿಗೆ ಅನುಕೂಲಳಾಗಿ ಇದ್ದುಕೊಂಡು ಸಹಗಮನ ಮಾಡಿದರೆ ಅವಳು ಪವಿತ್ರಳಾಗಿ ಸ್ವರ್ಗವನ್ನು ಹೊಂದುವಳು. ಈರೀತಿಯಾದ ಸ್ತ್ರೀಯರು ದೇವತೆಗಳು ಇರುವ ಉತ್ತಮಲೋಕಕ್ಕೆ ಹೋಗುವರು. ಅಥವಾ ಪತಿಯ ಮರಣಾನಂತರದಲ್ಲಿ ವೈಧವ್ಯಧರ್ಮವನ್ನು ಅನುಸರಿಸಿಕೊಂಡು ಇರುವಳೋ ನಿತ್ಯವೂ ಸ್ನಾನವನ್ನು ಮಾಡುತ್ತಾ ಪತಿಯನ್ನು ಉದ್ದೇಶಿಸಿ ಧರ್ಮವನ್ನು ಮಾಡುವಳೋ ಅವಳು ಉತ್ತಮವಾದ ಪತಿಲೋಕವನ್ನು ಹೊಂದುವಳು.

ಈರೀತಿಯಾಗಿ ತಮ್ಮ ಮುಂಭಾಗದಲ್ಲಿ ಸ್ತ್ರೀಧರ್ಮವನ್ನು ಹೇಳಿದೆನು. ತಮ್ಮ

ಪ್ರೀತಿಪಾತ್ರಳಾದ ನಾನು ತಮ್ಮ ಮುಂಭಾಗದಲ್ಲಿ ಚಂಚಲ ಸ್ವಭಾವದಿಂದ ಹೇಳಿದ್ದನ್ನು ತಾವು ಕ್ಷಮಿಸಬೇಕು' ಎಂದು ಹೇಳಿದರು.

ಈಪ್ರಕಾರವಾಗಿ ಹೇಳಿದ ಲಜ್ಜೆಯಿಂದ ಕೂಡಿದ ಪಾರ್ವತಿದೇವಿಯನ್ನು ರುದ್ರದೇವರು ಸ್ತೋತ್ರಮಾಡಿದರು. ಋಷಿಗಳೂ ದೇವಗಂಧರ್ವರೂ ನದೀದೇವತೆಗಳೂ ಶಿರಸ್ಸಿನಿಂದ ನಮಸ್ಕರಿಸಿ ಪಾರ್ವತಿದೇವಿಯನ್ನು ಸ್ತೋತ್ರ ಮಾಡಿದರು. ತರುವಾಯ ಪಾರ್ವತೀದೇವಿಯೊಡನೆ ಪವಿತ್ರವಾದ ಈ ನಮ್ಮ ಸಂವಾದವನ್ನು ಯಾರು ಹೇಳುವರೋ ಅವರು ಸ್ವರ್ಗವನ್ನು ಹೊಂದುವರು. ಯಾರು ಶ್ರದ್ಧೆಯಿಂದ ಕೇಳುವರೋ ಅವರು ಕೀರ್ತಿಯನ್ನೂ ಆಯುಷ್ಯವನ್ನೂ ಆರೋಗ್ಯವನ್ನೂ ಉತ್ತಮಗತಿಯನ್ನು ಹೊಂದುವರು ಎಂದು ರುದ್ರದೇವರು ಹೇಳಿದರು.



## ಪತಿವ್ರತೆಯರ ಆಚಾರವು [1]

ಪತಿಯು ಕುರೂಪಿಯಾಗಿರಲೀ ಸುರೂಪಿಯಾಗಿರಲೀ, ಸದಾಚಾರಿಯಾಗಿರಲಿ, ದುರಾಚಾರಿಯಾಗಿರಲಿ, ರೋಗಿಷ್ಠನಾಗಿರಲಿ, ಪಿಶಾಚಿಯಂತೆ ಇರಲಿ, ಕೋಪಿಸಿಕೊಳ್ಳುವವನಾಗಿರಲಿ, ಮದ್ಯಪಾಯಿಯಾಗಿರಲಿ, ವೃದ್ಧನಾಗಿರಲಿ, ಪಂಡಿತನಾಗಿರಲಿ, ಮೂಕನಾಗಿರಲಿ, ಕುರುಡನಾಗಿರಲಿ, ಕಿವುಡನಾಗಿರಲಿ, ಕ್ರೂರನಾಗಿರಲಿ, ದರಿದ್ರನಾಗಿರಲಿ, ಲೋಭಿಯಾಗಿರಲಿ, ದುಷ್ಟನಾಗಿರಲಿ, ಭಯವುಳ್ಳವನಾಗಿರಲಿ, ಚೇಟಾಟವಾಡುವವನಾಗಿರಲಿ, ಸ್ತ್ರೀಲಂಪಟನಾಗಿರಲಿ, ಹೇಗೆ ಇದ್ದರೂ ಪತ್ರಿವ್ರತಾ ಸ್ತ್ರೀಯು ಅವನನ್ನು ದೇವತೆಯಂತೆ ಸತ್ಕರಿಸಬೇಕು. ವಾಕ್ ಕಾಯ ಕರ್ಮಗಳಿಂದ ಅವನನ್ನು ಸೇವಿಸಬೇಕು. ಅವನಿಗೆ ಯಾವಾಗಲೂ ವಿಷಮಕಾರ್ಯವನ್ನು ಮಾಡಬಾರದು. ಚಿಕ್ಕವಳಾಗಿರುವಾಗಲೂ ಯೌವನದಲ್ಲಿಯೂ ಮುದುಕಿಯಾಗಿರುವಾಗಲೂ ಹೆಂಗಸು ಯಾವಾಗಳೂ ಸ್ವತಂತ್ರಳಾಗಿ ಇರಬಾರದು. ಮನೆಯಲ್ಲಿಯೂ ಯಾವ ಕಾರ್ಯವನ್ನು ಸ್ವತಂತ್ರಳಾಗಿ ಮಾಡಬಾರದು. ಅಹಂಕಾರವನ್ನು ಕಾಮ ಕ್ರೋಧಗಳನ್ನು ಬಿಟ್ಟು ಯಾವಾಗಲೂ ಗಂಡನ ಮನಸ್ಸನ್ನು ಸಂತೋಷಪಡಿಸಬೇಕು.

ಪರಪುರುಷನು ತನ್ನನ್ನು ಕಾಮದಿಂದ ನೋಡಿದರೂ, ಪ್ರಿಯ ವಾಕ್ಯಗಳಿಂದ ಲೋಭಗೊಳಿಸಿದರೂ, ಜನರ ಸಮೂಹದಲ್ಲಿ ತನ್ನನ್ನು ಮುಟ್ಟಿದರೂ, ವಿಕಾರವನ್ನು

1. ಪ.ಪು. ಮತ್ತು ಮ.ಭಾ.ಅ.ಪ. ಅ-123

ಹೊಂದಬಾರದು. ಹಣದಿಂದ ಲೋಭಗೊಳಿಸಿದರೂ, ಪರಪುರುಷನನ್ನು ಯಾವ ಸ್ತ್ರೀಯು ಮನೋವಾಕ್ಕಾಯ ಕರ್ಮಗಳಿಂದ ಸೇವಿಸುವುದಿಲ್ಲವೋ ಅವಳೇ ಪತಿವ್ರತೆಯು. ಲೋಕಕ್ಕೆ ಆಭರಣದಂತೆ ಇರುವವಳು. ಇನ್ನೊಬ್ಬ ಪುರುಷನು ಬಂದು ಸಹಾಯ ಮಾಡುವೆನೆಂದು ಹೇಳಿ ಪ್ರಾರ್ಥನೆ ಮಾಡಿದರೂ ಬಲಾತ್ಕಾರ ಮಾಡಿದರೂ ವಸ್ತ್ರಾದಿಗಳನ್ನು ಕೊಟ್ಟರೂ ಹೆಂಗಸು ಅವನನ್ನು ಸೇವಿಸಬಾರದು. ಪರಪುರುಷನು ತನ್ನನ್ನು ನೋಡಿ ಹೆಂಗಸು ತಾನು ಅವನನ್ನು ನೋಡಲೇಬಾರದು. ಅವನು ನೆಗಿಸಿದರೂ ತಾನು ನಗಬಾರದು. ಮಾತಾಡಿಸಿದರೆ ಮಾತಾಡಬಾರದು. ರೂಪಯೌವನವುಳ್ಳವರು ಗಾಯನದಲ್ಲಿ ಸಮರ್ಥಳಾಗಿರುವವಳು ಸುಂದರನಾದ ಪರಪುರುಷನನ್ನು ನೋಡ ವಿಕಾವನ್ನು ಹೊಂದಬಾರದು. ದೇವತೆಯೋ ಮನುಷ್ಯನೋ ಗಂಧರ್ವನೋ ಪತಿವ್ರತೆಯರಿಗೆ ಗಂಡನಿಂದ ಇತರನಾದವನು ಪ್ರಿಯನಲ್ಲ. ಹೆಂಡತಿಯು ಗಂಡನಿಗೆ ಯಾವಾಗಲೂ ಅಪ್ರಿಯವನ್ನು ಮಾಡಬಾರದು. ಗಂಡನು ಊಟಮಾಡಿದರೆ ಆಮೇಲೆ ತಾನು ಊಟಮಾಡಬೇಕು. ಅವನು ದುಃಖಪಟ್ಟರೆ ತಾನೂ ದುಃಖಪಡಬೇಕು. ಸಂತೋಷದಿಂದ ಇದ್ದರೆ ತಾನೂ ಸಂತೋಷದಿಂದ ಇರಬೇಕು. ಅವನು ಪರಸ್ಥಳಕ್ಕೆ ಹೋದರೆ ಕಪ್ಪಾದ ವಸ್ತ್ರವನ್ನು ಧರಿಸಿಕೊಂಡು ಅಲಂಕಾರ ರಹಿತಳಾಗಿ ಇರಬೇಕು. ಗಂಡನು ಮಲಗಿದ ಮೇಲೆ ಮಲಗಬೇಕು. ಅವನು ಏಳುವ ಮೊದಲೇ ಏಳಬೇಕು. ಗಂಡನು ಮೃತನಾದರೆ ಸಹಗಮನವನ್ನು ಮಾಡಬೇಕು. ಮನಸ್ಸಿನಲ್ಲಿಯೂ ಯಾವ ಪುರುಷನನ್ನು ಅಪೇಕ್ಷಿಸಬಾರದು. ಅತ್ತೆ ಮಾವಂದಿರಲ್ಲಿಯೂ ಪತಿಯಲ್ಲಿಯೂ ವಿಶೇಷವಾಗಿ ಭಕ್ತಿಯನ್ನು ಮಾಡಬೇಕು. ಧರ್ಮಕಾರ್ಯದಲ್ಲಿ ಅನುಕೂಲಳಾಗಿ ಇರಬೇಕು. ಹಣದ ವಿಷಯದಲ್ಲಿ ಮಿತವಾಗಿ ವೆಚ್ಚಮಾಡಬೇಕು. ವಿಹಾರ ವಿಷಯದಲ್ಲಿಯೂ ಗಂಡನಿಗೆ ಅನುಕೂಲಳಾಗಿ ಇರಬೇಕು. ಶುದ್ಧಳಾಗಿರಬೇಕು. ಗಂಡನ ಹತ್ತಿರ ಪ್ರಿಯ ವಾಗಿಯೇ ಮಾತಾಡಬೇಕು. ಮನೆಯನ್ನು ಅಲಂಕಾರ ಮಾಡಿ ಇಟ್ಟುಕೊಂಡಿರಬೇಕು. ಮಂಗಲಕಾರ್ಯವನ್ನು ಮಾಡುತ್ತಿರಬೇಕು. ಮನೆಯ ಸಾಮಾನುಗಳನ್ನು ಶುದ್ಧವಾಗಿ ಇಟ್ಟುಕೊಳ್ಳಬೇಕು. ಗಂಡನು ಹೊರಗೆ ಹೋಗಿ ಬಂದಾಗ ಎದ್ದು ನಿಂತು ಬನ್ನಿರಿ ಎಂದು ಹೇಳಿ ಕಾಲುತೊಳೆಯಲಿಕ್ಕೆ ನೀರನ್ನು ಕೊಟ್ಟು ಕೂತುಕೊಳ್ಳಲಿಕ್ಕೆ ಆಸನವನ್ನು ಕೊಡಬೇಕು. ನಿಯಮದಿಂದ ಇರಬೇಕು. ಮನೆಯ ಪಾತ್ರೆಗಳೆಲ್ಲವನ್ನೂ ಬೆಳ್ಳಗಾಗಿ ಇಟ್ಟುಕೊಳ್ಳಬೇಕು. ಗಂಡನಿಗೆ ಸರಿಯಾದ ಕಾಲದಲ್ಲಿ ರುಚಿಕರವಾದ ಅಡಿಗೆಯನ್ನು ಮಾಡಿ ಬಡಿಸಬೇಕು. ಮನೆಯ ಅಕ್ಕಿಬೇಳೆ ಮೊದಲಾದ ಪದಾರ್ಥಗಳನ್ನು

ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು. ಮನೆಯಲ್ಲಿ ಕುಪ್ಪೆ ಮೊದಲಾದವು ಇಲ್ಲದೆ ಶುದ್ಧವಾಗಿ ಇಟ್ಟುಕೊಳ್ಳಬೇಕು. ಗುರುಗಳಿಗೂ ಮಕ್ಕಳಿಗೂ ಮಿತ್ರರಿಗೂ ಬಂಧು ಗಳಿಗೂ ಕೆಲಸ ಮಾಡುವವರಿಗೂ ಆಶ್ರಯಿಸಿದವರಿಗೂ ಭೃತ್ಯರಿಗೂ ದಾಸದಾಸಿಯರಿಗೂ ಅತಿಥಿಗಳಿಗೂ ಅಭ್ಯಾಗತರಿಗೂ ಭಿಕ್ಷುಕರಿಗೂ ಸಂನ್ಯಾಸಿಗಳಿಗೂ ಬಂದವರಿಗೆ ಆಸನ ಭೋಜನ ದಾನ ಬಹುಮಾನ ಪ್ರಿಯವಾಗಿ ಮಾತಾಡೋಣ ಇತ್ಯಾದಿಗಳನ್ನು ಅವರವರ ಯೋಗ್ಯತಾನುಸಾರವಾಗಿ ಮಾಡಬೇಕು. ಈರೀತಿಯಾಗಿ ಯಾವ ಕಾರ್ಯವನ್ನೂ ನಿರ್ವಾಹಮಾಡಲಿಕ್ಕೆ ಸಮರ್ಥಳಾಗಿರಬೇಕು. ಮನೆಯ ಖರ್ಚಿಗೆ ಬೇಕಾದ ಹಣವನ್ನು ಗಂಡನು ಹೆಂಡತಿಯ ಕೈಯಲ್ಲಿ ಕೊಡಬೇಕು. ಅವಳು ತನ್ನ ಬುದ್ಧಿವಂತಿಕೆಯಿಂದ ಮನೆಯ ಖರ್ಚನ್ನು ನೋಡಿ ಕೊಂಡು ಸ್ವಲ್ಪ ಹಣವನ್ನು ಉಳಿಸಬೇಕು. ದಾನಧರ್ಮಗಳನ್ನು ಮಾಡಲಿಕ್ಕೆಂದು ಗಂಡನು ಕೊಟ್ಟ ಹಣದಲ್ಲಿ ಲೋಭದಿಂದ ಸ್ವಲ್ಪವೂ ಉಳಿಸಬಾರದು. ಗಂಡನ ಆಜ್ಞೆಯಿಲ್ಲದೆ ಬಂಧುಗಳಿಗೆ ಸ್ವಲ್ಪ ಹಣವನ್ನು ಕೊಡಬಾರದು. ಇನ್ನೊಬ್ಬರ ಹತ್ತಿರ ಮಾತಾಡುವುದು ಯಾವಾಗಲೂ ಸಂತೋಷವಿಲ್ಲದಿರುವುದು, ಇನ್ನೊಬ್ಬರ ಪುರುಷರ ವ್ಯಾಪಾರವನ್ನು ಹೇಳುವುದು, ಅತಿಯಾಗಿ ನಗುವುದು, ಅತಿಯಾಗಿ ಕೋಪಿಸಿ ಕೊಳ್ಳುವುದು, ಗಂಡನು ತನ್ನ ಮೇಲೆ ಕೋಪಿಸಿಕೊಳ್ಳುವಂತೆ ನಡೆದುಕೊಳ್ಳುವುದು ಇತ್ಯಾದಿಗಳನ್ನು ಹೆಂಗಸು ಮಾಡ ಬಾರದು. ಗಂಡನು ಯಾವ ಪದಾರ್ಥಗಳನ್ನು ತಿನ್ನುವುದಿಲ್ಲವೋ ಯಾವ ಪಾನೀಯ ವನ್ನು ಕುಡಿಯುವುದಿಲ್ಲವೋ, ಯಾವುದನ್ನು ಭೋಜನ ಮಾಡುವುದಿಲ್ಲವೋ ಅದೆಲ್ಲವನ್ನು ಪತಿವ್ರತೆಯು ಬಿಡಬೇಕು. ಗಂಡನು ಪರಸ್ಥಳಕ್ಕೆ ಹೋಗಿರುವಾಗ ಚೆನ್ನಾಗಿ ಹಲ್ಲು ಉಜ್ಜಿಕೊಳ್ಳೋಣ, ತಲೆಯನ್ನು ಬಾಚಿ ಕಟ್ಟಿಕೊಳ್ಳೋಣ, ಹೊಟ್ಟೆ ತುಂಬಾ ಭೋಜನ ಮಾಡೋಣ, ಆಸನ, ನಿದ್ರಾ, ಒಳ್ಳೇ ಸೀರೆಗಳನ್ನು ಉಡೋಣ, ಅಲಂಕಾರ ಮಾಡಿಕೊಳ್ಳೋಣ ಇತ್ಯಾದಿಗಳನ್ನು ಬಿಡಬೇಕು. ಹಾಗೆಯೇ ಎಣ್ಣೆ ಹಚ್ಚಿ ಎರಕೊಳ್ಳಬಾರದು.

ತ್ರೇತಾಯುಗವನ್ನು ಆರಂಭಿಸಿ ಹೆಂಗಸರ ಪ್ರತಿಯೊಂದು ತಿಂಗಳಲ್ಲಿ ಮುಟ್ಟಾಗುವರು. ಮೊದಲಿನ ದಿವಸ ಮುಟ್ಟಾದ ಹೆಂಗಸು ಚಂಡಾಲಸ್ತ್ರೀಗೆ ಸಮಾನಳು. ಎರಡನೇ ದಿನದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದವಳಿಗೆ ಸಮಾನಳು. ಮೂರನೇ ದಿನದಲ್ಲಿ ಅಗಸನ ಸ್ತ್ರೀಗೆ ಸಮಾನಳು. ನಾಲ್ಕನೇ ದಿನದಲ್ಲಿ ಶುದ್ಧಿಯನ್ನು ಹೊಂದುವಳು. ಮುಟ್ಟಾದ ಸ್ತ್ರೀಯು ಸ್ನಾನವನ್ನು, ಶೌಚವನ್ನು, ಹಾಡು ಹೇಳೋಣವನ್ನು, ಅಳುವುದನ್ನು, ನಗುವುದನ್ನು, ಪ್ರಯಾಣವನ್ನು, ಅಭ್ಯಂಗವನ್ನು,

ಚೇಟಾಟವನ್ನು ಗಂಧವನ್ನು ಹಗಲಲ್ಲಿ ನಿದ್ರೆ ಮಾಡುವುದನ್ನು, ಹಲ್ಲು ಉಜ್ಜಿಕೊಳ್ಳುವುದನ್ನು, ಮಾನಸಪುರುಷಸಂಬಂಧವನ್ನು, ಬಾಯಿಯಿಂದ ದೇವರ ಸ್ತೋತ್ರ ಮಾಡುವುದನ್ನು, ದೇವತೆಗಳಿಗೆ ನಮಸ್ಕಾರ ಮಾಡುವುದನ್ನು, ಮತ್ತೊಬ್ಬ ಮುಟ್ಟಾದ ಸ್ತ್ರೀಯನ್ನು ಮುಟ್ಟುವುದನ್ನು, ಅವಳೊಡನೆ ಮಾತಾಡುವುದನ್ನು ಮಾಡ ಬಾರದು. ಮುಟ್ಟಾದವಳು ಸ್ನಾನಮಾಡಿ ಇನ್ನೊಬ್ಬ ಪುರುಷನನ್ನು ನೋಡಬಾರದು. ಸೂರ್ಯದೇವರನ್ನು ನೋಡಬೇಕು. ಪಂಚಗವ್ಯವನ್ನು ತೆಗೆದುಕೊಳ್ಳಬೇಕು. ಅಥವಾ ಸ್ವಲ್ಪ ಹಾಲನ್ನು ಕುಡಿಯಬೇಕು. ನಿಯಮದಿಂದ ಇರಬೇಕು. ಅಲಂಕಾರ ಮಾಡಿ ಕೊಂಡು ಇಂದ್ರಿಯನಿಗ್ರಹವುಳ್ಳವಳಾಗಿ ಗಂಡನ ಪ್ರಿಯ ಹಿತಗಳಲ್ಲಿ ಆಸಕ್ತಳಾಗಿ ಇರಬೇಕು. ಗರ್ಭಿಣಿಯಾದಾಗ ತನ್ನ ರಕ್ಷೆಯನ್ನು ಮಾಡಿಕೊಂಡು ಅಲಂಕಾರ ಮಾಡಿಕೊಂಡು ವಾಸ್ತುದೇವತೆಯನ್ನು ಪೂಜಿಸುವವಳಾಗಿ ಪ್ರಸನ್ನವಾದ ಮುಖವುಳ್ಳವ ಳಾಗಿ ಗಂಡನ ಪ್ರಿಯಹಿತದಲ್ಲಿ ಆಸಕ್ತಳಾಗಿ ಇರಬೇಕು. ಕೆಟ್ಟ ಸ್ತ್ರೀಯರ ಹತ್ತಿರ ಮಾತಾಡಬಾರದು. ಮೊರದ ಗಾಳಿಯನ್ನು ಸೇವಿಸಬಾರದು. ಮಕ್ಕಳು ಸತ್ತು ಹೋಗುವ ಹೆಂಗಸಿನ ಸಹವಾಸವನ್ನು ಮಾಡಬಾರದು. ಇನ್ನೊಬ್ಬರ ಅಡಿಗೆಯನ್ನು ಮಾಡಬಾರದು. ನಿಂದ್ಯವಾದ ವಸ್ತುವನ್ನು ನೋಡಬಾರದು. ಭಯಂಕರವಾದ ಕಥೆಯನ್ನು ಕೇಳಬಾರದು. ಹೆಚ್ಚಾದ ಅತ್ಯುಷ್ಣವಾದ ಅಜೀರ್ಣಕಾರಿಯಾದ ಆಹಾರವನ್ನು ಸ್ವೀಕರಿಸಬಾರದು.

ಈರೀತಿಯಾಗಿ ನಿಯಮದಿಂದ ಇದ್ದರೆ ಒಳ್ಳೇ ಮಗನನ್ನು ಹೊಂದುವಳು. ಇಲ್ಲದಿದ್ದರೆ ಗರ್ಭವು ಸ್ರವಿಸಿಹೋಗುವುದು. ಅಥವಾ ಪ್ರಸವಕ್ಕೆ ಬಹಳ ಶ್ರಮವಾಗಬಹುದು. ಗಂಡನಿಗೆ ಯಾವಾಗಲೂ ಹಿತವನ್ನು ಮಾಡಬೇಕು. ಅವನು ಬರುವಾಗ ಅಲಂಕಾರ ಮಾಡಿಕೊಂಡು ಇರಬೇಕು. ಸಪತ್ನಿಯೊಡನೆ ಮಾತ್ಸರ್ಯ ಪಡಬಾರದು. ಜಗಳವಾಡಬಾರದು. ಇನ್ನೊಬ್ಬರ ಪುರುಷನ ಹೆಸರನ್ನು ಹೇಳ ಬಾರದು. ಇನ್ನೊಬ್ಬ ಪುರುಷನನ್ನು ವರ್ಣಿಸಬಾರದು. ಗಂಡನಿಂದ ದೂರದಲ್ಲಿ ವಾಸಮಾಡಬಾರದು. ಗಂಡನ ಸಮೀಪದಲ್ಲೇ ಇರಬೇಕು. ಅವನು ಹೇಳಿದ ಸ್ಥಳದಲ್ಲಿ ಅವನಿಗೆ ಅಭಿಮುಖಿಯಾಗಿ ಇರಬೇಕು. ಗಂಡನು ತನ್ನ ಬಳಿಯಿರುವಾಗ ಬೇರೆ ದಿಕ್ಕುಗಳನ್ನು ನೋಡಬಾರದು. ಬೇರೆ ಪುರುಷನನ್ನು ನೋಡಬಾರದು. ವಿಲಾಸ ಗಳಿಂದ ಗಂಡನ ಮುಖವನ್ನೇ ನೋಡಬೇಕು. ಗಂಡನು ಯಾವುದಾದರೂ ಕಥೆಯನ್ನು ಹೇಳುತ್ತಿದ್ದರೆ ಅದನ್ನು ಆದರದಿಂದ ಕೇಳಬೇಕು. ಗಂಡನು ಮಾತಾಡುತ್ತಿರುವಾಗ ತಾನು ಮಧ್ಯೆ ಬೇರೆ ಮಾತನ್ನು ಆಡಬಾರದು. ಗಂಡನು

ವಿಹರಿಸುವ ಸ್ಥಳಕ್ಕೆ ಕೂಗಿದರೆ ಬೇಗನೇ ಉತ್ಸುಕಳಾಗಿ ಹೋಗಬೇಕು. ಗಂಡನು ಉತ್ಸಾಹದಿಂದ ಹಾಡುತ್ತಿದ್ದರೆ ಅದನ್ನು ಸಂತೋಷದಿಂದ ಕೇಳಬೇಕು. ಅವನು ನರ್ತನಮಾಡಿದರೆ ಅದನ್ನು ಸಂತೋಷದಿಂದ ನೋಡಬೇಕು. ಅವನು ತನ್ನ ವಿದ್ಯಾಸಾಮರ್ಥ್ಯ ಮೊದಲಾದವನ್ನು ತೋರಿಸಿದರೆ ಸಂತೋಷದಿಂದ ನೋಡ ಬೇಕು. ಗಂಡನ ಸಮೀಪದಲ್ಲಿ ದುಃಖವನ್ನು ತೋರಿಸುತ್ತಾ ನಿಲ್ಲಬಾರದು. ಗಂಡ ನೊಡನೆ ಜಗಳವನ್ನು ಆಡಬಾರದು. ತನಗೋಸ್ಕರವೇ ತನ್ನ ಬಂಧುಗಳಿ ಗೋಸ್ಕರವೋ ಪತ್ನಿಗಾಗಿಯೋ ಗಂಡನೊಡನೆ ಜಗಳವಾಡಬಾರದು. ಗಂಡನು ಬೆದರಿಸಿದರೂ ನಿಂದಿಸಿದರೂ ಬಡಿದರೂ ವ್ಯಥೆಯುಳ್ಳವಳಾದರೂ ಭಯವನ್ನು ಬಿಟ್ಟು ಗಂಡನನ್ನೇ ಆಲಿಂಗನ ಮಾಡಿಕೊಳ್ಳಬೇಕು. ಗಟ್ಟಿಯಾಗಿ ಅಳಬಾರದು. ಇನ್ನೊಬ್ಬರನ್ನು ಕೂಗಿಕೊಳ್ಳಬಾರದು. ತನ್ನ ಮನೆಯಿಂದ ಹೊರಗೆ ಓಡಿಹೋಗ ಬಾರದು. ಗಂಡನೊಡನೆ 'ನಾನು ನಿಮ್ಮನ್ನು ಇಚ್ಛಿಸುವುದಿಲ್ಲ ಇತ್ಯಾದಿ ವೈರಾಗ್ಯಕರ ಮಾತನ್ನು ಆಡಬಾರದು. ಉತ್ಸವಾದಿಗಳಲ್ಲಿ ಬಂಧುಗಳ ಮನೆಗೆ ಹೋಗುವುದಾದರೆ ಗಂಡನ ಆಜ್ಞೆಯನ್ನು ಪಡೆದು ಯಾರಾದರೂ ದೊಡ್ಡವರಿಂದ ರಕ್ಷಿತಳಾಗಿ ಹೋಗಬೇಕು. ಅಲ್ಲಿ ಬಹುದಿವಸ ಇರಬಾರದು. ಬೇಗನೇ ಬಂದುಬಿಡಬೇಕು. ಗಂಡನು ಎಲ್ಲಿಗಾದರೂ ಪ್ರಯಾಣ ಮಾಡುವಾಗ ಅಮಂಗಳ ಮಾತನ್ನು ಆಡಬಾರದು. ನೀವು ಹೋಗಬೇಡಿರಿ ಎಂದು ಹೇಳಬಾರದು. ಅಳಬಾರದು. ಗಂಡನು ದೇಶಾಂತರಕ್ಕೆ ಹೋಗಿರುವಾಗ ಅಭ್ಯಂಗ ಮೊದಲಾದವನ್ನು ಮಾಡದೆ ಗಂಡನು ಜೀವಕ್ಕೆ ಇಷ್ಟು ಹೋಗಿರದಿದ್ದರೆ ಜೀವನಕ್ಕೆ ಎಷ್ಟು ಬೇಕೋ ಅಷ್ಟೇ ಕಾರ್ಯವನ್ನು ಮಾಡುತ್ತಿರಬೇಕು. ಗಂಡನು ತನ್ನ ಜೀವನಕ್ಕೆ ಬೇಕಾದಷ್ಟು ಮಾಡಿ ಇಟ್ಟು ಹೋಗಿದ್ದರೆ ಅದರಿಂದಲೇ ಜೀವಿಸಬೇಕು. ಗಂಡನು ಪರಸ್ಥಳಕ್ಕೆ ಹೋಗಿರುವಾಗ ಅತ್ತೆ ಮಾವಂದಿರ ಬಳಿಯಲ್ಲಿ ನಿದ್ರೆಯನ್ನು ಮಾಡಬೇಕು. ಇನ್ನೊಬ್ಬರ ಬಳಿಯಲ್ಲಿ ಮಲಗಬಾರದು. ಪ್ರತಿನಿತ್ಯವೂ ಗಂಡನ ವೃತ್ತಾಂತವನ್ನು ವಿಚಾರಿಸುತ್ತಿರಬೇಕು. ಗಂಡನ ಕ್ಷೇಮವನ್ನು ತಿಳಿಯುವುದಕ್ಕಾಗಿ ದೂತರನ್ನು ಕಳುಹಿಸಬೇಕು. ದೇವತೆಗಳೊಡನೆ ಗಂಡನಿಗೆ ಕ್ಷೇಮವಾಗಲಿ ಎಂದು ಪ್ರಾರ್ಥಿಸ ಬೇಕು. ಅಲಂಕಾರ ಮಾಡಿಕೊಳ್ಳಬಾರದು. ಹಾಳುಸೀರೆಯನ್ನು ಉಟ್ಟುಕೊಳ್ಳಬೇಕು. ಕಣ್ಣಿಗೆ ಕಪ್ಪು ಹಚ್ಚಿಕೊಳ್ಳಬಾರದು. ಗಂಧಪುಷ್ಪಾದಿಗಳನ್ನು ಧರಿಸಬಾರದು. ಉಗುರು ಕೂದಲುಗಳನ್ನು ಅಲಂಕರಿಸಿಕೊಳ್ಳಬಾರದು. ಹಲ್ಲುಗಳನ್ನು ಬೆಳ್ಳಗಾಗಿ ಉಜ್ಜಿಕೊಳ್ಳ ಬಾರದು. ತಾಂಬೂಲವನ್ನು ಸ್ವೀಕರಿಸಬಾರದು. ಸೊಂಬೇರಿತನವಿರಬಾರದು.

ಚೀಟಾಟವನ್ನು ಗಂಧವನ್ನು ಹಗಲಲ್ಲಿ ನಿದ್ರೆ ಮಾಡುವುದನ್ನು, ಹಲ್ಲು ಉಜ್ಜಿಕೊಳ್ಳುವುದನ್ನು, ಮಾನಸಪುರುಷಸಂಬಂಧವನ್ನು, ಬಾಯಿಯಿಂದ ದೇವರ ಸ್ತೋತ್ರ ಮಾಡುವುದನ್ನು, ದೇವತೆಗಳಿಗೆ ನಮಸ್ಕಾರ ಮಾಡುವುದನ್ನು, ಮತ್ತೊಬ್ಬ ಮುಟ್ಟಾದ ಸ್ತ್ರೀಯನ್ನು ಮುಟ್ಟುವುದನ್ನು, ಅವಳೊಡನೆ ಮಾತಾಡುವುದನ್ನು ಮಾಡ ಬಾರದು. ಮುಟ್ಟಾದವಳು ಸ್ನಾನಮಾಡಿ ಇನ್ನೊಬ್ಬ ಪುರುಷನನ್ನು ನೋಡಬಾರದು. ಸೂರ್ಯದೇವರನ್ನು ನೋಡಬೇಕು. ಪಂಚಗವ್ಯವನ್ನು ತೆಗೆದುಕೊಳ್ಳಬೇಕು. ಅಥವಾ ಸ್ವಲ್ಪ ಹಾಲನ್ನು ಕುಡಿಯಬೇಕು. ನಿಯಮದಿಂದ ಇರಬೇಕು. ಅಲಂಕಾರ ಮಾಡಿ ಕೊಂಡು ಇಂದ್ರಿಯನಿಗ್ರಹವುಳ್ಳವಳಾಗಿ ಗಂಡನ ಪ್ರಿಯ ಹಿತಗಳಲ್ಲಿ ಆಸಕ್ತಳಾಗಿ ಇರಬೇಕು. ಗರ್ಭಿಣಿಯಾದಾಗ ತನ್ನ ರಕ್ಷೆಯನ್ನು ಮಾಡಿಕೊಂಡು ಅಲಂಕಾರ ಮಾಡಿಕೊಂಡು ವಾಸ್ತುದೇವತೆಯನ್ನು ಪೂಜಿಸುವಳಾಗಿ ಪ್ರಸನ್ನವಾದ ಮುಖವುಳ್ಳವ ಳಾಗಿ ಗಂಡನ ಪ್ರಿಯಹಿತದಲ್ಲಿ ಆಸಕ್ತಳಾಗಿ ಇರಬೇಕು. ಕೆಟ್ಟ ಸ್ತ್ರೀಯರ ಹತ್ತಿರ ಮಾತಾಡಬಾರದು. ಮೊರದ ಗಾಳಿಯನ್ನು ಸೇವಿಸಬಾರದು. ಮಕ್ಕಳು ಸತ್ತು ಹೋಗುವ ಹೆಂಗಸಿನ ಸಹವಾಸವನ್ನು ಮಾಡಬಾರದು. ಇನ್ನೊಬ್ಬರ ಅಡಿಗೆಯನ್ನು ಮಾಡಬಾರದು. ನಿಂದ್ಯವಾದ ವಸ್ತುವನ್ನು ನೋಡಬಾರದು. ಭಯಂಕರವಾದ ಕಥೆಯನ್ನು ಕೇಳಬಾರದು. ಹೆಚ್ಚಾದ ಅತ್ಯುಷ್ಣವಾದ ಅಜೀರ್ಣಕಾರಿಯಾದ ಆಹಾರವನ್ನು ಸ್ವೀಕರಿಸಬಾರದು.

ಈರೀತಿಯಾಗಿ ನಿಯಮದಿಂದ ಇದ್ದರೆ ಒಳ್ಳೇ ಮಗನನ್ನು ಹೊಂದುವಳು. ಇಲ್ಲದಿದ್ದರೆ ಗರ್ಭವು ಸ್ರವಿಸಿಹೋಗುವುದು. ಅಥವಾ ಪ್ರಸವಕ್ಕೆ ಬಹಳ ಶ್ರಮವಾಗಬಹುದು. ಗಂಡನಿಗೆ ಯಾವಾಗಲೂ ಹಿತವನ್ನು ಮಾಡಬೇಕು. ಅವನು ಬರುವಾಗ ಅಲಂಕಾರ ಮಾಡಿಕೊಂಡು ಇರಬೇಕು. ಸಪತ್ನಿಯೊಡನೆ ಮಾತ್ಸರ್ಯ ಪಡಬಾರದು. ಜಗಳವಾಡಬಾರದು. ಇನ್ನೊಬ್ಬರ ಪುರುಷನ ಹೆಸರನ್ನು ಹೇಳ ಬಾರದು. ಇನ್ನೊಬ್ಬ ಪುರುಷನನ್ನು ವರ್ಣಿಸಬಾರದು. ಗಂಡನಿಂದ ದೂರದಲ್ಲಿ ವಾಸಮಾಡಬಾರದು. ಗಂಡನ ಸಮೀಪದಲ್ಲೇ ಇರಬೇಕು. ಅವನು ಹೇಳಿದ ಸ್ಥಳದಲ್ಲಿ ಅವನಿಗೆ ಅಭಿಮುಖಿಯಾಗಿ ಇರಬೇಕು. ಗಂಡನು ತನ್ನ ಬಳಿಯಿರುವಾಗ ಬೇರೆ ದಿಕ್ಕುಗಳನ್ನು ನೋಡಬಾರದು. ಬೇರೆ ಪುರುಷನನ್ನು ನೋಡಬಾರದು. ವಿಲಾಸ ಗಳಿಂದ ಗಂಡನ ಮುಖವನ್ನೇ ನೋಡಬೇಕು. ಗಂಡನು ಯಾವುದಾದರೂ ಕಥೆಯನ್ನು ಹೇಳುತ್ತಿದ್ದರೆ ಅದನ್ನು ಆದರದಿಂದ ಕೇಳಬೇಕು. ಗಂಡನು ಮಾತಾಡುತ್ತಿರುವಾಗ ತಾನು ಮಧ್ಯೆ ಬೇರೆ ಮಾತನ್ನು ಆಡಬಾರದು. ಗಂಡನು

ವಿಹರಿಸುವ ಸ್ಥಳಕ್ಕೆ ಕೂಗಿದರೆ ಬೇಗನೇ ಉತ್ಸುಕಳಾಗಿ ಹೋಗಬೇಕು. ಗಂಡನು ಉತ್ಸಾಹದಿಂದ ಹಾಡುತ್ತಿದ್ದರೆ ಅದನ್ನು ಸಂತೋಷದಿಂದ ಕೇಳಬೇಕು. ಅವನು ನರ್ತನಮಾಡಿದರೆ ಅದನ್ನು ಸಂತೋಷದಿಂದ ನೋಡಬೇಕು. ಅವನು ತನ್ನ ವಿದ್ಯಾಸಾಮರ್ಥ್ಯ ಮೊದಲಾದವನ್ನು ತೋರಿಸಿದರೆ ಸಂತೋಷದಿಂದ ನೋಡಬೇಕು. ಗಂಡನ ಸಮೀಪದಲ್ಲಿ ದುಃಖವನ್ನು ತೋರಿಸುತ್ತಾ ನಿಲ್ಲಬಾರದು. ಗಂಡನೊಡನೆ ಜಗಳವನ್ನು ಆಡಬಾರದು. ತನಗೋಸ್ಕರವೇ ತನ್ನ ಬಂಧುಗಳಿಗೋಸ್ಕರವೋ ಪತ್ನಿಗಾಗಿಯೋ ಗಂಡನೊಡನೆ ಜಗಳವಾಡಬಾರದು. ಗಂಡನು ಬೆದರಿಸಿದರೂ ನಿಂದಿಸಿದರೂ ಬಡಿದರೂ ವ್ಯಥೆಯುಳ್ಳವಳಾದರೂ ಭಯವನ್ನು ಬಿಟ್ಟು ಗಂಡನನ್ನೇ ಆಲಿಂಗನ ಮಾಡಿಕೊಳ್ಳಬೇಕು. ಗಟ್ಟಿಯಾಗಿ ಅಳಬಾರದು. ಇನ್ನೊಬ್ಬರನ್ನು ಕೂಗಿಕೊಳ್ಳಬಾರದು. ತನ್ನ ಮನೆಯಿಂದ ಹೊರಗೆ ಓಡಿಹೋಗಬಾರದು. ಗಂಡನೊಡನೆ 'ನಾನು ನಿಮ್ಮನ್ನು ಇಚ್ಛಿಸುವುದಿಲ್ಲ ಇತ್ಯಾದಿ ವೈರಾಗ್ಯಕರ ಮಾತನ್ನು ಆಡಬಾರದು. ಉತ್ಸವಾದಿಗಳಲ್ಲಿ ಬಂಧುಗಳ ಮನೆಗೆ ಹೋಗುವುದಾದರೆ ಗಂಡನ ಆಜ್ಞೆಯನ್ನು ಪಡೆದು ಯಾರಾದರೂ ದೊಡ್ಡವರಿಂದ ರಕ್ಷಿತಳಾಗಿ ಹೋಗಬೇಕು. ಅಲ್ಲಿ ಬಹುದಿವಸ ಇರಬಾರದು. ಬೇಗನೇ ಬಂದುಬಿಡಬೇಕು. ಗಂಡನು ಎಲ್ಲಿಗಾದರೂ ಪ್ರಯಾಣ ಮಾಡುವಾಗ ಅಮಂಗಳ ಮಾತನ್ನು ಆಡಬಾರದು. ನೀವು ಹೋಗಬೇಡಿರಿ ಎಂದು ಹೇಳಬಾರದು. ಅಳಬಾರದು. ಗಂಡನು ದೇಶಾಂತರಕ್ಕೆ ಹೋಗಿರುವಾಗ ಅಭ್ಯಂಗ ಮೊದಲಾದವನ್ನು ಮಾಡದೆ ಗಂಡನು ಜೀವಕ್ಕೆ ಇಷ್ಟು ಹೋಗಿರದಿದ್ದರೆ ಜೀವನಕ್ಕೆ ಎಷ್ಟು ಬೇಕೋ ಅಷ್ಟೇ ಕಾರ್ಯವನ್ನು ಮಾಡುತ್ತಿರಬೇಕು. ಗಂಡನು ತನ್ನ ಜೀವನಕ್ಕೆ ಬೇಕಾದಷ್ಟು ಮಾಡಿ ಇಟ್ಟು ಹೋಗಿದ್ದರೆ ಅದರಿಂದಲೇ ಜೀವಿಸಬೇಕು. ಗಂಡನು ಪರಸ್ಥಳಕ್ಕೆ ಹೋಗಿರುವಾಗ ಅತ್ತೆ ಮಾವಂದಿರ ಬಳಿಯಲ್ಲಿ ನಿದ್ರೆಯನ್ನು ಮಾಡಬೇಕು. ಇನ್ನೊಬ್ಬರ ಬಳಿಯಲ್ಲಿ ಮಲಗಬಾರದು. ಪ್ರತಿನಿತ್ಯವೂ ಗಂಡನ ವೃತ್ತಾಂತವನ್ನು ವಿಚಾರಿಸುತ್ತಿರಬೇಕು. ಗಂಡನ ಕ್ಷೇಮವನ್ನು ತಿಳಿಯುವುದಕ್ಕಾಗಿ ದೂತರನ್ನು ಕಳುಹಿಸಬೇಕು. ದೇವತೆಗಳೊಡನೆ ಗಂಡನಿಗೆ ಕ್ಷೇಮವಾಗಲಿ ಎಂದು ಪ್ರಾರ್ಥಿಸಬೇಕು. ಅಲಂಕಾರ ಮಾಡಿಕೊಳ್ಳಬಾರದು. ಹಾಳುಸೀರೆಯನ್ನು ಉಟ್ಟುಕೊಳ್ಳಬೇಕು. ಕಣ್ಣಿಗೆ ಕಪ್ಪು ಹಚ್ಚಿಕೊಳ್ಳಬಾರದು. ಗಂಧಪುಷ್ಪಾದಿಗಳನ್ನು ಧರಿಸಬಾರದು. ಉಗುರು ಕೂದಲುಗಳನ್ನು ಅಲಂಕರಿಸಿಕೊಳ್ಳಬಾರದು. ಹಲ್ಲುಗಳನ್ನು ಬೆಳ್ಳಗಾಗಿ ಉಜ್ಜಿಕೊಳ್ಳಬಾರದು. ತಾಂಬೂಲವನ್ನು ಸ್ವೀಕರಿಸಬಾರದು. ಸೊಂಬೇರಿತನವಿರಬಾರದು.

ಯಾವಾಗಲೂ ನಿದ್ರೆಯನ್ನು ಮಾಡುತ್ತಿರಬಾರದು. ಜಗಳಾಡುವುದರಲ್ಲಿ ಆಸೆಯಿರಬಾರದು. ಗಟ್ಟಿಯಾಗಿ ನಗಬಾರದು. ಇನ್ನೊಬ್ಬರೊಡನೆ ಗೇಲಿಮಾತನ್ನು ಆಡಬಾರದು. ಇತರ ಪುರುಷರ ವ್ಯಾಪಾರವನ್ನು ಯೋಚಿಸಬಾರದು. ಇಚ್ಛಾನುಸಾರವಾಗಿ ಸಂಚಾರ ಮಾಡಬಾರದು. ಪರಪುರುಷರಿಗೆ ಎಣ್ಣೆ ಹಚ್ಚೋಣ ಇತ್ಯಾದಿಗಳನ್ನು ಮಾಡಬಾರದು. ಒಂದೇ ವಸ್ತ್ರದಿಂದ ಸಂಚರಿಸಬಾರದು. ಲಜ್ಜಾಹೀನಳಾಗಿ ಇರಬಾರದು. ವ್ಯರ್ಥವಾಗಿ ಸಂಚಾರ ಮಾಡಬಾರದು. ಇವೆಲ್ಲವೂ ಗಂಡನ ದುಃಖಕ್ಕೆ ಕಾರಣವಾದ ದೋಷಗಳು. ಹೆಂಗಸು ಮನೆಯ ಕೆಲಸವನ್ನು ಮುಗಿಸಿ ಮೈಗೆ ಅರಸಿನವನ್ನು ಹಚ್ಚಿಕೊಂಡು ಶುದ್ಧವಾದ ನೀರಿನಿಂದ ತೊಳೆದುಕೊಂಡು ಅಲಂಕಾರ ಮಾಡಿಕೊಳ್ಳಬೇಕು. ಮುಖವನ್ನು ಅರಳಿಸಿಕೊಂಡು ಸಂತೋಷದಿಂದ ಗಂಡನ ಬಳಿಗೆ ಹೋಗಬೇಕು. ಈರೀತಿಯಾಗಿ ಹೆಂಗಸು ಮನಸ್ಸು ಮಾತು ದೇಹದಿಂದ ನಿಯಮವುಳ್ಳವಳಾಗಿ ಈ ಲೋಕದಲ್ಲಿ ಕೀರ್ತಿಯನ್ನು ಹೊಂದುವಳು. ಸತ್ತಮೇಲೆ ಗಂಡನ ಲೋಕವನ್ನು ಹೊಂದುವಳು. ಸ್ತ್ರೀಯರಿಗೆ ಪತಿಗೆ ಸಮಾನ ದೇವತೆಯಿರುವುದಿಲ್ಲ. ಪತಿಯು ಸಂತುಷ್ಟನಾದರೆ ಹೆಂಗಸಿಗೆ ಸಮಸ್ತ ಉತ್ತಮಲೋಕಗಳು ಸಿಗುವುವು. ಅವನು ಕೋಪಿಸಿಕೊಂಡರೆ ಅವಳಿಗೆ ಉತ್ತಮಲೋಕಗಳು ಸಿಗಲಾರವು. ಸ್ತ್ರೀಯಾದವಳಿಗೆ ಗಂಡನಿಂದಲೇ ಮಕ್ಕಳೂ ವಿವಿಧ ಭೋಗಗಳೂ, ಶಯ್ಯಾ, ಆಸನ, ಅದ್ಭುತವಸ್ತುಗಳೂ ವಸ್ತ್ರಗಳೂ ಪುಷ್ಪಗಳೂ ಗಂಧವೂ ಸ್ವರ್ಗಲೋಕವೂ ನಾನಾ ವಿಧವಾದ ಕೀರ್ತಿಯೂ ಉಂಟಾಗುವುದು.



## ಪುಣ್ಯಪಾಪಗಳ ಫಲವು [1]

ತುಲಸೀವನವನ್ನು ಬೆಳೆಸಿದವರು ಯಮದೇವರನ್ನು ನೋಡುವುದಿಲ್ಲ. ತುಲಸೀವನವು ಸರ್ವಪಾಪ ಪರಿಹಾರವು ಪವಿತ್ರವಾದದ್ದು. ಅಭೀಷ್ಟಪ್ರದವು. ಯಾವ ಮನೆಯಲ್ಲಿ ತುಲಸೀವನವಿರುತ್ತದೋ ಆ ಮನೆಯು ಉತ್ತಮ ತೀರ್ಥವು. ಅಲ್ಲಿಗೆ ಯಮದೂತರು ಬರಲಾರರು. ತುಲಸೀಯನ್ನು ಯಾರು ಬೆಳೆಸುತ್ತಾರೋ ಆ ತುಲಸಿಯು ಎಷ್ಟು ಬೀಜದಳಗಳುಳ್ಳದಾಗುತ್ತದೋ ಅ ಸಮಯ ದೇವಲೋಕದಲ್ಲಿ ವಾಸಮಾಡುವನು. ತುಲಸೀಯ ವಾಸನೆಯನ್ನು ಮೂಸಿ ನೋಡಿ ಸಂತೋಷವುಳ್ಳವ

1. ಪ.ಪು. ಹಾಗೂ ಭಾ.ಅ.ಪ.ದಲ್ಲಿ ಬಂದಿದೆ.

ರಾಗಿ ಗರುಡಾರೂಢರಾಗಿ ಭಗವಂತನ ಲೋಕವನ್ನು ಹೊಂದುವರು. ನರ್ಮದಾ ನದಿಯ ದರ್ಶನವೂ ಗಂಗಾಸ್ನಾನವೂ ತುಲಸೀದಲದ ಸ್ಪರ್ಶವೂ ಈ ಮೂರು ಸಮಾನವೆನ್ನುವರು. ತುಲಸಿಯು ನೆಡುವುದರಿಂದಲೂ ಪಾಲಿಸುವುದರಿದಲೂ ನೀರು ಹಾಕುವುದರಿಂದಲೂ ದರ್ಶನದಿಂದಲೂ ಸ್ಪರ್ಶದಿಂದಲೂ ಜನರಿಗೆ ಮಾತಿನಿಂದಲೂ ಮನಸ್ಸಿನಿಂದಲೂ ದೇಹದಿಂದಲೂ ಉಂಟಾದ ಪಾಪವು ಪರಿಹಾರವನ್ನು ಹೊಂದುವುದು. ಒಂದೊಂದು ಪಕ್ಷದಲ್ಲಿಯೂ ದ್ವಾದಶಿಯಲ್ಲಿ ದೇವತೆಗಳೂ ತುಲಸೀವನವನ್ನು ಪೂಜಿಸುವರು. ಬಂಗಾರ ರತ್ನಗಳ ಪುಷ್ಪಗಳೂ ಮುತ್ತುಗಳೂ ತುಲಸೀದಲದ ದಾನದಿಂದ ಉಂಟಾಗುವ ಫಲವನ್ನು ಉಂಟು ಮಾಡಲಾರವು. ಸಾವಿರ ಮಾವಿನ ಮರವನ್ನು ನೆಡುವುದಕ್ಕಿಂತಲೂ ನೂರು ಅಶ್ವತ್ಥಮರವನ್ನು ನಡುವುದಕ್ಕಿಂತಲೂ ಬರುವ ಫಲವು ಒಂದು ತುಲಸೀಗಿಡವನ್ನು ನೆಡುವುದರಿಂದ ಉಂಟಾಗುತ್ತದೆ. ಭಗವಂತನ ಪೂಜೆಯನ್ನು ಮಾಡುವವನು ಯಾರು ತುಲಸಿಯನ್ನು ನೆಡುವನೋ ಅವನು ಹನ್ನೊಂದು ಹತ್ತು ಸಾವಿರ ವರ್ಷ ಸ್ವರ್ಗದಲ್ಲಿ ಸಂತೋಷಪಡುತ್ತಿರುವನು. ಯಾರು ತುಲಸೀಮಂಜರಿಗಳಿಂದ ಪರಮಾತ್ಮನ ಪೂಜೆಯನ್ನು ಮಾಡುವರೋ ಅವನು ಗರ್ಭವಾಸವನ್ನು ಮಾಡಲಾರನು. ಪುಷ್ಕರಾದಿ ತೀರ್ಥಾಭಿಮಾನಿಗಳೂ ಗಂಗೆಯೇ ಮೊದಲಾದ ನದಿಯ ಅಭಿಮಾನಿಗಳೂ ಶ್ರೀಭಗವಂತನೇ ಮೊದಲಾದ ದೇವತೆಗಳೂ ತುಲಸೀದಲದಲ್ಲಿ ವಾಸಮಾಡುವರು. ತುಲಸಿಯನ್ನು ನೆಟ್ಟು ತುಲಸಿಯ ದಲಗಳಿಂದ ಪರಮಾತ್ಮನನ್ನು ಪೂಜಿಸುವರು. ಚತುರ್ಮುಖ ಬ್ರಹ್ಮದೇವರು ಇರುವ ಲೋಕದಲ್ಲಿ ವಾಸಮಾಡುವರು.

ರುದ್ರ ದೇವರಲ್ಲಿ ಭಕ್ತಿಯನ್ನು ಮಾಡಿ ಪರಮಾತ್ಮನನ್ನು ದ್ವೇಷಿಸುವವರೂ ಉತ್ತಮ ಲೋಕವನ್ನು ಭಕ್ತಿಯನ್ನು ಮಾಡಿ ರುದ್ರದೇವರಿಗೆ ಸಮರ್ಪಿಸಿದ ಅನ್ನವನ್ನು ಹಣ್ಣನ್ನೂ ನೀರನ್ನೂ ಮುಟ್ಟಲೇಬಾರದು. ರುದ್ರದೇವರ ನಿರ್ಮಾಲ್ಯವನ್ನು ದಾಟಬಾರದು. ಅದನ್ನು ಭಾವಿಯಲ್ಲಿ ಹಾಕಿಬಿಡಬೇಕು. ಪರಮಾತ್ಮನಿಗೆ ಅಥವಾ ರುದ್ರದೇವರಿಗೆ ದೇವಾಲಯವನ್ನು ಕಟ್ಟಿಸಿದರೆ ಉತ್ತಮಲೋಕವನ್ನು ಹೊಂದುವರು. ಯಾರು ಧರ್ಮಶಾಲೆಯನ್ನು ಮಠವನ್ನು ಗೋಶಾಲೆಯನ್ನು ದಾರಿಯಲ್ಲಿ ವಿಶ್ರಾಂತಿ ಮಂದಿರವನ್ನು ಸನ್ಯಾಸಿಗಳಿಗೆ ಮಂದಿರವನ್ನೂ ದೀನರಿಗೆ ಅನಾಥರಿಗೆ ವಾಸಮಾಡಲಿಕ್ಕೆ ಸ್ಥಳವನ್ನು ಬ್ರಾಹ್ಮಣರಿಗೆ ಮನೆಯನ್ನೂ ಮಾಡಿಸುತ್ತಾರೋ ಅವರು ಇಂದ್ರಲೋಕವನ್ನು ಹೊಂದುವರು. ಇವುಗಳನ್ನು ಜೀರ್ಣೋದ್ಧಾರ ಮಾಡಿದರೆ ಎರಡು ಪಾಲು ಫಲವು ಬರುವುದು. ಜೀರ್ಣವಾಗಿರುವುದನ್ನು ಉದ್ಧಾರ ಮಾಡದೆ

ಬೇರೆ ಹೊಸತಾಗಿ ಕಟ್ಟಿಸಿದರೆ ನರಕವು ಬರುವುದು. ದೇವರ ಬ್ರಾಹ್ಮಣರ ಯತಿಗಳ ಮಠಗಳಲ್ಲಿ ಯಾರು ಲೋಭದಿಂದ ಮಠಾಧಿಕಾರವನ್ನು ಮಾಡುವನೋ ಅವನು ಸರ್ವಕರ್ಮ ಬಹಿಷ್ಕೃತನಾಗಿ ಘೋರವಾದ ರೌರವ ಎಂಬ ನರಕದಲ್ಲಿ ಬೀಳುವನು. ಮಠಕ್ಕೆ ಸೇರಿದ ಪತ್ರವನ್ನು ಪುಷ್ಪವನ್ನು ಫಲವನ್ನು ಅನುಭವಿಸಿದರೆ ಘೋರವಾದ ನರಕವನ್ನು ಹೊಂದುವನು. **ಭಗವಂತನು ಯಾರನ್ನು ಪುತ್ರ ಪಶು ಬಂಧುಗಳಿಂದ ಸಹಿತನನ್ನಾಗಿ ನರಕಕ್ಕೆ ಕಳುಹಿಸಬೇಕೆಂದು ಇಚ್ಛಿಸುವನೋ ಅವನನ್ನು ದೇವಾಲಯಕ್ಕೂ ಗೋವುಗಳಿಗೂ ಬ್ರಾಹ್ಮಣರಿಗೂ ಅಧಿಕಾರಿಯನ್ನಾಗಿ ಮಾಡುವನು.** ಮಠಾಧಿಕಾರಿಗಳ ಅನ್ನವನ್ನು ಭೋಜನ ಮಾಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ಮಠಾಧಿ ಕಾರಿಗಳನ್ನು ಮುಟ್ಟಿದರೆ ಸ್ನಾನ ಮಾಡಬೇಕು. ದೇವರ ಪೂಜೆಗಾಗಿ ಯಾರು ಹೂವಿನ ತೋಟವನ್ನು ಮಾಡಿಸುವನೋ ಅವರು ಪರಮಧನ್ಯರು. ಸ್ವರ್ಗದಲ್ಲಿ ವಾಸಮಾಡು ವರು. ಯಾರು ಯಾವಾಗಲೂ ದೇವತೆಗಳನ್ನೂ ಪಿತೃಗಳನ್ನೂ ಅತಿಥಿಗಳನ್ನೂ ಸಂತೋಷಪಡಿಸುತ್ತಾರೋ ಅವರು ಬ್ರಹ್ಮಲೋಕವನ್ನು ಹೊಂದುವರು.

ಮೂರ್ಖನಾಗಿರಲಿ ಪಂಡಿತನಾಗಿರಲಿ, ಶ್ರೋತ್ರಿಯನಾಗಿರಲಿ, ಪತಿತನಾಗಿರಲಿ, ಮಧ್ಯಾಹ್ನಕಾಲದಲ್ಲಿ ಮನೆಗೆ ಬಂದ ಅತಿಥಿಯು ಅತ್ಯಂತ ಪೂಜ್ಯನು. ಯಾರು ದಾರಿಯಲ್ಲಿ ಶ್ರಮಪಟ್ಟು ಬಂದಿರುವ ಹಸಿವೆಯುಳ್ಳವನಾದವನಿಗೆ ಅನ್ನಪಾನಗಳನ್ನು ಕೊಡುವನೋ ಅವನು ಸ್ವರ್ಗದಲ್ಲಿ ಬಹುಸಮಯ ವಾಸಮಾಡುವನು. ಅಷ್ಟರವರೆಗೆ ನೋಡದೆ ಇದ್ದ ಹಸಿವೆಯಿಂದ ಪೀಡಿತನಾದ ಜನರು ಯಾರ ಮನೆಯಲ್ಲಿ ಭೋಜನಮಾಡಿ ತೃಪ್ತಿಯನ್ನು ಹೊಂದು ವರೋ ಅವರು ಬ್ರಹ್ಮಲೋಕದಲ್ಲಿ ವಾಸಮಾಡುವರು. ಅತಿಥಿಯು ಮಧ್ಯಾಹ್ನ ದಲ್ಲಿಯೋ ಸಾಯಂಕಾಲದಲ್ಲಿಯೋ ಯಾರು ಮನೆಗೆ ಬಂದು ಸತ್ಕಾರವನ್ನು ಹೊಂದದೆ ಹಿಂದೆ ತಿರುಗಿ ಹೋಗುವನೋ ಅವನು ನರಕದಲ್ಲಿ ವಾಸ ಮಾಡುವನು.

ಯಾವ ಬ್ರಾಹ್ಮಣನು ಒಬ್ಬನ ಮನೆಗೆ ಹೋಗಿ ಇಲ್ಲ ಎಂದು ಮನೆಯ ಯಜಮಾನನ ಮಾತನ್ನು ಕೇಳಿ ಖೇದವುಳ್ಳವನಾಗಿ ಯಾರ ಮನೆಯಿಂದ ಹಿಂದೆ ತಿರುಗಿ ಹೋಗುತ್ತಾನೋ ಆ ಮನೆಯ ಯಜಮಾನನು ಆ ಜನ್ಮದಲ್ಲಿ ಮಾಡಿದ ಪುಣ್ಯವೆಲ್ಲವನ್ನು ಹಿಡಿದುಕೊಂಡು ಹೋಗುತ್ತಾನೆ. ಅತಿಥಿಗೆ ಸಮಾನ ಬಂಧುವಿಲ್ಲ. ಅತಿಥಿಗೆ ಸಮಾನವಾದ ಧನವಿಲ್ಲ. ಅತಿಥಿಗೆ ಸಮಾನವಾದ ಧರ್ಮವಿಲ್ಲ. ಅತಿಥಿ ಸಮಾನನಾದ ಹಿತಮಾಡುವವನಿಲ್ಲ. ಆತಿಥ್ಯದ ಪ್ರಭಾವದಿಂದ ಅನೇಕ ರಾಜರೂ ಋಷಿಗಳೂ ಬ್ರಹ್ಮಲೋಕವನ್ನು ಹೊಂದಿ ಇನ್ನೂ ಹಿಂದೆ ಬರಲೇ ಇಲ್ಲ. ಜನ್ಮದಲ್ಲಿ ಒಬ್ಬ

ಗೃಹಸ್ಥನು ತನಗೆ ತಿಳಿಯದೆಯಾದರೂ ಒಂದು ದಿವಸದಲ್ಲಿ ಅತಿಥಿಗಳಿಗೆ ಭೋಜನ ಮಾಡಿಸಿದ್ದರೆ ಅವನು ಯಮದೇವರನ್ನು ನೋಡುವುದೇ ಇಲ್ಲ. ಅನ್ನದಾನ ಮಾಡಿದವನು ಪ್ರಕಾಶಮಾನವಾದ ವಿಮಾನದಲ್ಲಿ ಅಮೃತಪಾನ ಮಾಡುವನು. ಸ್ವರ್ಗದಿಂದ ಕೆಳಗೆ ಬಂದವನು ಉತ್ತರ ಕುರುದೇಶದಲ್ಲಿ ಹುಟ್ಟುವನು. ಆಮೇಲೆ ಭಾರತ ವರ್ಷದಲ್ಲಿ ಧಾರ್ಮಿಕರಾಜನಾಗಿ ಹುಟ್ಟುವನು. ಅನ್ನದಾನ ಮಾಡಿದವನಿಗೆ ದೀರ್ಘಾಯುಷ್ಯವುಂಟಾಗುವುದು. ಅವನ ವಂಶವು ಕ್ಷೀಣವಾಗಲಾರದು. ಎಲ್ಲಾ ಪ್ರಾಣಿಗಳಿಗೂ ಅನ್ನದಲ್ಲೇ ಪ್ರಾಣವಿರುವುದು.

ಆದಕಾರಣದಿಂದ ಅನ್ನದಾನ ಮಾಡಿದವನು ಪ್ರಾಣದಾನ ಮಾಡಿದವನೆಂದು ಹೇಳಲ್ಪಡುವನು. ಪೂರ್ವದಲ್ಲಿ ಯಮದೇವರು ಸ್ವರ್ಗಲೋಕದಿಂದ ಕೆಳಗೆ ಬೀಳುತ್ತಿದ್ದ ಕೇಸರಿಧ್ವಜ ಎಂಬ ರಾಜನನ್ನು ನೋಡಿ ದಯೆಯಿಂದ 'ರಾಜನೇ! ನೀನು ಪುನಃ ಸ್ವರ್ಗವನ್ನು ಅಪೇಕ್ಷಿಸುವಿಯಾದರೆ ಕರ್ಮಭೂಮಿಗೆ ಹೋದವನು ಅನ್ನದಾನ ಮಾಡು, ಅನ್ನದಾನ ಮಾಡು, ಅನ್ನದಾನ ಮಾಡು' ಎಂದು ಹೇಳಿದರು. ಆದುದರಿಂದ ಅನ್ನದಾನಕ್ಕೆ ಸಮಾನವಾದ ದಾನವು ಬೇರೊಂದು ಇಲ್ಲವೇ ಇಲ್ಲ. ಗ್ರೀಷ್ಮಋತುವಿನಲ್ಲಿ ನೀರನ್ನು ದಾನಮಾಡಿದರೆ ಹೇಮಂತಋತುವಿನಲ್ಲಿ ಕಟ್ಟಿಗೆಯನ್ನು ದಾನಮಾಡಿದರೆ ಅನ್ನವನ್ನು ಸರ್ವದಾ ದಾನಮಾಡಿದರೆ ಯಮಲೋಕಕ್ಕೆ ಹೋಗಲಾರರು. ತಿಳಿದೋ ತಿಳಿಯದೆಯೋ ಮಾಡಿದ ಚಿಕ್ಕ ದೊಡ್ಡ ಪಾಪಗಳಿಗೆ ಆರಾರು ತಿಂಗಳುಗಳಲ್ಲಿ ಯಾರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೋ ಅವನು ಯಮದೇವರನ್ನು ನೋಡ ಲಾರನು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ಇದ್ದರೆ ನರಕವನ್ನು ಹೊಂದುವನು. ಮಾತಿನಿಂದ ಮನಸ್ಸಿನಿಂದ ದೇಹದಿಂದ ನಡೆದ ಪಾಪಗಳಿಗೆ ಯಾರು ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೋ ಅವನು ಶುಭವಾದ ದೇವ ಗಂಧರ್ವರು ಇರುವ ಲೋಕ ಗಳನ್ನು ಹೊಂದುವನು.

**ಯಾರು ನಿತ್ಯವೂ ಗಾಯತ್ರಿಯನ್ನು ಜಪಿಸುವರೋ ಇತರ ವೈದಿಕಮಂತ್ರವನ್ನು ಜಪಿಸುವರೋ ಅವರು ಪಾಪರಹಿತರಾಗುತ್ತಾರೆ.** ಯಾರು ನಿತ್ಯವೂ ವೇದಾಭ್ಯಾಸದಲ್ಲಿ ಆಸಕ್ತರಾಗಿ ಸಾಯಂಕಾಲದಲ್ಲಿಯೂ ಪ್ರಾತಃಕಾಲ ದಲ್ಲಿಯೂ ಔಪಾಸನವನ್ನು ಮಾಡುತ್ತಾರೋ ಅವರು ಅಕ್ಷಯವಾದ ಗತಿಯನ್ನು ಹೊಂದುತ್ತಾರೆ. ಯಾರು ನಿತ್ಯವೂ ವ್ರತವುಳ್ಳವನಾಗಿರುವನೋ ತೀರ್ಥವನ್ನು ಸೇವಿಸುವನೋ ಇಂದ್ರಿಯನಿಗ್ರಹವುಳ್ಳವ ನಾಗಿರುವನೋ ಸತ್ಯವಚನವುಳ್ಳವನಾಗಿರು ವನೋ ಅವನು ಭಯಂಕರ ರೂಪವುಳ್ಳ ಯಮದೇವರನ್ನು ನೋಡಲಾರರು. ಧರ್ಮಿಷ್ಠನಾದವನು ನಿತ್ಯವೂ ಪರಾನ್ನವನ್ನೂ

ಪರಪಾಕವನ್ನೂ ಬಿಡಬೇಕು. ಯಾರು ಯಾರ ಅನ್ನವನ್ನು ಭೋಜನ ಮಾಡುವನೋ ಅವನು ಅವನ ಪಾಪವನ್ನು ತಿನ್ನುವವನು. ಇತರರ ಹತ್ತಿರ ದಾನವನ್ನಾದರೂ ಹೊಂದಬಹುದು. ಭೋಜನ ಮಾತ್ರ ಮಾಡಬಾರದು. ಭಯಂಕರವಾದ ನರಕವುಂಟಾಗುವುದೆಂದು ಅಂಜಿಕೆಯಿಂದ ಪರಾನ್ನದಲ್ಲಿ ಆಸಕ್ತಿಯನ್ನು ಬಿಡಬೇಕು. ನಿತ್ಯವೂ ಪ್ರಾತಃ ಸ್ನಾನವನ್ನು ಮಾಡುವವನು ಯಮಲೋಕದ ದುಃಖವನ್ನು ಹೊಂದುವುದಿಲ್ಲ. ಪಾಪ ಮಾಡಿದವರೂ ಪ್ರಾತಃ ಸ್ನಾನದಿಂದ ಶುದ್ಧರಾಗುವರು. ಪ್ರಾತಃಸ್ನಾನವು ಒಳಗಿನ ದೋಷವನ್ನು ಹೊರಗಿನ ದೋಷವನ್ನು ಪರಿಹರಿಸುವುದು. ಪ್ರಾತಃಸ್ನಾನದಿಂದ ಪುರುಷನು ಪಾಪದಿಂದ ರಹಿತನಾಗಿ ನರಕವನ್ನು ಹೊಂದಲಾರನು. ಯಾರು ಸ್ನಾನ ಮಾಡದೆ ಭೋಜನ ಮಾಡುವನೋ ಅವನು ಮಲವನ್ನು ತಿಂದವನಿಗೆ ಸಮಾನನು. ಅವನ ಅನ್ನವನ್ನು ಯಾರು ತಿನ್ನುವನೋ ಅವನಿಗೂ ದೇವತೆಗಳು ಅನುಗ್ರಹ ಮಾಡಲಾರರು. ಸ್ನಾನ ಮಾಡದೆ ಇರುವ ಮನುಷ್ಯನು ಪಾಪಿಯು. ಅವನು ಯಾವಾಗಲೂ ಅಶುದ್ಧನು. ಸ್ನಾನಮಾಡದೆ ಇರುವವನು ನರಕವನ್ನು ಅನುಭವಿಸಿ ಚಂಡಾಲಾದಿ ಯೋನಿಯಲ್ಲಿ ಹುಟ್ಟುವನು.

ಯಾರು ಪರ್ವಕಾಲಗಳಲ್ಲಿ ಪ್ರವಾಹದಲ್ಲಿ ಸ್ನಾನ ಮಾಡುವರೋ ಅವರು ದುರ್ಗತಿಯನ್ನು ಹೊಂದುವುದಿಲ್ಲ. ನೀಚಯೋನಿಯಲ್ಲಿ ಹುಟ್ಟುವುದಿಲ್ಲ. ಅವರಿಗೆ ದುಃಸ್ವಪ್ನಾದಿಗಳು ಉಂಟಾದರೂ ಅದರ ದುಷ್ಫಲವುಂಟಾಗುವುದಿಲ್ಲ. ಪ್ರಾತಃಸ್ನಾನ ದಿಂದ ಶುದ್ಧರಾದ ಪುರುಷರಿಗೆ ಎಳ್ಳು ಇತ್ಯಾದಿ ದಾನ ಮಾಡಿದ ಜನರು ಯಮಲೋಕವನ್ನು ಹೊಂದಲಾರರು. ಭೂದಾನವನ್ನು ಬಂಗಾರ ದಾನವನ್ನು ಗೋದಾನವನ್ನು ಹದಿನಾರು ಮಹಾದಾನಗಳನ್ನು ದಾನ ಮಾಡುವವರು ಬಹುಕಾಲ ಸ್ವರ್ಗದಲ್ಲಿ ವಾಸಮಾಡುವರು. ಪವಿತ್ರತಿಥಿಗಳಲ್ಲಿ ವ್ಯತೀಪಾತ ಸಂಕ್ರಾತಿಗಳಲ್ಲಿಯೂ ಯಾರು ಸ್ನಾನದಾನಗಳನ್ನು ಮಾಡಿ ಭೋಜನ ಮಾಡುವರು ಬಹುಕಾಲ ಸ್ವಕರ್ದಲ್ಲಿ ವಾಸಮಾಡುವರು. ಪವಿತ್ರತಿಥಿಗಳಲ್ಲಿ ವ್ಯತೀಪಾತ ಸಂಕ್ರಾತಿಗಳಲ್ಲಿಯೂ ಯಾರು ಸ್ನಾನ ದಾನಗಳನ್ನು ಮಾಡಿ ಭೋಜನ ಮಾಡುವನೋ ಅವನು ದುರ್ಗತಿಯನ್ನು ಹೊಂದುವುದಿಲ್ಲ. ದಾನಮಾಡಿದವರು ಭಯಂಕರವಾದ ರೌರವ ನರಕವನ್ನು ಹೊಂದುವುದಿಲ್ಲ. ಈ ಲೋಕದಲ್ಲಿ ದರಿದ್ರವಂಶದಲ್ಲಿಯೂ ಹುಟ್ಟುವುದಿಲ್ಲ.

ಯಾರು ಯಾವಾಗಲೂ ಸತ್ಯವನ್ನು ಹೇಳು ವನೋ ವ್ಯರ್ಥಮಾತುಗಳನ್ನು ಆಡುವುದಿಲ್ಲವೋ ಪ್ರಿಯ ಮಾತನ್ನು ಆಡುತ್ತಾನೋ ಕ್ರೋಧರಹಿತನಾಗಿರುತ್ತಾನೋ ಕ್ಷಮಾವುಳ್ಳವ ನಾಗಿರುತ್ತಾನೋ ಅಸೂಯಾರಹಿತನಾಗಿರುವನೋ ಯಾವಾಗಲೂ

ದಾಕ್ಷಿಣ್ಯವುಳ್ಳವ ನಾಗಿರುವನೋ ಯಾವಾಗಲೂ ಪ್ರಾಣಿಗಳಲ್ಲಿ ದಯೆಯುಳ್ಳವ ನಾಗಿರುವನೋ ಉತ್ತಮ ಧರ್ಮಗಳನ್ನು ರಕ್ಷಿಸುವನೋ ಇನ್ನೊಬ್ಬರ ಗುಣವನ್ನು ಹೇಳುವನೋ ಇನ್ನೊಬ್ಬರ ಸೊತ್ತನ್ನು ಒಂದು ಹುಲ್ಲಿನ ಕಡ್ಡಿಯನ್ನು ಮನಸ್ಸಿನಿಂದಲೂ ಅಪಹರಿಸುವುದಿಲ್ಲವೋ ಅವನು ನರಕಯಾತನೆಯನ್ನು ಅನುಭವಿಸಲಾರನು. ಯಾರು ಇನ್ನೊಬ್ಬರ ಮೇಲೆ ಅಪವಾದವನ್ನು ಹೇಳುವನೋ ಪಾಪಿಷ್ಠನಾಗಿರುತ್ತಾನೋ ಪಾಪಿಗಳಿಗೆ ಸಮ್ಮತವಾಗಿರುತ್ತಾನೋ ಅವನು ನರಕವನ್ನು ಅನುಭವಿಸುವನು. ಕಠಿಣವಾಗಿ ಮಾತಾಡುವನು ನರಕದಿಂದ ಬಂದವನು ಎಂದು ತಿಳಿಯಬೇಕು. ಅವನು ಪುನಃ ನರಕಕ್ಕೆ ಹೋಗುವನು. ಕೃತಘ್ನನಿಗೆ (ಉಪಕಾರ ಸ್ಮರಣೆಯಿಲ್ಲ ದವನಿಗೆ) ತೀರ್ಥಸ್ನಾನದಿಂದಲೂ ತಪಸ್ಸಿನಿಂದಲೂ ಪ್ರಾಯಶ್ಚಿತ್ತ ವುಂಟಾಗಲಾರದು. ಅವನು ಬಹುಕಾಲ ಘೋರವಾದ ನರಕ ದುಃಖವನ್ನು ಅನುಭವಿಸುವನು.

ಯಾರು ಭೂಮಿಯಲ್ಲಿ ಇರುವ ತೀರ್ಥಗಳಲ್ಲಿ ಸ್ನಾನ ಮಾಡುವನೋ ಇಂದ್ರಿಯ ಜಯವುಳ್ಳವನಾಗಿರುವನೋ ಆಹಾರ ಜಯವುಳ್ಳವನಾಗಿರುವನೋ ಅವನು ಯಮಲೋಕಕ್ಕೆ ಹೋಗಲಾರನು. ತೀರ್ಥದ ತೀರದಲ್ಲಿ ಪಾಪವನ್ನು ಮಾಡ ಬಾರದು. ಅಲ್ಲಿ ಜೀವನ ಮಾಡಬಾರದು. ಅಲ್ಲಿ ದಾನವನ್ನು ತೆಗೆದುಕೊಳ್ಳಬಾರದು. ಧರ್ಮವಿಕ್ರಯ ಮಾಡಬಾರದು. ಅಲ್ಲಿ ಮಾಡಿದ ಪಾಪವನ್ನು ಪರಿಹಾರ ಮಾಡಿ ಕೊಳ್ಳಲಿಕ್ಕೂ ಆಗಲಾರದು. ಅಲ್ಲಿ ದಾನ ತೆಗೆದುಕೊಂಡರೆ ಅದರ ಪಾಪಪರಿಹಾರ ಮಾಡಿಕೊಳ್ಳಲಿಕ್ಕೆ ಆಗಲಾರದು. ಆದುದರಿಂದ ತೀರ್ಥದ ತೀರದಲ್ಲಿ ಪಾಪವನ್ನು ಮಾಡಿದರೆ ನರಕವೇ ಉಂಟಾಗುವುದು. ಗಂಗೆಯಲ್ಲಿ ಒಂದು ಬಾರಿ ಸ್ನಾನಮಾಡಿದರೆ ಅವನು ಮಹಾಪಾಪವನ್ನು ಮಾಡಿದವನಾಗಿದ್ದರೂ ನರಕವನ್ನು ಹೊಂದುವುದಿಲ್ಲ. ವ್ರತವೂ ದಾನವೂ ತಪಸ್ಸೂ ಯಜ್ಞವೂ ಇತರ ಪವಿತ್ರ ವಸ್ತುಗಳಿಗೂ ಗಂಗಾನೀರಿನ ಒಂದು ಬಿಂದುವಿನಲ್ಲಿ ಸ್ನಾನ ಮಾಡಿದ್ದಕ್ಕೆ ಸಮಾನವಾಗಲಾರದು. ಗಂಗೆಯನ್ನು ಇತರ ತೀರ್ಥಗಳಿಗೆ ಸಮಾನವನ್ನಾಗಿ ಹೇಳುವವನು ಭಯಂಕರವಾದ ನರಕವನ್ನು ಹೊಂದುವನು. ಗಂಗಾಸ್ತೋತ್ರವು ಅರ್ಥವಾದವೆಂದು ಹೇಳುವವನು ಇಪ್ಪತ್ತೊಂದು ತಲೆಯವರಿಂದ ಸಹಿತನಾಗಿ ಘೋರವಾದ ನರಕವನ್ನು ಹೊಂದುವನು.



# ಇನ್ನೊಬ್ಬರು ಮಾಡಿದ ಪುಣ್ಯಪಾಪಾಂಶಗಳ ಪ್ರಾಪ್ತಿಯು

ಸತ್ಯಭಾಮಾದೇವಿಯರು ಕೃಷ್ಣಪರಮಾತ್ಮನೊಡನೆ ಇನ್ನೊಬ್ಬರು ಮಾಡಿದ ಪುಣ್ಯಪಾಪಗಳು ಮತ್ತೊಬ್ಬರಿಗೆ ಬರುವ ಕ್ರಮವನ್ನು ತಿಳಿಸಬೇಕೆಂದು ಕೇಳಿಕೊಳ್ಳಲು ಕೃಷ್ಣಪರಮಾತ್ಮನು—

ತಾನು ಮಾಡದೆ ಇದ್ದ ಪುಣ್ಯಪಾಪಗಳ ಭಾಗವು ಹೇಗೆ ಬರುತ್ತದೆ ಎಂಬುದನ್ನು ತಿಳಿಸುತ್ತೇನೆ. ಕೃತಾದಿಯುಗಗಳಲ್ಲಿ ಒಬ್ಬನು ಪುಣ್ಯವನ್ನೋ ಪಾಪವನ್ನೋ ಮಾಡಿದರೆ ಆ ದೇಶದಲ್ಲಿ ಇದ್ದವರಿಗೆ ಆ ಗ್ರಾಮದಲ್ಲಿ ಇದ್ದವರಿಗೆ ಅವನ ವಂಶದವರಿಗೆ ಅದರ ಭಾಗವು ಬರುವುದು. ಕಲಿಯುಗದಲ್ಲಿ ಮಾತ್ರ ಹಾಗೆ ಇಲ್ಲ. ಯಾರು ಮಾಡುತ್ತಾನೋ ಅವನಿಗೆ ಮಾತ್ರ ಅದರ ಫಲವು ಬರುವುದು. ಸಂಸರ್ಗವನ್ನು ಮಾಡದೆ ಇದ್ದರೆ ಅವರವರು ಮಾಡಿದ ಪುಣ್ಯಪಾಪಗಳ ಫಲವು ಅವರವರಿಗೇ. ಸಂಸರ್ಗವನ್ನು ಮಾಡಿದರೆ ಹಾಗೆ ಅಲ್ಲ. ಇನ್ನೊಬ್ಬರಿಗೂ ಫಲವು ಬರುವುದು.

ಒಬ್ಬ ಸ್ತ್ರೀಯ ಸಂಬಂಧ ಮಾಡುವುದರಿಂದಲೂ ಒಬ್ಬನೊಡನೆ ಒಂದೇ ಪಾತ್ರೆಯಲ್ಲಿ ಭೋಜನ ಮಾಡುವುದರಿಂದಲೂ ಅವನ ಅಥವಾ ಅವಳ ಪುಣ್ಯಪಾಪ ಗಳಲ್ಲಿ ಅರ್ಧವು ಇವನಿಗೆ ಬರುವುದು.

ಒಬ್ಬರಿಗೆ ಪಾಠಹೇಳುವುದರಿಂದಲೂ ಪೌರೋಹಿತ್ಯ ಮಾಡಿಸುವುದರಿಂದ ಒಂದು ಪಂಕ್ತಿಯಲ್ಲಿ ಭೋಜನ ಮಾಡುವುದರಿಂದ ನಾಲ್ಕನೇ ಒಂದು ಭಾಗ ಪುಣ್ಯಪಾಪವು ಬರುವುದು.

ಒಂದೇ ಆಸನದಲ್ಲಿ ಕೂತುಕೊಳ್ಳುವುದರಿಂದ ಒಂದೇ ವಾಹನದಲ್ಲಿ ಹೋಗುವುದರಿಂದ ಒಬ್ಬರ ಶ್ವಾಸವು ಮೈಗೆ ಬೀಳುವುದರಿಂದ ಅವರ ಆರನೇ ಒಂದು ಭಾಗ ಪುಣ್ಯಪಾಪಗಳು ಬರುವುವು.

ಒಬ್ಬರನ್ನು ಮುಟ್ಟುವುದರಿಂದ ಒಬ್ಬನೊಡನೆ ಮಾತನಾಡುವುದರಿಂದ ಇನ್ನೊಬ್ಬರನ್ನು ಸ್ತೋತ್ರಮಾಡುವುದರಿಂದ ಅವನ ಹತ್ತನೇ ಒಂದು ಅಂಶ ಪುಣ್ಯವನ್ನು ಹೊಂದುವನು.

ಯಾರು ಇನ್ನೊಬ್ಬನ ನಿಂದೆಯನ್ನು ಮಾಡುತ್ತಾನೋ ಅವನು ತನ್ನ ಪುಣ್ಯವನ್ನು ಕಳೆದುಕೊಂಡು ಅವನ ಪಾಪವನ್ನು ಹೊಂದುತ್ತಾನೆ. ಒಬ್ಬನು ಪುಣ್ಯಕರ್ಮವನ್ನು ಮಾಡುವಾಗ ಹೆಂಡತಿಯೂ ಭೃತ್ಯನೂ ಶಿಷ್ಯನೂ ಹೊರತು ಬೇರೆ ಯಾರಾದರೂ ಪುಣ್ಯಕರ್ಮವನ್ನು ಮಾಡುವವನಿಗೆ ಸೇವೆಯನ್ನು ಮಾಡಿದಾಗ ಅವನ ಸೇವೆಗೆ

ಅನುಸಾರವಾಗಿ ದ್ರವ್ಯವನ್ನು ಕೊಡದೆ ಇದ್ದರೆ ಆ ಸೇವೆಗೆ ಅನುಸಾರವಾಗಿ ಪುಣ್ಯವನ್ನು ಹೊಂದುವನು.

ಒಂದು ಪಂಕ್ತಿಯಲ್ಲಿ ಊಟವನ್ನು ಮಾಡುತ್ತಿರುವಾಗ ಒಬ್ಬನು ಮಧ್ಯೆ ಎದ್ದು ಹೋದರೆ ಅವನ ಪುಣ್ಯದಲ್ಲಿ ಆರನೇ ಒಂದು ಭಾಗವು ಕೂತಿರುವವನಿಗೆ ಬರುವುದು.

ಸ್ನಾನಸಂಧ್ಯಾವಂದನೆ ಮೊದಲಾದವನ್ನು ಮಾಡುತ್ತಿರುವಾಗ ಇನ್ನೊಬ್ಬರ ಹತ್ತಿರ ಮಾತಾಡಿದರೆ ಸ್ನಾನಾದಿ ಕರ್ಮಗಳ ಫಲದ ಆರನೇ ಒಂದು ಭಾಗವನ್ನು ಯಾರೊಡನೆ ಮಾತಾಡಿದನೋ ಅವನಿಗೆ ಕೊಡುವನು. ಒಂದು ಧರ್ಮಕಾರ್ಯ ಕ್ಕಾಗಿ ಹಣವನ್ನು ಯಾಚನೆ ಮಾಡಿಕೊಂಡು ಬಂದರೆ ಹಣಕೊಟ್ಟವನು ಆ ಧರ್ಮಕಾಯವನ್ನು ಮಾಡಿದ ಪುಣ್ಯವನ್ನು ಹೊಂದುವನು. ಇನ್ನೊಬ್ಬರ ಹಣವನ್ನು ಅಪಹರಿಸಿ ಪುಣ್ಯಕರ್ಮವನ್ನು ಮಾಡಿದರೆ ಪುಣ್ಯಕರ್ಮವನ್ನು ಮಾಡಿದವನಿಗೆ ಫಲವಿಲ್ಲ. ಯಾರ ಹಣದಿಂದ ಮಾಡಿದನೋ ಅವನಿಗೆ ಆ ಫಲವಾಗುವುದು. ಒಬ್ಬರ ಹತ್ತಿರ ಸಾಲವನ್ನು ಮಾಡಿ ಸಾಲವನ್ನು ತೀರಿಸದೆ ಮರಣವನ್ನು ಹೊಂದಿದರೆ ಸಾಲಕೊಟ್ಟವನಿಗೆ ತಾನು ಕೊಟ್ಟ ಹಣಕ್ಕೆ ಅನುಸಾರವಾಗಿ ಸಾಲತೆಗೆದುಕೊಂಡವನ ಪುಣ್ಯವು ಬರುವುದು.

ಪುಣ್ಯಪಾಪಗಳನ್ನು ಮಾಡಲಿಕ್ಕೆ ಬುದ್ಧಿಹೇಳಿದವನೂ ಅನುಮತಿಯನ್ನೂ ಕೊಟ್ಟವನೂ ಸಹಾಯ ಮಾಡಿದವನೂ ಬಲಾತ್ಕಾರ ಮಾಡಿದವನೂ ಪುಣ್ಯಪಾಪಗಳ ಆರನೇ ಒಂದು ಅಂಶವನ್ನು ಹೊಂದುವನು.

ರಾಜನು ಪ್ರಜೆಗಳ, ಗುರುವು ಶಿಷ್ಯನ, ಗಂಡನು ಹೆಂಡತಿಯ, ತಂದೆಯು ಮಗನು ಮಾಡಿದ ಪುಣ್ಯಪಾಪಗಳ ಆರನೇ ಒಂದು ಭಾಗವನ್ನು ಹೊಂದುವರು.

ಹೆಂಡತಿಯು ಗಂಡನ ಮನಸ್ಸನ್ನು ಅನುಸರಿಸಿಕೊಂಡು ಅವನನ್ನು ಸಂತೋಷ ಪಡಿಸುತ್ತಾ ಇದ್ದರೆ ಅವಳಿಗೆ ಗಂಡನು ಮಾಡಿದ ಪುಣ್ಯದಲ್ಲಿ ಅರ್ಧಪುಣ್ಯವು ಬರುವುದು.

ಭೃತ್ಯರನ್ನೂ ಮಕ್ಕಳನ್ನೂ ಬಿಟ್ಟು ಇನ್ನೊಬ್ಬರ ಕೈಯಿಂದ ಪುಣ್ಯಕಾರ್ಯ ವನ್ನು ಮಾಡಿಸಿದರೆ ಆರನೇ ಒಂದು ಅಂಶ ಪುಣ್ಯವು ಕಡಿಮೆಯಾಗುವುದು.

ಒಬ್ಬನು ಮತ್ತೊಬ್ಬನಿಗೆ ಜೀವನಾಂಶವನ್ನು ಕೊಟ್ಟರೆ ಅವನಿಂದ ತನ್ನ ಅಥವಾ ಇನ್ನೊಬ್ಬರ ಸೇವೆಯನ್ನು ಮಾಡಿಸದೆ ಇದ್ದರೆ, ಯಾರಿಗೆ ಜೀವನಾಂಶವನ್ನು

ಕೊಡುವನೋ ಅವನು ಮಾಡಿದ ಪುಣ್ಯದಲ್ಲಿ ಆರನೇ ಒಂದು ಭಾಗವನ್ನು ಜೀವನಾಂಶ ಕೊಟ್ಟವನು ಹೊಂದುವನು.

ಈರೀತಿಯಾಗಿ ಇನ್ನೊಬ್ಬರು ಮಾಡಿದ ಪುಣ್ಯಪಾಪಗಳ ಭಾಗವು ಮತ್ತೊಬ್ಬರಿಗೆ ಬರುವುದು ಶಾಸ್ತ್ರಸಿದ್ಧವಾಗಿದೆ.



## ಸತ್ಕರ್ಮದುಷ್ಕರ್ಮಗಳ ಫಲ [1]

ಗಂಗಾಜಲವು ಪರಮಶ್ರೇಷ್ಠವಾದದ್ದು. ಅದು ಭಗವಂತನ ಪಾದದಿಂದ ಹೊರಟುಬಂದಿದೆ. ರುದ್ರದೇವರು ಅದನ್ನು ಶಿರಸ್ಸಿನಿಂದ ಧರಿಸಿದ್ದಾರೆ. ಅದು ವಿಶೇಷವಾಗಿ ಪರಮಾತ್ಮನ ಸನ್ನಿಧಾನವುಳ್ಳದ್ದು. ಆ ಗಂಗಾಜಲಕ್ಕೆ ಸಮಾನವಾದದ್ದು ಬ್ರಹ್ಮಾಂಡದಲ್ಲಿ ಏನಿದೆ? ಗಂಗಾ ಎಂಬ ಹೆಸರನ್ನು ಹೇಳಿದರೆ ನೂರು ಯೋಜನದೂರದವರೆಗೆ ಇರುವವರೂ ನರಕವನ್ನು ಹೊಂದಲಾರರು. ನರಕ ಪರಿಹಾರಕ್ಕಾಗಿ ಜನರು ಅವಶ್ಯವಾಗಿಯೂ ಗಂಗೆಯಲ್ಲಿ ಸ್ನಾನ ಮಾಡಬೇಕು. ದಾನವನ್ನು ತೆಗೆದುಕೊಳ್ಳಲಿಕ್ಕೆ ಅರ್ಹತೆಯಿದ್ದರೂ ಯಾವ ಬ್ರಾಹ್ಮಣನು ದಾನವನ್ನು ತೆಗೆದುಕೊಳ್ಳದೆ ಇರುತ್ತಾನೋ ಅವನು ಸ್ವರ್ಗದಲ್ಲಿ ಇಚ್ಛಾನುಸಾರವಾದ ರೂಪವುಳ್ಳವನಾಗಿ ಶೋಭಿಸುವನು.

ಪಾಪಮಾಡಿದವರಾದರೂ ಪ್ರಾಣಯಾಮ ಗಳನ್ನು ಮಾಡಿದರೆ ಅದರಿಂದ ನಷ್ಟವಾದ ಪಾಪವುಳ್ಳವರಾಗಿ ಯಮಲೋಕವನ್ನು ನೋಡುವುದಿಲ್ಲ. ಒಂದು ತಿಂಗಳು ನಿತ್ಯವೂ ಹದಿನಾರು ಪ್ರಾಣಾಯಾಮಗಳನ್ನು ಮಾಡಿದರೆ ಭ್ರೂಣಹತ್ಯಾದೋಷವೂ ಪರಿಹೃತವಾಗುವುದು. ತಪಸ್ಸುಗಳೂ ವ್ರತಗಳೂ ಸಾವಿರ ಗೋದಾನಗಳೂ ಇವುಗಳಿಗೆ ಸಮಾನವಾದವು ಪ್ರಾಣಾಯಾಮಗಳು. ದರ್ಭೆಯ ಅಗ್ರದಿಂದ ಸಹಿತವಾದ ಗಂಗಾಜಲವನ್ನು ಒಂದು ತಿಂಗಳು ಯಾರು ಕುಡಿಯುವನೋ ಅವರು ನೂರು ವರ್ಷಕ್ಕಿಂತ ಅಧಿಕವೇ ಪ್ರಾಣಾಯಾಮಗಳನ್ನು ಮಾಡಿದ ಫಲವನ್ನು ಹೊಂದುವನು. ಯಾರು ನೂರುವರ್ಷ ಹಣೆಯಲ್ಲಿ ಗೋಪೀನಾಮವನ್ನು ಧರಿಸುತ್ತಾನೋ ತಲೆಯಲ್ಲಿ ತುಲಸೀದಲವನ್ನು ಧರಿಸುವನೋ ಅವನಿಗೆ ಬರುವ ಫಲವು ಪ್ರಾಣಾಯಾಮದಿಂದ ಬರುವುದು.

ದೊಡ್ಡ ಪಾಪಗಳೂ ಚಿಕ್ಕಪಾಪಗಳೂ ಪ್ರಾಣಾಯಾಮಗಳಿಂದ ಭಸ್ಮವಾಗಿ ಹೋಗುತ್ತದೆ. ಯಾರು ಪರಸ್ತ್ರೀಯರನ್ನು ತಾಯಿಯಂತೆ ನೋಡುವರೋ ಅವರು ನರಕವನ್ನು ಹೊಂದ ಲಾರರು. ಯಾರು ಇನ್ನೊಬ್ಬರ ಹೆಂಗಸರನ್ನು ಮನಸ್ಸಿನಿಂದಲೂ ಯೋಚಿಸುವು ದಿಲ್ಲವೋ ಅವನು ಎರಡು ಲೋಕಗಳಲ್ಲಿಯೂ ಪೂಜ್ಯನಾಗುವನು. ಆದುದರಿಂದ ಧರ್ಮದಲ್ಲಿ ಮನಸ್ಸುಳ್ಳವರು ಪರಸ್ತ್ರೀಯರನ್ನು ನೋಡಬಾರದು. ಪರಸ್ತ್ರೀಯರು ಇಪ್ಪತ್ತೊಂದು ನರಕಗಳಿಗೆ ಕಾರಣರಾಗುವರು. ಯಾರ ಮನಸ್ಸು ಇನ್ನೊಬ್ಬರ ವಸ್ತುವಿನಲ್ಲಿ ಆಸೆಯನ್ನು ಹೊಂದುವುದಿಲ್ಲವೋ ಅವರು ದೇವಲೋಕಕ್ಕೆ ಹೋಗುವರು. ಯಮದೇವರ ಬಳಿಗೆ ಹೋಗಲಾರರು. ಮಠದಲ್ಲಿಯೂ ದೇವಾಲಯದಲ್ಲಿಯೂ ಯಾವಾಗಲೂ ಯಾರು ಪುರಾಣವನ್ನು ಹೇಳಿಸುತ್ತಾರೋ ಹೇಳುತ್ತಾರೋ ಅವರಿಬ್ಬರೂ ಯಮಲೋಕವನ್ನು ಹೊಂದಲಾರರು. ಯಾರು ಕೋಪ ಬರುವ ಕಾರಣವಿರುವಾಗಲೂ ಕೋಪಿಸಿಕೊಳ್ಳದೆ ಕೋಪವನ್ನು ಜಯಿಸು ವನೋ ಅವನು ಸ್ವರ್ಗವನ್ನು ಹೊಂದುವನು.

ಯಾರು ಮುದುಕರಾದ ತಂದೆತಾಯಿಗಳನ್ನು ಮಗನು ದೇವತೆಗಳನ್ನು ಪೂಜಿಸುವನೋ ಅವನು ಯಮಲೋಕಕ್ಕೆ ಹೋಗುವುದಿಲ್ಲ. ಯಾರು ತಂದೆ ಗಿಂತಲೂ ಹೆಚ್ಚಾಗಿ ಗುರುಗಳನ್ನು ಪೂಜಿಸುವರೋ ಅವರು ಬ್ರಹ್ಮಲೋಕವನ್ನು ಹೊಂದುವರು. ಪತಿವ್ರತಾಸ್ತ್ರೀಯರು ಧನ್ಯರು. ಪಾತಿವ್ರತ್ಯಭಂಗವನ್ನು ಹೊಂದಿದ ಸ್ತ್ರೀಗೆ ಭಯಂಕರವಾದ ಯಮಲೋಕದ ಪ್ರಾಪ್ತಿಯಾಗುವುದು. ಸ್ತ್ರೀಯರು ಯಾವಾಗಲೂ ತಮ್ಮ ಶೀಲವನ್ನು ರಕ್ಷಿಸಿಕೊಳ್ಳಬೇಕು. ಶೀಲದಿಂದಲೇ ಸ್ತ್ರೀಯರಿಗೆ ಸ್ವರ್ಗವಾಗುವುದು. ಯಾರು ಶಾಸ್ತ್ರವನ್ನು ವಿಚಾರ ಮಾಡುತ್ತಾರೋ ವೇದಾಭ್ಯಾಸದಲ್ಲಿ ಆಸಕ್ತರಾಗಿರುತ್ತಾರೋ ಪುರಾಣವನ್ನು ಹೇಳುತ್ತಾರೋ ಅಥವಾ ಕೇಳುತ್ತಾರೋ ಯಾರು ಸ್ಮೃತಿಗೆ ವ್ಯಾಖ್ಯಾನ ಮಾಡುತ್ತಾರೋ ಧರ್ಮವನ್ನು ಉಪದೇಶ ಮಾಡುತ್ತಾರೋ ವೇದಾಂತಶಾಸ್ತ್ರದಲ್ಲಿ ನಿಪುಣರಾಗಿರುತ್ತಾರೋ ಅವರಿಂದಲೇ ಈ ಜಗತ್ತು ಧರಿಸಲ್ಪಡುವುದು. ಅವರು ಬ್ರಹ್ಮಲೋಕವನ್ನು ಹೊಂದುವರು.

ಯಾರು ಅಜ್ಞಾನಿಗೆ ವೇದಶಾಸ್ತ್ರದ ಜ್ಞಾನವನ್ನು ಉಂಟುಮಾಡುವನೋ ಅವನನ್ನು ಸಂಸಾರಬಂಧವನ್ನು ಬಿಡಿಸಿದವನೆಂದು ದೇವತೆಗಳೂ ಸತ್ಕರಿಸುವರು. ವಿಷ್ಣುಭಕ್ತರಾದವರು ಯಮದೇವರನ್ನೋ ಯಮಲೋಕವನ್ನೋ ಭಯಂಕರವಾದ ಯಮದೂತರನ್ನೋ ನೋಡುವುದೇ ಇಲ್ಲ. ಇದು ಸತ್ಯವಾದದ್ದು. ಸತ್ಯವಾದದ್ದು. ಯಮದೇವರು ತನ್ನ ದೂತರನ್ನು ನೋಡಿ ಪುನಃಪುನಃ 'ಯಾರು ಒಂದು ಬಾರಿ

ಭಕ್ತಿಯಿಂದ ಭಗವಂತನನ್ನು ಸ್ಮರಿಸುವರೋ ಅವರು ಪಾಪ ಮಾಡಿದವರಾಗಿದ್ದರೂ ಅವರನ್ನು ನಾವು ಬಿಟ್ಟುಬಿಡಬೇಕು. ಅವರು ಭಕ್ತಿಪೂರ್ವಕವಾದ ಭಗವಂತನ ಸ್ಮರಣೆಯಿಂದ ಸಮಸ್ತ ಪಾಪಗಳ ನಾಶವುಳ್ಳವರಾಗಿ ವಿಷ್ಣುಲೋಕವನ್ನು ಹೊಂದುವರು.

ದುರಾಚಾರವುಳ್ಳವನಾಗಲಿ, ಕೃತಘ್ನನಾಗಿರಲಿ, ಮಹಾಪಾಪದಲ್ಲಿ ಆಸಕ್ತನಾಗಿರುವವನಾಗಿರಲಿ, ಪರಮಾತ್ಮನನ್ನು ಭಜನೆ ಮಾಡಿದವನಾಗಿದ್ದರೆ ಅವನನ್ನು ನೀವು ಸರ್ವಥಾ ಬಿಟ್ಟುಬಿಡಬೇಕು. ಯಾರ ಮನೆಯಲ್ಲಿ ವಿಷ್ಣುಭಕ್ತನು ಭೋಜನ ಮಾಡುತ್ತಾನೋ ಯಾರಿಗೆ ವಿಷ್ಣುಭಕ್ತನ ಸಹವಾಸವಿರುವುದೋ ಅವರೂ ಕೂಡ ದೋಷರಹಿತರು. ಅವರನ್ನೂ ಕೂಡ ನೀವು ಬಿಟ್ಟುಬಿಡಬೇಕು' ಎಂದು ಹೇಳಿರುವರು. ಆದುದರಿಂದ ವಿಷ್ಣುಭಕ್ತರು ಯಮದೇವರ ರಾಜಧಾನಿಗೆ ಹೋಗುವುದೇ ಇಲ್ಲ. ಪಾಪವನ್ನು ಮಾಡಿದ ಜನರಿಗೆ ಸಂಸಾರಸಮುದ್ರವನ್ನು ದಾಟಲಿಕ್ಕೆ ವಿಷ್ಣುಭಕ್ತಿಯನ್ನು ಬಿಟ್ಟು ಬೇರೆ ಉಪಾಯವಿರುವುದಿಲ್ಲ. **ವಿಷ್ಣುಭಕ್ತಿಯಿಲ್ಲದವನು ಬ್ರಾಹ್ಮಣನು ಆಗಿದ್ದರೂ ಅವನನ್ನು ಸಜ್ಜನರು ಚಂಡಾಲನನ್ನು ಎಂಬಂತೆ ನೋಡಲೇಲಾರರು. ವಿಷ್ಣುಭಕ್ತಿಯುಳ್ಳವನು ಚಂಡಾಲನಾಗಿದ್ದರೂ ಮೂರುಲೋಕವನ್ನು ಪವಿತ್ರೀಗೊಳಿಸುವನು.** ಅಜಾಮಿಳನು ಭಕ್ತಿಯಿಂದ ನಾರಾಯಣನಾಮವನ್ನು ಹೇಳಿ ಮೋಕ್ಷವನ್ನು ಹೊಂದಿರುವನು.

ಆದುದರಿಂದ ಭಕ್ತಿಪೂರ್ವಕವಾಗಿ ಉಚ್ಚರಿಸಿದ ನಾರಾಯಣ ನಾಮವು ಸಮಸ್ತ ಪಾಪಗಳನ್ನು ಪರಿಹರಿಸಲಿಕ್ಕೆ ಸಮರ್ಥವಾಗುವುದು. ಯಾವಾಗ ಒಬ್ಬನು ಭಕ್ತಿಯಿಂದ ಹರಿಯನ್ನು ಪೂಜಿಸುವನೋ ಆಗಲೇ ಅವನ ತಂದೆಯ ಮತ್ತು ತಾಯಿಯ ವಂಶದವರೆಲ್ಲರೂ ಬಹುಕಾಲ ನರಕದಲ್ಲಿ ಇದ್ದವರೂ ಉದ್ಧಾರವನ್ನೂ ಹೊಂದುವರು. ವಿಷ್ಣುದಾಸರ ದಾಸರು ಯಾರೋ ವಿಷ್ಣುಭಕ್ತರ ಅನ್ನವನ್ನು ಊಟ ಮಾಡುವವರು ಯಾರೋ ಅವರೂ ಯಜ್ಞಮಾಡಿದವರು ಹೊಂದುವ ಲೋಕವನ್ನು ಹೊಂದುವರು. **ಸರ್ವಪಾಪಪರಿಹಾರವಾಗುವುದಕ್ಕಾಗಿ ವೈಷ್ಣವರ ಅನ್ನವನ್ನು ಯಾಚನೆ ಮಾಡಬೇಕು. ಅನ್ನವು ಇಲ್ಲದಿದ್ದರೆ ಅವರಿಂದ ನೀರನ್ನಾದರೂ ಕೇಳಿ ಕುಡಿಯಬೇಕು.** ಯಾರು ವಿಧಿಪ್ರಕಾರವಾಗಿ ವಾಸುದೇವ ದ್ವಾದಶಾಕ್ಷರಮಂತ್ರವನ್ನು ಅಷ್ಟಾಕ್ಷರಮಂತ್ರವನ್ನು ನಿತ್ಯವೂ ಜಪಿಸುವರೋ ಅವರನ್ನು ನೋಡಿಯೇ ಬ್ರಹ್ಮಹತ್ಯೆ ಮಾಡಿದವನೂ ಶುದ್ಧಿಯನ್ನು ಹೊಂದುವನು. ಹಾಗೆ ಜಪಮಾಡುವವರು ವಿಷ್ಣುಲೋಕದಲ್ಲಿ ಸಾರೂಪ್ಯಮೋಕ್ಷವನ್ನು ಹೊಂದಿ ಇರುವರು. ಹೃದಯದಲ್ಲಿಯೇ ಸೂರ್ಯನಲ್ಲಿಯೇ ನೀರಿನಲ್ಲಿಯೇ ಪ್ರತಿಮೆಗಳಲ್ಲಿಯೇ ಸ್ಥಂಡಿಲದಲ್ಲಿಯೋ

ಭಗವಂತನನ್ನು ಪೂಜಿಸಿ ಭಗವಂತನ ಲೋಕವನ್ನು ಹೊಂದುವರು. ಮೋಕ್ಷವನ್ನು ಬಯಸುವವರು ನಿತ್ಯವೂ ಸಾಲಗ್ರಾಮ ದಲ್ಲಿ ಪರಮಾತ್ಮನನ್ನು ಪೂಜಿಸಬೇಕು. ಸಾಲಿಗ್ರಾಮವು ವಿಶೇಷವಾಗಿ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರವಾದದ್ದು. ಸಮಸತ ಪಾಪಪರಿಹಾರಕವಾದದ್ದು. ಎಲ್ಲರಿಗೂ ಮೋಕ್ಷಕ್ಕೆ ಕಾರಣವಾದದ್ದು. ಯಾರು ಸಾಲಿಗ್ರಾಮದಲ್ಲಿ ಭಗವಂತನನ್ನು ಭಕ್ತಿಯಿಂದ ಪೂಜಿಸುವನೋ ಅವನಿಗೆ ಸಾವಿರ ರಾಜಸೂಯಯಾಗಗಳು ಏಕೆ ಬೇಕಾಗುವುವು?

ವೇದಾಂತ ಶ್ರವಣವನ್ನು ಮಾಡಿದವರು ಭಗವಂತನನ್ನು ಹೊಂದುವರು. ಹಾಗೆಯೇ ಶಾಲಿಗ್ರಾಮದಲ್ಲಿ ಪೂಜೆ ಮಾಡಿದವರು ಕ್ರಮದಿಂದ ಪರಮಾತ್ಮನನ್ನು ಹೊಂದುವರು. ಕಟ್ಟಿಗೆಯಲ್ಲಿ ಎಲ್ಲಾ ಸ್ಥಳದಲ್ಲಿಯೂ ವ್ಯಾಪಿಸಿರುವ ಬೆಂಕಿಯು ಮಥನ ಮಾಡುವುದರಿಂದ ಹೇಗೆ ಕಾಣಿಸುವುದೋ ಹಾಗೆಯೇ ಸರ್ವಸ್ಥಳದಲ್ಲಿ ವ್ಯಾಪ್ತನಾದ ಭಗವಂತನು ಶಾಲಗ್ರಾಮದಲ್ಲಿ ಪ್ರಕಾಶಿಸುವನು. ಮಹಾಪಾಪ ಮಾಡಿದವರೂ ಕರ್ಮದಲ್ಲಿ ಅಧಿಕಾರವಿಲ್ಲದವರೂ ಆಗಿದ್ದರೂ ಶಾಲಗ್ರಾಮ ಪೂಜಾ ಮಾಡಿದ ಬ್ರಾಹ್ಮಣರು ಯಮಮಂದಿರಕ್ಕೆ ಹೋಗುವುದೇ ಇಲ್ಲ. ಶಾಲಗ್ರಾಮದಲ್ಲಿ ಸನ್ನಿಹಿತನಾಗಿರುವಂತೆ ಪರಮಾತ್ಮನು ಮತ್ತೆ ಎಲ್ಲಿಯೂ ಸನ್ನಿಹಿನಾಗಿ ಇರಲಾರನು. ಯಾರು ಶಾಲಗ್ರಾಮವನ್ನು ಪೂಜಿಸುವನೋ ಅವನು ಅಗ್ನಿಹೋತ್ರವನ್ನು ಮಾಡಿದ ಫಲವನ್ನು ಭೂಮಿಯನ್ನು ದಾನಮಾಡಿದ ಫಲವನ್ನು ಹೊಂದುವನು. ಒಂದು ಬಾರಿ ಮನುಷ್ಯನು ಭಕ್ತಿಯಿಂದ ಶಾಲಗ್ರಾಮದಲ್ಲಿ ಭಗವಂತನನ್ನು ಪೂಜಾ ಮಾಡಿದ್ದಾದರೆ ಸೂರ್ಯೋದಯವಾಗುವಾಗ ಕತ್ತಲೆಯು ಹೋಗುವಂತೆ ಅವನ ಪಾಪಗಳೆಲ್ಲವೂ ಹೋಗುವುವು. ಯಾರು ಹನ್ನೆರಡು ಶಾಲಗ್ರಾಮಗಳನ್ನು ಶಾಸ್ತ್ರದಲ್ಲಿ ಹೇಳಿದಂತೆ ಪೂಜಿಸುವನೋ ಅವನು ಹನ್ನೆರಡು ಕೋಟಿ ರುದ್ರದೇವರ ಲಿಂಗಗಳನ್ನು ಬಂಗಾರ ತಾವರೆ ಹೂವುಗಳಿಂದ ಹನ್ನೆರಡು ಕಲ್ಪಗಳಲ್ಲಿ ಪೂಜೆ ಮಾಡಿದ ಫಲವನ್ನು ಒಂದು ದಿವಸದಲ್ಲಿಯೇ ಹೊಂದುವನು. ಯಾರು ಭಕ್ತಿಯಿಂದ ನೂರು ಶಾಲಗ್ರಾಮಗಳನ್ನು ಪೂಜಿಸುವನೋ ಅವನು ಭಗವಂತನ ಲೋಕದಲ್ಲಿ ವಾಸಮಾಡಿ ಚಕ್ರವರ್ತಿಯಾಗಿ ಹುಟ್ಟುತ್ತಾನೆ. ಕಾಮ ಕ್ರೋಧ ಲೋಭ ಮೋಹವುಳ್ಳವನಾಗಿದ್ದರೂ ಪುರುಷನು ಶಾಲಗ್ರಾಮ ಪೂಜಾ ಮಾಡುವುದರಿಂದ ಕ್ರಮದಿಂದ ಭಗವಂತನ ಲೋಕವನ್ನು ಹೊಂದುವನು. ಯಾವ ಬ್ರಾಹ್ಮಣನು ನಿತ್ಯವೂ ಶಾಲಗ್ರಾಮ ಪೂಜೆಯನ್ನು ಮಾಡುತ್ತಾನೋ ಅವನು ಯಾವಾಗಲೂ ಸ್ವರ್ಗದಲ್ಲಿಯೇ ವಾಸಮಾಡುತ್ತಿರುವನು.

ತೀರ್ಥಗಳಿಲ್ಲದೆ ದಾನಗಳಿಲ್ಲದೆ ಯಜ್ಞಗಳೂ ಇಲ್ಲದೆ ಶಾಲಗ್ರಾಮ

ಪೂಜೆಯಿಂದಲೇ ಕ್ರಮದಿಂದ ಮೋಕ್ಷವನ್ನು ಹೊಂದುವರು. ಶಾಲಗ್ರಾಮ ಪೂಜೆಯನ್ನು ನಿತ್ಯವೂ ಮಾಡುವವನು ನರಕವನ್ನು ಗರ್ಭವಾಸವನ್ನು ಪಶುಪಕ್ಷ್ಯಾದಿ ಜನ್ಮವನ್ನು ಕೃಮಿಕೀಟಾದಿ ಜನ್ಮವನ್ನು ಹೊಂದಲಾರನು. ದೀಕ್ಷಾವುಳ್ಳವನಾಗಿ ಮಂತ್ರವನ್ನು ತಿಳಿದವನಾಗಿ ಶಾಲಗ್ರಾಮ ಪೂಜಾ ಮಾಡುವವನು ವಿಷ್ಣುಲೋಕವನ್ನು ನಿಶ್ಚಯವಾಗಿಯೂ ಹೊಂದುವನು. ಯಾರು ಶಾಲಗ್ರಾಮತೀರ್ಥದಿಂದ ಅಭಿಷೇಕ ಮಾಡಿಕೊಳ್ಳುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದ ಫಲವನ್ನು ಹೊಂದುವನು. ಸರ್ವಯಜ್ಞಗಳಲ್ಲಿ ದೀಕ್ಷೆಯನ್ನು ಹೊಂದಿದ ಫಲವನ್ನು ಹೊಂದುವನು. ಗಂಗಾ ಗೋದಾವರೀ ರೇವಾ ಎಂಬ ನದಿಗಳು ಆಗಲೇ ಪಾಪಪರಿಹಾರ ಮಾಡುವುವು. ಅವುಗಳು ಶಾಲಗ್ರಾಮದಲ್ಲಿ ಸನ್ನಿಹಿತವಾಗಿರುವುವು. ಕಲಿಯುಗದಲ್ಲಿ ಯಾವ ಬ್ರಾಹ್ಮಣನು ಸಹಸ್ರನಾಮಗಳನ್ನು ಜಪಿಸುತ್ತಾ ನಾನಾವಿಧ ನೈವೇದ್ಯಗಳಿಂದಲೂ ಗಂಧಪುಷ್ಪ ಧೂಪ ದೀಪಗಳಿಂದಲೂ ಗೀತ ಸ್ತೋತ್ರ ವಾದ್ಯಾದಿಗಳಿಂದಲೂ ಭಕ್ತಿಯಿಂದ ನಿತ್ಯವೂ ಶಾಲಗ್ರಾಮಪೂಜೆಯನ್ನು ಮಾಡುವನೋ ಅವನು ಪರಮಾತ್ಮನ ಸಮೀಪದಲ್ಲಿ ಸುಖವಾಗಿ ಇರುತ್ತಾನೆ.

ಕೋಟಿ ಶಿವಲಿಂಗಗಳನ್ನು ಪೂಜಾ ಮಾಡಿದ ಫಲವು ಒಂದು ಶಾಲಗ್ರಾಮ ಪೂಜೆಯಿಂದಲೇ ಲಭಿಸುವುದು. ಎಲ್ಲಿ ಭಗವಂತನ ಸನ್ನಿಧಾನ ಪಾತ್ರವಾದ ಶಾಲಗ್ರಾಮವಿರುವುದೋ ಅಲ್ಲಿ ಹದಿನಾಲ್ಕು ಲೋಕಗಳೂ ಇರುವುವು. ಶಾಲಗ್ರಾಮದ ಮುಂಭಾಗದಲ್ಲಿ ಯಾರು ಶ್ರಾದ್ಧವನ್ನು ಮಾಡುತ್ತಾರೋ ಅವರು ಪಿತೃಗಳು ನೂರು ಕಲ್ಪದವರೆಗೆ ತೃಪ್ತಿಯಿಂದ ಇರುವರು. ಯಾರು ನಿತ್ಯವೂ ಶಾಲಗ್ರಾಮತೀರ್ಥವನ್ನು ಪಾನಮಾಡುತ್ತಾರೋ ಅವರಿಗೆ ಸಾವಿರ ಬಾರಿ ಪಂಚಗವ್ಯಪ್ರಾಶನೆ ಮಾಡಿ ಏನು ಪ್ರಯೋಜನವಿದೆ? ಶಾಲಗ್ರಾಮವು ಎಲ್ಲಿ ಇದೆಯೋ ಅಲ್ಲಿ ಸುತ್ತಲೂ ಮೂರು ಯೋಜನ ಮಹಾತೀರ್ಥವು. ಅಲ್ಲಿ ದಾನ ಹೋಮಗಳನ್ನು ಮಾಡಿದರೆ ಕೋಟಿ ಪಾಲು ಅಧಿಕವಾದ ಪುಣ್ಯವು ಉಂಟಾಗುವುದು. ಶಾಲಗ್ರಾಮ ಚಕ್ರಾಂಕಿತಗಳಿಗೆ ಅಭಿಷೇಕ ಮಾಡಿದ ತೀರ್ಥವನ್ನು ಪಾನಮಾಡಿ ಶಿರಸ್ಸಿನಲ್ಲಿ ಧರಿಸಿದರೆ ಕ್ರಮದಿಂದ ಅವನು ಸಾಧನ ಮಾಡಿ ಪರಮಾತ್ಮನ ಸಾರೂಪ್ಯರೂಪವಾದ ಮೋಕ್ಷವನ್ನು ಹೊಂದುವನು. ಸಮುದ್ರಕ್ಕೆ ಹೋಗಿ ಸೇರದೆ ಇರುವ ನದಿಗಳಲ್ಲಿ ಸ್ನಾನಮಾಡಿದರೆ ಮೂರು ದಿನ ಯಾಗ ಮಾಡಿದ ಫಲವನ್ನು ಹೊಂದುವನು. ಸಮುದ್ರಕ್ಕೆ ಹೋಗಿ ಸೇರುವ ನದಿಯಲ್ಲಿ ಸ್ನಾನ ಮಾಡಿದರೆ ಒಂದು ಪಕ್ಷ ಯಾಗಮಾಡಿದ ಫಲವನ್ನೂ ಸಮುದ್ರದಲ್ಲಿ ಸ್ನಾನಮಾಡಿದರೆ ಒಂದು ತಿಂಗಳು

ಯಾಗಮಾಡಿದ ಫಲವನ್ನು ಗೋದಾವರಿಯಲ್ಲಿ ಸ್ನಾನ ಮಾಡಿದರೆ ಆರುತಿಂಗಳು ಯಾಗಮಾಡಿದ ಫಲವನ್ನೂ ಗಂಗೆಯಲ್ಲಿ ಸ್ನಾನ ಮಾಡಿದರೆ ಒಂದು ವರ್ಷ ಮಾಡಿದ ಫಲವನ್ನು ಹೊಂದುವರು. ಶಾಲಗ್ರಾಮತೀರ್ಥವನ್ನು ಸ್ವೀಕರಿಸಿದರೆ ಹನ್ನೆರಡು ವರ್ಷ ಯಾಗಮಾಡಿದ ಫಲವನ್ನು ಹೊಂದುವನು. ಶಾಲಗ್ರಾಮತೀರ್ಥವನ್ನು ಸೇವಿಸಿದರೆ ಕೋಟಿ ಸಾವಿರ ತೀರ್ಥಗಳನ್ನು ಸೇವಿಸಿ ಏನು ಆಗಬೇಕು? ಶಾಲಗ್ರಾಮ ತೀರ್ಥವನ್ನು ಒಂದು ಜೊಟ್ಟು ತೆಗೆದುಕೊಂಡರೂ ಆಮೇಲೆ ಅವನು ತಾಯಿಯ ಹೊಟ್ಟೆಯಲ್ಲಿ ವಾಸಮಾಡಲಾರನು. ಶಾಲಗ್ರಾಮ ಸಮೀಪದಲ್ಲಿ ಎರಡು ಮೈಲಿನವರೆಗೆ ಒಂದುಕೀಟವು ಮೃತವಾದರೂ ಉತ್ತಮಲೋಕವನ್ನು ಹೊಂದುವುದು. ಯಾರು ಶಾಲಗ್ರಾಮದಾನ ಮಾಡುವನೋ ಅವನು ಸಮಸ್ತವಾದ ಭೂಮಿಯಲ್ಲಿ ದಾನ ಮಾಡಿದ ಫಲವನ್ನು ಹೊಂದುವನು.

ಶಾಲಿಗ್ರಾಮಕ್ಕೆ ಯಾರು ಬೆಲೆಯನ್ನು ನಿಶ್ಚಯಿಸುವನೋ ಅವನೂ ಶಾಲಿಗ್ರಾಮವನ್ನು ಮಾರುವನೂ ಶಾಲಿಗ್ರಾಮವನ್ನು ಪರೀಕ್ಷಿಸಿ ಆ ಬೆಲೆಯ ಸರಿಯೆಂದು ಅನುಮೋದನೆ ಮಾಡುವವನ್ನೂ ನರಕವನ್ನು ಹೊಂದುವರು. ಆದುದರಿಂದ ಶಾಲಿಗ್ರಾಮವನ್ನು ಮಾರಬಾರದು. ಪಾಪಭೀರುಗಳು ಯಾವಾಗಲೂ ಸರ್ವಪಾಪಪರಿಹಾರಕವಾದ ಭಗವಂತನ ಸ್ಮರಣೆಯನ್ನು ಮಾಡಬೇಕು. ಭಗವಂತನ ನಾಮಗಳನ್ನು ಭಕ್ತಿಯಿಂದ ಕೀರ್ತನ ಮಾಡುವುದರಿಂದ ಭೂಮಿಯಲ್ಲಿ ಇರುವ ಎಲ್ಲಾ ತೀರ್ಥಕ್ಷೇತ್ರಗಳಿಗೆ ಯಾತ್ರೆ ಮಾಡಿದ ಫಲವು ಬರುವುದು. ಯಾರು ಶ್ರೀನಾರಾಯಣನನ್ನು ಮರೆಹೊಂದುವವರೋ ಅವರಿಗೆ ಯಮಲೋಕವಿಲ್ಲ. ಅವರು ನರಕಕ್ಕೆ ಹೋಗುವವರಲ್ಲ. ವಿಷ್ಣುಭಕ್ತನಾದವನು ಭಗವದ್ಭಕ್ತರಾದ ರುದ್ರದೇವರನ್ನು ನಿಂದಿಸಿದರೆ ಉತ್ತಮ ಲೋಕವನ್ನು ಹೊಂದಲಾರನು. ಅರಣ್ಯದಲ್ಲಿ ಘೋರವಾದ ತಪಸ್ಸು ಮಾಡಿದರೆ ಉಂಟಾಗುವ ಫಲವು ಭಕ್ತಿಯಿಂದ ನಮಸ್ಕಾರ ಮಾಡಿದರೆ ಉಂಟಾಗುವುದು. ಮೋಹದಿಂದ ಬಹಳ ಪಾಪ ಮಾಡಿದ್ದರೂ ಭಕ್ತಿಯಿಂದ ಪರಮಾತ್ಮನಿಗೆ ನಮಸ್ಕರಿಸಿದರೆ ನರಕವನ್ನು ಹೊಂದುವುದಿಲ್ಲ. ಒಂದು ಏಕಾದಶೀ ಉಪವಾಸ ಮಾಡಿದರೆ ಯಮಲೋಕವನ್ನು ಹೊಂದಲಾರನು. ಏಕಾದಶಿಗೆ ಸಮಾನವಾದ ಪವಿತ್ರವಾದ ವಸ್ತುವು ಮೂರು ಲೋಕಗಳಲ್ಲಿಯೂ ಇರುವುದಿಲ್ಲ. ಏಕಾದಶಿಯಲ್ಲಿ ಉಪವಾಸ ಮಾಡುವ ವರೆಗೆ ಮಾತ್ರ ದೇಹದಲ್ಲಿ ಪಾಪಗಳು ವಾಸಮಾಡುವುವು. ಏಕಾದಶಿ ಉಪವಾಸ ಮಾಡಿದರೆ ಪಾಪಗಳೆಲ್ಲವೂ ಹೊರಟು ಹೋಗುವುವು. ಸಹಸ್ರ ಅಶ್ವಮೇಧಯಾಗಗಳೂ ನೂರು ವಾಜಪೇಯ ಯಾಗಗಳು

ಒಂದು ಏಕಾದಶೀ ಉಪವಾಸದ ಹದಿನಾರನೇ ಒಂದು ಅಂಶ ಪುಣ್ಯವನ್ನು ಉಂಟುಮಾಡಲಾರವು. ಹನ್ನೊಂದು ಇಂದ್ರಿಯಗಳಿಂದ ಮಾಡಿದ ಪಾಪಗಳೂ ಏಕಾದಶೀ ಉಪವಾಸದಿಂದ ನಾಶವನ್ನು ಹೊಂದುವುವು. ಏಕಾದಶಿಗೆ ಸಮಾನ ವಾದದ್ದು ಪುಣ್ಯಕರವಾದದ್ದು ಇನ್ನೊಂದು ಇರುವುದಿಲ್ಲ. ಯಾವುದಾದ ರೊಂದು ನಿಮಿತ್ತದಿಂದಲಾದರೂ ಉಪವಾಸ ಮಾಡಿದರೆ ಏಕಾದಶಿಯು ಯಮದೇವರ ದರ್ಶನ ಮಾಡಿಸಲಾರದು. ಏಕಾದಶಿಯು ಸ್ವರ್ಗಮೋಕ್ಷಗಳನ್ನು ಕೊಡುವುದು. ಶರೀರಾರೋಗ್ಯವನ್ನು ಉಂಟುಮಾಡುವುದೂ ಉತ್ತಮ ಪತ್ನಿಗೆ ಕಾರಣವಾಗುವುದು. ಜೀವತ್ಪುತ್ರರನ್ನು ಕೊಡುವುದು. ಗಂಗೆಯೂ ಗಯೆಯೂ ಪುಷ್ಕರವೂ ಕಾಶಿಯೂ ಯಾವ ವೈಷ್ಣವ ಕ್ಷೇತ್ರವೂ ಏಕಾದಶಿಗೆ ಸಮಾನವಾಗಲಾರದು.

ಏಕಾದಶಿಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣೆ ಮಾಡಿದರೆ ತಂದೆಯ ವಂಶದಲ್ಲಿಯೂ ತಾಯಿಯ ವಂಶದಲ್ಲಿಯೂ ಹತ್ತು ತಲೆಯ ವರೆಗಿನ ಪೂರ್ವಿಕರನ್ನು ಹಾಗೆಯೇ ಹೆಂಡತಿಯ ವಂಶದಲ್ಲಿ ಹತ್ತು ತಲೆಯವರೆಗಿನ ಪೂರ್ವಿಕರನ್ನು ಉದ್ಧರಿಸುವನು. ಬಾಲ್ಯದಲ್ಲಿಯೂ ಯೌವನದಲ್ಲಿಯೂ ಮುದಿತನ ದಲ್ಲಿಯೂ ದುರ್ಗತಿಯನ್ನು ಹೊಂದಲಾರನು. ದಶಮೀದ್ವಾದಶಿಗಳಲ್ಲಿ ಏಕಾ ಭೋಜನ ಮಾಡಿ ಏಕಾದಶೀ ಉಪವಾಸ ಮಾಡಿದವನೂ, ತೀರ್ಥಸ್ನಾನ ಮಾಡುವವನೂ ಬಂಗಾರ ಗೋವು ಎಳ್ಳುಗಳನ್ನು ದಾನಮಾಡಿದವನೂ ಸ್ವರ್ಗವನ್ನು ಹೊಂದುವರು. ಯಾರು ತೀರ್ಥಸ್ನಾನ ಮಾಡುವುದಿಲ್ಲವೋ ಬಂಗಾರ ದಾನ ಮಾಡುವುದಿಲ್ಲವೋ ತಪಸ್ಸನ್ನು ಮಾಡುವುದಿಲ್ಲವೋ ಅವರು ಎಲ್ಲಿಯೂ ದುಃಖವುಳ್ಳವರೇ ಆಗುತ್ತಾರೆ. ಸರ್ವಪ್ರಾಣಿಗಳಲ್ಲಿಯೂ ದ್ರೋಹ ಮಾಡದೆ ಇರುವುದೂ ಇಂದ್ರಿಯಗಳ ನಿಗ್ರಹ ಮಾಡುವುದೂ, ದಾನ ಮಾಡುವುದೂ, ಭಗವಂತನ ಸೇವಾ ಮಾಡುವುದೂ, ವರ್ಣಾಶ್ರಮಧರ್ಮಗಳನ್ನು ಶಾಸ್ತ್ರದಲ್ಲಿ ಹೇಳಿದಂತೆ ಮಾಡುತ್ತಾ ಬರುವುದು ನರಕದಿಂದ ತಪ್ಪಿಸುವ ಉಪಾಯಗಳು. ಸ್ವರ್ಗವನ್ನು ಅಪೇಕ್ಷಿಸುವ ಪುರುಷನು ಯಾವಾಗಲೂ ತಾನು ಮಾಡಿದ ತಪಸ್ಸನ್ನೂ ದಾನವನ್ನೂ ಹೇಳಿಕೊಳ್ಳಬಾರದು. ತನಗೆ ಹಿತವನ್ನು ಬಯಸುವವನು ನಿತ್ಯವೂ ಯಾವುದನ್ನಾದರೂ ದಾನಮಾಡುತ್ತಾ ಇರಬೇಕು. ಪಾದರಕ್ಷೆಯನ್ನೋ ಕೊಡೆ ಯನ್ನೋ ವಸ್ತ್ರವನ್ನೋ ಅನ್ನವನ್ನೋ ಗೆಡ್ಡೆಯನ್ನೋ ಹಣ್ಣನ್ನೋ ನೀರನ್ನೋ ಯಾವುದಾದರೂ ದಾನಮಾಡಬೇಕು. ದರಿದ್ರನಾದರೂ ದಿವಸವನ್ನು ವ್ಯರ್ಥಮಾಡ ಬಾರದು. ದಾನಮಾಡದೆ ಇದ್ದದ್ದು ಈ ಲೋಕದಲ್ಲಿಯೋ ಪರಲೋಕದಲ್ಲಿಯೋ

ಸಿಗಲಾರದು ಎಂದು ತಿಳಿದುಕೊಂಡು ಶಕ್ತಿಯನ್ನು ಅನುಸರಿಸಿ ಯಾವಾಗಲೂ ದಾನಮಾಡಬೇಕು. ದಾನಮಾಡಿದವರು ಯಮಯಾತನೆಯನ್ನು ನೋಡಲಾರರು. ದಾನಮಾಡಿದವರು ಪುನಃ ಪುನಃ ದೀರ್ಘಾಯುಷ್ಯವುಳ್ಳವರಾಗಿಯೂ ಹಣವಂತ ರಾಗಿಯೂ ಹುಟ್ಟುವರು. ಹೆಚ್ಚಿಗೆ ಹೇಳಿ ಏನು ಪ್ರಯೋಜನವಿದೆ? ಅಧರ್ಮದಿಂದ ದುರ್ಗತಿಯನ್ನು ಹೊಂದುವರು. ಧರ್ಮದಿಂದ ಸ್ವರ್ಗವನ್ನು ಹೊಂದುವರು. ಆದುದರಿಂದ ಬಾಲ್ಯವನ್ನು ಆರಂಭಿಸಿಯೇ ಧರ್ಮವನ್ನು ಮಾಡಬೇಕು.



# ರುದ್ರಪಾರ್ವತಿಯರ ಸಂವಾದ [1]

## ಅಧ್ಯಾಯ – 218

**ಶ್ಲೋಕ : 1–3** ಪಾರ್ವತೀದೇವಿಯರು ರುದ್ರದೇವರೊಡನೆ 'ದೇವೋ ತ್ತಮರೇ! ಲೋಕದಲ್ಲಿ ಮನುಷ್ಯರು ಮೂರು ವಿಧವಾಗಿ ಕಾಣಿಸುವರು. ಕೂತಲ್ಲಿಯೇ ಎಂದರೆ ಪ್ರಯತ್ನ ಮಾಡದೇ ಬೇಕಾದ ಐಶ್ವರ್ಯಭೋಗಾದಿಗಳನ್ನು ಹೊಂದುವರು. ಕೆಲವರು ಬಹುಪ್ರಯತ್ನಮಾಡಿ ಐಶ್ವರ್ಯಾದಿಗಳನ್ನು ಹೊಂದುವರು. ಇನ್ನೂ ಕೆಲವರು ಪ್ರಯತ್ನಮಾಡಿದರೂ ಐಶ್ವರ್ಯಾದಿಗಳನ್ನು ಹೊಂದುವುದಿಲ್ಲ, ಹೀಗೆ ಆಗಲಿಕ್ಕೆ ಕಾರಣವೇನು' ಎಂದು ಕೇಳಿದರು.

**4–14** ಅದಕ್ಕೆ ರುದ್ರದೇವರು 'ದೇವಿ! ಸರಿಯಾದ ಪ್ರಶ್ನೆಗಳನ್ನು ಮಾಡುತ್ತಿರುವಿ ಯಲ್ಲಾ! ಯಾವ ಜನರು ದಾನಧರ್ಮಗಳಲ್ಲಿ ಆಸಕ್ತರಾಗಿ ದೂರದಲ್ಲಿ ಇರುವ ಸತ್ಪಾತ್ರರನ್ನು ತಿಳಿದುಕೊಂಡು ಅವರಿದ್ದಲ್ಲಿಗೆ ತಾವೇ ಹೋಗಿ ಅವರನ್ನು ಸಂತೋಷಪಡಿಸಿ, ಅವರಿಗೆ ಮೊದಲು ತಿಳಿಸದೆ ಅವರಿಗೆ ಬೇಕಾದ ವಸ್ತುಗಳನ್ನು ತಾವೇ ತಿಳಿದುಕೊಂಡು ದಾನಮಾಡುವರೋ ಅವರು ಪ್ರಯತ್ನಮಾಡದೆಯೇ ಆಮೇಲಿನ ಜನ್ಮದಲ್ಲಿ ಕೂತಲ್ಲಿಯೇ ಬೇಕಾದ ಐಶ್ವರ್ಯವನ್ನು ಭೋಗಗಳನ್ನೂ ಹೊಂದುವರು. ಇನ್ನು ಕೆಲವರು ತಮ್ಮ ಸಮೀಪಕ್ಕೆ ಬಂದು ಬೇಡಿಕೊಂಡವರಿಗೆ ಮಾತ್ರ ದಾನಮಾಡುವರು ಬೇಡಿಕೊಳ್ಳದೆ ಇದ್ದರೆ ದಾನಮಾಡಲಾರರು. ಅವರು ಬೇರೆ ಜನ್ಮದಲ್ಲಿ ಪ್ರಯತ್ನಮಾಡಿ ಶ್ರಮದಿಂದ ಐಶ್ವರ್ಯಾದಿಗಳನ್ನು ಹೊಂದುವರು. ಇನ್ನೂ ಕೆಲವರು ಮನೆಗೆ ಬಂದು ಯಾಚನೆ ಮಾಡಿದರೂ ಲೋಭದಿಂದ ಕೂಡಿದ

1. ಟಿ.ಆರ್.ಕೆ.ಮ.ಭಾ.ಅ.ಪ.ಅ–218. ಹಿದ 222

ಮನಸ್ಸುಳ್ಳವರಾಗಿ ಅಸೂಯಾವುಳ್ಳವರಾಗಿ ತಾವು ಶಕ್ತರಾಗಿದ್ದರೂ ದಾನವನ್ನು ಮಾಡದೆಯೇ ಇರುತ್ತಾರೋ ಅವರು ಬೇರೆ ಜನ್ಮದಲ್ಲಿ ಬಹು ಪ್ರಯತ್ನ ಮಾಡಿದರೂ ಯಾರ ಹತ್ತಿರ ಬೇಡಿದರೂ ಹೊಂದಲಾರರು. ಬೀಜವನ್ನು ಬಿತ್ತದೆ ಫಲವನ್ನು ಹೊಂದಲಿಕ್ಕೆ ಆಗಲಾರದು. ಹಾಗೆಯೇ ದಾನಮಾಡದೆ ಐಶ್ವರ್ಯಾದಿಗಳನ್ನು ಹೊಂದಲಿಕ್ಕೆ ಆಗಲಾರದು' ಎಂದರು.

**15–16 ಪಾರ್ವತೀದೇವಿಯರು–**ಕೆಲವರು ಮುದುಕರಾದ ಮೇಲೆ ಸುಖವನ್ನು ಅನುಭವಿಸಲಿಕ್ಕೆ ಶಕ್ತಿಯಿಲ್ಲದ ಸಮಯದಲ್ಲಿ ಬೇಕಾದ ಐಶ್ವರ್ಯವನ್ನು ಹೊಂದು ವರು. ಅದಕ್ಕೇನು ಕಾರಣ?

**17–21 ರುದ್ರದೇವರು—**ಕೆಲವರು ಬಹುಕಾಲ ಧರ್ಮಕಾರ್ಯವನ್ನು ಮರೆತು ಬಿಡುವವರಾಗಿ ಪ್ರಾಣಾಂತಕಾಲವು ಬರುವಾಗ ಹಣವಂತರಾದವರು. ರೋಗದಿಂದ ಪೀಡಿತರಾಗಿ ಆಮೇಲೆ ದಾನಧರ್ಮಗಳನ್ನು ಮಾಡಲಿಕ್ಕೆ ಆರಂಭಿಸುವರೋ ಅವರು ಬೇರೆ ಜನ್ಮದಲ್ಲಿ ಮೊದಲು ದುಃಖವನ್ನು ಅನುಭವಿಸಿ ಸುಖವನ್ನು ಅನುಭವಿಸುವ ಯೌವನ ಕಾಲವು ಹೋದಮೇಲೆ ಮುದುಕರಾದ ಮೇಲೆ ಪೂರ್ವದಲ್ಲಿ ದಾನಮಾಡಿದ ಫಲವನ್ನು ಹೊಂದುವರು.

**22 ಪಾರ್ವತೀದೇವಿಯರು—**ಕೆಲವರು ಬೇಕಾದ ಸುಖಕ್ಕೆ ಬೇಕಾದ ಪದಾರ್ಥ ಗಳು ಇದ್ದರೂ ನಾನಾ ರೋಗಗಳಿಂದ ಪೀಡಿತರಾಗಿ ಅನುಭವಿಸಲಿಕ್ಕೆ ಅಸಮರ್ಥರಾಗಿರುವರು. ಇದಕ್ಕೇನು ಕಾರಣ?

**23–24 ರುದ್ರದೇವರು—**ಯಾರು ಪೂರ್ವಜನ್ಮದಲ್ಲಿ ತುಂಬಾ ರೋಗವುಳ್ಳವ ರಾಗಿ ತಾವು ಬದುಕುವುದರಲ್ಲಿ ಆಸೆಯಿಲ್ಲದವರಾಗಿ ಆಮೇಲೆ ದಾನ ಮಾಡಲಿಕ್ಕೆ ಆರಂಭಿಸುವರೋ ಅವರು ಬೇರೆ ಜನ್ಮದಲ್ಲಿ ಅದರ ಫಲವಾಗಿ ಬೇಕಾದ ವಸ್ತುಗಳನ್ನು ಹೊಂದಿದ್ದರೂ ರೋಗದಿಂದ ಪೀಡಿತರಾಗಿ ಅನುಭವಿಸಲಿಕ್ಕೆ ಅಸಮರ್ಥ ರಾಗುವರು.

**25 ಪಾರ್ವತೀದೇವಿಯರು—**ಮನುಷ್ಯರಲ್ಲೇ ಕೆಲವರು ರೂಪವಂತರಾಗಿ ಶುಭವಾದ ಅಂಗವುಳ್ಳವರಾಗಿ ಕಾಣಿಸುವರಲ್ಲಾ' ಇದಕ್ಕೆಲ್ಲಾ ಕಾರಣ?

**26–29 ರುದ್ರದೇವರು—**ಯಾರು ಪೂರ್ವದಲ್ಲಿ ಪಾಪಕಾರ್ಯವನ್ನು ಮಾಡಲಿಕ್ಕೆ ಲಜ್ಜಾವುಳ್ಳವರಾಗಿ ಪ್ರಿಯವಾಗಿ ಮಾತನಾಡುವವರಾಗಿ ಸ್ವಭಾವದಿಂದಲೇ ಒಳ್ಳೆಯವರಾಗಿರುವರೋ ಮಾಂಸವನ್ನು ಭೋಜನ ಮಾಡಲಾರರೋ ಪ್ರಾಣಿಗಳಲ್ಲಿ

ದಯವುಳ್ಳವರಾಗಿರುವರೋ ವಸ್ತ್ರದಾನವನ್ನು ಮಾಡುವರೋ ಅಗ್ನಿಪೂಜಾ ಮಾಡುವರೋ ಅವರು ಬೇರೆ ಜನ್ಮದಲ್ಲಿ ರೂಪವಂತರಾಗಿ ಆಗುವರು.

30 **ಪಾರ್ವತೀದೇವಿಯರು**—ಕೆಲವು ಮನುಷ್ಯರು ಕುರೂಪಿಗಳಾಗಿರುವರಲ್ಲಾ! ಅದಕ್ಕೇನು ಕಾರಣ?

31–34 **ರುದ್ರದೇವರು**—ಯಾರು ಪೂರ್ವದಲ್ಲಿ ರೂಪವಂತರಾಗಿದ್ದುಕೊಂಡು ಅದರಿಂದ ಅಹಂಕಾರವುಳ್ಳವರಾಗಿರುವರೋ, ಕುರೂಪಿಗಳನ್ನು ಅಪಹಾಸ ಮಾಡುವರೋ ಇನ್ನೊಬ್ಬರಿಗೆ ಸಂತಾಪವನ್ನು ಉಂಟುಮಾಡುವರೋ, ಮಾಂಸ ಭಕ್ಷಣ ಮಾಡುವರೋ, ಅಸೂಯಾವುಳ್ಳವರಾಗಿರುವರೋ, ಅಶುದ್ಧರಾಗಿರುವರೋ, ಅವರು ಯಮಲೋಕದಲ್ಲಿ ಶಿಕ್ಷೆಯನ್ನು ಹೊಂದಿ ಬಹುಕಷ್ಟದಿಂದ ಮನುಷ್ಯಜನ್ಮವನ್ನು ಹೊಂದಿ ಕುರೂಪಿಗಳಾಗಿ ಹುಟ್ಟುತ್ತಾರೆ.

35 **ಪಾರ್ವತೀದೇವಿಯರು**—ಲೋಕದಲ್ಲಿ ಕೆಲವರು ಸೌಭಾಗ್ಯವುಳ್ಳವರಾಗಿ ರೂಪದಿಂದಲೂ ಭೋಗಕ್ಕೆ ಬೇಕಾದ ಪದಾರ್ಥಗಳಿಂದಲೂ ರಹಿತರಾಗಿದ್ದರೂ ಸ್ತ್ರೀಯರಿಗೆ ಪ್ರಿಯರಾಗಿರುತ್ತಾರೆ. ಇದಕ್ಕೆ ಕಾರಣವೇನು?

36–39 **ರುದ್ರದೇವರು**—ಯಾರು ಪೂರ್ವದಲ್ಲಿ ಒಳ್ಳೇ ಸ್ವಭಾವವುಳ್ಳವರಾಗಿ ಪ್ರಿಯವಾದ ಮಾತುಳ್ಳವರಾಗಿ ತಮ್ಮ ಪತ್ನಿಯರಿಂದಲೇ ಸಂತುಷ್ಟರಾಗಿರುವರೋ, ಅನೇಕ ಪತ್ನಿಯರಿದ್ದರೆ ಅವರಲ್ಲಿ 'ಸಮರಾಗಿ ಇರುವರೋ, ಅಪ್ರಿಯಸ್ತ್ರೀಯರಲ್ಲಿಯೂ ದಾಕ್ಷಿಣ್ಯದಿಂದಲೇ ಇರುತ್ತಾರೋ, ನಿರಾಕರಣೆ ಮಾಡುವುದಿಲ್ಲವೋ, ಸರಿಯಾದ ಕಾಲದಲ್ಲಿ ಜನರಿಗೆ ಅನ್ನಪಾನೀಯಗಳನ್ನು ಕೊಡುವರೋ, ರುಚಿಕರ ವಸ್ತುಗಳನ್ನು ಕೊಡುವರೋ, ಧೈರ್ಯವುಳ್ಳವರಾಗಿರುವರೋ ಅವರು ಬೇರೆ ಜನ್ಮದಲ್ಲಿ ಭೋಗ್ಯಪದಾರ್ಥಗಳೂ ಹಣವೂ ಇಲ್ಲದಿದ್ದರೂ ಸ್ತ್ರೀಯರಿಗೆ ಪ್ರಿಯರಾಗಿರುವರು.

40 **ಪಾರ್ವತೀದೇವಿಯರು**—ಕೆಲವರು ಹಣವಂತರಾಗಿದ್ದರೂ ಬೇಕಾದ ಭೋಗ್ಯಪದಾರ್ಥವುಳ್ಳವರಾಗಿದ್ದರೂ ಸ್ತ್ರೀಯರಿಗೆ ಪ್ರಿಯರಾಗಿರುವುದಿಲ್ಲ ಇದಕ್ಕೇನು ಕಾರಣ?

41–44 **ರುದ್ರದೇವರು**—ಯಾರು ಪೂರ್ವರಲ್ಲಿ ತಮ್ಮ ಪತ್ನಿಯರನ್ನು ಬಿಟ್ಟು ಬಿಡುವವರಾಗಿ, ಲಜ್ಜಾರಹಿತರಾಗಿ ಇಚ್ಛಾನುಸಾರವಾಗಿ ಇರುವರೋ, ಇನ್ನೊಬ್ಬರಿಗೆ ಅಪ್ರಿಯವನ್ನು ಮಾಡುವರೋ, ಸ್ತ್ರೀಯರಿಗೆ ಕೋಪಗೊಳಿಸುವರೋ, ಅವರು ಬೇರೆ

ಜನ್ಮದಲ್ಲಿ ಸ್ತ್ರೀಯರಿಗೆ ಅಪ್ರಿಯರಾಗುವರು. ಅವರಿಗೆ ತಮ್ಮ ಪತ್ನಿಯರಲ್ಲಿಯೂ ಸುಖವು ಸಿಗಲಾರದು.

## ಅಧ್ಯಾಯ–219

**ಶ್ಲೋ. 1–2 ಪಾರ್ವತೀದೇವಿಯರು**—ಮನುಷ್ಯರಲ್ಲೇ ಕೆಲವರು ಜ್ಞಾನಿಗಳಾಗಿ ಬುದ್ಧಿವಂತ ರಾಗಿ ಇದ್ದರೂ ಏನು ಪ್ರಯತ್ನ ಮಾಡಿದರೂ ದರಿದ್ರರಾಗಿಯೇ ಇರುತ್ತಾರೆ. ಇದಕ್ಕೇನು ಕಾರಣ?

**3–5 ರುದ್ರದೇವರು**—ಯಾರು ಪೂರ್ವದಲ್ಲಿ ಶಾಸ್ತ್ರವನ್ನು ಓದಿದವರಾದರೂ ತಮ್ಮಲ್ಲಿಯೇ ಆಸಕ್ತರಾಗಿರುವರು. ಎಂದರೆ ಇನ್ನೊಬ್ಬರಿಗೆ ಏನೂ ದಾನಮಾಡ ಲಾರರೋ ಅವರು ಬೇರೆ ಜನ್ಮದಲ್ಲಿ ಬುದ್ಧಿವಂತರಾಗಿದ್ದರೂ ದರಿದ್ರರಾಗಿಯೇ ಇರುವರು. ದಾನವನ್ನು ಮಾಡದೆ ಯಾವುದೂ ಸಿಗಲಾರದು.

**6 ಪಾರ್ವತಿದೇವಿಯರು**—ಕೆಲವರು ಲೋಕದಲ್ಲಿ ಜ್ಞಾನರಹಿತರಾಗಿ ಮೂರ್ಖ ರಾಗಿದ್ದರೂ ಹಣವಂತರಾಗಿ ಭಾಗ್ಯವಂತರಾಗಿ ಇರುವರಲ್ಲಾ! ಇದಕ್ಕೇನು ಕಾರಣ?

**7–9 ರುದ್ರದೇವರು**—ದೇವಿ! ಯಾರು ಪೂರ್ವಜನ್ಮದಲ್ಲಿ ಮೂಢರಾಗಿದ್ದು ಕೊಂಡು ದೀನರಿಗೆ ಸಹಾಯವಾಗಲಿ ಎಂದು ದಾನಮಾಡುವರೋ ಅಂತಹವರು ಮತ್ತೊಂದು ಜನ್ಮದಲ್ಲಿ ಭಾಗ್ಯವಂತರಾಗುವರು. ತಿಳಿದೋ ತಿಳಿಯದೆಯೋ ದಾನಮಾಡಿದರೂ ಅದರ ಫಲವನ್ನು ಹೊಂದಿಯೇ ಹೊಂದುವರು.

**10 ಪಾರ್ವತೀದೇವಿಯರು**—ದೇವ! ಮನುಷ್ಯರಲ್ಲೇ ಕೆಲವರು ಒಳ್ಳೇ ಬುದ್ಧಿವಂತರಾಗಿಯೂ ಜ್ಞಾಪಕಶಕ್ತಿಯುಳ್ಳವರಾಗಿಯೂ ಚೆನ್ನಾಗಿ ಉಪದೇಶ ಮಾಡುವ ಶಕ್ತಿಯುಳ್ಳವರಾಗಿಯೂ ಇರುವರು. ಇದಕ್ಕೇನು ಕಾರಣ?

**11–13 ರುದ್ರದೇವರು**—ದೇವಿ! ಯಾರು ಪೂರ್ವದಲ್ಲಿ ಚೆನ್ನಾಗಿ ಗುರುಗಳ ಸೇವೆಯನ್ನು ಮಾಡಿ ವಿಧಿಪ್ರಕಾರವಾಗಿ ಶಾಸ್ತ್ರವನ್ನು ಓದುವರೋ ವಿಧಿ ಪ್ರಕಾರವಾಗಿಯೇ ಇನ್ನೊಬ್ಬರಿಗೆ ಉಪದೇಶಿಸುವರೋ ತಮ್ಮನ್ನು ಸ್ತೋತ್ರಮಾಡ ಲಾರರೋ ಮಿತವಾಗಿ ಮಾತಾಡುವರೋ ವಿದ್ಯಾಸ್ಥಾನಗಳನ್ನು ಸ್ಥಾಪಿಸುವರೋ ಅವರು ಬೇರೆ ಜನ್ಮದಲ್ಲಿ ಒಳ್ಳೇ ಬುದ್ಧಿವಂತರಾಗುವರು.

**14 ಪಾರ್ವತೀದೇವಿಯರು**—ಕೆಲವರು ಎಷ್ಟು ಓದಿದರೂ ಎಷ್ಟು ಪ್ರಯತ್ನ ಮಾಡಿದರೂ ಪಾಂಡಿತ್ಯವನ್ನು ಹೊಂದಲಿಕ್ಕೆ ಆಗುವುದಿಲ್ಲ. ಇದಕ್ಕೆ ಏನು ಕಾರಣ?

**15–17 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಜ್ಞಾನದಿಂದ ಅಹಂಕಾರ

ಉಳ್ಳವರಾಗಿ ತಮ್ಮನ್ನು ಸ್ತೋತ್ರಮಾಡಿಕೊಳ್ಳುವವರಾಗಿ ಇನ್ನೊಬ್ಬರನ್ನು ಯಾವಾಗಲೂ ನಿಂದಿಸುತ್ತಾರೋ, ಇನ್ನೊಬ್ಬರನ್ನು ನೋಡಿ ಸಹಿಸುವುದಿಲ್ಲವೋ, ಅವರ ಮೇಲೆ ಅಸೂಯೆಯನ್ನು ಹೊಂದುತ್ತಾರೋ, ಅಂತಹ ಜನ್ಮ ಆಮೇಲೆ ಬೇರೆ ಜನವನ್ನು ಹೊಂದಿದವರಾಗಿ ಬಹುಕಾಲದ ಮೇಲೆ ಮನುಷ್ಯದೇಹವನ್ನು ಹೊಂದಿದವರಾಗಿ ಎಷ್ಟು ಪ್ರಯತ್ನಮಾಡಿದರೂ ಪಂಡಿತರಾಗುವುದಿಲ್ಲ. ಬುದ್ಧಿಹೀನರೇ ಆಗುವರು.

**18–21 ಪಾರ್ವತೀದೇವಿಯರು**—ಕೆಲವು ಮನುಷ್ಯರು ಸರ್ವಮಂಗಳಗಳಿಂದ ಕೂಡಿದವರಾಗಿ ಹೆಂಡತಿ ಮಕ್ಕಳಿಂದಲೂ ದಾಸೀದಾಸರಿಂದಲೂ ಯುಕ್ತರಾಗಿ ಒಳ್ಳೇ ಬುದ್ಧಿವಂತರಾಗಿ ಅಧಿಕಾರಯುಕ್ತರಾಗಿ ರೋಗಹೀನರಾಗಿ ಸರ್ವಪೀಡೆಗಳಿಂದ ರಹಿತರಾಗಿ ರೂಪ ಆರೋಗ್ಯ ಬಲಗಳಿಂದ ಕೂಡಿದವರಾಗಿ ಧನಧಾನ್ಯಯುಕ್ತರಾಗಿ ಉಪ್ಪರಿಗೆ ಮನೆಗಳಿಂದಲೂ ವಾಹನಗಳಿಂದಲೂ ಕೂಡಿದವರಾಗಿ ವಿಚಿತ್ರ ಮನೋಹರಭೋಗಗಳಿಂದ ಸಹಿತರಾಗಿ ಯಾವ ವಿಘ್ನವೂ ಇಲ್ಲದೆ ನಿತ್ಯವೂ ಬಂಧುಗಳಿಂದ ಸಂತೋಷದಿಂದ ಇರುತ್ತಾರಲ್ಲ! ಇದು ಯಾವ ಕಾರಣದಿಂದ?

**22–28 ರುದ್ರದೇವರು**—ಪೂರ್ವದಲ್ಲಿ ಯಾವ ಮನುಷ್ಯರು ಹಣವಿರಲಿ ಅಥವಾ ಇಲ್ಲದೆ ಇರಲಿ ಶಾಸ್ತ್ರವನ್ನು ಓದಿಕೊಂಡವರಾಗಿ ದಾನವನ್ನು ಮಾಡಲಿಕ್ಕೆ ಆಸೆಯುಳ್ಳವರಾಗಿ ಶಾಸ್ತ್ರದಲ್ಲಿ ಪ್ರಿಯರಾಗಿ ಇನ್ನೊಬ್ಬರ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು. ದಾನಮಾಡಬೇಕೆಂದು ನಿಶ್ಚಯಉಳ್ಳವರಾಗಿ ಸತ್ಯವಚನ ಉಳ್ಳವರಾಗಿ ಕ್ಷಮಾಸ್ವಭಾವವುಳ್ಳವರಾಗಿ, ಲೋಭಮೋಹರಹಿತರಾಗಿ, ಸತ್ಪಾತ್ರದಲ್ಲಿ ದಾನಮಾಡುವವರಾಗಿ, ನಾನಾವ್ರತ ನಿಯಮವುಳ್ಳವರಾಗಿ, ಇನ್ನೊಬ್ಬರ ದುಃಖವನ್ನು ತಮ್ಮ ದುಃಖವೆಂದೇ ಭಾವನೆ ಮಾಡುವವರಾಗಿ, ಸದಾಚಾರವುಳ್ಳವರಾಗಿ, ದೇವಬ್ರಾಹ್ಮಣರನ್ನು ಪೂಜಿಸುವವರಾಗಿ, ಇರುತ್ತಾರೋ ಅವರು ಸ್ವರ್ಗಕ್ಕೆ ಹೋಗುವರು. ಭೂಮಿಯಲ್ಲಿ ಪೂರ್ವದಲ್ಲಿ ಹೇಳಿದಂತೆ ಹುಟ್ಟುವರು. ಎಲ್ಲವೂ ದಾನದಿಂದ ದೊರೆಯುವುದು.

**29–30 ಪಾರ್ವತೀದೇವಿಯರು**—ಕೆಲವರು ಮನುಷ್ಯರಲ್ಲೇ ದುರ್ಗತಿಉಳ್ಳವರಾಗಿ ಕ್ಲೇಶವಧಿಕವುಳ್ಳವರಾಗಿ ದಾನಭೋಗರಹಿತರಾಗಿ ಭಯವುಳ್ಳವರಾಗಿ ರೋಗ ಹಸಿವೆಗಳಿಂದ ಪೀಡಿತರಾಗಿ ದುಷ್ಟ ಹೆಂಡತಿಯರಿಂದ ಕೂಡಿದವರಾಗಿ ಯಾವಾಗಲೂ ವಿಘ್ನವುಳ್ಳವರಾಗಿ ಕಾಣಿಸುವರಲ್ಲಾ! ಇದಕ್ಕೇನು ಕಾರಣ?

**31–35ರುದ್ರದೇವರು**—ದೇವಿ! ಯಾರು ಪೂರ್ವದಲ್ಲಿ ಅಸುರ ಸ್ವಭಾವವುಳ್ಳವರಾಗಿ ಕ್ರೋಧಲೋಭವುಳ್ಳವರಾಗಿ, ಅನ್ನರಹಿತರಾಗಿ ನಾಸ್ತಿಕರಾಗಿ, ವಂಚಕ

ರಾಗಿ, ಮೂರ್ಖರಾಗಿ, ಇನ್ನೊಬ್ಬರನ್ನು ಪೀಡಿಸುವವರಾಗಿ, ಪ್ರಾಣಿಗಳಲ್ಲಿ ದಯಾ ಹೀನರಾಗಿ ಇರುವರೋ ಅವರು ಬೇರೆ ಜನ್ಮದಲ್ಲಿ ಮನುಷ್ಯತ್ವವನ್ನು ಹೊಂದಿ ಅಲ್ಲಿ ದುಃಖದಿಂದ ಪೀಡಿತರಾಗಿ ಪೂರ್ವದಲ್ಲಿ ಹೇಳಿದಂತೆ ಆಗುವರು. ಈರೀತಿಯಾಗಿ ಪುಣ್ಯಕ್ಕೆ ಸುಖವೂ ಪಾಪಕ್ಕೆ ದುಃಖವೂ ಫಲವಾಗಿರುವುದು.

## ಅಧ್ಯಾಯ – 220

**ಶ್ಲೋಕ 1 ಪಾರ್ವತೀದೇವಿಯರು**—ಕೆಲವರು ಹುಟ್ಟು ಕುರುಡರಾಗಿರುವರು. ಅಥವಾ ಆಮೇಲೆ ಕುರುಡರಾಗುವರು. ಇದಕ್ಕೇನು ಕಾರಣ?

**2–6 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಮನಸ್ಸು ಬಂದಂತೆ ಇನ್ನೊಬ್ಬರ ಮನೆಯಲ್ಲಿ ಇದ್ದುಕೊಂಡು ದುಷ್ಟಕಣ್ಣುಗಳಿಂದ ಪರಸ್ತ್ರೀಯರನ್ನು ನೋಡುವರೋ, ಕ್ರೋಧಲೋಭದಿಂದ ಇನ್ನೊಬ್ಬರನ್ನು ಕುರುಡರನ್ನಾಗಿ ಮಾಡು ವರೋ, ವಿಪರೀತ ವಾಗಿ ಹೇಳುವರೋ, ಅವರು ಸತ್ತಮೇಲೆ ಬಹುಕಾಲ ನರಕದಲ್ಲಿ ಇದ್ದು ಯಮಶಿಕ್ಷೆಯನ್ನು ಪಡೆದು ಮನುಷ್ಯರಾಗಿ ಹುಟ್ಟಿದರೆ, ಹುಟ್ಟುವಾಗಲೇ ಕುರುಡರಾಗಿ ಹುಟ್ಟುವರು ಅಥವಾ ಹುಟ್ಟಿದ ಮೇಲೆ ಕುರುಡರಾಗುವರು. ಅಥವಾ ಕಣ್ಣಿನ ರೋಗವುಳ್ಳವರಾಗುವರು.

**7–8 ಪಾರ್ವತೀದೇವಿಯರು**—ಕೆಲವರು ಮುಖರೋಗವುಳ್ಳವರಾಗಿರುವರು. ಹಲ್ಲುನೋವು ಕುತ್ತಿಗೆನೋವು ಕಪೋಲಸೋವು ಎಂದು ನಾನಾರೋಗಗಳಿಂದ ಬಳಲುತ್ತಿರುವರು. ಕೆಲವರು ಹುಟ್ಟಿದ್ದನ್ನು ಆರಂಭಿಸಿಯೇ ಬಳಲುವರು. ಕೆಲವರು ಹುಟ್ಟಿ ಕೆಲವು ಸಮಯವಾದ ಮೇಲೆ ರೋಗಗಳಿಂದ ಪೀಡಿತರಾಗುವರು. ಇದಕ್ಕೇನು ಕಾರಣ?

**9–13 ರುದ್ರದೇವರು**—ಯಾರು ನಾಲಿಗೆಯಿಂದ ಕೆಟ್ಟ ಮಾತನ್ನು ಆಡುವರೋ, ಕಠಿಣವಾದ ಸುಳ್ಳಾದ ಘೋರವಾದ ಮಾತನ್ನು ಗುರುಗಳಿಗೋ, ಇತರರಿಗೋ, ಹೇಳುವರೋ, ಇನ್ನೊಬ್ಬರ ನಾಲಿಗೆಗೆ ಪೀಡೆಯುಂಟಾಗುವಂತೆ ಮಾಡುವರೋ, ಹೆಚ್ಚಾಗಿ ಸುಳ್ಳನ್ನೇ ಹೇಳುತ್ತಿರುವರೋ ಅಂತಹವರಿಗೆ ನಾಲಿಗೆಯ ಪ್ರದೇಶದಲ್ಲಿ ರೋಗವು ಬರುವುದು. ಹಾಳು ಮಾತನ್ನು ಕೇಳುವರೋ ಇನ್ನೊಬ್ಬರ ಕಿವಿಯನ್ನು ನಾಶಮಾಡುವರೋ ಅವರಿಗೆ ಕಿವಿಯ ರೋಗವು ಬರುವುದು. ಹಲ್ಲುರೋಗ ತಲೆನೋವು ಕಿವಿರೋಗ ಎಲ್ಲವೂ ತಾನು ಮಾಡಿದ ಪಾಪದಿಂದಲೇ ಬರುವುವು.

**14–15 ಪಾರ್ವತೀದೇವಿಯರು**—ಕೆಲವರು ನಾನಾ ವಿಧವಾದ ಹೊಟ್ಟೆನೋವಿನಿಂದ ಪೀಡಿತರಾಗಿರುವರಲ್ಲಾ ಇದಕ್ಕೇನು ಕಾರಣ?

**16–19 ರುದ್ರದೇವರು**—ಯಾರು ಕಾಮಕ್ರೋಧಪರವಶರಾಗಿ ತಾನೇ ಆಹಾರವನ್ನು ತಿನ್ನುತ್ತಾರೆ. ಇನ್ನೊಬ್ಬರಿಗೆ ಹಾಕಲಾರರು. ತಮ್ಮ ವಿಶ್ವಾಸವುಳ್ಳವರಿಗೆ ವಿಷವನ್ನು ಹಾಕುವರೋ ನಿಷಿದ್ಧಭಕ್ಷ್ಯವನ್ನು ಕೊಡುವರೋ ಶೌಚಮಂಗಲಗಳಿಂದ ರಹಿತರಾಗಿರುವರೋ ಮಾಂಸವನ್ನು ತಿನ್ನುವರೋ ಅವರು ಮನುಷ್ಯರಾಗಿ ಹುಟ್ಟಿದಮೇಲೆ ನಾನಾ ಹೊಟ್ಟೆನೋವುಗಳಿಂದ ಯುಕ್ತರಾಗುವರು.

**20 ಪಾರ್ವತೀದೇವಿಯರು**—ಇನ್ನೂ ಕೆಲವರು ನಾನಾವಿಧ ಸ್ತ್ರೀಸಂಬಂಧದಿಂದ ಬಂದ ಭಯಂಕರರೋಗಗಳಿಂದ ಶ್ರಮಪಡುತ್ತಿರುವರಲ್ಲಾ ಇದಕ್ಕೇನು ಕಾರಣ?

**21–23 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಪರಸ್ತ್ರೀಯರನ್ನು ಬಲಾತ್ಕರಿಸುವರೋ, ಕಾಮದಿಂದ ಕನ್ಯೆಯರಲ್ಲಿಯೂ, ವಿಧವೆಯರಲ್ಲಿಯೂ, ಬಲಾತ್ಕಾರ ಮಾಡುತ್ತಾರೋ, ಅಂತಹವರು ಮನುಷ್ಯಜನ್ಮವನ್ನು ಹೊಂದಿದರೆ ಸ್ತ್ರೀಸಂಬಂಧ ರೋಗದಿಂದ ಶ್ರಮಪಡುವರು.

**24 ಪಾರ್ವತೀದೇವಿಯರು**—ಕೆಲವರು ತುಂಬಾ ಕೃಶರಾಗಿರುತ್ತಾರೆ. ಇದಕ್ಕೇನು ಕಾರಣ?

**25–27 ರುದ್ರದೇವರು**—ದೇವಿ! ಯಾರು ಪೂರ್ವದಲ್ಲಿ ಮಾಂಸದಲ್ಲಿ ಆಸೆಯುಳ್ಳವರಾಗಿ ತಾವೇ ರುಚಿಕರವಾದ ಆಹಾರವನ್ನು ಭೋಜನ ಮಾಡುವವರಾಗಿ ಇನ್ನೊಬ್ಬರ ಭೋಗಕ್ಕೆ ವಿಘ್ನವನ್ನು ಮಾಡುವವರಾಗಿ ಇನ್ನೊಬ್ಬರ ಭೋಗವನ್ನು ನೋಡಿ ಅಸೂಯಾಪಡುವವರಾಗಿ ಇರುತ್ತಾರೋ ಅವರು ಬೇರೆ ಜನ್ಮದಲ್ಲಿ ಮನುಷ್ಯರಾಗಿ ಹುಟ್ಟಿದರೆ ತುಂಬಾ ಕೃಶರಾಗಿ ಇರುತ್ತಾರೆ.

**28 ಪಾರ್ವತೀದೇವಿಯರು**—ದೇವ! ಕೆಲವರು ಕುತ್ತಿಗೆಯ ರೋಗದಿಂದ ಬಳಲು ಕಾರಣವೇನು?

**29–33 ರುದ್ರದೇವರು**—ಪಾರ್ವತಿ! ಯಾರು ಪೂರ್ವಜನ್ಮದಲ್ಲಿ ಇನ್ನೊಬ್ಬರ ರೂಪವನ್ನು ನಾಶಮಾಡಿರುವರೋ, ವ್ಯರ್ಥವಾಗಿ ಇನ್ನೊಬ್ಬರಿಗೆ ಶಿಕ್ಷಿಸುವರೋ ಇನ್ನೊಬ್ಬರ ಇಷ್ಟವನ್ನು ನಾಶಮಾಡುವರೋ, ಅಪಥ್ಯಾಹಾರವನ್ನು ಕೊಡುವರೋ, ಪ್ರಾಣಿಗಳನ್ನು ಹಿಂಸಾಮಾಡುವ ವಿಷಯದಲ್ಲಿ ಸ್ವಲ್ಪವೂ ದಯಾರಹಿತರಾಗಿರುತ್ತಾರೋ, ಅಂತಹವರು ಮನುಷ್ಯಜನ್ಮವನ್ನು ಹೊಂದಿದರೆ ಕೆಲವರು ಕುತ್ತಿಗೆ

ರೋಗವುಳ್ಳವರಾಗಿಯೂ ಕೆಲವರು ನಾನಾ ವಿಧ ಕುಷ್ಠರೋಗವುಳ್ಳವರಾಗಿಯೂ ಆಗುವರು.

**34 ಪಾರ್ವತೀದೇವಿಯರು**—ಕೆಲವರು ಕೈಕಾಲು ಮೊದಲಾದ ಅಂಗಗಳಿಂದ ಹೀನರಾಗಿರುತ್ತಾರಲ್ಲ! ಅದಕ್ಕೇನು ಕಾರಣ?

**35–36 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಲೋಭಮೋಹವುಳ್ಳವ ರಾಗಿ ಇತರ ಪ್ರಾಣಿಗಳನ್ನು ಅಂಗಹೀನರನ್ನಾಗಿ ಮಾಡಿರುವರೋ ಅವರು ಬೇರೆ ಜನ್ಮದಲ್ಲಿ ಅಂಗಹೀನರಾಗುವರು.

**40 ಪಾರ್ವತೀದೇವಿಯರು**—ಕೆಲವರಿಗೆ ಯಾವಾಗಲೂ ಕಾಲುನೋವು ಇರುವುದಕ್ಕೆ ಕಾರಣವೇನು?

**41–42 ರುದ್ರದೇವರು**—ದೇವಿ! ಕ್ರೋಧಲೋಭವುಳ್ಳವರಾಗಿ ದೇವತಾಸ್ಥಾನ ವನ್ನು ಕಾಲಿನಿಂದ ಒದೆಯುತ್ತಾರೋ ಮೊಳಕಾಲುಗಳಿಂದ ಪ್ರಾಣಿಗಳ ಹಿಂಸೆಯನ್ನು ಮಾಡುತ್ತಾರೋ ಅವರು ಕಾಲಿನ ರೋಗವುಳ್ಳವರಾಗುವುರು.

**43–44 ಪಾರ್ವತೀದೇವಿಯರು**—ದೇವ! ಕೆಲವರು ವಾತ ಪಿತ್ತರೋಗಗಳಿಂದ ಇನ್ನೂ ಅನೇಕ ವಿಧ ರೋಗಗಳಿಂದ ಪೀಡಿತರಾಗುತ್ತಾರೆ. ಹಣವಂತರಾಗಿದ್ದರೂ ನಾನಾ ವಿಧ ರೋಗಗಳಿಂದ ಬಳಲುತ್ತಾರೆ. ಇದಕ್ಕೇನು ಕಾರಣ?

**45–51 ರುದ್ರದೇವರು**—ಯಾರು ಪೂರ್ವದಲ್ಲಿ ಅಸುರ ಸ್ವಭಾವವುಳ್ಳವರಾಗಿ ಕೋಪಮಾಡುವ ಸ್ವಭಾವವುಳ್ಳವರಾಗಿ, ಗುರುಗಳನ್ನು ದ್ವೇಷಿಸುವವರಾಗಿ ಮನಸ್ಸಿ ನಿಂದಲೂ ದೇಹದಿಂದಲೂ ಮಾತಿನಿಂದ ಇನ್ನೊಬ್ಬರಿಗೆ ದುಃಖವನ್ನು ಉಂಟು ಮಾಡುವವರಾಗಿ ಇರುವರೋ ಅವರು ಹಣವಂತರಾಗಿರಲೀ ದರಿದ್ರರಾಗಿರಲೀ ನಾನಾ ವಿಧ ರೋಗಗಳಿಂದ ಶ್ರಮಪಡುವರು. ಈರೀತಿಯಾಗಿ ತಾವು ಮಾಡಿದ ಕರ್ಮದ ಫಲವನ್ನು ಅಲ್ಲಲ್ಲಿ ಅನುಭವಿಸುವರು. ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸದೆ ಆಗಲಾರದು.

## ಅಧ್ಯಾಯ – 221

**ಶ್ಲೋಕ 1–2 ಪಾರ್ವತೀದೇವಿಯರು**—ಪ್ರಭೋ! ಕೆಲವರು ಗಿಡ್ಡಾದ ಕೈಕಾಲು ಗಳುಳ್ಳವರಾಗಿರುವರು. ಕೆಲವರು ವಕ್ರವಾದ ಅಂಗವುಳ್ಳವರಾಗಿಯೂ ಕೆಲವರು ಬಾಗಿಹೋದ ಬೆನ್ನುಳ್ಳವರಾಗಿಯೂ ಇನ್ನೂ ಕೆಲವರು ಗಿಡ್ಡವಾಗಿ ಇರುವವರಾಗಿಯೂ ಕಾಣಿಸುವರು. ಇದಕ್ಕೆಲ್ಲಾ ಏನು ಕಾರಣ?

**3-6 ರುದ್ರದೇವರು**—ಯಾರು ಪೂರ್ವದಲ್ಲಿ ಧಾನ್ಯಾದಿಗಳನ್ನು ಮಾರುವಾಗಲೂ ಕ್ರಯಕ್ಕೆ ತೆಗೆದುಕೊಳ್ಳುವಾಗಲೂ, ಸರಿಯಾಗಿ ಅಳೆಯದೆ ತಪ್ಪಾಗಿ ಅಳೆಯುವರೋ, ಕ್ರಯಕ್ಕೆ ತೆಗೆದುಕೊಳ್ಳುವಾಗ ಕಮ್ಮಿ ಕ್ರಯವನ್ನಾಗಿ ಸುಳ್ಳುಹೇಳವರೋ, ಕೋಪದಿಂದ ಇನ್ನೊಬ್ಬರ ಕೈಕಾಲು ಮುರಿಯುವರೋ, ಮಾಂಸವನ್ನು ತಿನ್ನುವರೋ ಮೂರ್ಖ ರಾಗಿದ್ದುಕೊಂಡು ಪಂಡಿತರೆಂದು ಪ್ರಸಿದ್ಧಿಯನ್ನು ಹೊಂದುವರೋ ಅವರು ಪೂರ್ವದಲ್ಲಿ ಹೇಳಿದಂತೆ ಆಗುವರು.

**7 ಪಾರ್ವತೀದೇವಿಯರು**—ಮನುಷ್ಯರಲ್ಲಿ ಕೆಲವರು ಹುಚ್ಚು ಹಿಡಿದವರಾಗಿ ಪಿಶಾಚಿ ಹಿಡಿದವರಂತೆ ಸುಮ್ಮನೆ ತಿರುಗುತ್ತಾ ಇರುತ್ತಾರೆ. ಇದಕ್ಕೇನು ಕಾರಣ?

**8-10 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಅಹಂಕಾರವುಳ್ಳವರಾಗಿ ಇನ್ನೊಬ್ಬರೊಡನೆ ವ್ಯರ್ಥವಾಗಿ ಬಹು ಮಾತಾಡುತ್ತಾರೋ ಇನ್ನೊಬ್ಬರನ್ನು ಅಪಹಾಸ ಮಾಡುತ್ತಾರೋ ಇನ್ನೊಬ್ಬರನ್ನು ಭೋಗಗಳಿಂದ ಮೋಹಗೊಳಿಸುತ್ತಾರೋ ದೊಡ್ಡವರನ್ನೂ ಗುರುಗಳನ್ನೂ ವ್ಯರ್ಥವಾಗಿ ಅಪಹಾಸ ಮಾಡುತ್ತಾರೋ ಯಾವಾಗಲೂ ಸುಳ್ಳು ಹೇಳುತ್ತಾರೋ ಈಪ್ರಕಾರವಾಗಿ ಇರುವವರು ಬೇರೆ ಜನ್ಮದಲ್ಲಿ ಹುಚ್ಚರಾಗಿಯೂ ಪಿಶಾಚಿಗಳಾಗಿಯೂ ಆಗುವರು.

**11 ಪಾರ್ವತೀದೇವಿಯರು**—ಲೋಕದಲ್ಲಿ ಕೆಲವರು ಮಕ್ಕಳು ಇಲ್ಲದೆ ದುಃಖಪಡುತ್ತಾ ಇರುತ್ತಾರೆ. ಪ್ರಯತ್ನ ಮಾಡಿದರೂ ಅವರಿಗೆ ಮಕ್ಕಳಾಗುವುದಿಲ್ಲ. ಇದಕ್ಕೇನು ಕಾರಣ?

**12-14 ರುದ್ರದೇವರು**—ದೇವಿ! ಯಾರು ಸರ್ವಪ್ರಾಣಿಗಳಲ್ಲಿಯೂ ದಯಾಹೀನರಾಗಿ ಮೃಗಪಕ್ಷಿಗಳ ಶಿಶುಗಳನ್ನು ಸಂಹರಿಸುವರೋ ಗುರುಗಳಲ್ಲಿ ದ್ವೇಷಮಾಡುವರೋ ಇನ್ನೊಬ್ಬರ ಮಕ್ಕಳನ್ನು ನೋಡಿ ಅಸೂಯಾಪಡುತ್ತಾರೋ ಪಿತೃಪೂಜೆಯನ್ನು ಅಂದರೆ ಶ್ರಾದ್ಧವನ್ನು ಮಾಡುವುದಿಲ್ಲವೋ ಅವರು ಬೇರೆ ಜನ್ಮದಲ್ಲಿ ಮನುಷ್ಯರಾಗಿ ಹುಟ್ಟುವಾಗ ಅವರಿಗೆ ಮಕ್ಕಳು ಇರಲಾರರು—

**15-16 ಪಾರ್ವತೀದೇವಿಯರು**—ಕೆಲವು ಮನುಷ್ಯರು ಬಹುದುಃಖವುಳ್ಳವರಾಗಿರುತ್ತಾರೆ ಭಯದಿಂದ ವಾಸಮಾಡುತ್ತಾರೆ. ನಿತ್ಯವೂ ಶೋಕವುಳ್ಳವರಾಗಿ ದುರ್ಗತಿಯನ್ನು ಹೊಂದುತ್ತಾರೆ. ಇದಕ್ಕೇನು ಕಾರಣ?

**17-23 ರುದ್ರದೇವರು**—ಯಾರು ಪೂರ್ವದಲ್ಲಿ ಇನ್ನೊಬ್ಬರನ್ನು ನಿಂದಿಸುವುದರಲ್ಲಿ ಆಸಕ್ತರಾಗಿರುವರೋ, ಇನ್ನೊಬ್ಬರನ್ನು ಭಯಪಡಿಸುತ್ತಾರೋ,

ದರಿದ್ರರಿಂದ ಹೆಚ್ಚಾಗಿ ಬಡ್ಡಿಯನ್ನು ಹೊಂದುತ್ತಾರೋ, ಅವರೆಲ್ಲರೂ ನಿತ್ಯವೂ ದುಃಖವನ್ನು ಹೊಂದುತ್ತಾರೆ. ಬಡವರಿಂದ ಬಹಳ ಬಡ್ಡಿಯನ್ನು ತೆಗೆದುಕೊಳ್ಳ ಬಾರದು. ಇನ್ನು ಯಾರು ನಾಯಿಗಳೊಡನೆ ಕ್ರೀಡಾಮಾಡುತ್ತಾ ವನದಲ್ಲಿ ಮೃಗಗಳನ್ನು ಭಯಪಡಿಸುತ್ತಾರೋ, ಪ್ರಾಣಿ ಹಿಂಸೆಯನ್ನು ಮಾಡುತ್ತಾರೋ, ಯಾರ ಮನೆಯಲ್ಲಿ ನಾಯಿಗಳು ಬಂದ ಜನರನ್ನು ಭಯಪಡಿಸುತ್ತಾರೋ, ಅವರು ಮೃತರಾಗಿ ಬಹುಕಾಲ ನರಕದಲ್ಲಿ ದುಃಖವನ್ನು ಅನುಭವಿಸಿ ಮನುಷ್ಯರಾಗಿ ಹುಟ್ಟಿದರೆ ಹೆಚ್ಚಾದ ದುಃಖವುಳ್ಳ ಅನೇಕ ಆಪತ್ತು ಬರುವಂತಿರುವ ಸ್ಥಳದಲ್ಲಿ ಹುಟ್ಟುತ್ತಾರೆ. ಅಲ್ಲಿ ದುಃಖಪಡುತ್ತಾರೆ.

**24 ಪಾರ್ವತೀದೇವಿಯರು**—ಕೆಲವು ಮನುಷ್ಯರು ಐಶ್ವರ್ಯಜ್ಞಾನವುಳ್ಳವ ರಾಗಿ ಮ್ಲೇಚ್ಛದೇಶದಲ್ಲಿ ಇರುತ್ತಾರೆ. ಮ್ಲೇಚ್ಛರು ಐಶ್ವರ್ಯವುಳ್ಳವರಾಗಿರುತ್ತಾರೆ. ಇದಕ್ಕೇನು ಕಾರಣ?

**25–27 ರುದ್ರದೇವರು**—ಯಾರು ಪೂರ್ವದಲ್ಲಿ ಧನಧಾನ್ಯಉಳ್ಳವರಾಗಿ ಸರಿಯಾಗಿ ದಾನಮಾಡಲಾರರು. ಶ್ರದ್ಧೆಯಿಲ್ಲದೆ ಅಪಾತ್ರರಿಗೆ ದಾನಮಾಡುತ್ತಾರೋ, ತಮ್ಮನ್ನು ಸ್ತೋತ್ರಮಾಡಿಕೊಂಡು ತಿರಸ್ಕಾರದಿಂದ ದಾನವನ್ನು ಮಾಡುವರೋ, ಶೌಚಮಂಗಲ ರಹಿತರಾಗಿ ದಾನ ಮಾಡುವರೋ, ಅವರು ಮ್ಲೇಚ್ಛರಿಂದ ತುಂಬಿರುವ ಹಾಳು ದೇಶದಲ್ಲಿ ಮ್ಲೇಚ್ಛರಿಗೆ ಅಧಿಪತ್ಯವನ್ನು ಹೊಂದುತ್ತಾರೆ.

**28–29 ಪಾರ್ವತೀದೇವಿಯರು**—ಕೆಲವರು ನಪುಂಸಕರಾಗಿರುವರು. ನೀಚಕರ್ಮದಲ್ಲಿ ಆಸಕ್ತರಾಗಿರುವರು. ನೀಚರಲ್ಲೇ ಸ್ನೇಹ ಮಾಡುತ್ತಿರುವರು. ಇದಕ್ಕೇನು ಕಾರಣ?

**30–37 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಘೋರ ಕರ್ಮದಲ್ಲಿ ಆಸಕ್ತರಾಗಿ ಪಶುಗಳ ಪುರುಷತ್ವನ್ನು ನಾಶಮಾಡುತ್ತಾ ಜೀವಿಸುವರೋ, ವಂಚಕರಾಗಿ ಸ್ತ್ರೀಯರನ್ನು ಬಲಾತ್ಕರಿಸುತ್ತಾರೋ, ದ್ವೇಷದಿಂದ ಚಾಡಿ ಹೇಳಿಕೊಡುತ್ತಾ ಕಾಮಕ್ಕೆ ವಿಘ್ನವನ್ನು ಮಾಡುವರೋ, ಅಂತಹವರು ಬಹುಕಾಲ ನರಕವನ್ನು ಅನುಭವಿಸಿ ಮನುಷ್ಯರಾಗಿ ಹುಟ್ಟಿದರೆ ನಪುಂಸಕರಾಗುವರು. ನೀಚಕರ್ಮದಲ್ಲಿ ಆಸಕ್ತರಾಗಿ ಇರುವರು. ಸ್ತ್ರೀಯರೂ ಕೂಡ ಪುರುಷರಂತೆಯೇ ಪಾಪಕರ್ಮದಿಂದ ದುಃಖವನ್ನು ಹೊಂದುವರು.

## ಅಧ್ಯಾಯ – 222

**ಶ್ಲೋಕ 1 ಪಾರ್ವತೀದೇವಿಯರು**—ಕೆಲವು ಹೆಂಗಸರು ವೇಶ್ಯಾವೃತ್ತಿಯಿಂದ

ಜೀವಿಸು ವರಲ್ಲಾ! ಇದಕ್ಕೇನು ಕಾರಣ?

**2–6 ರುದ್ರದೇವರು**—ಯಾವ ಹೆಂಗಸರು ಪೂರ್ವದಲ್ಲಿ ಬುದ್ಧಿಮೋಹವುಳ್ಳವರಾಗಿ ಕಾಮವಶರಾಗಿ ಪತಿಗನ್ನು ಅತಿಕ್ರಮಿಸುವರೋ, ಪತಿಗಳಿಗೆ ವಿರುದ್ಧವಾಗಿ ಇರುವರೋ, ಶೌಚವನ್ನು ಲಜ್ಜೆಯನ್ನೂ ಬಿಟ್ಟು ಮನಸ್ಸು ಬಂದಂತೆ ಇರುವರೋ, ಇಂತಹ ಹೆಂಗಸರು ಯಮಲೋಕದಲ್ಲಿ ಚೆನ್ನಾಗಿ ಶಿಕ್ಷೆಯನ್ನು ಹೊಂದಿ ಮನುಷ್ಯ ಜನ್ಮವನ್ನು ಹೊಂದಿದಾಗ ವೇಶ್ಯಾವೃತ್ತಿಯನ್ನು ಹೊಂದುವರು. ವೇಶ್ಯಾವೃತ್ತಿಯು ಸ್ತ್ರೀಯರಿಗೆ ತುಂಬಾ ನೀಚವಾದದ್ದು. ಆ ವೃತ್ತಿಯನ್ನು ಕೈಕೊಂಡ ಮೇಲೆ ನೀಚ ಲೋಕಗಳನ್ನೇ ಹೊಂದುವರು. ಮನಸ್ಸಿನಿಂದ ಪಶ್ಚಾತ್ತಾಪವನ್ನು ಹೊಂದಿದರಾದರೂ ಸ್ವಲ್ಪ ಹಿತವನ್ನು ಹೊಂದುವರು.

**7 ಪಾರ್ವತೀದೇವಿಯರು**—ದೇವ! ಕೆಲವು ಸ್ತ್ರೀಯರು ಮಂಗಳ ರಹಿತರಾಗಿ ವಿಧವೆಯರಾಗಿ ಇರುವರಲ್ಲಾ! ಇದಕ್ಕೇನು ಕಾರಣ?

**8–10 ರುದ್ರದೇವರು**—ಯಾರು ಪೂರ್ವದಲ್ಲಿ ಬುದ್ಧಿಮೋಹವುಳ್ಳವರಾಗಿ ಗಂಡನ ಕುಟುಂಬವನ್ನು ಹಾಳುವಮಾಡುತ್ತಾರೋ, ಪತಿಗೆ ವಿಷವನ್ನು ಹಾಕುತ್ತಾಳೋ, ಬೆಂಕಿ ಕೊಡುತ್ತಾಳೋ, ತಮ್ಮ ಪತಿಗಳಲ್ಲಿ ದ್ವೇಷದಿಂದ ಇನ್ನೊಬ್ಬ ಪುರುಷನನ್ನು ಹೊಂದುವರೋ, ಅವರು ಯಮಲೋಕದಲ್ಲಿ ಶಿಕ್ಷೆಯನ್ನು ಅನುಭವಿಸಿ ಭೂಮಿಯಲ್ಲಿ ಹುಟ್ಟಿ ವಿಧವೆಯರಾಗುವರು.

**15 ಪಾರ್ವತೀದೇವಿಯರು**—ಕೆಲವರು ನಾನಾ ವಿಧವಾದ ಕರ್ಮಗಳನ್ನು ಮಾಡುತ್ತಾ ಇರುವರಲ್ಲಾ! ಇದಕ್ಕೇನು ಕಾರಣ?

**16–19 ರುದ್ರದೇವರು**—ಯಾರು ಪೂರ್ವದಲ್ಲಿ ಅತ್ಯಂತ ಅಹಂಕಾರವುಳ್ಳವರಾಗಿರುವರೋ ತಾವೇ ಶ್ರೇಷ್ಠರೆಂದು ಭಾವಿಸಿಕೊಂಡಿರುವರೋ, ಅವರು ಬೇರೆ ಜನ್ಮದಲ್ಲಿ ಶಿಲ್ಪಿಗಳಾಗಿಯೋ, ನಟಗಂಧರ್ವರಾಗಿಯೋ, ಕ್ಷೌರ ಮಾಡುವವರಾಗಿಯೋ, ಸ್ತೋತ್ರ ಪಾಠಕರಾಗಿಯೋ ಆಗುವರು. ಅವರು ಇನ್ನೊಬ್ಬರಿಗೆ ಅವಮಾನ ಮಾಡಿದ ಫಲವಾಗಿ ಇನ್ನೊಬ್ಬರಿಂದಲೇ ಜೀವಿಸುತ್ತಾ ಇರುವರು.

**20–21 ಪಾರ್ವತೀದೇವಿಯರು**—ದೇವ! ಲೋಕದಲ್ಲಿ ಕೆಲವರು ಇನ್ನೊಬ್ಬರಿಗೆ ದಾಸರಾಗಿಯೇ ಇರುತ್ತಾರೆ. ಎಲ್ಲಾ ಕೆಲಸಗಳನ್ನು ಮಾಡುತ್ತಾ ಇರುತ್ತಾರೆ. ಯಜಮಾನರಿಂದ ಪೆಟ್ಟು ತಿನ್ನುವವರಾಗಿಯೂ ಬೆದರಿಸಲ್ಪಡುವವರಾಗಿಯೂ ಪೀಡಿಸಲ್ಪಡುವವರಾಗಿಯೂ ಎಲ್ಲವನ್ನೂ ಸಹಿಸಿಕೊಂಡು ಇರುತ್ತಾರೆ. ಇದಕ್ಕೇನು ಕಾರಣ?

**22-33 ರುದ್ರದೇವರು**—ಯಾರು ಪೂರ್ವದಲ್ಲಿ ಇನ್ನೊಬ್ಬರ ಹಣವನ್ನು ಅಪಹರಿಸುವರೋ, ತಮ್ಮಲ್ಲಿ ಇಡಲಿಕ್ಕೆ ಕೊಟ್ಟ ವಸ್ತುವನ್ನು ಅಪಹರಿಸುವರೋ, ಇನ್ನೊಬ್ಬರು ಮರೆತುಬಿಟ್ಟ ಹಣವನ್ನು ಅಪಹರಿಸುವರೋ, ಇನ್ನೊಬ್ಬರನ್ನು ಬಡೆದು ಬೆದರಿಸಿ ದಾಸರನ್ನು ಮಾಡಿಕೊಳ್ಳುವರೋ, ಅಂತಹವರು ಮರಣವನ್ನು ಹೊಂದಿ ಯಮಲೋಕದಲ್ಲಿ ಶಿಕ್ಷೆಯನ್ನು ಅನುಭವಿಸಿ ಆಮೇಲೆ ಮನುಷ್ಯದೇಹವನ್ನು ಹೊಂದಿ ಇನ್ನೊಬ್ಬರ ದಾಸರಾಗುವರು. ಅವರು ಯಾರ ಹಣವನ್ನು ಅಪಹರಿಸಿರುವರೋ ಅವರ ಮನೆಯಲ್ಲಿ ಕೆಲಸ ಮಾಡುವರು. ತಮ್ಮ ಪಾಪವು ಮುಗಿಯುವವರೆಗೆ ಹಾಗೆ ಮಾಡುತ್ತಿರುವರು. ಇನ್ನು ಕೆಲವರು ಯಾರ ಹಣವನ್ನು ಅಪಹರಿಸಿರುವರೋ ಅವರ ಮನೆಯಲ್ಲಿ ಎತ್ತು ಕೋಣ ಇತ್ಯಾದಿ ಪಶುವಾಗಿ ಹುಟ್ಟುವರು. ಹೀಗೆ ಮಾಡದೆ ಅವರ ಪಾಪವು ಕ್ಷಯವನ್ನು ಹೊಂದಲಾರದು. ಆದುದರಿಂದ ತನ್ನ ಪಾಪಪರಿಹಾರವನ್ನು ಇಚ್ಛಿಸುವ ಭೃತ್ಯನು ಯಜಮಾನನ ಎಲ್ಲಾ ಕೆಲಸವನ್ನೂ ಮಾಡಬೇಕು. ಶ್ರಮವನ್ನು ಸಹಿಸಿಕೊಂಡು ಯಜಮಾನನ ಅನುಗ್ರಹವನ್ನು ನಿರೀಕ್ಷಿಸಬೇಕು. ಯಜಮಾನನು ಯಾವ ಭೃತ್ಯನನ್ನು ಪ್ರೀತಿಪೂರ್ವಕವಾಗಿ ನೋಡಿಕೊಳ್ಳುವನೋ ಅವನ ಪಾಪವು ಪರಿಹಾರವಾಗುವುದು. ಪುರುಷನು ವೃದ್ಧರನ್ನು ಬಾಲಕರನ್ನು ಕ್ಷೀಣರಾದವರನ್ನು ಪಾಲನೆ ಮಾಡವುದರಿಂದ ಪುಣ್ಯವನ್ನು ಹೊಂದುವನು.

## ಅಧ್ಯಾಯ – 223

**ಶ್ಲೋಕ 1-2 ಪಾರ್ವತೀದೇವಿಯರು**—ಲೋಕದಲ್ಲಿ ಕೆಲವರು ಚಂಡಾಲರಾಗಿ ಇರುವರು. ಮುಟ್ಟಲಿಕ್ಕೆ ಅಯೋಗ್ಯರಾಗಿರುವರು. ನೀಚಕರ್ಮದಲ್ಲಿ ಆಸಕ್ತರಾಗಿರುವರು. ಎಲ್ಲರ ಮಲವನ್ನು ತೆಗೆಯುವುದು. ದುಃಖವುಳ್ಳವರಾಗಿ ಕುರೂಪಿಗಳಾಗಿ ದುಷ್ಟ ಮನಸ್ಸುಳ್ಳವರಾಗಿ ಇರುವರು. ಇದಕ್ಕೆಲ್ಲಾ ಏನು ಕಾರಣ?

**3-9 ರುದ್ರದೇವರು**—ಯಾವ ಮನುಷ್ಯರು ಪೂರ್ವದಲ್ಲಿ ಅತಿ ಅಹಂಕಾರವುಳ್ಳವರಾಗಿ ತಮ್ಮನ್ನುತಾವೇ ಬಹುಮಾನ ಮಾಡಿಕೊಳ್ಳುವವರಾಗಿ ಇರುವರೋ, ದೊಡ್ಡವರಿಗೂ ನಮಸ್ಕಾರವನ್ನು ಮಾಡಲಾರರೋ, ಅತಿ ಅಹಂಕಾರದಿಂದ ತಮ್ಮ ಧರ್ಮವನ್ನೂ ಮಾಡಲಾರರೋ, ಬಲಾತ್ಕಾರದಿಂದ ಇನ್ನೊಬ್ಬರನ್ನು ನಮಸ್ಕಾರ ಮಾಡಿಸುವರೋ, ಐಶ್ವರ್ಯದಿಂದ ಇನ್ನೊಬ್ಬರನ್ನು ಅವಮಾನ ಮಾಡುವರೋ, ಮದ್ಯಪಾನವನ್ನು ಮಾಡುತ್ತಾರೋ, ನಿಷಿದ್ಧವೋ ಅನಿಷಿದ್ಧವೋ, ನೋಡದೆ ಸಿಕ್ಕಿದ್ದನ್ನು ತಿನ್ನುವರೋ ಕಠಿಣವಾದ ಮಾತಾಡುವರೋ, ಕ್ರೂರರಾಗಿರುವರೋ, ಅವರು ಮೃತರಾಗಿ ಯಮಲೋಕವನ್ನು ಹೊಂದಿ ಶಿಕ್ಷೆಯನ್ನು ಹೊಂದಿ ಮನುಷ್ಯರಾಗಿ

ಹುಟ್ಟಿದಾಗ ಚಂಡಾಲರಾಗಿ ಹುಟ್ಟುತ್ತಾರೆ. ನೀಚಕರ್ಮವನ್ನು ಮಾಡುವರು. ಇನ್ನೊಬ್ಬರ ಮಲವನ್ನು ತೆಗೆಯುವರು. ಇನ್ನೊಬ್ಬರಿಗೆ ನಮಸ್ಕಾರ ಮಾಡುವರು. ಕುರೂಪಿಗಳಾಗಿ ಪಾಪ ಯೋನಿಯಲ್ಲಿ ಹುಟ್ಟುವರು. ಒಬ್ಬರು ಮುಟ್ಟಲಿಕೆ ಅನರ್ಹ ರಾಗಿರುವರು. ಹಾಳು ವೃತ್ತಿಯಿಂದ ಜೀವಿಸುವರು. ಅಗಸ ಮೊದಲಾಗಿಯೂ ಹುಟ್ಟುವರು. ತಾವು ತುಂಬಾ ಅಹಂಕಾರಪಟ್ಟುದರ ಫಲವನ್ನು ಅನುಭವಿಸುವರು. ಅಂತಹ ಚಂಡಾಲ ಮೊದಲಾದವರನ್ನು ನೋಡಿ ಬುದ್ಧಿವಂತನಾದವನು ನಿಂದಾ ಮಾಡಬಾರದು. ಕೋಪಿಸಿಕೊಳ್ಳಬಾರದು. ಅವರು ತಾವು ಮಾಡಿದ ಪಾಪದ ಫಲವನ್ನು ಅನುಭವಿಸುವರು—ಚಂಡಾಲರೂ ಆ ಜಾತಿಯಲ್ಲಿ ಶ್ರಮಪಟ್ಟು ಪಶ್ಚಾತ್ತಾಪವುಳ್ಳವರಾಗಿ ಕ್ರಮದಿಂದ ಶುದ್ಧಿಯನ್ನು ಹೊಂದುವರು.

**11–12 ಪಾರ್ವತೀದೇವಿಯರು**—ಕೆಲವು ಮನುಷ್ಯರು ನಾನಾ ಆಸೆಯುಳ್ಳವರಾಗಿ ಇನ್ನೊಬ್ಬರ ಮನೆಯ ಬಾಗಿಲಿಗೆ ಹೋಗಿ ನಿಂತುಕೊಂಡಿರುತ್ತಾರೆ. ಅವರನ್ನು ಒಳಗೆ ಹೋಗಲಿಕ್ಕೆ ಬಿಡುವುದಿಲ್ಲ. ಎಷ್ಟು ಪ್ರಯತ್ನ ಮಾಡಿದರೂ ಆ ಮನೆಯ ಯಜಮಾನನನ್ನು ನೋಡಲಿಕ್ಕೋ ಅವನೊಡನೆ ತನ್ನ ಕಷ್ಟವನ್ನು ಹೇಳಿಕೊಳ್ಳಲಿಕ್ಕೋ ಅವಕಾಶವನ್ನು ಹೊಂದುವುದಿಲ್ಲ. ಇದಕ್ಕೇನು ಕಾರಣ?

**13–19 ರುದ್ರದೇವರು**—ಯಾರು ಪೂರ್ವದಲ್ಲಿ ಐಶ್ವರ್ಯ ಅಧಿಕಾರವುಳ್ಳವ ರಾಗಿ ಇನ್ನೊಬ್ಬರೊಡನೆ ಮಾತಾಡುವುದಿಲ್ಲವೋ ಲೋಭಮೋಹದಿಂದ ಕೂಡಿದವ ರಾಗಿ ಇನ್ನೊಬ್ಬರು ತಮ್ಮ ಹತ್ತಿರ ಬರಲಿಕ್ಕೆ ಅವಕಾಶವನ್ನೇ ಕೊಡುವುದಿಲ್ಲವೋ, ತಮ್ಮ ಪ್ರಯೋಜನದಲ್ಲಿಯೇ ಆಸಕ್ತರಾಗಿರುವರೋ, ಸರ್ವಭೋಗಗಳುಳ್ಳವರಾಗಿದ್ದರೂ ಶಕ್ತರಾಗಿದ್ದರೂ ಇನ್ನೊಬ್ಬರಿಗೆ ಸಹಾಯವನ್ನು ಮಾಡಲಾರರೋ, ದಯಾಹೀನ ರಾಗಿರುವರೋ, ಅವರು ಆಮೇಲೆ ಮನುಷ್ಯರಾಗಿ ಹುಟ್ಟಿದರೆ ದುರವಸ್ಥೆಯನ್ನು ಹೊಂದಿದವರಾಗಿ ಹಣಕ್ಕಾಗಿ ಇನ್ನೊಬ್ಬರ ಮನೆಗೆ ಓಡುವರು. ರಾಜರ ಅಥವಾ ಅವರ ಮಂತ್ರಿಗಳ ಅಥವಾ ಹಣವಂತರ ಮನೆಗೆ ಹೋಗಿ ಅಲ್ಲಿ ದ್ವಾರಪಾಲಕರಿಂದ ತಡೆಯಲ್ಪಟ್ಟವರಾಗಿ ಹೊರಗೇ ನಿಂತಿರುತ್ತಾರೆ. ಅವರು ಒಳಗೆ ಇರುವ ಯಜಮಾನನ್ನು ನೋಡಲಿಕ್ಕೋ, ತಮ್ಮ ಕಾರ್ಯವನ್ನು ಹೇಳಿಕೊಳ್ಳಲಿಕ್ಕೋ ಶಕ್ತರಾಗುವುದಿಲ್ಲ.

**20–21 ಪಾರ್ವತೀದೇವಿಯರು**—ದೇವ! ಲೋಕದಲ್ಲಿ ಕೆಲವರು ಹಣವಂತ ರಾಗಿದ್ದವರು ರಾಜರಿಂದಲೋ ಕಳ್ಳರಿಂದಲೋ ಸಮಸ್ತವನ್ನೂ ಕಳೆದುಕೊಂಡವ ರಾಗಿ ದರಿದ್ರರಾಗಿ ಕಷ್ಟಪಡುವರು. ಇದಕ್ಕೇನು ಕಾರಣ?

**22-27 ರುದ್ರದೇವರು**—ಯಾರು ಪೂರ್ವಲ್ಲಿ ಮನುಷ್ಯರು ಆಸುರ ಸ್ವಭಾವವುಳ್ಳವರಾಗಿ ದ್ವೇಷಲೋಭದಿಂದ ಇನ್ನೊಬ್ಬರ ಜೀವನೋಪಾಯವನ್ನು ಕೆಡಿಸುವರೋ ಲಂಚವನ್ನು ಪಡೆಯುವರೋ, ಚಾಡಿ ಹೇಳಿಕೊಡುವರೋ, ಕಳ್ಳತನದಿಂದಲೋ, ಮೋಸದಿಂದಲೂ ಇನ್ನೊಬ್ಬರ ದ್ರವ್ಯವನ್ನು ಅಪಹಾರ ಮಾಡುವರೋ, ಪ್ರಾಣಿಗಳ ಮೇಲೆ ದಯಾಹೀನರಾಗಿರುವರೋ, ಪರಲೋಕವೂ ದೇವರ ಶ್ರಾಸ್ತ್ರಗಳೂ ಇಲ್ಲವೆನ್ನುವರೋ, ಹೆಚ್ಚಾಗಿ ಸುಳ್ಳನ್ನೇ ಹೇಳುವರೋ, ಅಂತಹವರು ಯಮಲೋಕದಲ್ಲಿ ನರಕದುಃಖವನ್ನು ಅನುಭವಿಸಿ ಬಹುಕಾಲದ ಮೇಲೆ ಮನುಷ್ಯಜನ್ಮವನ್ನು ಹೊಂದಿದರೆ ಆಗ ಆಕಸ್ಮಾತ್ತಾಗಿ ತನ್ನ ಸೊತ್ತನ್ನೆಲ್ಲಾ ಕಳೆದುಕೊಳ್ಳುವರು. ಕಾರಣವಿದ್ದೋ ಇಲ್ಲದೆಯೋ ಕಷ್ಟವನ್ನು ಹೊಂದುವರು. ಹಣವನ್ನು ಸಂಪಾದಿಸಲಿಕ್ಕೆ ವಿಘ್ನವನ್ನೂ ಹೊಂದುವರು.

**28-29 ಪಾರ್ವತೀದೇವಿಯರು**—ಕೆಲವು ಮನುಷ್ಯರು ಏನೋ ಕಾರಣದಿಂದ ಬಂಧುಗಳಿಂದ ಸಹಿತರಾಗಿಯೇ ಶಸ್ತ್ರದಿಂದಲೋ ಬೇರೆ ಕಾರಣದಿಂದಲೋ ಮರಣವನ್ನು ಹೊಂದುವರು. ಇದಕ್ಕೇನು ಕಾರಣ?

**30-35 ರುದ್ರದೇವರು**—ಯಾರು ಪೂರ್ವದಲ್ಲಿ ಘೋರಕರ್ಮದಲ್ಲಿ ಆಸಕ್ತರಾಗಿ ಪ್ರಾಣಿಗಳನ್ನು ಹಿಂಸಾ ಮಾಡುವುದರಲ್ಲಿ ಪ್ರೀತಿಯುಳ್ಳವರಾಗಿರುವರೋ ವಿಶ್ವಾಸಘಾತಕರಾಗಿರುವರೋ, ಮಲಗಿದವರನ್ನೇ ಸಂಹರಿಸುವರೋ, ಸುಳ್ಳು ಹೇಳುವರೋ ಪರಲೋಕವಿಲ್ಲವೆನ್ನುವರೋ, ಮಾಂಸ ಭೋಜನವನ್ನು ಮಾಡುವರೋ, ಅವರು ಮರಣವನ್ನು ಹೊಂದಿ ಬಹುಕಾಲ ನರಕದಲ್ಲಿ ದುಃಖವನ್ನು ಅನುಭವಿಸುತ್ತಾ ಇದ್ದು ಪಶುಪಕ್ಷ್ಯಾದಿಗಳಾಗಿ ಹುಟ್ಟಿ ಆಮೇಲೆ ಮನುಷ್ಯರಾಗಿ ಹುಟ್ಟಿದರೆ ಹಣವಂತರಾಗಲೀ ದರಿದ್ರರಾಗಿರಲೀ ಇದ್ದಕ್ಕಿದ್ದಂತೆ ಬಂಧುಗಳಿಂದ ಸಹಿತರಾಗಿ ಮರಣವನ್ನು ಹೊಂದುವರು. ಅಥವಾ ಶಸ್ತ್ರದಿಂದಲೂ ಬೇರೆ ಯಾವ ಕಾರಣದಿಂದಲೋ ಹೆಂಡತಿ ಮಕ್ಕಳು ನಾಶವನ್ನು ಹೊಂದುವರು.

**36 ಪಾರ್ವತೀದೇವಿಯರು**—ಕೆಲವು ಮನುಷ್ಯರು ರಾಜಪುರುಷರಿಂದ ಶಿಕ್ಷೆಯನ್ನು ಹೊಂದುವರಲ್ಲಾ! ಇದಕ್ಕೇನುಕಾರಣ?

**37-43 ರುದ್ರದೇವರು**—ಯಾರು ಪೂರ್ವಜನ್ಮದಲ್ಲಿ ಪ್ರಾಣಿಗಳಲ್ಲಿ ದಯಾರಹಿತರಾಗಿ ಪ್ರಾಣಿಗಳನ್ನು ಬಹುಶ್ರಮಪಡಿಸಿ ಸಂಹರಿಸುವರೋ, ಯಾರು ಆಸುರ ಸ್ವಭಾವವುಳ್ಳವಾಗಿರುವರೋ, ಕ್ರೂರವಾಗಿ ಶಿಕ್ಷಾ ಮಾಡುವುದಕ್ಕೂ ಸಂಹರಿಸಲಿಕ್ಕೂ ಪ್ರಿಯ ರಾಗಿರುವರೋ, ಕ್ರೂರ ಕರ್ಮವುಳ್ಳವರಾಗಿರುವರೋ,

ರಾಜ ಕೋಪಮೋಹಿತರಾಗಿ ಶಿಕ್ಷಾಮಾಡಬಾರದವರನ್ನು ಶಿಕ್ಷಿಸುವರೋ, ಮಾಂಸ ವನ್ನು ತಿನ್ನುವರೋ ಪರಲೋಕವನ್ನೇ ಇಲ್ಲವೆನ್ನುವರೋ, ಸ್ತ್ರೀಪುರುಷರನ್ನು ಸಂಹರಿಸುವರೋ, ಗುರುಗಳನ್ನು ಹಿಂಸಿಸುವರೋ, ಅವರು ಯಮಲೋಕದಲ್ಲಿ ನರಕವನ್ನು ಅನುಭವಿಸಿ ಮನುಷ್ಯರಾಗಿ ಹುಟ್ಟಿ ಅದರ ಫಲವಾಗಿ ರಾಜಪುರುಷರಿಂದ ಶಿಕ್ಷೆಯನ್ನು ಅನುಭವಿಸುವರು. ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವನ್ನು ಈ ಜನ್ಮದಲ್ಲಿ ಅನುಭವಿಸುವರು. ದೇವತೆಗಳಿಗೋ ಋಷಿಗಳಿಗೋ ಬಹುಕಾಲ ಮರಣವಿಲ್ಲ ದಿರುವುದರಿಂದಲೂ ತಪೋಬಲದಿಂದಲೂ ಒಂದೇ ದೇಹದಲ್ಲಿಯೇ ಮಾಡಿದ ಕರ್ಮದ ಫಲವು ಉಂಟಾಗುವುದು. ಮನುಷ್ಯರಿಗೆ ಮಾತ್ರ ಹಾಗೆ ಅಲ್ಲ. ಈ ಜನ್ಮದಲ್ಲಿ ಮಾಡಿದ ಕರ್ಮದ ಫಲವು ಇನ್ನೊಂದು ಜನ್ಮದಲ್ಲಿ ಉಂಟಾಗುವುದು.

**44–46 ಪಾರ್ವತೀದೇವಿಯರು**—ದೇವ! ಲೋಕದಲ್ಲಿ ಮನುಷ್ಯರನ್ನು ರಾಜರು ಯಾಕೆ ಶಿಕ್ಷಿಸುವರು? ರಾಜರು ಇವನು ಕದ್ದುಕೊಂಡನು. ಇವನು ಕೊಂದನು ಎಂದು ಶಿಕ್ಷಾಮಾಡುವರಷ್ಟೆ! ಇದರಿಂದ ಆ ಜನ್ಮದಲ್ಲಿ ಮಾಡಿದ ಕಳವು ಸಂಹಾರಗಳೇ ಅವರ ಶಿಕ್ಷೆಗೆ ಕಾರಣವಾಯಿತಷ್ಟೆ! ಮತ್ತು ಪುತ್ರಕಾಮೇಷ್ಟಿಯನ್ನು ಮಾಡಿ ಅದೇ ಜನ್ಮದಲ್ಲಿಯೇ ಆ ಕರ್ಮದ ಫಲವಾದ ಪುತ್ರಲಾಭವನ್ನು ಹೊಂದುವರಷ್ಟೆ! ಹೀಗೆ ಮನುಷ್ಯಲೋಕದಲ್ಲಿ ಒಂದೇ ದೇಹದಲ್ಲಿಯೇ ಮಾಡಿದ ಕರ್ಮದ ಫಲವನ್ನು ಅನುಭವಿಸುವರು. ತಾವು ಹಾಗೆ ಇಲ್ಲ ಎನ್ನುವಿರಲ್ಲಾ?

**47–51 ರುದ್ರದೇವರು**—ದೇವಿ! ನೀನು ಸರಿಯಾದ ಸಂಶಯವನ್ನು ಕೇಳಿದಿ. ಮನುಷ್ಯಲೋಕದಲ್ಲಿ ಒಂದೇ ದೇಹದಲ್ಲಿ ಕರ್ಮ ಕರ್ಮದ ಫಲವೆಂಬುದು ಇಲ್ಲವೇ ಇಲ್ಲ. ಲೋಕದಲ್ಲಿ ಕದ್ದುಕೊಂಡವರಿಗೂ ಒಬ್ಬರನ್ನು ಕೊಂದವರಿಗೂ ರಾಜನು ಶಿಕ್ಷೆಯನ್ನು ಮಾಡುವ ಎಲ್ಲಾ ಆ ಶಿಕ್ಷೆಯೂ ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲ ಅಂತಹ ರಾಜರು ಯಾರನ್ನು ಶಿಕ್ಷಿಸುವರೋ ಅವರು ಪೂರ್ವಜನ್ಮದಲ್ಲಿ ಪಾಪಕರ್ಮವನ್ನು ಮಾಡಿರುವರು. ಅವರು ಆಗ ಮಾಡಿದ ಕರ್ಮ ರಾಜನು ಆಜ್ಞಾಪಿಸಲಿಕ್ಕೆ ಕಾರಣವಾಗುತ್ತದೆ. ಅವರು ಆಗ ಮಾಡಿದ ಅಪರಾಧದ ನೆಪದಿಂದ ರಾಜನು ಶಿಕ್ಷಿಸುವನು. ಆದರೆ ಪೂರ್ವಜನ್ಮದಲ್ಲಿ ಮಾಡಿದ ಕರ್ಮವೇ ಮುಖ್ಯವಾಗಿ ಶಿಕ್ಷೆ ಅನುಭವಿಸಲಿಕ್ಕೆ ಕಾರಣವು. ಲೋಕದಲ್ಲಿ ಸರಿಯಾದ ವ್ಯವಸ್ಥೆಯು ನಡೆಯುವುದಕ್ಕಾಗಿ ಉಳಿದವರಿಗೆ ತಪ್ಪು ಮಾಡಿದರೆ ಶಿಕ್ಷೆಯಾಗುವುದೆಂದು ಭಯ ಉಂಟಾಗಲಿ ಎಂದೂ ರಾಜರು ಶಿಕ್ಷೆಯನ್ನು ಮಾಡುವರು. ಅಂತೂ ಅಪರಾಧಿಯು ಶಿಕ್ಷಾ ಅನುಭವಿಸುವುದು. ಪೂರ್ವ ಕರ್ಮದ ಫಲವೇ ಈ ವಿಷಯದಲ್ಲಿ ನೀನು ಸಂದೇಹ ಪಡಬೇಡ.

52 **ಪಾರ್ವತೀದೇವಿಯರು**—ಭೂಮಿಯಲ್ಲಿ ರಾಜರಿಂದ ಶಿಕ್ಷೆಯನ್ನು ಹೊಂದಿದವರು ಯಾರಿರುವರೋ ಅವರಿಗೆ ಅದರಿಂದ ಪಾಪನಾಶವು ಆಗುತ್ತದೋ ಇಲ್ಲವೋ?

53–57 **ರುದ್ರದೇವರು**—ದೇವಿ! ಸರಿಯಾದ ಪ್ರಶ್ನೆಯನ್ನು ಕೇಳುವಿ. ಲೋಕದಲ್ಲಿ ರಾಜರಿಂದ ಅಪರಾಧಕ್ಕೆ ಅನುಸಾರವಾಗಿ ಶಿಕ್ಷೆಯನ್ನು ಹೊಂದಿದವರು ಯಮಲೋಕದಲ್ಲಿ ಶಿಕ್ಷೆಯನ್ನು ಹೊಂದುವುದಿಲ್ಲ. ಇನ್ನು ಯಾರು ತಪ್ಪು ಮಾಡಿ ರಾಜರಿಂದ ಸರಿಯಾದ ಶಿಕ್ಷೆಯನ್ನು ಹೊಂದುವುದಿಲ್ಲವೋ ಅವರನ್ನು ಯಮದೇವರು ಶಿಕ್ಷೆಯನ್ನು ಮಾಡಿಯೇ ಮಾಡುವರು. ಯಮದೇವರಿಗೆ ಎಲ್ಲರೂ ಮಾಡಿದ್ದೂ ಮಾಡಿಯೇ ಮಾಡುವರು. ಯಮದೇವರಿಗೆ ಎಲ್ಲರೂ ಮಾಡಿದ್ದೂ ಮಾಡದೆ ಇದ್ದದ್ದೂ ತಿಳಿಯುವುದು. ಪಾಪವನ್ನು ಮಾಡಿ ಯಾವ ಮನುಷ್ಯನೂ ಯಮದೇವ ರಿಂದ ತಪ್ಪಿಸಿಕೊಳ್ಳಲಿಕ್ಕೆ ಆಗಲಾರದು. ರಾಜನೂ ಯಮದೇವರೂ ಇಬ್ಬರೂ ಶಿಕ್ಷೆ ಮಾಡುವವರು ಇಬ್ಬರಿಂದ ಶಿಕ್ಷೆಯನ್ನು ಹೊಂದಿಯೋ ಹೊಂದದೆಯೋ ಆಮೇಲೆ ಪಾಪದ ಫಲವನ್ನು ನರಕದಲ್ಲಿಯೋ ಮನುಷ್ಯಲೋಕದಲ್ಲಿಯೋ ಅನುಭವಿಸುವನು. ಮೂರು ಲೋಕದಲ್ಲಿಯೂ ಕರ್ಮಫಲವನ್ನು ಬಿಡಿಸುವವರು ಇಲ್ಲ.

58–59 **ಪಾರ್ವತೀದೇವಿಯರು**—ದೇವಲೋಕದಲ್ಲಿ ಮನುಷ್ಯನು ಮಾಡುವು ದನ್ನು ಮಾಡಿ ಆಮೇಲೆ ಅದರ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ಎನ್ನುವರು. ಅಶ್ವಮೇಧಯಾಗವು ಸರ್ವ ಪಾಪರೂಪವನ್ನು ಪರಿಹರಿಸುವುದು. ಇವರು ಪಾಪ ಪರಿಹಾರಕ್ಕಾಗಿ ಬೇರೆ ಪ್ರಾಯಶ್ಚಿತ್ತಗಳನ್ನೂ ಮಾಡುವುದು ಇದು ಏಕೆ?

60–66 **ರುದ್ರದೇವರು**—ದೇವಿ! ಸರಿಯಾದ ಸಂಶಯವನ್ನು ಕೇಳುವಿ. ಸಜ್ಜನರೂ ಅಸಜ್ಜನರೂ ಎರಡು ವಿಧವಾಗಿ ಪಾಪವನ್ನು ಮಾಡುವರು. ಮಾಡಬೇಕೆಂದೇ ಬುದ್ಧಿಪೂರ್ವಕವಾಗಿ ಮಾಡುವುದು, ತಿಳಿಯದೆ ದೈವೇಚ್ಛೆಯಿಂದ ಮಾಡುವುದು ಎಂದು ಎರಡು ವಿಧ. ಅವುಗಳಲ್ಲಿ ಮಾಡಬೇಕೆಂಬ ಬುದ್ಧಿಯಿಂದಲೇ ಕೋಪದಿಂದಲೂ ಯಾವ ಪಾಪವನ್ನು ಮಾಡುವರೋ ಆ ಪಾಪಕ್ಕೆ ಪರಿಹಾರವೇ ಇಲ್ಲ. ಸಾವಿರ ಅಶ್ವಮೇದಯಾಗ ಮಾಡಲಿ ಇತರ ಎಷ್ಟು ಪ್ರಾಯಶ್ಚಿತ್ತ ಮಾಡಲೀ ಆ ಪಾಪದ ಪರಿಹಾರವಾಗಲೇಲಾರದು. ತಿಳಿಯದೇ ದೈವೇಚ್ಛೆಯಿಂದ ಪಾಪವನ್ನು ಮಾಡಿದ್ದಾದರೆ ಅದು ಅಶ್ವಮೇದಯಾಗದಿಂದಲೂ ಇತರ ಪ್ರಾಯಶ್ಚಿತ್ತಗಳಿಂದಲೂ ಪರಿಹಾರವನ್ನು ಹೊಂದುವರು. ಲೋಕ ವ್ಯವಹಾರ ಸಿದ್ಧಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

**67 ಪಾರ್ವತೀದೇವಿಯರು**—ಲೋಕದಲ್ಲಿ ಮನುಷ್ಯರೂ ಇತರರೂ ಪ್ರಸಿದ್ಧ ಕಾರಣವಿದ್ದೊ ಇಲ್ಲವೋ ಸಾಯುವರಲ್ಲಾ ಇದಕ್ಕೇನು ಕಾರಣ?

**68–77 ರುದ್ರದೇವರು**—ಪೂರ್ವದಲ್ಲಿ ಮನುಷ್ಯರು ದಯಾಶೂನ್ಯರಾಗಿ ಪ್ರಾಣಿಗಳನ್ನು ಹೇಗೆ ನಾಶಮಾಡುವರೋ ಅದೇ ಪ್ರಕಾರವಾಗಿ ಅವರೂ ತಮ್ಮ ಕರ್ಮದ ಫಲದಿಂದ ಮರಣವನ್ನು ಹೊಂದುವರು. ಪ್ರಾಣಿಗಳಿಗೆ ವಿಷವನ್ನು ಹಾಕಿದವರು ತಾವು ವಿಷದಿಂದ ಸಾಯುವರು. ಶಸ್ತ್ರದಿಂದ ಕೊಂದವರು ತಾವು ಶಸ್ತ್ರದಿಂದ ಸಾಯುವರು ಹಾಗೆಯೇ ಇತರ ಮನುಷ್ಯರನ್ನು ಮನುಷ್ಯರೇ ಹೇಗೆ ಕೊಲ್ಲುವರೋ ತಾವು ಹಾಗೆಯೇ ಸಾಯುವರು. ಒಟ್ಟಿಗೆ ಹೇಳುವುದಾದರೆ ಯಾವ ಕಾಲದಲ್ಲಿ ಯಾವಕಾರಣದಿಂದ ಶುಭವನ್ನು ಅಶುಭವನ್ನೊ ಮಾಡುವರೊ ಅದೇ ಕಾಲದಲ್ಲಿ ಅದೇ.



# ಸಾರಾಸಾರ ವಸ್ತುಗಳು [1]

ಶ್ರೀಭಗವಂತನು ಅಸಾರಭಾಗಗಳನ್ನು ಸ್ವೀಕರಿಸುವುದಿಲ್ಲ. ಸಾರಭಾಗಗಳನ್ನೇ ಸ್ವೀಕರಿಸುವನು.

ಶ್ರೀಭಗವಂತನು ದ್ರಾಕ್ಷೆ, ಕಬ್ಬು, ತೆಂಗಿನಕಾಯಿ, ಮಾವಿನಹಣ್ಣು, ಹಲಸಿನ ಹಣ್ಣು, ಅಡಿಕೆ, ಖರ್ಜೂರ, ಬಾಳೆಹಣ್ಣು, ಪೇರಳೆ ಅಥವಾ ದಾಳಿಂಬೆಹಣ್ಣು, ತಾಂಬೂಲ ಖದಿರ ಪುಷ್ಪ ಗಂಧ ಪಚ್ಚಕರ್ಪೂರ ಕಸ್ತೂರಿ ಅಕ್ಕಿ ಗೋಧಿ ಕಡಲೆ ಹೆಸರು ಉದ್ದು ಅರಸಿನ ಇತ್ಯಾದಿಗಳ ಸಾರಭಾಗವನ್ನು ಸ್ವೀಕರಿಸುವನು.

ಹಾಗೆಯೇ ಅನಿಷಿದ್ಧಗಳಾದ ಎಲ್ಲಾ ಕಾಯಿಪಲ್ಯಗಳ ಸಾರವನ್ನೂ ಉಪ್ಪಿನಕಾಯಿಯ ಸಾರವನ್ನು ಸ್ವೀಕರಿಸುವನು. ಹಾಗೆಯೇ ಅನ್ನ ಭಕ್ಷ್ಯಗಳು, ತೊವ್ವೆ, ಪಾಯಸ, ಮೊಸರನ್ನ, ಹಾಲು ಮೊಸರು, ಮಜ್ಜಿಗೆ ತುಪ್ಪ ಹಿಂಗು, ಸಾಸಿವೆ, ಮೆಣಸು, ಜೀರಿಗೆ, ತುಪ್ಪದಲ್ಲಿ ಕರೆದ ಭಕ್ಷ್ಯಗಳು ಎಣ್ಣೆಯಲ್ಲಿ ಕರೆದ ಭಕ್ಷ್ಯಗಳು, ಹುರಿದ ಪದಾರ್ಥಗಳು, ಬೆಲ್ಲ, ಬೆಣ್ಣೆ ಸಕ್ಕರೆ ಇತ್ಯಾದಿಗಳಲ್ಲಿ ಇರುವ ಸಾರಭಾಗವನ್ನು ಸ್ವೀಕರಿಸುವನು.

ಭಗವಂತನ ಆಜ್ಞೆಯಿಂದ ವಾಯುದೇವರೂ ಭಗವಂತನ ಶೇಷಭೂತಗಳಾದ

---

1. ಗರುಡ ಪುರಾಣ

ಸಾರಭಾಗಗಳನ್ನು ಸ್ವೀಕರಿಸುವನು.

ಪೂರ್ವದಲ್ಲಿ ಹೇಳಿದ ಅನಿಷಿದ್ಧ ಪದಾರ್ಥಗಳೇ ಭಗವಂತನಿಗೆ ಸಮರ್ಪಿಸಲ್ಪಡದೆ ಇದ್ದರೆ ಅಸಾರವಾಗುವುವು. ಸಮರ್ಪಿಸಲ್ಪಟ್ಟರೆ ಸಾರವಾಗುವುವು.

ಅಸಾರವಾದದ್ದನ್ನು ಕಲ್ಯಾದಿದೈತ್ಯರು ಸ್ವೀಕರಿಸುವರು. ಇದರಿಂದ ದುಃಖದ ಅಭಿವೃದ್ಧಿಯಾಗುವುದು. ಯಾರು ವೈಶ್ವದೇವವನ್ನು ಮಾಡದೆ ಭೋಜನ ಮಾಡುವರೋ ಅವರು ಅಸಾರವನ್ನು ಭೋಜನಮಾಡಿದವರಾಗುವರು.

ವೈಶ್ವದೇವವನ್ನು ಮಾಡುವಾಗಲೂ ಸೂರ್ಯಾದಿದೇವತೆಗಳಿಗೆ ಆಹುತಿಯನ್ನು ಕೊಡುವಾಗ ಅವರ ಅಂತರ್ಯಾಮಿಯಾದ ವಾಯುದೇವರ ಅಂತರ್ಯಾಮಿ ಯಾದ ಪರಮಾತ್ಮನಿಗೆಂದು ಅನುಸಂಧಾನ ಮಾಡದೆ ಸೂರ್ಯಾದಿ ದೇವತೆಗಳಿಗೇ ಎಂದು ತಿಳಿದುಕೊಂಡು ಆಹುತಿಕೊಟ್ಟರೆ ಹಾಗೆ ವೈಶ್ವದೇವಮಾಡಿ ಭೋಜನ ಮಾಡಿದರೂ ಅಸಾರವನ್ನು ಭೋಜನ ಮಾಡಿದವರೇ ಆಗುವರು.

ದ್ರಾಕ್ಷಾದಿ ಹಣ್ಣುಗಳು ಕೃಮಿಕೀಟಗಳು ತಿಂದುಹಾಕಿದ್ದರೆ ಅಸಾರವಾಗುವುವು. ಬಾಳೇಹಣ್ಣು ಒಳ್ಳೇ ಹಣ್ಣಾಗಿ ನಾಲ್ಕು ದಿವಸಗಳಾದರೆ ಆಮೇಲೆ ಅಸಾರವಾಗುವುದು. ಹಾಗೆಯೇ ಜಂಬೂನೇರಳೆಯೂ ನಾಲ್ಕು ದಿವಸವಾದ ಮೇಲೆ ಅಸಾರವಾಗುವುದು. ಹಲಸಿನ ಹಣ್ಣು ಒಂದು ತಿಂಗಳ ಮೇಲೆ ಅಸಾರವಾಗುವುದು. ಖರ್ಜೂರವು ಆರು ತಿಂಗಳ ಮೇಲೆ ಅಸಾರವಾಗುವುದು. ತೆಂಗಿನ ಕಾಯಿಯನ್ನು ಒಡೆದು ಒಂದು ದಿವಸವಾದರೆ ಅಸಾರವಾಗುವುದು. ಒಣಗಿದ ಕೊಬರಿಯು ಒಂದು ಪಕ್ಷದ ಮೇಲೆ ಅಸಾರವಾಗುವುದು. ಅಡಿಕೆಯು ಒಂದು ವರ್ಷದ ಮೇಲೆ ಅಸಾರವಾಗುವುದು. ತಾಂಬೂಲವು ಒಂದು ಘಳಿಗೆಯ ಮೇಲೆ ಅಸಾರವಾಗುವುದು.

ಅನ್ನವೂ ತೊವ್ವೆಯೂ ಪಾಯಸವೂ ಬೇಯಿಸಿ ಮಾಡಿದ ಭಕ್ಷವೂ ಒಂದು ಝಾಮವಾದರೆ ಅಸಾರವಾಗುವುದು. ಮೂರು ಝಾಮವಾದರೆ ಎಣ್ಣೆಯಲ್ಲಿ ಕರೆದ ಭಕ್ಷ್ಯವು ಅಸಾರವಾಗುವುದು. ನಾಲ್ಕು ಝಾಮವಾದ ಮೇಲೆ ವ್ಯಂಜನವು ಅಸಾರ ವಾಗುವುದು.

ಸೌತೆಕಾಯಿಯು ಒಂದು ಪಕ್ಷವಾದರೆ ಅಸಾರವಾಗುವುದು. ಸುಂಠಿ ನೆಲ್ಲಿ ಮಾವಿನಕಾಯಿಗಳು ಒಂದು ವರ್ಷವಾದ ಮೇಲೆ ಅಸಾರವಾಗುವುವು. ಹಪ್ಪಳವು ಮಾಡಿಟ್ಟು ಹದಿನೈದು ದಿವಸಗಳಾದ ಅಸಾರವಾಗುವುವು.

**ತುಳಸಿಯು ಯಾವಾಗಲೂ ಸಾರವೇ. ಅದು ಏಕಾದಶೀದಿವಸದಲ್ಲಿಯೂ**

**ಸಾರವೇ. ಏಕಾದಶಿಯಲ್ಲಿಯೂ ತುಳಸೀಸಾರವನ್ನು ಮೂಗಿನ ಮೂಲಕ ತೆಗೆದುಕೊಳ್ಳಬೇಕು. ತುಲಸಿಯನ್ನು ಆದಿನ ಭಕ್ಷಣೆ ಮಾಡಬಾರದು.**

ಏಕಾದಶೀ ದಿನದಲ್ಲಿ ಭಗವಂತನ ತೀರ್ಥವೂ ಒಂದು ಬಾರಿ ಮಾತ್ರ ಸಾರವು. ಎರಡನೇ ಬಾರಿ ತೆಗೆದುಕೊಂಡು ಅದು ಅಸಾರವಾಗುವುವು.

ಹಾಗೆಯೇ ಗಂಧೋದಕ ಹಾಕಿದ ತೀರ್ಥವೂ ಏಕಾದಶೀದಿನದಲ್ಲಿ ಅಸಾರವೆನಿಸುವುದು.

ಏಕಾದಶೀದಿನದಲ್ಲಿ ಹಾಲು ತುಪ್ಪ ಜೇನು ನೀರು ಇತ್ಯಾದಿಗಳು ಭಗವಂತನಿಗೆ ಸಮರ್ಪಿಸಲಿಕ್ಕೆ ಸಾರವಾಗಿರುವುವು. ಮನುಷ್ಯರು ಸ್ವೀಕರಿಸಲಿಕ್ಕೆ ಅಸಾರವಾದವು.

ಆಷಾಢ ಶ್ರಾವಣ ಮಾಸದಲ್ಲಿ ಕಾಯಿಪಲ್ಯವೂ, ಭಾದ್ರಪದಮಾಸದಲ್ಲಿ ಮೊಸರೂ, ಅಶ್ವಿಜಮಾಸದಲ್ಲಿ ಹಾಲೂ, ಕಾರ್ತಿಕಮಾಸದಲ್ಲಿ ಬೇಳೆಗಳೂ ಅಸಾರವೆನಿಸುವುವು.

ತುಲಸೀಮಣಿಸರವನ್ನು ಹಾಕಿಕೊಳ್ಳದೆ ಇದ್ದ ದೇಹವು ನಿಸ್ಸಾರವೆನಿಸುವುದು.

ನೆಲ್ಲಿಕಾಯಿಯು ಸೇರದ ಅಡಿಗೆಯು ಅಸಾರವೆನಿಸುವುದು.

ಗದಾನಾರಾಯಣ ಮುದ್ರೆಗಳನ್ನು ನಾಮವನ್ನೂ ಹಚ್ಚಿಕೊಳ್ಳದೆ ಇರುವ ಹರಿಭಕ್ತಿಯಿಲ್ಲದೆ ಇರುವ ಸ್ತ್ರೀಯು ಅಸಾರಳೆನಿಸುವಳು.

ಭಗವಂತನ ನಾಮವನ್ನು ಉಚ್ಚರಿಸದ ನಾಲಿಗೆಯು ಅಸಾರವು. ದೇವರಿಗೆ ನೈವೇದ್ಯ ಮಾಡದೆ ಇರುವ ಅಡಿಗೆಯು ಅಸಾರವು. ಅಗಸೀ ಹೂವು ಮೂರು ದಿನವಾದರೆ ಅಸಾರವಾಗುವುದು.

ಮಲ್ಲಿಗೆ ಹೂವು ಒಂದು ಝಾಮವಾದರೂ ಜಾಜಿಹೂವು ಅರ್ಧಝಾಮ ವಾದರೂ ತಾವರೆಹೂವು ಮೂರು ಝಾಮವಾದರೂ ಕರವೀರ ಪುಷ್ಪವು ಒಂದು ದಿವಸವಾದರೂ ಪಾರಿಜಾತವು ಘಳಿಗೆಯಾದರೂ ಅಸಾರವಾಗುವುವು. ಕುಂಕುಮ ಕೇಸರಿಯು ಮೂರು ವರ್ಷದವರೆಗೆ ಸಾರವಾಗಿರುವುದು. ಕಸ್ತೂರಿಯು ಹತ್ತು ವರ್ಷವೂ ಪಚ್ಚಕರ್ಪೂರವು ಒಂದು ವರ್ಷವೂ ಸಾರವಾಗಿರುವುದು. ಗಂಧವು ಯಾವಾಗಲೂ ಸಾರವಾಗಿರುವುದು.

ಹೊಟ್ಟು, ಮದ್ಯ, ಹಿಂಡಿ, ಸೋರೆಕಾಯಿ, ಬದನೆಕಾಯಿ, ನೊಗ್ಗೆಕಾಯಿ, ಬಿಲ್ವಹಣ್ಣು, ಅತ್ತಿಯಕಾಯಿ, ನೀರುಳ್ಳಿ, ಬೆಳ್ಳುಳ್ಳಿ ಇತ್ಯಾದಿ ನಿಷಿದ್ಧ ಪದಾರ್ಥಗಳು. ಯಾವಾಗಲೂ ಅಸಾರವಾಗಿರುವುವು.

ಏಕಾದಶೀದಿನದಲ್ಲಿ ಶ್ರಾದ್ಧ ತರ್ಪಣ ವೈಶ್ವದೇವ ಮಂತ್ರಪೂರ್ವಕವಾಗಿ ಶವದಾಹಗಳೂ ಅಸಾರವಾದವು. ಈ ಅಸಾರಭಾಗಗಳನ್ನು ಶ್ರೀಭಗವಂತನು ಸ್ವೀಕರಿಸುವುದಿಲ್ಲ.



## ಕಲಿಯುಗದ ಧರ್ಮವು[1]

ಸರ್ಪಯಾಗದಲ್ಲಿ ಬಂದಿದ್ದ ವೇದವ್ಯಾಸದೇವರೊಡನೆ ಜನಮೇಜಯರಾಜನು ಕಲಿಯುಗದಲ್ಲಿ ನಡೆಯುವ ಧರ್ಮವನ್ನು ಕೇಳಲು ಶ್ರೀವೇದವ್ಯಾಸದೇವರು ಹೇಳಿದರು. 'ಜನಮೇಜಯರಾಜ1 ಕಲಿಯುಗದಲ್ಲಿ ಕೊನೆಗಾಗುವಾಗ ರಾಜರು ಪ್ರಜೆ ಗಳಿಂದ [2]ವರಿಯನ್ನು ವಸೂಲು ಮಾಡುವರು. ಆದರೆ ಪ್ರಜೆಗಳನ್ನು ರಕ್ಷಿಸುವುದಿಲ್ಲ. ತಮ್ಮನ್ನು ರಕ್ಷಿಸಿಕೊಳ್ಳುವುದರಲ್ಲೇ ಆಸಕ್ತರಾಗುವರು. ಕ್ಷತ್ರಿಯರಲ್ಲದೆ ಇದ್ದವರೂ ರಾಜರಾಗುವರು. ಶೂದ್ರರು ಬ್ರಾಹ್ಮಣರನ್ನು ಆಶ್ರಯಿಸಿ ಬದುಕುವರು. ಶೂದ್ರರು ಬ್ರಾಹ್ಮಣರ ಆಚಾರವನ್ನು ಮಾಡುವರು. ಶ್ರೋತ್ರಿಯರಾದ ಬ್ರಾಹ್ಮಣರೂ ಕ್ಷತ್ರಿಯ ವೃತ್ತಿಯನ್ನು ಕೈಗೊಳ್ಳುವರು. ಜನರು ಪಂಚಯಜ್ಞಗಳನ್ನು ಮಾಡದಿರುವ ಕಾರಣ ಅವರು ದೇವತೆಗಳಿಗೆ ಕೊಟ್ಟ ಹವಿಸ್ಸು ವ್ಯರ್ಥವಾಗುವುದು. ಅಂದರೆ ದೇವತೆಗಳು ಅದನ್ನು ಸ್ವೀಕರಿಸುವುದಿಲ್ಲ.

ಎಲ್ಲ ಜಾತಿಯರವರೂ ಒಂದೇ ಪಂಕ್ತಿಯಲ್ಲಿ ಕೂತುಕೊಂಡು ಊಟ ಮಾಡುವರು. ಜನರೆಲ್ಲರೂ ಕೈಗಾರಿಕೆಯಲ್ಲಿ ಆಸಕ್ತರಾಗಿ ಸುಳ್ಳು ಹೇಳುವವರಾಗಿ ಮದ್ಯಮಾಂಸಗಳಲ್ಲಿ ಪ್ರೀತಿಯುಳ್ಳವರಾಗುವರು. ಹೆಂಡತಿಯರು ಗಂಡನಲ್ಲಿ ಪೂಜ್ಯನೆಂಬ ಬುದ್ಧಿಯಿಲ್ಲದೆ ಕೇವಲ ಮಿತ್ರರಂತೆ ತಾನೂ ಗಂಡನೂ ಸಮಾನರು ಎಂಬ ಅಭಿಪ್ರಾಯದಿಂದ ಇರುವರು. ಕಳ್ಳರು ರಾಜರಂತೆ ಇರುವರು. ರಾಜರು ಕಳ್ಳರ ವ್ಯಾಪಾರವನ್ನು ಮಾಡುವರು. ಕೆಲಸ ಮಾಡುವವರು ಯಜಮಾನನ ಮಾತನ್ನು ಕೇಳಲಾರರು. ಹಣವು ಯಾರಲ್ಲಿ ಇದೆಯೋ ಅವರನ್ನು ಜನರು ಪೂಜಿಸುವರು. ಸದಾಚಾರವನ್ನು ಪೂಜಿಸಲಾರರು. ಧರ್ಮಭ್ರಷ್ಟನನ್ನು ಒಬ್ಬರೂ ನಿಂದಿಸಲಾರರು. ಜನರಿಗೆ ಬುದ್ಧಿಯು ಕಡಿಮೆಯಾಗುತ್ತದೆ. ವಿಧವೆಯರು ಸನ್ಯಾಸಿ ಗಳೂ ಮಕ್ಕಳನ್ನು ಹಡೆಯುವರು. ಗಂಡಸರು ಹದಿನಾರು ವರ್ಷದ ಮೊದಲೇ ಮಕ್ಕಳನ್ನು ಪಡೆಯುತ್ತಾರೆ. ಜನರೆಲ್ಲರೂ ಅನ್ನವನ್ನು ಮಾರುವರು. ಬ್ರಾಹ್ಮಣರು ವೇದವನ್ನು

1. ಆಶ್ರ.ಪ. ಅ-35 Puranic Encyclopedia. p. 346

ಮಾರುವರು. ಅಂದರೆ ಇಷ್ಟು ಹೊತ್ತು ಪಾಠಹೇಬೇಕಾದರೆ ಇಷ್ಟು ಹಣವನ್ನು ಕೊಡಬೇಕೆಂದು ಮೊದಲೇ ಮಾತಾಡಿಕೊಂಡು ವೇದಪಾಠಹೇಳುವರು. ಹೆಂಗಸರು ವ್ಯಭಿಚಾರದಿಂದ ಜೀವಿಸುವರು. ಎಲ್ಲರೂ ವೇದವನ್ನು ಹೇಳುವರು. ಅಂದರೆ ಶೂದ್ರರೂ ವೇದವನ್ನು ಹೇಳುವರು. ಯಜ್ಞಾದಿಕರ್ಮವು ನಿಂತುಹೋಗು ವುದು. ಶೂದ್ರರನ್ನೂ ಬ್ರಾಹ್ಮಣಾದಿಗಳು ಬಹುವಚನದಿಂದ ಕೂಗುವರು. ಬ್ರಾಹ್ಮಣರು ತಪೋಯಜ್ಞಗಳನ್ನು ಮಾಡಿ ಹಣತೆಗೆದುಕೊಂಡು ಅದರ ಫಲವನ್ನು ಇನ್ನೊಬ್ಬರಿಗೆ ಮಾರುವರು. ವಸಂತಾದಿಋತುಗಳಲ್ಲಿ ಆಯಾವ ಋತುಗಳ ಧರ್ಮವು ನಡೆಯದೆ ವಿಪರೀತ ಧರ್ಮವು ನಡೆಯುವುದು. ಅಂದರೆ ಬಿಸಿಲುಕಾಲಕ್ಕೆ ಮಳೆ ಬರುವುದು. ಮಳೆಕಾಲಕ್ಕೆ ಬಿಸಿಲು ಬರುವುದು. ಇತ್ಯಾದಿ ರೀತಿಯಾಗಿ ಆಗುವುದು. ಶೂದ್ರರು ಮಾಂಸವನ್ನು ಭಕ್ಷಿಸದೆ ಬಿಳಿಯಾದ ಹುಲ್ಲು ಉಳ್ಳವರಾಗಿ ತಲೆಬೋಳಿಸಿ ಕೊಂಡು ಕಾವಿ ವಸ್ತ್ರವನ್ನು ಉಟ್ಟುಕೊಂಡು ಜೈನಬುದ್ಧ ಮತವನ್ನು ಆಶ್ರಯಿಸಿ ವೇದಗಳನ್ನು ದೂಷಿಸುವರು. ನಾಸ್ತಿಕರಾಗುವರು. ಹುಲಿ ಮೊದಲಾದ ದುಷ್ಟ ಮೃಗಗಳು ಹೆಚ್ಚಿಗೆ ಆಗುವುವು. ದವಗಳು ಕಡಿಮೆಯಾಗುವುವು. ರುಚಿಕರವಾದ ವಸ್ತುಗಳು ಕಡಿಮೆಯಾಗುವುವು. ಮ್ಲೇಚ್ಛರೆಲ್ಲರೂ ಉತ್ತಮದೇಶದಲ್ಲಿ ವಾಸಿಸುವರು. ಒಳ್ಳೇ ದೇಶದವರು.

ಮ್ಲೇಚ್ಛದೇಶಕ್ಕೆ ಹೋಗಿ ವಾಸಿಸುವರು. ಎರಡುವರ್ಷದ ದನದ ಕರುವನ್ನೇ ನೇಗಿಲಿಗೆ ಕಟ್ಟಿ ಉಳುವರು. ಕರುವಿನ ಒಂದು ಕೊಂಬು ಮಾತ್ರ ನೀರಿನಿಂದ ನೆನೆಯೋಣ ಇನ್ನೊಂದು ಒದ್ದೆಯಾಗದಿರೋಣ ಈ ರೀತಿಯಾಗಿ ವಿಚಿತ್ರವಾಗಿ ಮಳೆಯು ಬರುವುದು. ಎಲ್ಲರೂ ಒಬ್ಬರನ್ನೊಬ್ಬರು ಮೋಸ ಮಾಡುವರು. ಸ್ವಲ್ಪ ಬಂದರೂ ಹಣವಂತರೆಂದು ಅಹಂಕಾರವನ್ನು ಹೊಂದುವರು. ಸ್ವಲ್ಪ ವ್ಯಸನದಿಂದಲೇ ಅಂದರೆ ಚೀಟಾಟ ಆಡೋಣ ಇತ್ಯಾದಿಗಳಿಂದ ದರಿದ್ರರಾಗುವರು. ಜನರೊಬ್ಬರೂ ಧರ್ಮವನ್ನು ಮಾಡುವುದಿಲ್ಲ. ಭೂಮಿಯಲ್ಲಿ ಬೆಳಸಾಗದ ಪ್ರದೇಶವೇ ಹೆಚ್ಚಾಗುತ್ತದೆ. ದಾರಿಯಲ್ಲೆಲ್ಲಾ ಕಳ್ಳರು ಹೆಚ್ಚುತ್ತಾರೆ. ಎಲ್ಲರೂ ಅಂಗಡಿಯಿಟ್ಟು ವ್ಯಾಪಾರ ಮಾಡಲಿಕ್ಕೆ ಹೋಗುತ್ತಾರೆ. ತಂದೆಯು ಕೊಟ್ಟ ಆಭರಣಾದಿಗಳನ್ನು ಶಾಸ್ತ್ರದಿಂದ ನಿಷಿದ್ಧವಾಗಿದ್ದರೂ ಪಾಲುಮಾಡಿಕೊಳ್ಳುತ್ತಾರೆ. ಅಣ್ಣತಮ್ಮಂದಿರು ಲೋಭದಿಂದ ಜಗಳಾಡುತ್ತಾರೆ.

ಕಲಿಯುಗವು ಕೊನೆಯಾಗುವಾಗ ಹೆಂಗಸರಿಗೆ ಸೌಂದರ್ಯ ಆಭರಣ ಇತ್ಯಾದಿಗಳು ಒಂದೂ ಇಲ್ಲದೆ ಕೇವಲ ತಲೆ ಕೂದಲುಗಳಿಂದಲೇ ಅಲಂಕೃತರಾಗು

ಏಕಾದಶೀದಿನದಲ್ಲಿ ಶ್ರಾದ್ಧ ತರ್ಪಣ ವೈಶ್ವದೇವ ಮಂತ್ರಪೂರ್ವಕವಾಗಿ ಶವದಾಹಗಳೂ ಅಸಾರವಾದವು. ಈ ಅಸಾರಭಾಗಗಳನ್ನು ಶ್ರೀಭಗವಂತನು ಸ್ವೀಕರಿಸುವುದಿಲ್ಲ.



# ಕಲಿಯುಗದ ಧರ್ಮವು[1]

ಸರ್ಪಯಾಗದಲ್ಲಿ ಬಂದಿದ್ದ ವೇದವ್ಯಾಸದೇವರೊಡನೆ ಜನಮೇಜಯರಾಜನು ಕಲಿಯುಗದಲ್ಲಿ ನಡೆಯುವ ಧರ್ಮವನ್ನು ಕೇಳಲು ಶ್ರೀವೇದವ್ಯಾಸದೇವರು ಹೇಳಿದರು. 'ಜನಮೇಜಯರಾಜ1 ಕಲಿಯುಗದಲ್ಲಿ ಕೊನೆಗಾಗುವಾಗ ರಾಜರು ಪ್ರಜೆ ಗಳಿಂದ [2]ವರಿಯನ್ನು ವಸೂಲು ಮಾಡುವರು. ಆದರೆ ಪ್ರಜೆಗಳನ್ನು ರಕ್ಷಿಸುವುದಿಲ್ಲ. ತಮ್ಮನ್ನು ರಕ್ಷಿಸಿಕೊಳ್ಳುವುದರಲ್ಲೇ ಆಸಕ್ತರಾಗುವರು. ಕ್ಷತ್ರಿಯರಲ್ಲದೆ ಇದ್ದವರೂ ರಾಜರಾಗುವರು. ಶೂದ್ರರು ಬ್ರಾಹ್ಮಣರನ್ನು ಆಶ್ರಯಿಸಿ ಬದುಕುವರು. ಶೂದ್ರರು ಬ್ರಾಹ್ಮಣರ ಆಚಾರವನ್ನು ಮಾಡುವರು. ಶ್ರೋತ್ರಿಯರಾದ ಬ್ರಾಹ್ಮಣರೂ ಕ್ಷತ್ರಿಯ ವೃತ್ತಿಯನ್ನು ಕೈಗೊಳ್ಳುವರು. ಜನರು ಪಂಚಯಜ್ಞಗಳನ್ನು ಮಾಡದಿರುವ ಕಾರಣ ಅವರು ದೇವತೆಗಳಿಗೆ ಕೊಟ್ಟ ಹವಿಸ್ಸು ವ್ಯರ್ಥವಾಗುವುದು. ಅಂದರೆ ದೇವತೆಗಳು ಅದನ್ನು ಸ್ವೀಕರಿಸುವುದಿಲ್ಲ.

ಎಲ್ಲ ಜಾತಿಯರವರೂ ಒಂದೇ ಪಂಕ್ತಿಯಲ್ಲಿ ಕೂತುಕೊಂಡು ಊಟ ಮಾಡುವರು. ಜನರೆಲ್ಲರೂ ಕೈಗಾರಿಕೆಯಲ್ಲಿ ಆಸಕ್ತರಾಗಿ ಸುಳ್ಳು ಹೇಳುವವರಾಗಿ ಮದ್ಯಮಾಂಸಗಳಲ್ಲಿ ಪ್ರೀತಿಯುಳ್ಳವರಾಗುವರು. ಹೆಂಡತಿಯರು ಗಂಡನಲ್ಲಿ ಪೂಜ್ಯನೆಂಬ ಬುದ್ಧಿಯಿಲ್ಲದೆ ಕೇವಲ ಮಿತ್ರರಂತೆ ತಾನೂ ಗಂಡನೂ ಸಮಾನರು ಎಂಬ ಅಭಿಪ್ರಾಯದಿಂದ ಇರುವರು. ಕಳ್ಳರು ರಾಜರಂತೆ ಇರುವರು. ರಾಜರು ಕಳ್ಳರ ವ್ಯಾಪಾರವನ್ನು ಮಾಡುವರು. ಕೆಲಸ ಮಾಡುವವರು ಯಜಮಾನನ ಮಾತನ್ನು ಕೇಳಲಾರರು. ಹಣವು ಯಾರಲ್ಲಿ ಇದೆಯೋ ಅವರನ್ನು ಜನರು ಪೂಜಿಸುವರು. ಸದಾಚಾರವನ್ನು ಪೂಜಿಸಲಾರರು. ಧರ್ಮಭ್ರಷ್ಟನನ್ನು ಒಬ್ಬರೂ ನಿಂದಿಸಲಾರರು. ಜನರಿಗೆ ಬುದ್ಧಿಯು ಕಡಿಮೆಯಾಗುತ್ತದೆ. ವಿಧವೆಯರು ಸನ್ಯಾಸಿ ಗಳೂ ಮಕ್ಕಳನ್ನು ಹಡೆಯುವರು. ಗಂಡಸರು ಹದಿನಾರು ವರ್ಷದ ಮೊದಲೇ ಮಕ್ಕಳನ್ನು ಪಡೆಯುತ್ತಾರೆ. ಜನರೆಲ್ಲರೂ ಅನ್ನವನ್ನು ಮಾರುವರು. ಬ್ರಾಹ್ಮಣರು ವೇದವನ್ನು

1. ಆಶ್ರ.ಪ. ಅ-35 Puranic Encylopedia. p. 346

ಮಾರುವರು. ಅಂದರೆ ಇಷ್ಟು ಹೊತ್ತು ಪಾಠಹೇಬೇಕಾದರೆ ಇಷ್ಟು ಹಣವನ್ನು ಕೊಡಬೇಕೆಂದು ಮೊದಲೇ ಮಾತಾಡಿಕೊಂಡು ವೇದಪಾಠಹೇಳುವರು. ಹೆಂಗಸರು ವ್ಯಭಿಚಾರದಿಂದ ಜೀವಿಸುವರು. ಎಲ್ಲರೂ ವೇದವನ್ನು ಹೇಳುವರು. ಅಂದರೆ ಶೂದ್ರರೂ ವೇದವನ್ನು ಹೇಳುವರು. ಯಜ್ಞಾದಿಕರ್ಮವು ನಿಂತುಹೋಗು ವುದು. ಶೂದ್ರರನ್ನೂ ಬ್ರಾಹ್ಮಣಾದಿಗಳು ಬಹುವಚನದಿಂದ ಕೂಗುವರು. ಬ್ರಾಹ್ಮಣರು ತಪೋಯಜ್ಞಗಳನ್ನು ಮಾಡಿ ಹಣತೆಗೆದುಕೊಂಡು ಅದರ ಫಲವನ್ನು ಇನ್ನೊಬ್ಬರಿಗೆ ಮಾರುವರು. ವಸಂತಾದಿಋತುಗಳಲ್ಲಿ ಆವಾವ ಋತುಗಳ ಧರ್ಮವು ನಡೆಯದೆ ವಿಪರೀತ ಧರ್ಮವು ನಡೆಯುವುದು. ಅಂದರೆ ಬಿಸಿಲುಕಾಲಕ್ಕೆ ಮಳೆ ಬರುವುದು. ಮಳೆಕಾಲಕ್ಕೆ ಬಿಸಿಲು ಬರುವುದು. ಇತ್ಯಾದಿ ರೀತಿಯಾಗಿ ಆಗುವುದು. ಶೂದ್ರರು ಮಾಂಸವನ್ನು ಭಕ್ಷಿಸದೆ ಬಿಳಿಯಾದ ಹುಲ್ಲು ಉಳ್ಳವರಾಗಿ ತಲೆಬೋಳಿಸಿ ಕೊಂಡು ಕಾವಿ ವಸ್ತ್ರವನ್ನು ಉಟ್ಟುಕೊಂಡು ಜೈನಬುದ್ಧ ಮತವನ್ನು ಆಶ್ರಯಿಸಿ ವೇದಗಳನ್ನು ದೂಷಿಸುವರು. ನಾಸ್ತಿಕರಾಗುವರು. ಹುಲಿ ಮೊದಲಾದ ದುಷ್ಟ ಮೃಗಗಳು ಹೆಚ್ಚಿಗೆ ಆಗುವುವು. ದನಗಳು ಕಡಿಮೆಯಾಗುವುವು. ರುಚಿಕರವಾದ ವಸ್ತುಗಳು ಕಡಿಮೆಯಾಗುವುವು. ಮ್ಲೇಚ್ಛರೆಲ್ಲರೂ ಉತ್ತಮದೇಶದಲ್ಲಿ ವಾಸಿಸುವರು. ಒಳ್ಳೇ ದೇಶದವರು.

ಮ್ಲೇಚ್ಛದೇಶಕ್ಕೆ ಹೋಗಿ ವಾಸಿಸುವರು. ಎರಡುವರ್ಷದ ದನದ ಕರುವನ್ನೇ ನೇಗಿಲಿಗೆ ಕಟ್ಟಿ ಉಳುವರು. ಕರುವಿನ ಒಂದು ಕೊಂಬು ಮಾತ್ರ ನೀರಿನಿಂದ ನೆನೆಯೋಣ ಇನ್ನೊಂದು ಒದ್ದೆಯಾಗದಿರೋಣ ಈ ರೀತಿಯಾಗಿ ವಿಚಿತ್ರವಾಗಿ ಮಳೆಯು ಬರುವುದು. ಎಲ್ಲರೂ ಒಬ್ಬರನ್ನೊಬ್ಬರು ಮೋಸ ಮಾಡುವರು. ಸ್ವಲ್ಪ ಬಂದರೂ ಹಣವಂತರೆಂದು ಅಹಂಕಾರವನ್ನು ಹೊಂದುವರು. ಸ್ವಲ್ಪ ವ್ಯಸನದಿಂದಲೇ ಅಂದರೆ ಚೀಟಾಟ ಆಡೋಣ ಇತ್ಯಾದಿಗಳಿಂದ ದರಿದ್ರರಾಗುವರು. ಜನರೊಬ್ಬರೂ ಧರ್ಮವನ್ನು ಮಾಡುವುದಿಲ್ಲ. ಭೂಮಿಯಲ್ಲಿ ಬೆಳಸಾಗದ ಪ್ರದೇಶವೇ ಹೆಚ್ಚಾಗುತ್ತದೆ. ದಾರಿಯಲ್ಲೆಲ್ಲಾ ಕಳ್ಳರು ಹೆಚ್ಚುತ್ತಾರೆ. ಎಲ್ಲರೂ ಅಂಗಡಿಯಿಟ್ಟು ವ್ಯಾಪಾರ ಮಾಡಲಿಕ್ಕೆ ಹೋಗುತ್ತಾರೆ. ತಂದೆಯು ಕೊಟ್ಟ ಆಭರಣಾದಿಗಳನ್ನು ಶಾಸ್ತ್ರದಿಂದ ನಿಷಿದ್ಧವಾಗಿದ್ದರೂ ಪಾಲುಮಾಡಿಕೊಳ್ಳುತ್ತಾರೆ. ಅಣ್ಣತಮ್ಮಂದಿರು ಲೋಭದಿಂದ ಜಗಳಾಡುತ್ತಾರೆ.

ಕಲಿಯುಗವು ಕೊನೆಯಾಗುವಾಗ ಹೆಂಗಸರಿಗೆ ಸೌಂದರ್ಯ ಆಭರಣ ಇತ್ಯಾದಿಗಳು ಒಂದೂ ಇಲ್ಲದೆ ಕೇವಲ ತಲೆ ಕೂದಲುಗಳಿಂದಲೇ ಅಲಂಕೃತರಾಗು

ತ್ತಾರೆ. ಪುರುಷನೂ ಗಂಧಪುಷ್ಪ ಇತ್ಯಾದಿ ಒಂದೂ ಇಲ್ಲದೆ ಭೂತದಂತೆ ಇರುತ್ತಾನೆ. ಅವನಿಗೆ ಹೆಂಡತಿಗೆ ಸಮಾನ ಆಶ್ರಯ ಮತ್ತೊಂದು ಇರುವುದಿಲ್ಲ. ಅಯೋಗ್ಯರು ಹೆಚ್ಚಾಗುತ್ತಾರೆ. ಹೆಂಗಸರೂ ಹೆಚ್ಚಾಗು ತ್ತಾರೆ. ಗಂಡಸರು ಕಡಿಮೆಯಾಗುತ್ತಾರೆ. ಯಾಚನ ಮಾಡುವವರು ಹೆಚ್ಚಾಗುತ್ತಾರೆ. ಆದರೆ ಒಬ್ಬರಿಗೊಬ್ಬರು ಏನೂ ಕೊಡುವುದಿಲ್ಲ. ಯಾವ ಜಾತಿಯವರು ಏನು ದಾನ ಕೊಟ್ಟರು ಬ್ರಾಹ್ಮಣರು ವಿಚಾರವಿಲ್ಲದೆ ತೆಗೆದುಕೊಳ್ಳುತ್ತಾರೆ. ಜನರು ರಾಜರಿಂದಲೂ ಕಳ್ಳರಿಂದಲೂ ಅಗ್ನಿಯಿಂದಲೂ ಪೀಡಿತರಾಗಿ ನಾಶವನ್ನು ಹೊಂದುತ್ತಾರೆ. ಸಸ್ಯವು ಬೆಳೆಯುವುದು ಕಡಿಮೆಯಾಗುತ್ತದೆ.

ಯೌವನವುಳ್ಳವರು ಮುದುಕರಂತೆ ಆಗುವರು. ಏನೋ ಆಸೆಯಿಂದ ದುಃಖಪಡುತ್ತಾ ಇರುತ್ತಾರೆ. ಮಳೆಕಾಲದಲ್ಲಿ ಹೆಚ್ಚಾಗಿ ಗಾಳಿಯೂ ಕಲ್ಲುಮಳೆಯೂ ಬರುತ್ತದೆ. ಪರಲೋಕದ ವಿಷಯದಲ್ಲಿ ಜನರು ಸಂದೇಹ ವುಳ್ಳವರಾಗಿರುತ್ತಾರೆ. ಬ್ರಾಹ್ಮಣರು ತಾವು ದುರಾಚಾರಿಗಳಾಗಿದ್ದುಕೊಂಡು ವೇದಗಳನ್ನು ದೂಷಿಸುತ್ತಾ ತಾವೇ ದೊಡ್ಡವರು ಎಂದು ತಿಳಿಯುತ್ತಾರೆ. ತುಂಬಾ ಕೋಪವುಳ್ಳವರಾಗಿರುತ್ತಾರೆ. ರಾಜರೆಲ್ಲರೂ ವೈಶ್ಯರಂತೆ ವ್ಯಾಪಾರಾದಿಗಳನ್ನು ಮಾಡುತ್ತಾರೆ. ಶಾಸ್ತ್ರದಲ್ಲಿ ಹೇಳದೆ ಇರುವ ಧರ್ಮಗಳನ್ನು ಮಾಡುತ್ತಾರೆ. ಸಾಲ ಕೊಟ್ಟವರಲ್ಲಿ ಸಾಲ ತೆಗೆದುಕೊಂಡವರು ವಿನಯದಿಂದ ಇರುವುದಿಲ್ಲ. ಒಬ್ಬರ ಹರ್ಷವೂ ಕೋಪವೂ ವ್ಯರ್ಥವಾಗುತ್ತದೆ ಎಂದರೆ ಉಪಕಾರ ಮಾಡಲಿಕ್ಕೂ ಅಪಕಾರ ಮಾಡಲಿಕ್ಕೂ ಸಮರ್ಥರಾಗುವುದಿಲ್ಲ. ಮೇಕೆಯ ಹಾಲನ್ನು ಉಪ ಯೋಗಿಸುತ್ತಾರೆ. ಶಾಸ್ತ್ರವನ್ನು ಓದದೆ ತಮ್ಮ ಇಚ್ಛಾಪ್ರಕಾರವಾಗಿ ಧರ್ಮವನ್ನು ಹೇಳುತ್ತಾರೆ. ಶಾಸ್ತ್ರದಲ್ಲಿ ಹೇಳಿದ ಧರ್ಮವನ್ನು ಹೇಳಲಾರರು. ಎಲ್ಲರೂ ದೊಡ್ಡವರನ್ನು ಸೇವಿಸದೆಯೇ ಎಲ್ಲವನ್ನು ತಿಳಿದಿರುವೆವು ಎಂಬ ಅಹಂಕಾರ ಪಡುವರು. ಎಲ್ಲರೂ ತಾವು ಪಂಡಿತರೆಂದೇ ಭಾವನಾ ಮಾಡುವರು.

ರಾಜರೆಲ್ಲರೂ ಕಳ್ಳರಂತೆ ಇರುವರು. ಬ್ರಾಹ್ಮಣರು ತಾವೂ ಅನಾಚಾರಿಗಳಾಗಿ ಅವರಿಗೆ ಉಪದೇಶಿಸಲಾರರು. ವ್ಯಭಿಚಾರದಿಂದ ಹುಟ್ಟಿದವರೂ ವ್ಯಭಿಚಾರ ಮಾಡುವವರೂ ಮದ್ಯಪಾನ ಮಾಡುವವರೂ ಇತ್ಯಾದಿ ಅಯೋಗ್ಯರು ಅಶ್ವಮೇಧಾದಿಯಾಗವನ್ನು ಮಾಡುವರು. ಬ್ರಾಹ್ಮಣರು ಹಣದ ಆಸೆಯುಳ್ಳವರಾಗಿ ಅಯೋಗ್ಯರಿಗೆ ಪೌರೋಹಿತ್ಯವನ್ನು ಮಾಡಿಸುವರು. ತಿನ್ನಬಾರದ ಪದಾರ್ಥಗಳನ್ನು ತಿನ್ನುವರು. ಎಲ್ಲರನ್ನು ಬಹುವಚನದಿಂದ ಹೇಳುವರು. ಯಾರು ಸರಿಯಾಗಿ

ಓದುವುದಿಲ್ಲ. ಹೆಂಗಸರು ಒಂದೊಂದು ಕೈಯಲ್ಲಿ ಒಂದೊಂದೇ ಬಳೆಯನ್ನು ಧರಿಸುವರು. ಗುರುಗುಂಜಿ ಶಂಖ ಇತ್ಯಾದಿಗಳಿಂದ ಆಭರಣ ಮಾಡಿಕೊಳ್ಳುವರು. ಶಾಸ್ತ್ರದಲ್ಲಿ ಹೇಳಿದಂತೆ ಗ್ರಹಗಳ ಯೋಗವು ಉಂಟಾಗುವುದಿಲ್ಲ. ಮಕ್ಕಳು ತಂದೆಯ ರನ್ನು ಆಜ್ಞಾ ಮಾಡುತ್ತಾರೆ. ಸೊಸೆಯರು ಅತ್ತೆಯರಿಂದ ಕೆಲಸ ಮಾಡಿಸುತ್ತಾರೆ.

ಪುರುಷರು ಬೇರೆ ಬೇರೆ ಜಾತಿಯ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುತ್ತಾರೆ. ಶಿಷ್ಯರು ಗುರುಗಳನ್ನು ಬೆದರಿಸುತ್ತಾರೆ. ಯತಿಗಳಿಗೆ ಭಿಕ್ಷೆಯನ್ನು ಹಾಕದೆ ಬಲಿಹರಣ ವನ್ನು ಮಾಡದೆ ಭೋಜನ ಮಾಡುತ್ತಾರೆ. ಗಂಡಂದಿರು ನಿದ್ದೆ ಮಾಡುತ್ತಿರುವಾಗ ಅವರನ್ನು ವಂಚನ ಮಾಡಿ ಹೋಗಿ ಹೆಂಗಸರು ವ್ಯಭಿಚಾರವನ್ನು ಮಾಡುತ್ತಾರೆ. ಹೆಂಗಸರು ನಿದ್ದೆ ಮಾಡುತ್ತಿರುವಾಗ ಗಂಡಸರು ಹೋಗಿ ಪರಸ್ತ್ರೀಯರನ್ನು ಹೊಂದುತ್ತಾರೆ. ಒಬ್ಬರೂ ರೋಗವಿಲ್ಲದೆ ಇದ್ದವರೂ ಮನೋವ್ಯಥೆಯಿಲ್ಲದವರೂ ಇರುವುದಿಲ್ಲ. ಎಲ್ಲರೂ ಇನ್ನೊಬ್ಬರ ಮೇಲೆ ಅಸೂಯೆಯನ್ನು ಹೊಂದುತ್ತಾರೆ. ಒಬ್ಬರು ಉಪಕಾರ ಮಾಡಿದರೆ ಅವರಿಗೆ ಪ್ರತ್ಯುಪಕಾರಮಾಡುವುದಿಲ್ಲ. ವೇದಗಳನ್ನು ಪ್ರಮಾಣವಲ್ಲ ವೆಂದು ಭಾವಿಸುತ್ತಾರೆ. ಹೆಂಗಸರು ವ್ಯಭಿಚಾರದ ಕಥೆಯನ್ನೇ ಹೇಳುತ್ತಿರುತ್ತಾರೆ. ಜನರು ನಾಸ್ತಿಕ್ಯ ಬುದ್ಧಿಯುಳ್ಳವರಾಗಿರುತ್ತಾರೆ. ಧರ್ಮವನ್ನು ಹಾಳು ಮಾಡುತ್ತಾರೆ. ಮೂರ್ಖರೆಲ್ಲರೂ ತಾವೇ ಪಂಡಿತರೆಂದು ತಿಳಿದುಕೊಳ್ಳುತ್ತಾರೆ. ತತ್ಕಾಲದಲ್ಲಿ ಏನಾಗುತ್ತದೋ ಅದರಲ್ಲಿ ಮಾತ್ರ ನಂಬಿಕೆಯುಳ್ಳವರಾಗುತ್ತಾರೆ. ಶಾಸ್ತ್ರದ ಜ್ಞಾನದಿಂದ ರಹಿತರಾಗಿರುತ್ತಾರೆ. ಡಾಂಭಿಕರಾಗುತ್ತಾರೆ. ಇಂದ್ರಿಯ ಜಯರಹಿತ ರಾಗಿರುತ್ತಾರೆ. ಲಜ್ಜಾಹೀನರಾಗುತ್ತಾರೆ. ಬ್ರಾಹ್ಮಣರ ವೃತ್ತಿಯಾದ ಭಿಕ್ಷೆಯನ್ನು ಶೂದ್ರಾದಿಗಳು ಮಾಡುತ್ತಾರೆ. ಆದರೆ ಕಲಿಯುಗದಲ್ಲಿ ಸ್ವಲ್ಪ ಸಾಧನೆ ಮಾಡುವುದ ರಿಂದಲೇ ಮಹಾಸಿದ್ಧಿಯನ್ನು ಹೊಂದುತ್ತಾರೆ. ದೊಡ್ಡಯುದ್ಧವು ನಡೆಯುತ್ತದೆ. ಬಹುಮಳೆ ಬರುತ್ತದೆ. ಬಹುಭಯವು ಉಂಟಾಗುತ್ತದೆ.

ಬ್ರಾಹ್ಮಣರ ರೂಪದಿಂದ ರಾಕ್ಷಸರು ಹುಟ್ಟುತ್ತಾರೆ. ರಾಜರು ಚಾಡಿಮಾತನ್ನು ಕೇಳುತ್ತಾರೆ. ಅಂತಹ ರಾಜರೇ ಭೂಮಿಯನ್ನು ಆಳುತ್ತಾರೆ. ಬ್ರಾಹ್ಮಣರು ವೇದಾಧ್ಯಯನವನ್ನು ಯಾಗಮಾಡುವುದನ್ನು ಬಿಟ್ಟು ಅಭಿಮಾನವುಳ್ಳವರಾಗಿ ಒಬ್ಬರ ಮಾತನ್ನು ಕೇಳದೆ ಏನು ಬೇಕಾದರೂ ತಿನ್ನುತ್ತಾರೆ. ವ್ಯರ್ಥವಾಗಿ ವ್ರತಗಳನ್ನು ಮಾಡುತ್ತಾರೆ. ಬ್ರಾಹ್ಮಣರು ಮೂರ್ಖರಾಗಿಯೂ ತಮ್ಮ ಪ್ರಯೋಜನದಲ್ಲಿ ಆಸಕ್ತರಾಗಿಯೂ ಲೋಭಿಗಳಾಗಿಯೂ ಅಲ್ಪಸ್ವಭಾವವುಳ್ಳವರಾಗಿಯೂ ಇರುತ್ತಾರೆ. ಭೋಜನಾದಿಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಶಾಶ್ವತವಾದ ಧರ್ಮವನ್ನು

ಬಿಟ್ಟುಬಿಡುತ್ತಾರೆ. ಇನ್ನೊಬ್ಬರ ಸೊತ್ತನ್ನು ಅಪಹರಿಸುತ್ತಾರೆ. ಇನ್ನೊಬ್ಬರ ಹೆಂಗಸರನ್ನು ಅಪಹರಿಸುತ್ತಾರೆ. ಕಪಟಿಗಳಾಗಿರುತ್ತಾರೆ. ನಾನಾಕಾರ್ಯವನ್ನು ಮಾಡುತ್ತಾರೆ. ದುಷ್ಟರೇ ಐಶ್ವರ್ಯವುಳ್ಳವರಾಗಿರುತ್ತಾರೆ. ನಾಲ್ಕು ಆಶ್ರಮದವರೂ ಕಡಿಮೆಯಾಗು ತ್ತಾರೆ. ಪೂರ್ವಿಕರಾದ ದೇವರ ಭಕ್ತರನ್ನು ಕಥೆಯನ್ನು ಕೇಳಿ ಪೂಜಿಸುತ್ತಾರೆ. ತಾವೂ ಹಾಗೆಯೇ ದೇವರ ಭಕ್ತರಾಗಬೇಕೆಂದು ಭಾವಿಸುವುದಿಲ್ಲ. ವಸ್ತ್ರಭಕ್ಷಭೋಜ್ಯ ಇತ್ಯಾದಿಗಳನ್ನು ಅಪಹರಿಸುತ್ತಾರೆ. ಭೂಮಿಯಲ್ಲಿ ಸಾರಪದಾರ್ಥವಿಲ್ಲದಂತಾಗಲು ರಾಜರ ವರಿಯಿಂದ ಪೀಡಿತರಾಗಿ ಜನರು ಕಾಡಿಗೆ ಹೋಗ್ತಾರೆ. ಯಜ್ಞಕರ್ಮವು ನಿಂತುಹೋಗಲು ರಾಕ್ಷಸರೂ ದುಷ್ಟಮೃಗಗಳೂ ಕೀಟಗಳೂ ಇಲಿಗಳೂ ಸರ್ಪಗಳೂ ಜನರಿಗೆ ಉಪದ್ರವವನ್ನು ಕೊಡುತ್ತವೆ. ಕ್ಷೇಮವೂ ಸುಭಿಕ್ಷೆಯೂ ಆರೋಗ್ಯವೂ ಬಂಧುಗಳು ಇರುವುದು ಬಹಳ ಕಡಿಮೆಯಾಗುತ್ತದೆ. ಚಿಕ್ಕಚಿಕ್ಕ ರಾಜರು ಕಳ್ಳಪ್ರಾಯರಾಗಿ ಸೈನ್ಯಸಹಿತವಾಗಿ ಊರು ಊರುಗಳಲ್ಲಿ ಸಂಚರಿಸುತ್ತಾರೆ. ಜನ ರೆಲ್ಲರೂ ಬಂಧುಗಳಿಂದ ಸಹಿತರಾಗಿ ತಮ್ಮ ದೇಶಗಳಿಂದ ಭ್ರಷ್ಟರಾಗುತ್ತಾರೆ. ಕೊನೆಗೆ ಕಲಿಯುಗದಲ್ಲಿ ಮಕ್ಕಳನ್ನು ಹೊತ್ತುಕೊಂಡು ಭಯದಿಂದ ಓಡಿಹೋಗುತ್ತಾರೆ. ಬೆಟ್ಟಗಳ ಪ್ರದೇಶಗಳಲ್ಲಿ ವಾಸಮಾಡುತ್ತಾರೆ. ಸಮುದ್ರತೀರದಲ್ಲಿಯೋ ಕಾಡು ಗಳಲ್ಲಿಯೋ ಮ್ಲೇಚ್ಛರೊಡನೆ ವಾಸಮಾಡುತ್ತಾರೆ. ರಕ್ಷಣೆ ಮಾಡುವವರಿರುವುದಿಲ್ಲ. ಎಲ್ಲರೂ ಶಸ್ತ್ರಧಾರಿಗಳಾಗುತ್ತಾರೆ. ಮೃಗಗಳಿಂದಲೂ ಮೀನುಗಳಿಂದಲೂ ಪಕ್ಷಿ ಗಳಿಂದಲೂ ದುಷ್ಟಮೃಗಗಳಿಂದಲೂ ಸರ್ಪಗಳಿಂದಲೂ ಕೀಟಗಳಿಂದಲೂ ಜೇನು ತುಪ್ಪ ಹಣ್ಣುಗಳು ಇತ್ಯಾದಿಗಳಿಂದ ಜೀವಿಸುತ್ತಾರೆ. ನಾಮವಸ್ತ್ರವನ್ನೂ ಮರದ ಎಲೆ ಗಳನ್ನು ಮರದ ತೊಗಲನ್ನು ಚರ್ಮಗಳನ್ನು ಉಡುತ್ತಾರೆ. ಪರ್ವತ ಪ್ರದೇಶಗಳಲ್ಲಿ ಕಟ್ಟಿಗೆಗಳಿಂದ ಭೂಮಿಯನ್ನು ತೋಡಿ ಬೀಜವನ್ನು ಬಿತ್ತಿ ಮೇಕೆ ಕತ್ತೆ ಒಂಟೆ ಇತ್ಯಾದಿಗಳನ್ನು ಬೆಳೆಸುತ್ತಾ ಇರುತ್ತಾರೆ. ನೀರಿಗಾಗಿ ನದೀ ನೀರನ್ನು ಅಡ್ಡಕಟ್ಟುತ್ತಾರೆ. ಅನ್ನವನ್ನು ಮಾರುತ್ತಾರೆ. ಸಾಲ ಕೊಟ್ಟರೆ ಸಾಲವನ್ನು ಬಡ್ಡಿಯನ್ನು ಹಿಂದೆ ತಿರುಗಿ ಕೊಡುವುದಿಲ್ಲ. ಬಹುಮಕ್ಕಳಾಗುತ್ತಾರೆ. ಒಳ್ಳೆ ಮಕ್ಕಳು ಇರುವುದಿಲ್ಲ. ಪ್ರಜೆಗಳೆಲ್ಲ ಹೀನಸ್ಥಿತಿಯನ್ನು ಹೊಂದುತ್ತಾರೆ. ಕಲಿಯುಗದ ಕೊನೆ ಗಾಗುವಾಗ ಮೂವತ್ತು ವರ್ಷವೇ ಆಯುಷ್ಯವಾಗುವುದು. ಜನರು ಬಲಹೀನರಾಗಿ ವಿಷಯಾಸಕ್ತರಾಗಿ ಇರು ವರು. ಅವರಿಗೆ ರೋಗಗಳಿಂದ ಇಂದ್ರಿಯಶಕ್ತಿಯು ಅಡಗುತ್ತದೆ. ಈರೀತಿಯಾಗಿ ಯೆಲ್ಲಾ ಆಗಿ ಆಮೇಲೆ ಕೃತಯುಗವು ಬರಲು ಜನರು ಸುಖವನ್ನು ಹೊಂದುತ್ತಾರೆ'' ಇತ್ಯಾದಿ ರೀತಿಯಾಗಿ ವೇದವ್ಯಾಸದೇವರು ಕಲಿಯುಗದ ಧರ್ಮಗಳನ್ನು ತಿಳಿಸಿದರು.

# ಯಮಲೋಕವೂ ನರಕಾನುಭವವೂ [1]

**ಪಾರ್ವತೀದೇವಿಯರು**–ಯಮಲೋಕದ ಶಿಕ್ಷೆ ಹೇಗೆ ಇರುವುದು? ಅಲ್ಲಿರುವ ಸೇವಕರು ಹೇಗೆ ಇರುವರು? ಮೃತರಾದ ಜನರು ಯಮಲೋಕಕ್ಕೆ ಹೇಗೆ ಹೋಗುವರು? ಯಾವ ದೇವರು ಪ್ರಜೆಗಳನ್ನು ಹೇಗೆ ಶಿಕ್ಷಿಸುವರು—

**ರುದ್ರದೇವರು**–ದಕ್ಷಿಣದಿಕ್ಕಿನಲ್ಲಿ ಯಮದೇವರ ಮಂದಿರವು ಇರುವುದು. ಅದು ದೊಡ್ಡದಾಗಿಯೂ ವಿಚಿತ್ರವಾಗಿಯೂ ಮನೋಹರವಾಗಿಯೂ ನಾನಾ ವಸ್ತುಗಳಿಂದ ಯುಕ್ತವಾಗಿಯೂ ಇರುವುದು. ಪಿತೃಗಳಿಂದಲೂ ಪ್ರೇತಗಳಿಂದಲೂ ಯಮದೂತರಿಂದಲೂ ಕರ್ಮವಶರಾದ ಪ್ರಾಣಿಗಳಿಂದಲೂ ತುಂಬಿದೆ. ಅಲ್ಲಿ ಲೋಕದ ಹಿತದಲ್ಲಿ ಆಸಕ್ತರಾದ ಯಮದೇವರು ಪ್ರಜೆಗಳನ್ನು ಶಿಕ್ಷಿಸುತ್ತಾ ಇರುವರು. ತನ್ನ ಜ್ಞಾನ ಸಾಮರ್ಥ್ಯದಿಂದ ಪ್ರಾಣಿಗಳ ಶುಭಾಶುಭಗಳನ್ನೆಲ್ಲಾ ತಿಳಿಯುವರು. ತನ್ನ ಸಾಮರ್ಥ್ಯದಿಂದಲೇ ಪ್ರಾಣಿಗಳನ್ನು ಸಂಹರಿಸುವರು. ಅವರ ಇಚ್ಛಾಧೀನಗಳಾದ ದೇವಾಸುರರಿಂದಲೇ ತಿಳಿಯಲಿಕ್ಕೆ ಅಶಕ್ಯ. ಮನುಷ್ಯರ ಪಾಡೇನು.

ಈಪ್ರಕಾರವಾಗಿ ಅಲ್ಲಿರುವ ಯಮದೇವರ ದೂತರು ಪೂರ್ವಕರ್ಮಕ್ಷಯ ವನ್ನು ಹೊಂದಿರುವ ಪ್ರಾಣಿಗಳನ್ನು ಏನೋ ಒಂದು ನೆಪದಿಂದ ಯಮಲೋಕಕ್ಕೆ ಕರೆದುಕೊಂಡು ಬರುವರು. ಲೋಕದಲ್ಲಿ ಪ್ರಾಣಿಗಳು ತಾವು ಮಾಡಿದ ಕರ್ಮಕ್ಕೆ ಅನುಸಾರವಾಗಿ ಉತ್ತಮ ಮಧ್ಯಮ ಅಧಮ ಎಂದು ಮೂರು ವಿಧರಾಗಿರುವರು. ಅವರ ಯೋಗ್ಯತೆಯನ್ನು ಅನುಸರಿಸಿ ಯಮದೂತರು ಅವರನ್ನು ಯಮಲೋಕಕ್ಕೆ ಕರೆದುಕೊಂಡು ಹೋಗುವರು. ಧರ್ಮವನ್ನೇ ಮಾಡಿದವರು ಉತ್ತಮರು. ಅವರು ದೇವತೆಗಳಂತೆ ಸ್ವರ್ಗದಲ್ಲಿ ಇರಲಿಕ್ಕೆ ಯೋಗ್ಯರು. ಸ್ವರ್ಗದಲ್ಲಿಯೂ ಭೂಮಿ ಯಲ್ಲಿಯೂ ನರಕದಲ್ಲಿಯೂ ಇರಲಿಕ್ಕೆ ಯೋಗ್ಯರು ಮಧ್ಯಮರು. ಪಶುಗಳಾಗಿ ಹುಟ್ಟಲಿಕ್ಕೂ ನರಕದಲ್ಲಿ ಹೋಗಲಿಕ್ಕೂ ಯೋಗ್ಯರು ಅಧಮರು.

ಈ ಮೂರು ಜನರು ಮೃತರಾದ ಮೇಲೆ ಹೋಗಲಿಕ್ಕೆ ಮೂರು ಮಾರ್ಗ ಗಳಿರುವುವು. ರಮಣೀಯ, ನಿರಾಬಾಧ, ದುರ್ದರ್ಶ ಎಂದು ಆ ಮಾರ್ಗಗಳ ಹೆಸರು. ರಮಣೀಯ ಎಂಬ ಮಾರ್ಗದಲ್ಲಿ ಪತಾಕೆಗಳಿಂದ ಅಲಂಕಾರ ಮಾಡಿರು ವರು. ಅಲ್ಲಿ ಅಲ್ಲಿ ಧೂಪವನ್ನು ಹಾಕಿರುವರು. ಅಲ್ಲಲ್ಲಿ ನೀರು ಹಾಕಿ ಶುದ್ಧಮಾಡಿರು ವರು. ಅಲ್ಲಲ್ಲಿ ಹೂವಿನಮಾಲೆಗಳಿಂದ ಅಲಂಕಾರ ಮಾಡಿರುವರು.

---

1. ಮ.ಭಾ.ಅ.ಪ. ಅ-145 (ಗೀ.ಪ್ರೆ.)

ಅತಿಮನೋಹರವಾಗಿ ಆ ಮಾರ್ಗವಿರುವುದು. ಆ ಮಾರ್ಗದಲ್ಲಿ ಹೋಗುವವರಿಗೆ ಸುಖವಾಗುವುದು.

ನಿರಾಬಾಧ ಎಂಬ ಮಾರ್ಗವೂ ಲೋಕದಲ್ಲಿರುವ ಮಾರ್ಗದಂತೆ ಚೆನ್ನಾಗಿರುವುದು.

ದುರ್ದರ್ಶ ಎಂಬ ಮಾರ್ಗವು ದುರ್ವಾಸನೆಯಿಂದ ಕೂಡಿರುವುದು. ಅಲ್ಲಿ ಬಹುಕತ್ತಲೆಯಿರುವುದು. ಆ ಮಾರ್ಗವು ಅತಿಕ್ರೂರವಾದದ್ದು. ಅನೇಕ ಕಲ್ಲುಗಳಿಂದ ಯುಕ್ತವಾಗಿರುವುದು. ಅಲ್ಲಿ ಹೋಗುವವರನ್ನು ನಾಯಿಗಳು ಬಂದು ಕಚ್ಚುವುವು. ಕೃಮಿಕೀಟಗಳು ಕಚ್ಚುವುವು. ಅಲ್ಲಿ ಹೋಗಲಿಕ್ಕೆ ತುಂಬಾ ಕಷ್ಟವಾಗುವುದು. ಈ ಪ್ರಕಾರಗಳಾದ ಮೂರು ಮಾರ್ಗಗಳಿಂದ ಮೂರುವಿಧ ಜನರನ್ನು ಸರಿಯಾದ ಕಾಲದಲ್ಲಿ ಕರೆದುಕೊಂಡು ಹೋಗುವರು. ಉತ್ತಮರನ್ನು ರಮಣೀಯ ಎಂಬ ಮಾರ್ಗದಿಂದ ಸುಖವಾಗಿ ಕರೆದುಕೊಂಡು ಹೋಗುವರು.

**ಪಾರ್ವತೀದೇವಿಯರು**–ಮೃತನಾದ ಕಾಣಿಸದೆ ಇರುವ ಜೀವನನ್ನು ಯಮದೂತರು ಯಮದೇವರ ಬಳಿಗೆ ಹೇಗೆ ಕರೆದುಕೊಂಡು ಹೋಗುವರು?

**ರುದ್ರದೇವರು**–ಕರ್ಮವಶ್ಯ ಭೋಗವಶ್ಯ ದುಃಖವಶ್ಯ ಎಂದು ಮೂರು ವಿಧವಾದ ದೇಹವಿರುವುದು. ಮನುಷ್ಯದೇಹವು ಕರ್ಮವಶ್ಯವಾಗಿರುವುದು. ಎರಡನೇ ವಿಧವಾದ ದೇಹವು ಭೋಗವಶ್ಯವು. ಮೂರನೇ ದೇಹವು ದುಃಖ ವಶ್ಯವು. ಅದಕ್ಕೆ ಯಾತನಾದೇಹವೆಂದೂ ಹೆಸರು. ಅದು ಯಮಲೋಕದಲ್ಲಿಯೇ ಇರುವುದು. ಬೇರೆ ಸ್ಥಳದಲ್ಲಿ ಇರುವುದಿಲ್ಲ. ಯಮದೂತರು ಮೃತರಾದ ಜೀವರನ್ನು ಯಾತನಾದೇಹಯುಕ್ತರನ್ನಾಗಿ ಮಾಡಿ ಕರೆದುಕೊಂಡು ಹೋಗುತ್ತಾರೆ. ಮೃತರಾದ ಮಧ್ಯಮಜನರನ್ನು ಕರೆದುಕೊಂಡು ಹೋಗುವರು. ಅಧಮರನ್ನು ಯಮದೂತರು ಚಂಡಾಲರ ವೇಷವುಳ್ಳವರಾಗಿ ಪಾಶಗಳನ್ನು ಹಾಕಿ ಎಳೆಯುತ್ತಾ ಬೆದರಿಸುತ್ತಾ ಬಡಿಯುತ್ತಾ ದುರ್ದರ್ಶ ಎಂಬ ಮಾರ್ಗದಿಂದ ಕರೆದುಕೊಂಡು ಹೋಗುತ್ತಾರೆ. ಮೂರುವಿಧ ಜನರನ್ನು ಯಮಲೋಕಕ್ಕೆ ಕರೆದುಕೊಂಡು ಹೋಗುವರು. ಅಲ್ಲಿ ಧರ್ಮಾಸನದಲ್ಲಿ ಕೂತಿರುವ ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಲೋಕಪಾಲ ರಾದ ಯಮದೇವರಿಗೆ ಎಲ್ಲರನ್ನೂ ಕರೆದುಕೊಂಡು ತೋರಿಸುವರು. ಅಲ್ಲಿ ಯಮದೇವರು ಕೆಲವರನ್ನು ಪೂಜಿಸುತ್ತಾ ಕೆಲವರನ್ನು ಶಿಕ್ಷಿಸುತ್ತಾ ಅವರ ಶುಭಾಶುಭಗಳನ್ನು ಕೇಳುತ್ತಾ ಬಹುಸಹಸ್ರ ಜನರೊಡನೆ ಸರ್ವದಾ ಮಾತಾಡುತ್ತಾ ಇರುವರು.

ಉತ್ತಮರು ಬಂದಾಗ ಯಮದೇವರು ಸತ್ಕಾರಮಾಡಿ ಬರಬೇಕು ಎಂದು ಮರ್ಯಾದೆಯನ್ನು ಮಾಡಿ ಕುಶಲಪ್ರಶ್ನೆಯನ್ನು ಮಾಡಿ ಅವರು ಮಾಡಿರುವ ಪುಣ್ಯಕರ್ಮಗಳನ್ನು ಸ್ತುತಿಸಿ ಅವರಿಗೆ ಯೋಗ್ಯಗಳಾದ ಲೋಕಗಳನ್ನು ಆಜ್ಞಾಪಿಸುತ್ತಾರೆ. ಯಮದೇವರಿಂದ ಆಜ್ಞಪ್ತರಾಗಿ ಅವರು ಸ್ವರ್ಗಲೋಕಕ್ಕೆ ಹೋಗುವರು. ಯಮದೇವರು ಮಧ್ಯಮರ ಕರ್ಮಗಳನ್ನು ಕೇಳಿ ಅವರು ಮನುಷ್ಯರಲ್ಲೇ ಹುಟ್ಟಲಿ ಎಂದು ಆಜ್ಞಾಮಾಡುತ್ತಾರೆ.

ಪಾಶದಿಂದ ಎಳೆದುಕೊಂಡು ಬಂದಿರುವ ಅಧಮರನ್ನು ಯಮದೇವರು ನೋಡುವುದೇ ಇಲ್ಲ. ಚಂಡಾಲರಂತೆ ಕಾಣಿಸುವ ಯಮದೂತರೇ ಯಮದೇವರ ಆಜ್ಞೆಯಿಂದ ಅವರನ್ನು ನರಕಗಳಲ್ಲಿ ಹಾಕುತ್ತಾರೆ. ಪಾಪಿಗಳನ್ನು ಸೀಳುತ್ತಾ ಬಡಿಯುತ್ತಾ ಎಳೆಯುತ್ತಾ ಗರ್ಜನೆ ಮಾಡುತ್ತಾ ತಲೆಕೆಳಗಾಗಿ ಆಳವಾದ ಸ್ಥಳದಲ್ಲಿ ಕೆಳಗೆ ದೂಡುವರು. ಅವರ ತಲೆಯಮೇಲೆ ದೊಡ್ಡದೊಡ್ಡ ಕಲ್ಲುಗಳು ಬೀಳುವುವು. ಕಬ್ಬಿಣದ ಮುಖಗಳುಳ್ಳ ಪಕ್ಷಿಗಳು ಬಂದು ಕುಕ್ಕುವುವು. ಕತ್ತಿಯೇ ಎಲೆಯಾಗಿಉಳ್ಳ ಮರಗಳುಳ್ಳ ವನದಲ್ಲಿ ಸಂಚಾರಮಾಡಿಸುವರು. ತೀಕ್ಷ್ಣಗಳಾದ ಹಲ್ಲುಗಳುಳ್ಳ ನಾಯಿಗಳು ಬಂದು ಅಲ್ಲಿ ಕಚ್ಚುವುವು. ಅಲ್ಲಿಯೇ ಮೊಸಳೆಗಳಿಂದ ಸಹಿತವಾದ ಪ್ರವೇಶಮಾಡಲಿಕ್ಕೆ ಅಶಕ್ಯವಾದ ಘೋರವಾದ ಮೂತ್ರರಕ್ತಗಳ ಪ್ರವಾಹವುಳ್ಳ ವೈತರಣಿ ಎಂಬ ನದಿಯಿದೆ. ಪಾಪಿಗಳನ್ನು ಅದರಲ್ಲಿ ಮುಳುಗಿಸುತ್ತಾರೆ. ಬಾಯಾರಿಕೆಯಾದ ಪಾಪಿಗಳಿಗೆ ಅದನ್ನೇ ಕುಡಿಸುತ್ತಾರೆ. ಕೆಲವು ಪಾಪಿಗಳನ್ನು ಮುಳ್ಳುಗಳಿಂದ ಶಾಲ್ಮಲೀ ಎಂಬ ಮರದ ಮೇಲೆ ಹತ್ತಿಸುವರು. ಇನ್ನು ಕೆಲವರನ್ನು ಗಾಣದಲ್ಲಿ ಎಳ್ಳನ್ನು ಹಿಡುವಂತೆ ಹಿಂಡುವರು. ಕೆಲವರನ್ನು ಬೆಂಕಿಯ ಕೆಂಡದ ಮೇಲೆ ಸುಡುವರು. ಪಾತ್ರೆಯಲ್ಲಿ ಬೇಯಿಸುವರು. ಬಿಸಿಯಾದ ಉಸುಬಿನಲ್ಲಿ ಸುಡುವರು. ಗರಗಸ ಮೊದಲಾದ ಶಸ್ತ್ರಗಳಿಂದ ಮರವನ್ನು ಸೀಳುವಂತೆ ಸೀಳುವರು. ಶೂಲದಿಂದ ತುಂಡುತುಂಡಾಗಿ ಮಾಡುವರು. ಚಿಕ್ಕ ಚಿಕ್ಕ ಸೂಜಿಗಳಿಂದ ಕುಕ್ಕುವರು. 'ಪಾಪಿ! ನೀನು ಈ ಪಾಪವನ್ನು ಮಾಡಿರುವೆ. ಅದಕ್ಕೆ ಈ ಶಿಕ್ಷೆಯನ್ನು ಮಾಡುವೆವು' ಎಂದು ಹೇಳಿಯೇ ಶಿಕ್ಷಿಸುವರು.

ಈರೀತಿಯಾಗಿ ಪಾಪಿಗಳು ನರಕವನ್ನು ಹೊಂದಿ ಯಾತನಾಶರೀರಗಳಿಂದ ದುಃಖವನ್ನು ಸಹಿಸುತ್ತಾ ಇರುವರು. ತಮ್ಮ ಅಪರಾಧವನ್ನು ಸ್ಮರಿಸುತ್ತಾ ಕೂಗುತ್ತಾ ಅಳುತ್ತಾ ಅಲ್ಲಿ ಬಿಡುಗಡೆಯನ್ನು ಹೊಂದುವುದೇ ಇಲ್ಲ. ತಾವು ಮಾಡಿರುವ ಪಾಪವನ್ನು ಸ್ಮರಿಸುತ್ತಾ ಬಹು ಸಂತಾಪವನ್ನು ಹೊಂದುವರು. ಈರೀತಿಯಾಗಿ ಅನೇಕ

ಶಿಕ್ಷೆಗಳನ್ನು ನರಕಗಳಲ್ಲಿ ಅನುಭವಿಸುವರು. ಕೆಲವರು ನರಕದಲ್ಲಿಯೇ ಪುನಃಪುನಃ ದುಃಖವನ್ನು ಅನುಭವಿಸುತ್ತಲೇ ಇರುವರು. ಇನ್ನು ಕೆಲವರು ಅಲ್ಲಿ ನರಕವನ್ನು ಅನುಭವಿಸಿ ಪಾಪದಿಂದ ರಹಿತರಾಗುವರು. ಜನರ ಪಾಪಪರಿಹಾರ ಮಾಡಲಿಕ್ಕೇ ನರಕಗಳಿರುವುವು. ಬೆಂಕಿಯಲ್ಲಿ ಬಹಳವಾಗಿ ಬಿಸಿಮಾಡಿದ ಲೋಹವು ಶುದ್ಧವಾಗುವಂತೆ ನರಕದಲ್ಲಿ ಪಾಪದ ಫಲವಾದ ದುಃಖವನ್ನು ಅನುಭವಿಸಿ ಶುದ್ಧರಾಗುವರು.



## ನರಕಗಳು [1]

**ಪಾರ್ವತೀದೇವಿಯರು**—ನರಕಗಳು ಎಷ್ಟು? ಹೇಗೆ ಇರುವುವು? ಅಲ್ಲಿ ಹೇಗೆ ಶಿಕ್ಷೆಯನ್ನು ಹೊಂದುವರು?

**ರುದ್ರದೇವರು**—ದೇವಿ! ಕೇಳು. ಐದು ಪ್ರಸಿದ್ಧ ನರಕಗಳಿರುವುವು. ಅವುಗಳೆಲ್ಲ ಭೂಮಿಯ ಕೆಳಗೆ ಇರುವುವು. ಭಯಂಕರವಾಗಿ ಇರುವುವು. ಮೊದಲು **ರೌರವ** ಎಂಬ ನರಕವು. ಸಾವಿರ ಮೈಲು ಉದ್ದವೂ ಅಗಲವೂ ಇರುವುದು. ಕತ್ತಲೆಯಿಂದ ಯುಕ್ತವಾಗಿರುವುದು. ತುಂಬಾ ದುರ್ವಾಸನೆಯಿಂದ ಯುಕ್ತವಾಗಿರು ವುದು. ಕ್ರೂರ ಕೃಮಿಗಳಿಂದ ಯುಕ್ತವಾಗಿರುವುದು. ಅತಿಘೋರವಾದದ್ದು. ಹೀಗೆಯೇ ಇದೆಯೆಂದು ಸಂಪೂರ್ಣವಾಗಿ ಹೇಳಲಿಕ್ಕೆ ಆಗದಿದ್ದದ್ದು. ಪಾಪಿಗಳು ಅಲ್ಲಿ ಬಹುಸಮಯ ಇರುವರು. ಅಲ್ಲಿ ಕೂತುಕೊಳ್ಳಲಿಕ್ಕೂ ಮಲಗಲಿಕ್ಕೂ ಹಾಸಿಗೆ ಯಾಗಲೀ ಆಸನವಾಗಲೀ ಇರಲಾರದು. ಕೃಮಿಗಳು ಕಚ್ಚುತ್ತಿರುವುವು. ಮಲದ ದುರ್ವಾಸನೆಯು ಬರುತ್ತಿರುವುದು. ಕೂಗುತ್ತಾ ಅಳುತ್ತಾ ಅತಿದುಃಖವನ್ನು ಅಲ್ಲಿ ಪಾಪಿಗಳು ಅನುಭವಿಸುವರು. ದುಃಖವು ಪರಿಹಾರವಾಗಬೇಕೆಂದು ತಿರುಗುವನು. ಅಲ್ಲಿ ತಿಳಿದವನು ಒಬ್ಬರೂ ಇರಲಾರರು. ದುಃಖವಿಲ್ಲದಿರುವ ಅವಕಾಶವೇ ಇರುವುದಿಲ್ಲ.

ಆಮೇಲೆ **ಮಹಾರೌರವ** ಎಂಬ ಎರಡನೇ ನರಕವಿರುತ್ತದೆ. ಅದು ಪೂರ್ವನರಕಕ್ಕಿಂತ ಎರಡುಪಾಲು ದೊಡ್ಡದು.

ಮೂರನೇಯದ್ದು **ಕಂಟಕಾವನವೆಂಬ** ನರಕವು. ಪೂರ್ವನರಕಕ್ಕಿಂತ ಎರಡುಪಾಲು ದೊಡ್ಡದ್ದು. ಮಹಾಪಾಪವನ್ನು ಮಾಡಿದವರು ಅಲ್ಲಿ ಪ್ರವೇಶಿಸುವರು.

1. ಮ.ಭಾ.ಅ.ಪ. ಅ-145

**ಅಗ್ನಿಕುಂಡ**ವೆಂಬುದು ನಾಲ್ಕನೇ ನರಕವು. ಇದೂ ಪೂರ್ವನರಕದಿಂದ ಆಳತೆಯಿಂದಲೂ ದುಃಖದಿಂದಲೂ ಎರಡುಪಾಲು ದೊಡ್ಡದಾಗಿರುವುದು.

ಆಮೇಲೆ **ಅಮಾನುಷ** ಎಂಬ ನರಕವಿರುವುದು. ಅಲ್ಲಿ ಬಹುದುಃಖ ವಿರುವುದು. ಅಲ್ಲಿ ಐದು ಇಂದ್ರಿಯಗಳಿಗೂ ಪೀಡೆಯಿರುವುದರಿಂದ ಅದಕ್ಕೆ [1]**ಪಂಚಕಷ್ಟ**ವೆಂದೂ ಹೆಸರು. ಬಹುಕಾಲ ಅತಿಘೋರವಾದ ಪಾಪವನ್ನು ಮಾಡಿ ದವರು ಆ ನರಕಕ್ಕೆ ಹೋಗುವರು. ಈ ನರಕಗಳಲ್ಲಿ ಪಾಪಿಗಳು ದುಃಖವನ್ನು ಅನುಭವಿಸುತ್ತಾ ಇರುವರು.

ಇನ್ನೂ **ಅವೀಚಿಮುಖ** ಮೊದಲಾದ ಅನೇಕ ನರಕಗಳಿವೆ. (ರೌರವ, ಮಹಾರೌರವ, ವಹ್ನಿ, ವೈತರಣಿ, ಕುಂಭೀಪಾಕ, ತಾಮಿಸ್ರ, ಅಂಧತಾಮಿಸ್ರ ಎಂಬ **ಏಳು ಪ್ರಧಾನ ನರಕಗಳೆಂದೂ** ಅವುಗಳಲ್ಲಿ **ತಾಮಿಸ್ರ, ಅಂಧತಾಮಿಸ್ರ** ಎಂಬ **ನರಕಗಳು ನಿತ್ಯಗಳು** ಎಂದರೆ ಅಲ್ಲಿಗೆ ಹೋದವರು ಹಿಂದೆ ತಿರುಗಿ ಬರುವುದೇ ಇಲ್ಲವೆಂದೂ [2]ಬ್ರಹ್ಮಸೂತ್ರಭಾಷ್ಯದಲ್ಲಿ ಹೇಳಿದೆ) ಈ ನರಕಗಳಲ್ಲಿ ಅಳುತ್ತಾ ಕೂಗುತ್ತಾ ವೇದನೆಯಿಂದ ಪೀಡಿತರಾಗಿ ಹೊರಳಾಡುತ್ತಾರೆ. ಓಡುತ್ತಾರೆ. ಓಡುವವರನ್ನು ಶೂಲವನ್ನು ಕೈಯಲ್ಲಿ ಹಿಡಿದಿರುವ ಯಮದೂತರು ತಡೆಯುವರು. ಬಾಯಾರಿಕೆ ಯಿಂದ ಪೀಡಿತರಾಗಿ ರೋಗದಿಂದ ಪೀಡಿತರಾಗಿ ತಮ್ಮ ಪೂರ್ವದ ಪಾಪವು ಕ್ಷಯವಾಗುವವರೆಗೆ ನರಕದಿಂದ ಬಿಡುಗಡೆಯನ್ನು ಹೊಂದಲೇಲಾರರು. ಕೃಮಿಗಳು ಅವರನ್ನು ಕಚ್ಚುವುವು. ತಮ್ಮ ಪಾಪವನ್ನು ಸ್ಮರಿಸುತ್ತಾ ದುಃಖಪಡುತ್ತಾ ಪಾಪವು ಮುಗಿಯುವವರೆಗೆ ಅಲ್ಲಿಯೇ ಇರುವರು.

**ಪಾರ್ವತೀದೇವಿಯರು**—ದೇವ! ನರಕಗಳಲ್ಲಿ ಎಷ್ಟು ಸಮಯ ಇರುತ್ತಾರೆ?

**ರುದ್ರದೇವರು**—ನೂರು ವರ್ಷವನ್ನು ಆರಂಭಿಸಿ ಪ್ರಲಯದವರೆಗೆ ಪಾಪಿಗಳು ಅಲ್ಲಿ ಇರುವರು.

**ಪಾರ್ವತೀದೇವಿಯರು**—ಆ ನರಕಗಳಲ್ಲಿ ಯಾರು ಇರುವರು?

**ರುದ್ರದೇವರು**—ರೌರವ ನರಕದಲ್ಲಿ ನೂರು ಸಾವಿರ ವರ್ಷವಿರುವರು ಮನುಷ್ಯರನ್ನು ಕೊಂದವರು, ಉಪಕಾರ ಸ್ಮರಣೆಯಿಲ್ಲದವರು, ಸುಳ್ಳು ಹೇಳುವ ವರೂ ಇರುವರು. ಎರಡನೇ ನರಕದಲ್ಲಿಯೂ ಇಂತಹ ಪಾಪವನ್ನು ಮಾಡಿದವರು ಇನ್ನೂರು ಸಾವಿರ ವರ್ಷವಿರುವರು. ಇನ್ನೂ ಮಹಾಪಾಪಮಾಡಿದವರು ಮೂರನೇ

---

1. ಹ.ವಾ.ಸ್ತು-12. (2) ಬ್ರ.ಸೂ. ಅ. III-1-12-16. ಬ್ರ.ಸೂ.ಭಾ.III-11-15

ನರಕದಲ್ಲಿ ದುಃಖವನ್ನು ಅನುಭವಿಸುವರು. ನಾಲ್ಕನೇ ನರಕದಲ್ಲಿ ಪಾಪಮಾಡಿದ ಯಕ್ಷರೂ ವಿದ್ಯಾಧರರೂ ಸರ್ಪಗಳೂ ಕಿಂನರರೂ ಗಂಧರ್ವರೂ ಭೂತಗಳೂ ಅನುಭವಿಸುವುವು. ಅಲ್ಲಿ ಒಂದು ಯುಗದವರೆಗೆ ಇರುವರು. ಪಂಚಕಷ್ಟದಲ್ಲಿ ಅತ್ಯಧಿಕವಾದ ದುಃಖವಿರುವುದು. ನರಕದಿಂದ ಬಂದವರು ಕೃಮಿಗಳಾಗಿಯೇ ಮರಗಳಾಗಿಯೋ ಮೃಗಪಕ್ಷಿಗಳಾಗಿಯೋ ಹುಟ್ಟುವರು. ಆಮೇಲೆ ಕ್ರಮದಿಂದ ಮನುಷ್ಯರಾಗಿ ಹುಟ್ಟುವರು.

**ಪಾರ್ವತೀದೇವಿಯರು**—ಪಾಪಮಾಡಿದವರು ನಾನಾ ಜಾತಿಗಳಲ್ಲಿ ಹೇಗೆ ಹುಟ್ಟುವರು?

**ರುದ್ರದೇವರು**—ತಮ್ಮ ಕರ್ಮವಶದಿಂದ ನಾನಾ ಜಾತಿಗಳಲ್ಲಿ ಹುಟ್ಟುವರು. ನಿತ್ಯವೂ ಮಾಂಸದಲ್ಲಿ ಪ್ರೀತಿಯುಳ್ಳ ಪುರುಷನು ಕಾಗೆಯಾಗಿಯೂ ಹದ್ದಾಗಿಯೂ ಹುಟ್ಟುವನು. ಮದ್ಯಪಾನ ಮಾಡಿದವನು ಹಂದಿಯಾಗಿ ಹುಟ್ಟುವನು. ತಿನ್ನಬಾರದ ಪದಾರ್ಥವನ್ನು ತಿಂದವನು ಕಾಗೆಯಾಗಿ ಹುಟ್ಟುವನು. ಕೋಪದಿಂದ ಆತ್ಮಹತ್ಯೆಯನ್ನು ಮಾಡಿಕೊಂಡವನು ಪ್ರೇತಜಾತಿಯಲ್ಲಿ ಹುಟ್ಟುವನು. ಚಾಡಿ ಹೇಳುವವನೂ ಇನ್ನೊಬ್ಬರನ್ನು ನಿಂದಿಸುವವನೂ ಕೋಳಿಯಾಗಿ ಹುಟ್ಟುವನು. ಪರಲೋಕವೇ ಇಲ್ಲವೆನ್ನುವವನು ಮೃಗವಾಗಿ ಹುಟ್ಟುವನು. ಹಿಂಸಾ ಮಾಡುವವನು ಕೃಮಿಕೀಟವಾಗಿ ಹುಟ್ಟುವನು. ಅತಿ ಅಹಂಕಾರಪಡುವವನು ಕತ್ತೆಯಾಗಿ ಹುಟ್ಟುವನು. ಹೊಂದಬಾರದ ಸ್ತ್ರೀಯನ್ನು ಹೊಂದುವುದರಿಂದಲೂ ಪರಸ್ತ್ರೀಯರನ್ನು ಹೊಂದುವುದರಿಂದಲೂ ಇಲಿಯಾಗಿ ಹುಟ್ಟುವನು. ಕೃತಘ್ನನೂ ಮಿತ್ರನನ್ನು ಕೊಂದವನೂ ನರಿಯಾಗಿಯೂ ತೋಳವಾಗಿಯೂ ಹುಟ್ಟುವನು. ಕೃತಘ್ನನೂ ಮಕ್ಕಳನ್ನು ಕೊಂದವನೂ ಮರಗಿಡವಾಗಿ ಹುಟ್ಟುವನು. ಈರೀತಿಯಾಗಿ ಪಾಪ ಮಾಡಿದವರು ನರಕವನ್ನು ಹೊಂದಿ ತಮ್ಮ ಪಾಪಾನುಸಾರವಾಗಿ ನಾನಾ ಜಾತಿಗಳಲ್ಲಿ ಹುಟ್ಟುವರು. ಈರೀತಿಯಾಗಿ ಪಾಪ ಮಾಡಿದ ಮನುಷ್ಯರು ನಾನಾಜಾತಿಗಳಲ್ಲಿ ಹುಟ್ಟಿ ಕೊನೆಗೆ ಬಹುಕಷ್ಟದಿಂದ ಮನುಷ್ಯ ಜನ್ಮವನ್ನು ಹೊಂದುವರು. ಲೋಹವನ್ನು ಬೆಂಕಿಯಲ್ಲಿ ಅನೇಕಬಾರಿ ಕಾಯಿಸುವುದ ರಿಂದ ಶುದ್ಧವಾಗುವಂತೆ ಜೀವನೂ ಬಹುದುಃಖವನ್ನು ಅನುಭವಿಸಿದ ಮೇಲೆ ಶುದ್ಧನಾಗುವನು. ಆದುದರಿಂದ ಮನುಷ್ಯಜನ್ಮವು ಅತ್ಯಂತ ದುರ್ಲಭವಾದದ್ದು.



# ಭಾಗವತದಲ್ಲಿ ಹೇಳಿದ ನರಕಗಳು [1]

ಮೂರು ಲೋಕಗಳ ಮಧ್ಯದಲ್ಲಿಯೇ ಭಾರತಖಂಡದ ದಕ್ಷಿಣಭಾಗದಲ್ಲಿ ಭೂಮಿಯ ಕೆಳಗೆ ಬ್ರಹ್ಮಾಂಡ ಬಲದ ಮೇಲಿನ ಭಾಗದಲ್ಲಿ ಅಗ್ನಿಷ್ವಾತ್ತ ಇತ್ಯಾದಿ ಪಿತೃಗಳು ವಾಸಮಾಡುವರು. ಆ ಲೋಕದಲ್ಲಿಯೇ ನರಕಗಳು ಇರುವುವು. ಅಲ್ಲಿ ಪಿತೃಗಳಿಗೆ ರಾಜನಾದ ಯಮದೇವರು ತನ್ನ ದೂತರು ಕರೆದುಕೊಂಡು ಬಂದ ಮೃತಪುರುಷರಿಗೆ ಅವರ ಕರ್ಮಕ್ಕೆ ಅನುಸಾರವಾಗಿ ಭಗವಂತನ ಆಜ್ಞೆಯಂತೆ ದೂತರಿಂದ ಸಹಿತರಾಗಿ ಶಿಕ್ಷೆಯನ್ನು ಮಾಡುವರು.

ಕೆಲವರು ಇಪ್ಪತ್ತೊಂದು ಪ್ರಧಾನ ನರಕಗಳೆನ್ನುವರು. ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತಭೂಮಿ, ವಜ್ರಕಂಟಕ, ಶಾಲ್ಮಲೀ, ವೈತರಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾದನ, ಅವೀಚಿಪೂರ, ರೇತಃಪಾನ ಎಂದು ನರಕಗಳ ಹೆಸರು. ಮತ್ತು ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಅವಟನಿರೋಧ, ಪರ್ಯಾವರ್ತನ, ಸೂಚೀಮುಖ ಎಂಬ ಇತರ ಏಳು ನರಕಗಳೂ ಇರುವುವು.

ಯಾರು ಇನ್ನೊಬ್ಬರ ಹಣವನ್ನು ಮಕ್ಕಳನ್ನೂ ಹೆಂಗಸರನ್ನೂ ಅಪಹರಿಸುವನೋ ಅವನನ್ನು ಭಯಂಕರರಾದ ಯಮದೂತರು **ತಾಮಿಸ್ರ** ಎಂಬ ನರಕದಲ್ಲಿ ಹಾಕುವರು.

ಹೀಗೆಯೇ ಯಾರು ಇನ್ನೊಬ್ಬರನ್ನು ಮೋಸಪಡಿಸಿ ಹಣವನ್ನು ಸ್ತ್ರೀ ಮೊದಲಾದವರನ್ನು ಅಪಹರಿಸುವರೋ ಅವರನ್ನು **ಅಂಧತಾಮಿಸ್ರ** ಎಂಬ ನರಕಕ್ಕೆ ಹಾಕುವರು. ಅಲ್ಲಿರುವ ವೇದನೆಯಿಂದ ಜ್ಞಾನಹೀನರಾಗುವರು.

ಇನ್ನು ಯಾರು ಪ್ರಾಣಿಗಳ ದ್ರೋಹದಿಂದ ಪ್ರತಿನಿತ್ಯವೂ ಕುಟುಂಬವನ್ನು ಪೋಷಿಸುವರೋ ಅವರು ಆ ಪಾಪದಿಂದ ರೌರವ ಎಂಬ ನರಕದಲ್ಲಿ ಬೀಳುವನು. ಅವರು ಇಲ್ಲಿ ಯಾವ ಪ್ರಾಣಿಗಳನ್ನು ಹಿಂಸಿಸಿರುವರೋ ಆ ಪ್ರಾಣಿಗಳು ಆ ನರಕದಲ್ಲಿ ರುರು ಎಂಬ ಪ್ರಾಣಿಗಳು ಆಗಿ ಬಂದು ಅವರನ್ನೇ ಹಿಂಸಿಸುವುವು. ಆದುದರಿಂದಲೇ ಆ ನರಕಕ್ಕೆ **ರೌರವ** ಎಂದು ಹೆಸರು.

---

1. ಭಾ.V-24

ಇದೇ ರೀತಿಯಾಗಿ ಯಾರು ಕೇವಲ ಹೊಟ್ಟೆಯನ್ನು ತುಂಬಿಸಿಕೊಂಡು ಇರುವರೋ ಅವರು ಮಹಾರೌರವ ಎಂಬ ನರಕವನ್ನು ಹೊಂದುವರು.

ಯಾರು ಉಗ್ರನಾಗಿ ಪಶುಗಳನ್ನು ಪಕ್ಷಿಗಳನ್ನೂ ಶ್ವಾಸಬಿಡಲಿಕ್ಕೆ ಆಗದಂತೆ ಬಂಧನದಲ್ಲಿ ಇಟ್ಟು ಕೊಂದು ಹಾಕುವನೋ ಆ ಕರುಣಾರಹಿತನಾದ ರಾಕ್ಷಸ ರಿಂದಲೂ ನಿಂದ್ಯವಾದ ಕರ್ಮವುಳ್ಳ ಪುರುಷನ್ನು **ಕುಂಭೀಪಾಕ** ಎಂಬ ನರಕದಲ್ಲಿ ಕುದಿಯುತ್ತಿರುವ ಎಣ್ಣೆಯಲ್ಲಿ ಹಾಕುವರು.

ಯಾರು ಇಲ್ಲಿ ತಂದೆಗೂ ಸಹೋದರರಿಗೂ ಬ್ರಾಹ್ಮಣರಿಗೂ ದ್ರೋಹವನ್ನು ಮಾಡುವನೋ ಅವನನ್ನು **ಕಾಲಸೂತ್ರ** ಎಂಬ ನರಕದಲ್ಲಿ ಹಾಕುವರು. ಅಲ್ಲಿ ಹತ್ತು ಸಾವಿರ ಯೋಜನ ವಿಶಾಲವಾದ ಧಾನ್ಯಾದಿಗಳನ್ನು ಒಣಗಿಸುವ ಸ್ಥಳದಂತೆ ಇರುವ ಕೆಳಗೆ ಬೆಂಕಿಯಿಂದ ಮೇಲೆ ಸೂರ್ಯನಿಂದ ಕಾದುಹೋಗಿರುವ (ಬಿಸಿಯಾಗಿರುವ) ತಾಮ್ರದ ತಗಡಿನಲ್ಲಿ ಅವನನ್ನು ಹಾಕುವರು. ಅಲ್ಲಿ ಹಸಿವೆ ದಾಹಗಳಿಂದ ಪೀಡಿತನಾಗಿ ದೇಹದ ಒಳಗೂ ಹೊರಗೂ ಸುಡಲ್ಪಟ್ಟವನಾಗಿ ಕೂತುಕೊಳ್ಳುತ್ತಾನೆ, ಮಲಗುತ್ತಾನೆ, ನಿಲ್ಲುತ್ತಾನೆ, ಓಡುತ್ತಾನೆ, ಯಾಚನೆ ಮಾಡುತ್ತಾನೆ. ಪಶುವಿಗೆ ದ್ರೋಹಮಾಡುವವನೂ ಪಶುವಿಗೆ ಎಷ್ಟು ರೋಮಗಳಿವೆಯೋ ಅಷ್ಟು ಕಾಲ ಆ ಕಾಲಸೂತ್ರನ ನರಕದಲ್ಲಿಯೇ ಬಿದ್ದಿರುವನು.

ಯಾವಾತನು ಇಲ್ಲಿ ಆಪತ್ತು ಇಲ್ಲದಿರುವಾಗ ವೇದಮಾರ್ಗವನ್ನು ಬಿಟ್ಟು ಪಾಷಂಡಮತವನ್ನು ಹೊಂದುವನೋ ಅವನನ್ನು ಕತ್ತಿಯಂತೆ ಇರುವ ಎಲೆಗಳುಳ್ಳ ಮರಗಳ ವನದಲ್ಲಿ **(ಅಸಿಪತ್ರವನ)** ಪ್ರವೇಶಗೊಳಿಸುತ್ತಾರೆ. ಅಲ್ಲಿ ಪ್ರವೇಶಿಸಲ್ಪಟ್ಟ ವನು ಓಡುವವನಾಗಿ ಎರಡು ಪಾರ್ಶ್ವದಲ್ಲಿಯೂ ಬಾಯಿಯುಳ್ಳ ತಾಳವನದ ಖಡ್ಗವೆಂಬ ಎಲೆಗಳಿಂದ ಗಾಯವನ್ನು ಹೊಂದಿದ ಸರ್ವಾಂಗವುಳ್ಳವನಾಗಿ ಹಾಸತ್ತೆನು ಎಂದು ಹೇಳುತ್ತಾ ಒಂದೊಂದು ಹೆಜ್ಜೆಗೂ ಮೂರ್ಛಿತನಾಗಿ ಬೀಳುವನು.

ಯಾರು ಇಲ್ಲಿ ರಾಜನೋ ರಾಜನ ಪುರುಷನೋ ತಪ್ಪು ಮಾಡದೆ ಇದ್ದವನಿಗೆ ಶಿಕ್ಷಿಸುವನೋ, ಬ್ರಾಹ್ಮಣನಿಗೆ ದೇಹಶಿಕ್ಷೆಯನ್ನು ಮಾಡುವನೋ, ಅವರನ್ನು **ಸೂಕರ ಮುಖ** ಎಂಬ ನರಕದಲ್ಲಿ ಹಾಕುವರು. ಅಲ್ಲಿ ಬಲಿಷ್ಠರು ಕಬ್ಬಿನ ಕೋಲನ್ನು ಬಲವಾಗಿ ಹಿಂಡುವಂತೆ ಯಮದೂತರು ಅವನನ್ನು ಗಟ್ಟಿಯಾಗಿ ಹಿಂಡುವರು. ಇದರಿಂದ ಅವನು ಆರ್ತಧ್ವನಿಯಿಂದ ಕೂಗುತ್ತಾ ಮೂರ್ಛಿತನಾಗಿ ಬೀಳುವನು.

ಯಾರು ಭಗವಂತನಿಂದ ಮನುಷ್ಯರ ರಕ್ತವೇ ಆಹಾರವೆಂದು ಮಾಡಲ್ಪಟ್ಟಿರುವ ತಾವು ರಕ್ತವನ್ನು ಕುಡಿದರೆ ಮನುಷ್ಯರಿಗೆ ದುಃಖವಾಗುವುದೆಂದು ತಿಳಿಯದೆ ಇರುವ

ತಗಣಿ ಇತ್ಯಾದಿ ಪ್ರಾಣಿಗಳಿಗೆ ತಿಳಿದವನಾದ ಮನುಷ್ಯನು ಹಿಂಸೆ ಮಾಡುವನೋ ಅಂದರೆ ತಗಣಿ ಸೊಳ್ಳೆ ಇತ್ಯಾದಿ ಪ್ರಾಣಿಗಳನ್ನು ಕೊಲ್ಲುವನೋ ಅವನು ಸತ್ತ ಮೇಲೆ **ಅಂಧಕೂಪ** ಎಂಬ ನರಕದಲ್ಲಿ ಬೀಳುವನು. ಅಲ್ಲಿ ಇವನಿಂದ ಹಿಂಸಿಸಲ್ಪಟ್ಟ ಪಶು ಮೃಗ ಪಕ್ಷಿ ಸರ್ಪಗಳೂ ಸೊಳ್ಳೆ ಹೇನು ತಗಣಿಗಳೂ ಇವನನ್ನು ಚೆನ್ನಾಗಿ ಕಚ್ಚುವುವು.

ಯಾರು ಇಲ್ಲಿ ಒಬ್ಬರಿಗೂ ಅನ್ನವನ್ನು ಹಾಕದೆ ಯಜ್ಞಾದಿಗಳನ್ನು ಮಾಡದೆ ತಾನೇ ಭೋಜನ ಮಾಡುವನೋ ಅವನು **ಕೃಮಿಭೋಜನ** ಎಂಬ ನರಕದಲ್ಲಿ ಬೀಳುವನು. ನೂರುಸಾವಿರ ಯೋಜನ ವಿಶಾಲವಾದ ಕೃಮಿಕುಂಡದಲ್ಲಿ ತಾನೂ ಕೃಮಿಯಾಗಿ ಬಿದ್ದುಕೊಂಡು ಕೃಮಿಗಳಿಂದಲೇ ಕಚ್ಚಲ್ಪಡುವವನಾಗಿ ಕೃಮಿಗಳನ್ನೇ ತಿನ್ನುವವನಾಗಿ ಅತಿಥಿ ಮೊದಲಾದವರನ್ನು ಪೂಜಿಸದೆ ಇದ್ದಕಾರಣ ಉಂಟಾದ ಪಾಪವು ಮುಗಿಯುವವರೆಗೂ ಹಾಗೆಯೇ ದುಃಖವನ್ನು ಅನುಭವಿಸುತ್ತಿರುವನು.

ಯಾರು ಇಲ್ಲಿ ಕಳ್ಳತನದಿಂದಲೋ ಬಲಾತ್ಕಾರದಿಂದಲೋ ಆಪತ್ತು ಇಲ್ಲದಿರುವಾಗ ಬ್ರಾಹ್ಮಣನ ಅಥವಾ ಇತರರ ಸೊತ್ತನ್ನು ಅಪಹರಿಸುವನೋ ಅವನನ್ನು ಯಮಪುರುಷರು ಬೆಂಕಿಯಂತೆ ಬಣ್ಣವುಳ್ಳ ಸೂಜಿಯಿಂದ ಚರ್ಮದಲ್ಲಿ ಕುಕ್ಕುವರು. ಅಂದರೆ ಚರ್ಮವನ್ನು ಸುಲಿಯುವರು.

ಯಾರು ಪುರುಷನು ಪರಸ್ತ್ರೀಯನ್ನು ಹೊಂದುವನೋ ಸ್ತ್ರೀಯು ಪರಪುರುಷನನ್ನು ಹೊಂದುವಳೋ ಅವರನ್ನು ಯಮದೂತರು ಚಾಟುವಾರಿಯಿಂದ ಬಡಿಯುತ್ತಾ ಬೆದರಿಸುತ್ತಾ ಪುರುಷನಿಗೆ ಬೆಂಕಿಯಿಂದ ಕಾದು ಕೆಂಪಾಗಿರುವ ಲೋಹದ ಹೆಣ್ಣುಬೊಂಬೆಯನ್ನು ಆಲಿಂಗನ ಮಾಡಿಸುವರು. ಹೆಂಗಸಿಗೆ ಗಂಡುಬೊಂಬೆಯ ಆಲಿಂಗನ ಮಾಡುವರು.

ಯಾರು ಸರ್ವಸ್ತ್ರೀಯರನ್ನು ಹೊಂದುವನೋ ಅವನನ್ನು ವಜ್ರದ ಮುಳ್ಳುಗಳುಳ್ಳ ಮರದಲ್ಲಿ ಏರಿಸಿ ಸೆಳೆಯುವರು.

ಯಾರು ರಾಜರೋ ರಾಜಪುರುಷರೋ ಪಾಷಂಡಿಗಳೋ ಧರ್ಮ ಮರ್ಯಾದೆಯನ್ನು ಕೆಡಿಸುವರೋ ಅವರು ಸತ್ತಮೇಲೆ ವೈತರಣೀನದಿಯಲ್ಲಿ ಮುಳುಗುವರು. ಆ ನದಿಯಲ್ಲಿ ಜಲಜಂತುಗಳು ಕಚ್ಚುವುವು. ಮಲ ಮೂತ್ರ ರಕ್ತ ಕೀವು ಕಫ ಇವುಗಳಿಂದ ತುಂಬಿದ ಆ ನದಿಯಲ್ಲಿ ಬಿದ್ದುಕೊಂಡು ಅದನ್ನೇ ತಿನ್ನುತ್ತಿರುವರು.

ಯಾರು ಇಲ್ಲಿ ಬ್ರಾಹ್ಮಣಾದಿಗಳು ಕತ್ತೆಯನ್ನು ನಾಯಿಯನ್ನು ಸಾಕುವವರಾಗಿ

ಮೃಗಬೇಟೆಯನ್ನು ಆಡುವರೋ ವಿಹಿತವಲ್ಲದ ಕಾಲದಲ್ಲಿ ಪ್ರಾಣಿಗಳನ್ನು ಕೊಲ್ಲುವರೋ ಮೃತರಾದ ಅವರನ್ನು ಗುರಿಮಾಡಿ ಯಮಪುರುಷರು ಬಾಣಗಳಿಂದ ಬಡಿಯುವರು.

ಯಾರು ಡಂಭವುಳ್ಳವರಾಗಿ ಡಾಂಭಿಕಯಜ್ಞಗಳಲ್ಲಿ ಪಶುಗಳನ್ನು ಹಿಂಸಿಸುವರೋ ಅವರನ್ನು ಯಮದೂತರು **ವೈಶಸನ** ಎಂಬ ನರಕದಲ್ಲಿ ಬೀಳಿಸಿ ತುಂಡುತುಂಡಾಗಿ ಕತ್ತರಿಸುವರು.

ಯಾರು ತನ್ನ ಸಮಾನಜಾತಿಯ ಪರಸ್ತ್ರೀಯನ್ನು ಹೊಂದುವನೋ ಆ ಪಾಪಿಯನ್ನು ರೇತಸ್ಸಿನ ಕಾಲುವೆಯಲ್ಲಿ ಹಾಕಿ ಅದನ್ನೇ ತಿನ್ನಿಸುವರು.

ಯಾರು ಕಳ್ಳರು ಮನೆಗೆ ಬೆಂಕಿಕೊಡುವರೋ ಜನರಿಗೆ ವಿಷವನ್ನು ಹಾಕುವರೋ ಗ್ರಾಮವನ್ನೂ ಜನರನ್ನೂ ನಾಶಮಾಡುವರೋ, ರಾಜರೋ ರಾಜಭಟರೋ ಹೀಗೆ ಮಾಡುವರೋ ಮೃತರಾದ ಅವರನ್ನು ಯಮದೂತರಾದ ವಜ್ರದಂತೆ ಇರುವ ಹಲ್ಲುಗಳುಳ್ಳ ಏಳು ನೂರ ಇಪ್ಪತ್ತು ನಾಯಿಗಳು ಬಂದು ಕಚ್ಚುವುವು.

ಯಾರು ಇಲ್ಲಿ ಸುಳ್ಳು ಹೇಳುವನೋ ಸುಳ್ಳು ಸಾಕ್ಷಿಯನ್ನು ಹೇಳುವನೋ ಅವರನ್ನು ನೂರು ಯೋಜನ ಎತ್ತರವಾದ ಪರ್ವತಶಿಖರದಿಂದ ದೂರದಲ್ಲಿ ನೀರಿನಂತೆ ಕಾಣುವ ನೀರಿಲ್ಲದೆ ಇರುವ ಕಲ್ಲಿನ ಮೇಲೆ ತಲೆಕೆಳಗಾಗಿ ಬೀಳುವಂತೆ ತಳ್ಳುವರು. ದೂರದಲ್ಲಿ ನೀರಿನಂತೆ ಕಾಣಿಸುವ ಕಲ್ಲಿಗೆ ಅವೀಚಿಮತ್ ಎಂದು ಹೆಸರು. ಈ ನರಕಕ್ಕೆ **ಅವೀಚಿಮತ್** ನರಕವೆಂದೂ ಹೆಸರು. ಅಲ್ಲಿ ಕಲ್ಲಿನ ಮೇಲೆ ಬಿದ್ದವನ ದೇಹವು ನೂರಾರು ಸೀಳಿಹೋಗುವುದು. ಅವನನ್ನು ಪುನಃ ಹಾಗೆಯೇ ಮೇಲಕ್ಕೆ ತೆಗೆದುಕೊಂಡು ಹೋಗಿ ಕೆಳಗೆ ತಳ್ಳುವರು.

ಯಾರು ಇಲ್ಲಿ ಬ್ರಾಹ್ಮಣನೋ ರಾಜನೋ ವೈಶ್ಯನೋ ಅವರ ಹೆಂಗಸರೋ ಮದ್ಯಪಾನ ಮಾಡುವರೋ ಅವರನ್ನು ನರಕದಲ್ಲಿ ಸೆಳೆದುಕೊಂಡು ಹೋಗಿ ಯಮದೂತರು ಅವರ ಎದೆಯ ಮೇಲೆ ಕಾಲನ್ನು ಇಟ್ಟುಕೊಂಡು ಬೆಂಕಿಯಿಂದ ಕಾಯಿಸಿದ ಕಬ್ಬಿಣದ ರಸವನ್ನು ಬಾಯಿಗೆ ಹಾಕುವರು.

ಯಾರು ತಾನು ಅಧಮನಾಗಿದ್ದುಕೊಂಡು ಅಹಂಕಾರದಿಂದ ಜನ್ಮತಪಸ್ಸು ವಿದ್ಯಾ ಆಚಾರ ವರ್ಣಾಶ್ರಮ ಧರ್ಮ ಇವುಗಳಿಂದ ದೊಡ್ಡವರಾದವರನ್ನು ಬಹುಮಾನ ಮಾಡುವುದಿಲ್ಲವೋ ಅವನು ಬದುಕಿರುವಾಗಲೇ ಸತ್ತಪ್ರಾಯನಾಗಿ ಇದ್ದುಕೊಂಡು ಉಪ್ಪುನೀರಿನ ಕೆಸರುಳ್ಳ ನರಕದಲ್ಲಿ ತಲೆಕೆಳಗಾಗಿ ಬಿದ್ದುಕೊಂಡು ಬಹುದುಃಖವನ್ನು ಅನುಭವಿಸುವನು.

ಯಾರು ಮನುಷ್ಯರನ್ನೇ ಕೊಂದು ಯಾಗವನ್ನು ಮಾಡುವರೋ ಅ ಶಾಸ್ತ್ರೀಯ ಪಶುಗಳನ್ನು ಕೊಂದು ತಿನ್ನುವರೋ ಅವರು ಹೆಂಗಸರಾಗಿರಲಿ ಗಂಡಸರಾಗಿರಲಿ ಅವರನ್ನು ನರಕದಲ್ಲಿ ಪೂರ್ವದಲ್ಲಿ ಅವರಿಂದ ಮೃತರಾದ ಪ್ರಾಣಿಗಳು ರಾಕ್ಷಸರಾಗಿ ಬಂದು ಪ್ರಾಣಿಗಳನ್ನು ಕೊಲ್ಲುವವರಂತೆ ಕತ್ತಿಯಿಂದ ತುಂಡುತುಂಡಾಗಿ ಕತ್ತರಿಸಿ ರಕ್ತವನ್ನು ಕುಡಿಯುವರು. ನರ್ತನವನ್ನು ಮಾಡುವರು. ಸಂತೋಷಪಡುವರು.

ಯಾರು ಇಲ್ಲಿ ನಿರಪರಾಧಿಗಳಾದ ಪ್ರಾಣಿಗಳನ್ನು ವಿಶ್ವಾಸಕ ಉಪಾಯಗಳಿಂದ ನಂಬಿಕೆಪಡಿಸಿ ಬದುಕಿರಬೇಕೆಂಬ ಆಸೆಯುಳ್ಳ ಪ್ರಾಣಿಗಳನ್ನು ಶೂಲಾದಿಗಳಲ್ಲಿ ಕುಕ್ಕಿ ಕೊಲ್ಲುವರೋ ಅವರು ಮೃತರಾದ ಮೇಲೆ ನರಕದಲ್ಲಿ ಶೂಲಾದಿಗಳಲ್ಲಿ ಹಾಕಲ್ಪಟ್ಟವರಾಗಿ ಹಸಿವೆದಾಹಗಳಿಂದ ಪೀಡಿತರಾಗಿ ಕಂಕಬಲಾಯ ಇತ್ಯಾದಿ ಹೆಸರುಳ್ಳ ತೀಕ್ಷ್ಣವಾದ ಮೂಗು (ಕೊಕ್ಕು)ಉಳ್ಳ ಪಕ್ಷಿಗಳಿಂದ ಕುಕ್ಕಲ್ಪಟ್ಟವರಾಗಿ ತಾವು ಮಾಡಿದ ಪಾಪವನ್ನು ಸ್ಮರಿಸುತ್ತಿರುವರು.

ಯಾವ ಜನರು ಅತಿ ಕ್ರೂರ ಸ್ವಭಾವವುಳ್ಳವರಾಗಿ ಹಾವುಗಳಂತೆ ಜನರನ್ನು ಭಯಪಡಿಸುತ್ತಿರುವರೋ ಅವರು ಸತ್ತಮೇಲೆ **ದಂದಶೂಕವೆಂಬ ನರಕದಲ್ಲಿ** ಬೀಳುವರು. ಅಲ್ಲಿ ಐದು ತಲೆ ಏಳು ತಲೆಗಳುಳ್ಳ ಸರ್ಪಗಳು ಬಂದು ಹತ್ತಿರ ಬಂದು ಬೆಟ್ಟದ ಹಾವುಗಳಂತೆ ನುಂಗುವುವು.

ಯಾರು ಇಲ್ಲಿ ಶ್ವಾಸಬಿಡಲಿಕ್ಕೂ ಆಗದ ಪ್ರದೇಶಗಳಲ್ಲಿ ಪ್ರಾಣಿಗಳನ್ನು ಇಟ್ಟು ವಿಷದ ಹೊಗೆಯನ್ನು ಹಾಕಿ ಕೊಲ್ಲುವರೋ ಅವರನ್ನು ನರಕದಲ್ಲಿಯೂ ಹಾಗೆಯೇ ಹೊಗೆ ಹಾಕಿ ಶ್ರಮಪಡಿಸುವರು.

ಯಾರು ಮನೆಗೆ ಬಂದ ಅತಿಥಿಗಳನ್ನು ಮನೆಯ ಯಜಮಾನನಾಗಿದ್ದುಕೊಂಡು ಕಣ್ಣು ಕೆಂಪಗೆ ಮಾಡಿಕೊಂಡು ಸುಟ್ಟುಹಾಕುವಂತೆ ನೋಡುವನೋ ಅವನಿಗೂ ನರಕದಲ್ಲಿ ವಕ್ರವಾದ ಮೂಗುಳ್ಳ ಹದ್ದು ಮೊದಲಾದ ಪ್ರಾಣಿಗಳು ಬಂದು ಬಲಾತ್ಕಾರದಿಂದ ಕಣ್ಣುಗಳನ್ನು ಕುಕ್ಕಿ ಹಾಕುವುವು.

ಯಾರು ಹಣದಲ್ಲಿಯೇ ಅಭಿಮಾನವುಳ್ಳವನಾಗಿ ಅಹಂಕಾರವುಳ್ಳವನಾಗಿ ವಕ್ರದೃಷ್ಟಿಯುಳ್ಳವನಾಗಿ ಎಲ್ಲರ ಮೇಲೂ ಸಂದೇಹಪಡುತ್ತಾ ಹಣವೆಚ್ಚವಾಗುವುದೆಂದು ಸಂದೇಹದಿಂದ ಮುಖವನ್ನು ಬಿಡಿಸಿಕೊಂಡು ಸುಖರಹಿತನಾಗಿ ಪಿಶಾಚಿಯಂತೆ ಹಣವನ್ನು ರಕ್ಷಿಸುತ್ತಿರುವನೋ ಅವನು ಸತ್ತಮೇಲೆ **ಸೂಚೀಮುಖ**ವೆಂಬ ನರಕದಲ್ಲಿ ಬೀಳುವನು. ಅಲ್ಲಿ ಆ ಪಾಪಿಯನ್ನು ಯಮದೂತರು ಬಟ್ಟೆ

ನೇಯುವವರು ವಸ್ತ್ರವನ್ನು ಹೊಲಿಯುವಂತೆ ಸೂಜಿಯಿಂದ ಮೈಯಲ್ಲೆಲ್ಲಾ ಹೊಲಿಯುವರು.

ಈರೀತಿಯಾಗಿ ಯಮಲೋಕದಲ್ಲಿ ಸಾವಿರಾರು ನರಕಗಳು ಇರುವುವು. ಪಾಪವನ್ನು ಮಾಡಿದವರೆಲ್ಲರೂ ಕ್ರಮದಿಂದ ಈ ನರಕಗಳಲ್ಲಿ ಬೀಳುವರು. ಪುಣ್ಯವನ್ನು ಮಾಡಿದವರು ಸ್ವರ್ಗವನ್ನು ಹೊಂದುವರು. ಪುಣ್ಯಪಾಪಶೇಷದಿಂದ ಭೂಮಿಯಲ್ಲಿ ಹುಟ್ಟುವರು.



# ಯಮಲೋಕದ ಮಾರ್ಗ [1]

ನಾಲ್ಕು ವಿಧ ಪ್ರಾಣಿಗಳೂ ಯಮಲೋಕಕ್ಕೆ ಹೋಗಬೇಕು. ಯಮಲೋಕವು ಅತ್ಯಂತ ಭಯಂಕರವಾದದ್ದು. ಗರ್ಭದಲ್ಲಿದ್ದವರೂ ಹುಟ್ಟಿದವರೂ ಬಾಲಕರೂ ತರುಣರೂ ಹೆಂಗಸರೂ ಗಂಡಸರೂ ನಪುಂಸಕರೂ ಎಲ್ಲಾ ಪ್ರಾಣಿಗಳೂ ಆ ಲೋಕಕ್ಕೆ ಹೋಗಲೇಬೇಕು. ಅಲ್ಲಿ ಪ್ರಾಣಿಗಳ ಶುಭಾಶುಭ ಫಲವು ವಿಚಾರಿಸಲ್ಪಡುತ್ತದೆ. ಚಿತ್ರಗುಪ್ತನೇ ಮೊದಲಾದವರು ಮಧ್ಯಸ್ಥರು. ವಿಚಾರಿಸುವರು. ಯಮಲೋಕಕ್ಕೆ ಹೋಗದ ಪ್ರಾಣಿಗಳೇ ಇರುವುದಿಲ್ಲ. ಅವಶ್ಯವಾಗಿ ಅವರವರು ಮಾಡಿದ ಕರ್ಮವನ್ನು ಅನುಭವಿಸಿಯೇ ತೀರಬೇಕು.

ಯಾರು ಶಾಂತವಾದ ಮನಸ್ಸುಳ್ಳವರಾಗಿ ದಯಾಯುಕ್ತರಾಗಿ ಶುಭವಾದ ಕರ್ಮವನ್ನು ಮಾಡುವರೋ ಅವರು ಶಾಂತವಾದ ಮಾರ್ಗದಿಂದ ಯಮಲೋಕಕ್ಕೆ ಹೋಗುವರು. ಯಾರು ಮಾಘಮಾಸದಲ್ಲಿ ಅರುಣೋದಯಕಾಲದಲ್ಲಿ ಸ್ನಾನ ಮಾಡುತ್ತಾರೋ ಹರಿಗೋವಿಂದ ಮಾಧವ ಎಂದು ಭಗವಂತನ ನಾಮವನ್ನು ಉಚ್ಚರಿಸುವರೋ ಅವರು ಸುಖಕರವಾದ ಮಾರ್ಗದಿಂದ ಯಮಲೋಕವನ್ನು ಹೊಂದುವರು. ಸೂರ್ಯನು ಉದಯಿಸುತ್ತಿರಲು ಯಾರು ಸ್ನಾನವನ್ನು ಮಾಡಿ ಮಾಘಮಾಸದಲ್ಲಿ ಬೋರೆಹಣ್ಣನ್ನು ದಾನ ಮಾಡುವರೋ, ಯಾರು ಬಾಳೆಹಣ್ಣನ್ನು ದಾನಮಾಡುವರೋ ಅವರು ಸುಖವಾಗಿ ಹಣ್ಣುಗಳನ್ನು ತಿನ್ನುತ್ತಾ ಯಮಲೋಕಕ್ಕೆ ಹೋಗುವರು.

ಯಾರು ಮಾಘಮಾಸದಲ್ಲಿ ಅರುಣೋದಯದಲ್ಲಿ ಸ್ನಾನಮಾಡಿ ಎಳ್ಳನ್ನು

1. ಪ.ಪು.

ದಾನಮಾಡುವನೋ ಅವನೂ ಸುಖವಾಗಿ ಯಮಲೋಕಕ್ಕೆ ಹೋಗುವನು. ಯಾರು ಮಾಘಮಾಸದಲ್ಲಿ ಉಷಃಕಾಲದಲ್ಲಿ ಸ್ನಾನಮಾಡಿ ನೆಲ್ಲಿಯನ್ನು ದಾನಮಾಡುವನೋ ಬ್ರಾಹ್ಮಣರಿಗೆ ಪಾದುಕೆಯನ್ನೂ ಪಾದರಕ್ಷೆಯನ್ನೂ ದಾನಮಾಡುವನೋ ಅವನು ತೇಜಸ್ವಿಯಾಗಿ ಕುದುರೆಯುಳ್ಳವನಾಗಿಯೂ ಯಮಲೋಕಕ್ಕೆ ಹೋಗುವನು. ಛತ್ರದಾನವನ್ನು ಮಾಡಿದವನು ಮೇಘದಿಂದ ನೆರಳುಳ್ಳ ಮಾರ್ಗದಿಂದ ಯಮಲೋಕಕ್ಕೆ ಹೋಗುವನು. ವಸ್ತ್ರದಾನ ಮಾಡಿದವರು ಉತ್ತಮವಾದ ವಸ್ತ್ರವನ್ನು ಧರಿಸಿಕೊಂಡು ಹೋಗುವರು. ಮೇನೆಯನ್ನೂ ವಾಹನವನ್ನೂ ದಾನಮಾಡುವುದ ರಿಂದ ರಥದಲ್ಲಿ ಕೂತುಕೊಂಡು ಸುಖವಾಗಿ ಹೋಗುವರು. ತೋಟವನ್ನು ಮಾಡಿದವನು. ತಣ್ಣಗಿರುವ ನೆರಳಿನಲ್ಲಿ ಹೋಗುವನು. ಹೂವಿನ ತೋಟವನ್ನು ಮಾಡಿಸಿ ದಾನ ಮಾಡಿದವರು ಪುಷ್ಪಕವಿಮಾನದಲ್ಲಿ ಕೂತುಕೊಂಡು ಹೋಗುವರು. ದೇವಾಲಯವನ್ನು ಕಟ್ಟಿಸಿದವರೂ ಯತಿಗಳಿಗೆ ಆಶ್ರಮವನ್ನು ಮಾಡಿಸಿದವರೂ ಅನಾಥಮಂಟಪಗಳನ್ನು ಕಟ್ಟಿಸಿದವರೂ ದಾರಿಯಲ್ಲಿ ಅಲ್ಲಲ್ಲಿ ವಿಶ್ರಮಿಸಿಕೊಂಡು ಹೋಗುವರು.

ದೇವ ಅಗ್ನಿ ಗುರು ಬ್ರಾಹ್ಮಣರನ್ನು ಪೂಜಾ ಮಾಡಿದವರೂ ತಂದೆತಾಯಿಗಳನ್ನು ಪೂಜಿಸಿದವರೂ ಸತ್ಕೃತರಾಗಿ ಸುಖವಾಗಿ ಮಾರ್ಗದಲ್ಲಿ ಹೋಗುವರು. ದೀಪದಾನ ಮಾಡಿದವರು ಸುತ್ತಲೂ ಪ್ರಕಾಶವನ್ನು ಉಂಟುಮಾಡುತ್ತಾ ಹೋಗುವರು. ಒಬ್ಬನಿಗೆ ಮನೆಯಲ್ಲಿ ಆಶ್ರಯಕೊಟ್ಟವನು ಸೂಖವಾಗಿ ಹೋಗುವನು. ಗೋದಾನ ಮಾಡಿದವರು ಸರ್ವ ಅಭೀಷ್ಟಪ್ರದವಾದ ಮಾರ್ಗದಿಂದ ಹೋಗುತ್ತಾರೆ. ಯಾರು ಅನ್ನಪಾನೀಯಗಳನ್ನು ದಾನ ಮಾಡುತ್ತಾರೋ ಅವರೂ ತೃಪ್ತಿಯನ್ನು ಹೊಂದಿದವ ರಾಗಿ ಒಳ್ಳೇ ಮಾರ್ಗದಿಂದ ಹೋಗುತ್ತಾರೆ. ರೋಗಿಗಳಿಗೆ ಔಷಧ ಕೊಡುವವರು ಆರೋಗ್ಯವಂತರಾಗಿ ಸುಖದಿಂದ ಹೋಗುತ್ತಾರೆ.

ಗುರುಗಳ ಸೇವೆಯನ್ನು ಮಾಡುವವರೂ ವಿಶ್ರಮಿಸಿಕೊಂಡು ಸುಖವಾಗಿ ಹೋಗುತ್ತಾರೆ. ಬ್ರಾಹ್ಮಣರ ಕಾಲನ್ನು ತೊಳೆಯುವವರು ತಣ್ಣಗೆ ಇರುವ ಮಾರ್ಗದಿಂದ ಹೋಗುತ್ತಾರೆ. ಯಾರು ಮಾಘಮಾಸದಲ್ಲಿ ಬ್ರಾಹ್ಮಣರ ಪಾದಗಳಿಗೆ ಅಭ್ಯಂಗ ಮಾಡುವನೋ ಅವನು ಕುದುರೆಯ ಮೇಲೆ ಕೂತುಕೊಂಡು ಸುಖವಾಗಿ ಹೋಗುವನು. ಬಂಗಾರವನ್ನು ರತ್ನವನ್ನು ದಾನಮಾಡುವವನು ವಿಮಾನದಲ್ಲಿ ಕೂತುಕೊಂಡು ಹೋಗುವನು. ಬೆಳ್ಳಿಯನ್ನೂ ಎತ್ತನ್ನೂ ದಾನ ಮಾಡುವುದರಿಂದ ರಥದಲ್ಲಿ ಕೂತುಕೊಂಡು ಹೋಗುತ್ತಾನೆ. ಭೂದಾನವನ್ನು ಮಾಡುವುದರಿಂದ

ಸರ್ವಕಾಮ ಸಮೃದ್ಧಿಯುಳ್ಳವನಾಗಿ ಹೋಗುತ್ತಾನೆ. ಅನ್ನಪಾನೀಯಗಳನ್ನು ದಾನ ಮಾಡುತ್ತಿರುವುದರಿಂದ ತಿನ್ನುತ್ತಾ ಕುಡಿಯುತ್ತಾ ಹೋಗುವನು.

ಮಾಘಮಾಸದಲ್ಲಿ ತಾಂಬೂಲದಾನ ಮಾಡಿದವರು ಸುವಾಸನೆಯುಳ್ಳ ಮುಖ ವುಳ್ಳವರಾಗಿ ಸುಖಕರವಾದ ಮಾರ್ಗದಿಂದ ಹೋಗುವರು. ತುಪ್ಪವನ್ನು ದಾನ ಮಾಡಿದವನು ಜ್ಯೋತಿಮರ್ಯವಾದ ವಿಮಾನದಲ್ಲಿ ಕೂತುಕೊಂಡು ಹೋಗು ವನು. ಕರಿಕುಂಬಳಕಾಯಿಯನ್ನು ದಾನಮಾಡಿದವನು ತೃಪ್ತಿಯುಳ್ಳವನಾಗಿ ಹಿಮದಂತೆ ಶುಭ್ರವಾದ ವಿಮಾನದಲ್ಲಿ ಕೂತುಕೊಂಡು ಹೋಗುವನು. ಅಕ್ಕಿಬೇಳೆಯನ್ನು ದಾನ ಮಾಡುವುದರಿಂದಲೂ ಸುಖವಾಗಿ ಯಮಲೋಕಕ್ಕೆ ಹೋಗುವನು. ಮಾಘಮಾಸ ದಲ್ಲಿ ಹಣ್ಣು ಕೊಡುವ ಔಷಧಗಳನ್ನು ದಾನ ಮಾಡಿದರೆ ಸರ್ವಭೋಗವುಳ್ಳವನಾಗಿ ಉಣ್ಣುತ್ತಾ ತಿನ್ನುತ್ತಾ ಯಮಲೋಕಕ್ಕೆ ಹೋಗುತ್ತಾನೆ. ಇತ್ಯಾದಿ ದಾನಗಳನ್ನು ಮಾಡಿರುವ ಸದಾ ಮಾಘಸ್ನಾನ ಮಾಡಿರುವ ನಾನಾವ್ರತಗಳನ್ನು ಮಾಡಿರುವ ಜನರಿಂದ ಯಮಲೋಕವು ಯಾವಾಗಲೂ ತುಂಬಿರುವುದು. ಮಾಘಸ್ನಾನ ಮಾಡಿದವರು ವಿಶೇಷವಾಗಿ ಶೋಭಿಸುತ್ತಾರೆ. ವಿಶೇಷವಾಗಿ ಯಮಧರ್ಮರಾಜ ನಿಂದ ಸತ್ಕೃತರಾಗಿ ಭೋಗಗಳನ್ನು ಅನುಭವಿಸುವರು. ಅವರಿಗೆ ವಿಚಿತ್ರಗಳಾದ ನೂರಾರು ಸಾವಿರಾರು ವಿಮಾನಗಳು ಇರುವುವು. ಈರೀತಿಯಾಗಿ ಯಮಲೋಕವು ಪುಣ್ಯವಂತರಿಂದ ತುಂಬಿರುವುದು.

ವಿಮಾನದಲ್ಲಿ ಕೂತುಕೊಂಡು ಬರುವ ಪುಣ್ಯವಂತರನ್ನು ನೋಡಿ ಯಮದೇವರು ಸ್ವಾಗತೋಪಚಾರವನ್ನು ಮಾಡಿ 'ನೀವೆಲ್ಲರೂ ಧನ್ಯರು. ನೀವು ದಿವ್ಯಸುಖಕ್ಕಾಗಿ ಪುಣ್ಯವನ್ನು ಮಾಡಿರುವಿರಿ. ದಿವ್ಯಸ್ತ್ರೀಭೋಗಭೂಷಿತವಾದ ಈ ವಿಮಾನವನ್ನು ಏರಿದವರಾಗಿ ಸ್ವರ್ಗಕ್ಕೆ ಹೋಗಿರಿ' ಎಂದು ಹೇಳುವರು. ಈರೀತಿಯಾಗಿ ಯಮದೇವರಿಂದ ಅನುಜ್ಞೆಯನ್ನು ಪಡೆದವರಾಗಿ ಸ್ವರ್ಗಕ್ಕೆ ಹೋಗುವರು. ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನ ಮಾಡಿದವರು ಸರಿಯಾದ ಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗುವರು. ಮಾಘ ಮಾಸದಲ್ಲಿ ಉಷಃಕಾಲದಲ್ಲಿ ಸ್ನಾನಮಾಡಿ ಪರಮಾತ್ಮನ ಧರ್ಮದಲ್ಲಿ ಆಸಕ್ತರಾಗಿ ವಿಷಯದಲ್ಲಿ ಆಸಕ್ತಿರಹಿತರಾಗಿ ಇರುವವರು ಸರಿಯಾದ ಮಾರ್ಗದಿಂದ ವಿಷ್ಣು ಲೋಕಕ್ಕೆ ಹೋಗುವವರು. ಮಾಘಸ್ನಾನ ಮಾಡಿ ರುದ್ರಪೂಜಾ ಮಾಡುವವರು ರುದ್ರಲೋಕವನ್ನು ಹೊಂದುವರು. ಇತರ ಸಾಮಾನ್ಯ ಧರ್ಮವನ್ನು ಮಾಡು ವವರು ವಿಮಾನದಲ್ಲಿ ಕೂತುಕೊಂಡು ಯಮದೇವರ ಬಳಿಗೆ ಹೋಗಿ ಅವರಿಂದ ಅನುಜ್ಞೆ ಯನ್ನು ಪಡೆದು

ಸ್ವರ್ಗಕ್ಕೆ ಹೋಗುವರು. ಇನ್ನು ಕೆಲವು ಪುಣ್ಯವಂತರು ಯಮ ಲೋಕದಲ್ಲಿಯೇ ಕೆಲವು ಪ್ರದೇಶದಲ್ಲಿ ಸುಖವನ್ನು ಅನುಭವಿಸುತ್ತಾ ಇರುವರು.



## ಪಾಪಿಗಳ ಯಮಲೋಕದ ಮಾರ್ಗ [1]

ಯಾರು ಕ್ರೂರಕರ್ಮಗಳನ್ನು ಮಾಡಿರುವರೋ ದಾನಗಳನ್ನು ಮಾಡಿರುವುದಿಲ್ಲವೋ ಆ ಪಾಪಿಗಳು ಘೋರವಾದ ದಕ್ಷಿಣದಿಕ್ಕಿನ ಮಾರ್ಗದಿಂದ ಯಮಲೋಕಕ್ಕೆ ಹೋಗುತ್ತಾರೆ. ಸುತ್ತಲೂ ಎಂಭತ್ತಾರು ಸಾವಿರ ಯೋಜನ ಯಮದೇವರ ನಗರವೆಂದು ತಿಳಿಯಬೇಕು. ಅದು ನಾನಾ ರೂಪವುಳ್ಳದ್ದಾಗಿರುವುದು. ಪುಣ್ಯಕರ್ಮವನ್ನು ಮಾಡಿದವರಿಗೆ ಹತ್ತಿರದಲ್ಲಿ ಇರುವಂತೆ ಕಾಣಿಸುತ್ತದೆ. ಪಾಪಮಾಡಿದವರಿಗೆ ಭಯಂಕರವಾದ ಮಾರ್ಗದಲ್ಲಿ ಹೋಗುವವರಿಗೆ ಅತಿದೂರದಲ್ಲಿ ಇರುವಂತೆ ಕಾಣಿಸುತ್ತದೆ. ಪಾಪಿಗಳು ಹೋಗುವ ದಾರಿಯು ಅನೇಕ ತೀಕ್ಷ್ಣ ಮುಳ್ಳುಗಳಿಂದ ಯುಕ್ತವಾಗಿರುವುದು ಅನೇಕ ಕಲ್ಲುಗಳಿಂದ ಸಹಿತವಾಗಿರುವುದು. ಕತ್ತಿಯ ಬಾಯಿಯಂತೆ ಇರುವ ಕಲ್ಲುಗಳು ಅನೇಕ ಇರುವುವು. ಕೆಲವು ಸ್ಥಳದಲ್ಲಿ ಅತಿ ಕೆಸರು ಇರುವುದು. ಇನ್ನು ಕೆಲವು ಸ್ಥಳದಲ್ಲಿ ಗಾಯಮಾಡುವ ಅಂಕುರಗಳಿರುವುವು. ಕೆಲವು ಸ್ಥಳಗಳಲ್ಲಿ ಲೋಹದ ಸೂಜಿಗಳಂತೆ ಇರುವ ದರ್ಭೆಗಳು ತುಂಬಿರುವುವು. ಎತ್ತರ ತಗ್ಗುಗಳು ಇರುವುವು. ಪರ್ವತಗಳೂ ಮರಗಳೂ ತುಂಬಿರುವುವು. ಉರಿಯುವ ಕೆಂಡಗಳು ಇರುವುವು. ಬಿಸಿಯಾದ ಉಸುಬುಗಳು ಇರುವುವು. ತೀಕ್ಷ್ಣಗೂಟಗಳಿರುವುವು. ಅನೇಕ ಕೊಂಬೆಗಳಿಂದ ಮರಗಳು ತುಂಬಿರುವುವು. ಅಲ್ಲಿ ಅತಿ ಕತ್ತಲೆಯಲ್ಲಿ ಹೋಗುವರು.

ಕೆಲವು ಸ್ಥಳಗಳಲ್ಲಿ ಕಾಡುಬೆಂಕಿಯು ಉರಿಯುತ್ತಿರುವುದು. ಕೆಲವು ಸ್ಥಳಗಳಲ್ಲಿ ಕಲ್ಲುಗಳು ಬಿಸಿಯಾಗಿರುವುವು. ಕೆಲವು ಸ್ಥಳಗಳಲ್ಲಿ ಕಲ್ಲುಗಳು ಹಿಮದಿಂದ ತಣ್ಣಗೆ ಆಗಿರುವುವು. ಕೆಲವು ಸ್ಥಳಗಳಲ್ಲಿ ಹೋಗುವಾಗ ಕುತ್ತಿಗೆಯವರೆಗೆ ಉಸುಬಿನಲ್ಲಿ ಹೂತುಹೋಗುವರು. ಕೆಲವು ಸ್ಥಳದಲ್ಲಿ ಬಿಸಿನೀರು ಇರುವುದು. ಸಿಂಹಗಳೂ ಹುಲಿಗಳೂ ಹತ್ತು ಕುತ್ತಿಗೆಯುಳ್ಳ ಭಯಂಕರ ಮೃಗಗಳೂ ದೊಡ್ಡ ಅಟ್ಟೆಗಳೂ ಬೆಟ್ಟ ಹಾವುಗಳೂ ಭಯಂಕರಗಳಾದ ಸೊಳ್ಳೆಗಳೂ ವಿಷಭರಿತ ಸರ್ಪಗಳೂ ಮದಭರಿತ ಆನೆಗಳೂ ತೀಕ್ಷ್ಣ ಕೊಂಬುಳ್ಳ ದೊಡ್ಡ ಎತ್ತುಗಳೂ ದೊಡ್ಡ ಕೊಂಬುಉಳ್ಳ ಕೋಣಗಳೂ ಒಂಟೆಗಳೂ ಕ್ರೂರಗಳಾದ ಡಾಕಿನೀ ಎಂಬ ಪಿಶಾಚಿಗಳೂ ಕ್ರೂರವಾದ

ರಾಕ್ಷಸರೂ ಭಯಂಕರಗಳಾದ ರೋಗಗಳೂ ಅಲ್ಲಲ್ಲಿ ದಾರಿಯಲ್ಲಿ ಪಾಪಿಗಳನ್ನು ಪೀಡಿಸುವುವು. ಪಾಪಿಗಳು ಮಹಾ ಧೂಲಿಯಿಂದ ಕೂಡಿದ ಗಾಳಿಯಿಂದಲೂ ಮಹಾಕಲ್ಲುಗಳ ಮಳೆಯಿಂದಲೂ ಪೀಡಿತರಾಗಿ ಹೋಗುವರು. ಮಹತ್ತಾದ ಧೂಳಿಯ ಮಳೆಯಿಂದ ಅಳುತ್ತಾ ಹೋಗುವರು. ದೊಡ್ಡ ಮೇಘ ಶಬ್ದಗಳಿಂದ ಭಯಪಡುತ್ತಾ ಹೋಗುವರು. ತೀಕ್ಷ್ಣ ಶಸ್ತ್ರಗಳ ಮಳೆಯಿಂದ ಮೈಯೆಲ್ಲಾ ಗಾಯಮಾಡಿಕೊಂಡು ಉಪ್ಪುನೀರಿನ ಮಳೆಯು ಬಂದು ಗಾಯದ ಮೇಲೆ ಉಪ್ಪುನೀರು ಬಿದ್ದು ದುಃಖಪಡುತ್ತಾ ಹೋಗುವರು. ದೊಡ್ಡ ತಣ್ಣಗಿರುವ ಗಾಳಿಯಿಂದ ಪೀಡಿತರಾಗುವರು. ಆದರಿಂದ ಒಣಗಿ ಹೋಗುವರು. ಅಳುವರು. ಈರೀತಿಯಾಗಿ ಕ್ರೂರವಾದ ದಾರಿಯಲ್ಲಿ ಆಹಾರವಿಲ್ಲದೆ ಇರುವ ಆಶ್ರಯರಹಿತವಾದ ಜನಸಂಚಾರ ರಹಿತವಾದ ವಿಶ್ರಾಂತಿಯಿಲ್ಲದೆ ಇರುವ ಕತ್ತಲೆಯುಳ್ಳ ಸರ್ವದುಃಖಕ್ಕೂ ಆಶ್ರಯವಾದ ಮಾರ್ಗದಲ್ಲಿ ಮೂಢರಾದ ಪಾಪಮಾಡಿದವರನ್ನು ಯಮದೇವರ ಆಜ್ಞಾಧಾರಿಗಳಾದ ಅತಿಕ್ರೂರರಾದ ಯಮದೂತರು ಕರಕೊಂಡು ಹೋಗುವರು. ಪಾಪಿಗಳು ಏಕಾಕಿಗಳಾಗಿ ಪರಾಧೀನರಾಗಿ ಮಿತ್ರ ಬಂಧುಗಳಿಂದ ರಹಿತರಾಗಿ ತಾವು ಮಾಡಿದ ಪಾಪಗಳನ್ನು ಜ್ಞಾಪಿಸಿಕೊಳ್ಳುತ್ತಾ ಅಳುತ್ತಾ ಪ್ರೇತಗಳಾಗಿ ವಸ್ತ್ರರಹಿತರಾಗಿ ಒಣಗಿಹೋದ ಕುತ್ತಿಗೆ ನಾಲಿಗೆಯುಳ್ಳವರಾಗಿ ಕೃಶವಾದ ಅಂಗವುಳ್ಳವರಾಗಿ ಭಯವುಳ್ಳವರಾಗಿ ಹಸಿವೆಯಿಂದ ಸಂತಪ್ತರಾಗಿ ಯಮಲೋಕಕ್ಕೆ ಹೋಗುವರು.

ಕೆಲವು ಪಾಪಿಗಳನ್ನು ಯಮ ದೂತರು ಕಾಲುಗಳನ್ನು ಸರಪಳಿಯಿಂದ ಕಟ್ಟಿ ಅಂಗಾತನೆ ಬೀಳಿಸಿ ಎಳೆದುಕೊಂಡು ಹೋಗುವರು. ಕೆಲವರು ಎದೆ ಕೆಳಗಾಗಿ ಬೀಳಿಸಿ ತಲೆಕೂದಲುಗಳನ್ನು ಕಟ್ಟಿ ಹಿಡಿದು ಸೆಳೆದುಕೊಂಡು ಹೋಗುತ್ತಾರೆ. ಕೆಲವರ ಹಣೆಯಲ್ಲಿ ಗೂಟದಿಂದ ಬಡಿದು ಎಳೆದುಕೊಂಡು ಹೋಗುವರು. ಮುಳ್ಳಿನ ಮೇಲೆ ಎಳೆದುಕೊಂಡು ಹೋಗುವರು. ಬೆಂಕಿಯ ಕೆಂಡದ ಮೇಲೆ ಎಳೆದುಕೊಂಡು ಹೋಗುವರು. ಕೈಗಳನ್ನು ಹಿಂದಕ್ಕೆ ಕಟ್ಟಿ ಹೊಟ್ಟೆಗೆ ಬಡಿಯುತ್ತಾ ಎಳೆದುಕೊಂಡು ಹೋಗುವರು. ಕೈಗಳನ್ನು ಸಂಕೋಲೆಯಿಂದ ಕಟ್ಟಿ ಎಳೆದುಕೊಂಡು ಹೋಗುವರು. ಕೆಲವರನ್ನು ಕುತ್ತಿಗೆಯಲ್ಲಿ ಹಗ್ಗ ಹಾಕಿ ಎಳೆದುಕೊಂಡು ಹೋಗುವರು. ಕೆಲವರ ನಾಲಿಗೆಯನ್ನು ಕಟ್ಟಿ ಸೆಳೆದುಕೊಂಡು ಹೋಗುವರು. ಅರ್ಧಚಂದ್ರ ಆಯುಧದಿಂದ ಕಟಿಯಲ್ಲಿ ತಳ್ಳುತ್ತಾ ಹೋಗುವರು. ಕೆಲವರ ಲಿಂಗವನ್ನೂ ವೃಷಣವನ್ನೂ ಹಗ್ಗದಿಂದ ಕಟ್ಟಿ ಎಳೆದುಕೊಂಡು ಹೋಗುವರು.

ಇನ್ನು ಕೆಲವರನ್ನು ಮೂಗನ್ನೂ ಕಟ್ಟಿ ಎಳೆದುಕೊಂಡು ಹೋಗುವರು.

ಕಪೋಲವನ್ನು ತುಟಿಯಲ್ಲಿ ಹಗ್ಗದಿಂದ ಕಟ್ಟಿ ಎಳೆದುಕೊಂಡು ಹೋಗುವರು. ಹೊಟ್ಟೆಯನ್ನು ಸೀಳಿ ಕಿವಿಗಳನ್ನು ಸೀಳಿ ಗಲ್ಲವನ್ನು ಸೀಳಿ ಕೈಕಾಲುಗಳನ್ನು ಕತ್ತರಿಸಿ ಕುತ್ತಿಗೆಯನ್ನು ನಾಲಿಗೆಯನ್ನು ಸೀಳಿ ವೃಷಣವನ್ನು ಸೀಳಿ ಸರ್ವಅಂಗಗಳು ಸಂದುಗಳನ್ನು ಸೀಳಿ ಎಳೆದುಕೊಂಡು ಹೋಗುವರು. ಪಾಪಿಗಳನ್ನು ಕುಂತ ಎಂಬ ಆಯುಧಗಳಿಂದ ಸೀಳುವರು. ಅವರ ಮೇಲೆ ಬಾಣಗಳನ್ನು ಬಿಡುವರು. ಪಾಪಿಗಳು ಅಳುತ್ತಾ ಅಲ್ಲಿ ಇಲ್ಲಿ ಓಡುವರು. ಮುದ್ಗರ ಎಂಬ ಆಯುಧದಿಂದ ಲೋಹದ ಕೋಲಿನಿಂದ ಯಮದೂತರು ಪಾಪಿಗಳನ್ನು ಬಡಿಯುವರು. ರಂಪಾಗಳಿಂದ ಸೀಳುವರು. ಭಿಂದಿಪಾಲವೆಂಬ ಆಯುಧಗಳಿಂದ ಪಾಪಿಗಳನ್ನು ಸೀಳುವರು. ಪಾಪಿಯುಳ್ಳ ಮೈಯೆಲ್ಲಾ ಗಾಯವುಳ್ಳವರಾಗಿ ಕೀವು ರಕ್ತಗಳನ್ನು ಸುರಿಸುತ್ತಾ ಕ್ರಿಮಿಗಳಿಂದ ಕಚ್ಚಲ್ಪಡುವವರಾಗಿ ಪರವಶರಾಗಿ ಹೋಗುವರು. ಹಸಿವೆದಾಹವುಳ್ಳವ ರಾಗಿ ಅನ್ನವನ್ನು ನೀರನ್ನು ಯಾಚಿಸುತ್ತಾ ನೆರಳನ್ನು ಪ್ರಾರ್ಥಿಸುತ್ತಾ, ಛಳಿಯಾಗಲು ಅಗ್ನಿಯನ್ನು ಪ್ರಾರ್ಥಿಸುತ್ತಾ ಈರೀತಿಯಾಗಿ ದಾನ ಮಾಡದೆ ಇದ್ದವರು ಅತಿ ಕಷ್ಟಯುಕ್ತವಾದ ಮಾರ್ಗದಲ್ಲಿ ಹೋಗುವರು.

ಯಮದೂತರು ಯಮದೇವರ ಆಜ್ಞೆಯಿಂದ ಆ ಪಾಪಿಗಳನ್ನು ಯಮದೇವರ ಮುಂದೆ ನಿಲ್ಲಿಸುವರು. ಪಾಪಿಗಳು ಭಯಂಕರರೂಪವುಳ್ಳ ಯಮದೇವರನ್ನು ನೋಡುವರು. ಯಮದೇವರು ಕೋರೆಹಲ್ಲುಗಳಿಂದ ಭಯಂಕರವಾದ ಮುಖ ವುಳ್ಳವರಾಗಿ, ಹುಬ್ಬಿನ ವಿಲಾಸದಿಂದ ವಕ್ರವಾದ ಕಣ್ಣು ಉಳ್ಳವರಾಗಿ, ಮೇಲೆ ಕೂದಲು ಉಳ್ಳವರಾಗಿ, ದೊಡ್ಡ ದಾಡಿಯುಳ್ಳವರಾಗಿ, ನಡುಗುವ ತುಟಿಯುಳ್ಳವ ರಾಗಿ, ಹದಿನೆಂಟು ಕೈಗಳುಳ್ಳವರಾಗಿ ಕೋಪವುಳ್ಳವರಾಗಿ, ಕಪ್ಪಿನ ಪರ್ವತಂದೆ ಇರುವವರಾಗಿ, ಸರ್ವಾಯುಧಗಳನ್ನು ಕೈಗಳಲ್ಲಿ ಧರಿಸಿದವರಾಗಿ, ಬ್ರಹ್ಮದಂಡದಿಂದ ಬೆದರಿಸುವವರಾಗಿ, ದೊಡ್ಡ ಕೋಣದ ಮೇಲೆ ಕೂತುಕೊಂಡವರಾಗಿ, ಬೆಂಕಿಯಂತೆ ಇರುವ ಕಣ್ಣುಉಳ್ಳವರಾಗಿ ಕೆಂಪಾದ ಹೂವನ್ನು ವಸ್ತ್ರವನ್ನೂ ಧರಿಸಿದವರಾಗಿ ದೊಡ್ಡ ಮೇರುಪರ್ವತದಂತೆ ಇರುವವರಾಗಿ ಪ್ರಲಯಕಾಲದ ಮೇಘದಂತೆ ಶಬ್ದವುಳ್ಳವ ರಾಗಿ, ಸಮುದ್ರವನ್ನು ಕುಡಿಯುವಂತೆಯೂ ಮೂರು ಲೋಕಗಳನ್ನು ನುಂಗು ವಂತೆಯೂ, ಅಗ್ನಿಯನ್ನು ಕಾರುವಂತೆಯೂ ಇರುವ ರೂಪವನ್ನು ಪಾಪಿಗಳಿಗೆ ತೋರಿಸುವರು. ಪಾಪಿಗಳು ಅಂತಹ ಯಮದೇವರ ರೂಪವನ್ನು ಹತ್ತಿರವೇ ಇರುವ ಪ್ರಲಯಕಾಲದ ಅಗ್ನಿಯಂತೆ ತೇಜಸ್ಸುಳ್ಳ ಮೃತ್ಯುವನ್ನು ಅಗ್ನಿಯಂತೆ ಇರುವ ಕಾಲ ಎಂಬ ರೂಪವನ್ನು ಭಯಂಕರವಾದ ಕೃತಾಂತ ಎಂಬ ರೂಪವನ್ನು ನೋಡುವರು.

ಅಲ್ಲಿಯೇ ನಾನಾ ರೋಗಗಳ ಅಭಿಮಾನಿಗಳು ಶಕ್ತಿ ಶೂಲ ಅಂಕುಶ ಇತ್ಯಾದಿ ಆಯುಧಧಾರಿಗಳಾಗಿ ಕಾಣಿಸುವರು. ಸರ್ವಾಯುಧಗಳನ್ನು ಧರಿಸಿರುವ ಭಯಂಕರವಾದ ಯಮದೂತರು ಕಾಣಿಸುವರು. ಈ ಪ್ರಕಾರವಾದ ಪರಿವಾರದಿಂದ ಕೂಡಿದ ಭಯಂಕರರಾದ ಯಮದೇವರನ್ನು ಚಿತ್ರಗುಪ್ತನನ್ನು ಪಾಪಿಗಳು ನೋಡುವರು.

ಯಮದೇವರು ಚಿತ್ರಗುಪ್ತನೂ ಪಾಪಿಗಳನ್ನು ಧರ್ಮವನ್ನು ಬೋಧಿಸುತ್ತಾ ಅತ್ಯಂತವಾಗಿ ಗದರಿಸುವರು. 'ಎಲ್ಲಾ ಪಾಪವನ್ನು ಮಾಡಿದವರೇ! ಪರದ್ರವ್ಯವನ್ನು ಅಪಹಾರ ಮಾಡಿದವರೇ! ರೂಪದ ಗರ್ವದಿಂದ ಪರಸ್ತ್ರೀ ಗಮನಮಾಡಿದವರೇ! ಪುರುಷನು ಯಾವ ಕರ್ಮವನ್ನು ಮಾಡುವನೋ ಅವನೇ ಅದರ ಫಲವನ್ನು ಅನುಭವಿಸುವನು. ಹೀಗಿರುವಾಗ ನೀವು ನಿಮ್ಮ ಭೋಗಕ್ಕಾಗಿ ಪಾಪಕಾರ್ಯವನ್ನು ಯಾಕೆ ಮಾಡಿದಿರಿ? ಈಗ ಯಾಕೆ ದುಃಖಪಡುವಿರಿ? ನೀವು ಮಾಡಿದ ಪಾಪದ ಫಲವನ್ನು ಈಗ ಅನುಭವಿಸಿರಿ. ಇದರಲ್ಲಿ ಯಾವ ದೋಷವೂ ಇರುವುದಿಲ್ಲ. ಈ ರಾಜರು ನನ್ನ ಸಮೀಪದಲ್ಲಿ ಮಹಾಪಾಪಗಳನ್ನು ಮಾಡಿ ಬಂದಿರುವರು. ಎಲಾ ದುರಾಚಾರಿಗಳಾದ ಪ್ರಜೆಗಳನ್ನು ಧ್ವಂಸಗೊಳಿಸಿರುವ ರಾಜರೇ! ಸ್ವಲ್ಪಕಾಲದ ರಾಜ್ಯಕ್ಕಾಗಿ ಯಾಕೆ ದುಷ್ಕರ್ಮವನ್ನು ಮಾಡಿರುವಿರಿ? ರಾಜ್ಯಲೋಭದಿಂದ ಮೋಹದಿಂದ ಅನ್ಯಾಯವಾಗಿ ಬಲಾತ್ಕಾರದಿಂದ ಪ್ರಜೆಗಳನ್ನು ಶಿಕ್ಷಿಸುತ್ತಾ ಇದ್ದಿರಿ. ಅದರ ಫಲವನ್ನು ಈಗ ಅನುಭವಿಸಿರಿ. ರಾಜ್ಯಕ್ಕೋಸ್ಕರ ಹೆಂಡತಿಗೋಸ್ಕರ ಪಾಪಕಾರ್ಯವನ್ನು ಮಾಡಿದಿರಿ. ಆ ರಾಜ್ಯವು ಎಲ್ಲಿ ಹೋಯಿತು? ಆ ಹೆಂಡತಿಯು ಎಲ್ಲಿಗೆ ಹೋದಳು? ಎಲ್ಲವನ್ನೂ ಬಿಟ್ಟು ನೀವು ಏಕಾಕಿಗಳಾಗಿ ಬಂದಿರುವಿರಿ? ಪ್ರಜೆಗಳನ್ನು ಧ್ವಂಸ ಮಾಡಿದ ಬಲವು ನಿಮಗೆ ಈಗ ಎಲ್ಲಿದೆ? ಯಮದೂತರು ಬಡಿಯುವಾಗ ಈಗ ಹೇಗೆ ಆಗುತ್ತದೆ? ಈರೀತಿಯಾಗಿ ನಾನಾ ವಿಧಮಾತುಗಳಿಂದ ಯಮದೇವರಿಂದ ಬೆದರಿಸಲ್ಪಟ್ಟವರಾಗಿ ತಾವು ಮಾಡಿದ ಪಾಪಗಳನ್ನು ಜ್ಞಾಪಿಸಿಕೊಂಡು ದುಃಖಪಡುತ್ತಾ ಸುಮ್ಮನೆ ನಿಂತಿರುವರು.

ಈರೀತಿಯಾಗಿ ಯಮದೇವರು ರಾಜರನ್ನು ಕುರಿತು ಧರ್ಮವನ್ನು ಉಪದೇಶಿಸಿ ಅವರ ಪಾಪಶುದ್ಧಿಗಾಗಿ ಈರೀತಿಯಾದ ಮಾತನ್ನು ಹೇಳಿದರು. 'ಎಲಾ ಚಂಡನೇ! ಮಹಾಚಂಡನೇ! ಈ ರಾಜರನ್ನು ಕರೆದುಕೊಂಡು ಹೋಗಿ ಕ್ರಮದಿಂದ ನರಕಗಳಲ್ಲಿ ಶೋಧನೆ ಮಾಡಿರಿ' ಎಂದರು. ಕೂಡಲೇ ಯಮದೂತರು ಎದ್ದು ಆ ರಾಜರು ಕಾಲುಗಳನ್ನು ಹಿಡಿದು ಅತಿವೇಗದಿಂದ ತಿರುಗಿಸಿ ಮೇಲೆ ಬಿಸಾಡಿ ಹಿಡಿದು

ಸರ್ವಬಲದಿಂದ ಅತಿಬಿಸಿಯಾದ ಕಲ್ಲಿನ ಮೇಲೆ ಅಪ್ಪಳಿಸಿದರು. ಇದರಿಂದ ಅವರ ಮೈಯೆಲ್ಲಾ ಸೀಳಿಹೋಗಿ ರಕ್ತದ ಕಾಲುವೆಗಳೇ ಹೊರಟವು. ಒಂದು ಕ್ಷಣ ಮೂರ್ಛಿತರಾಗಿದ್ದರು. ಆಮೇಲೆ ಗಾಳಿಗೆ ಮೆಲ್ಲನೆ ಶ್ವಾಸವು ಬರಲು ಅವರನ್ನು ನರಕದಲ್ಲಿ ಹಾಕುವರು. ಕೆಳಗೆ ಇಪ್ಪತ್ತೆಂಟು ಕೋಟಿ ನರಕಗಳಿವೆ. ಏಳನೆಯ ಲೋಕವಾದ ಪಾತಾಲದ ಕೆಳಗೆ ಕತ್ತಲೆಯಲ್ಲಿ ಇರುವುವು. ಮೊದಲಿನ ಕೋಟಿಗೆ ಘೋರವೆಂದು ಹೆಸರು. ಆಮೇಲೆ ಸುಘೋರಾ, ಅತಿಘೋರಾ, ಮಹಾಘೋರಾ, ಘೋರಾರೂಪ, ತರಲ ತರಾ, ಭಯಾನಕಾ, ಕಾಲರಾತ್ರಿ, ಭಯೋತ್ಕಟಾ, ಚಂಡಾ, ಮಹಾಚಂಡಾ, ಚಂಡಾ ಕೋಲಾಹಲಾ, ಪ್ರಚಂಡಾ, ನರನಾಯಿಕಾ, ಕರಾಲಾ, ವಿಕರಾಲಾ, ವಜ್ರಾ, ತ್ರಿಕೋಣ, ಪಂಚಕೋಣ, ಸುದೀರ್ಘ, ಪರಿವರ್ತುಲಾ, ಸಪ್ತಭೌಮಾ, ಅಷ್ಟಭೌಮಾ, ದೀಪ್ತಾ, ಮಾಯಾ ಎಂದು ಹೆಸರುಳ್ಳ ನರಕಕೋಟಿಗಳು ಇರುವುವು. ಇವುಗಳಲ್ಲಿ ಅನೇಕ ಪ್ರಭೇದಗಳಿರುವುವು. ಇವುಗಳಲ್ಲಿ ಪಾಪ ಮಾಡಿದವರು ಪಾಪಕ್ಕೆ ಅನುಗುಣವಾಗಿ ಬೀಳುವರು. ವಿಚಿತ್ರ ಯಾತನೆಗಳನ್ನು ಅನುಭವಿಸಿ ಶುದ್ಧರಾಗುವರು. ಲೋಹಗಳು ಹೇಗೆ ಬೆಂಕಿಯಲ್ಲಿ ಹಾಕಿದರೆ ಶುದ್ಧವಾಗುವುವೋ ಹಾಗೆಯೇ ಪಾಪಮಾಡಿದವರು ನರಕಾಗ್ನಿಯಲ್ಲಿ ಶುದ್ಧರಾಗುವರು. ಈರೀತಿಯಾಗಿ ನರಕವನ್ನು ಅನುಭವಿಸಿದ ಮೇಲೆ ಉಳಿದ ಪಾಪಗಳಿಂದ ಭೂಮಿಯಲ್ಲಿ ಮರಗಿಡಗಳಾಗಿ ಹುಟ್ಟಿ ದುಃಖವನ್ನು ಅನುಭವಿಸಿ ಕೀಟಯೋನಿಯಲ್ಲಿ ಹುಟ್ಟಿ ಪಕ್ಷಿಗಳಾಗಿ ಹುಟ್ಟಿ ಆಮೇಲೆ ಮೃಗಗಳಾಗಿ ಹುಟ್ಟಿ ಪಶುಗಳಾಗಿ ಕೊನೆಗೆ ಗೋವಾಗಿ ಆಮೇಲೆ ಮನುಷ್ಯರಾಗುವರು.



## ಯಮಲೋಕಕ್ಕೆ ಹೋಗದಂತೆ ಮಾಡುವ ಉಪಾಯಗಳು[1]

ಯಾರು ಕರ್ಮದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಸರ್ವ ಅವಸ್ಥೆಗಳಲ್ಲಿಯೂ ಸರ್ವಕಾಲದಲ್ಲಿಯೂ ಇನ್ನೊಬ್ಬರಿಗೆ ಪೀಡೆಯನ್ನು ಮಾಡುವುದಿಲ್ಲವೋ ಅವರು ಯಮಲೋಕವನ್ನು ಹೊಂದುವುದಿಲ್ಲ. ಪ್ರಾಣಿಹಿಂಸೆಯನ್ನು ಮಾಡುವ ಜನರು ವೇದಗಳಿಂದಲೋ ದಾನಗಳಿಂದಲೋ ತಪಸ್ಸುಗಳಿಂದಲೋ ಯಜ್ಞಗಳಿಂದಲೋ ಯಾವಾಗಲೂ ಸದ್ಗತಿಯನ್ನು ಹೊಂದಲಾರರು. ಅಹಿಂಸೆಯು

ಉತ್ತಮವಾದ ಧರ್ಮವು ಅಹಿಂಸೆಯು ಉತ್ತಮವಾದ ತಪಸ್ಸು. ಅಹಿಂಸೆಯು ಉತ್ತಮವಾದ ದಾನವು. ಈರೀತಿಯಾಗಿ ಮುನಿಗಳು ಯಾವಾಗಲೂ ಹೇಳುವರು.

ಯಾವ ಜನರು ಸೊಳ್ಳೆಗಳನ್ನೂ ತಗಣೆಗಳನ್ನೂ ನೊಣಗಳನ್ನೂ ಹೇನುಗಳನ್ನೂ ಇತ್ಯಾದಿ ಪ್ರಾಣಿಗಳನ್ನು ಕೂಡ ಯಾವಾಗಲೂ ದಯಾವುಳ್ಳವರಾಗಿ ತಮ್ಮಂತೆಯೇ ನೋಡಿಕೊಳ್ಳುತ್ತಾರೋ ಅವರು ಬೆಂಕಿಯ ಕೆಂಡಗಳಿಂದ ಕೂಡಿದ ವೈತರಣೀ ನದಿಯುಳ್ಳ ಯಮಲೋಕದ ಮಾರ್ಗವನ್ನು ನೋಡುವುದೇ ಇಲ್ಲ.

ಯಾವ ಜನರು ಇಲ್ಲಿ ತಮ್ಮ ಜೀವನಕ್ಕಾಗಿ ನೀರಿನಲ್ಲಿಯೋ ನೆಲದಲ್ಲಿಯೋ ಇರುವ ಪ್ರಾಣಿಗಳನ್ನು ಹಿಂಸಿಸುವರೋ ಅವರು ಕಾಲಸೂತ್ರವೆಂಬ ನರಕವನ್ನು ಹೊಂದುವರು. ಅಲ್ಲಿ ತಮ್ಮ ಮಾಂಸವನ್ನೇ ತಿನ್ನುತ್ತಾ ಕೀವುರಕ್ತಗಳ ನೊರೆಯನ್ನು ಕುಡಿಯುತ್ತಾ ವಸಾ ಎಂಬ ಧಾತುವಿನ ಕೆಸರಿನಲ್ಲಿ ಮುಳುಗಿಕೊಂಡು ಕಬ್ಬಿಣದ ಮುಖವುಳ್ಳ ಕೀಟಗಳಿಂದ ಕಚ್ಚಲ್ಪಟ್ಟವರಾಗಿ ಪರಸ್ಪರವಾಗಿ ಕಚ್ಚಿಕೊಂಡು ಮಹಾಕತ್ತಲೆಯಲ್ಲಿ ಪರಸ್ಪರವಾಗಿ ಬಡಿದುಕೊಂಡು ಭಯಂಕರವಾದ ಸ್ವರದಿಂದ ಅಳುತ್ತಾ ಒಂದು ಕಲ್ಪದವರೆಗೆ ವಾಸಮಾಡುವರು. ನರಕದಿಂದ ಬಂದ ಮೇಲೆ ಅವರು ಮರಗಿಡಗಳಾಗಿ ಹುಟ್ಟು ವರು. ಬಹುಕಾಲ ಹಾಗೆ ಇದ್ದು ನೂರಾರು ತಿರ್ಯಕ್ ಪ್ರಾಣಿಗಳಾಗಿ ಹುಟ್ಟುವರು. ಆಮೇಲೆ ಹುಟ್ಟು ಕುರುಡರಾಗಿಯೂ ನಾನಾ ಅಂಗಹೀನರಾಗಿಯೂ ಹುಟ್ಟುವರು. ಕರ್ಮದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಪರಹಿಂಸೆಯನ್ನು ಮಾಡಿದರೆ ಈರೀತಿಯಿಂದ ಫಲವುಂಟಾಗುವುದು.

ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾರು ಸುಖವನ್ನು ಇಚ್ಛಿಸುವರೋ ಅವರು ಪ್ರಾಣಿಹಿಂಸೆಯನ್ನು ಮಾಡಬಾರದು. ಪ್ರಾಣಿಹಿಂಸೆಯನ್ನು ಮಾಡುವವರು. ಎರಡು ಲೋಕಗಳಲ್ಲಿಯೂ ಸುಖವನ್ನು ಹೊಂದುವುದಿಲ್ಲ. ಯಾರು ಪ್ರಾಣಿಗಳನ್ನು ಹಿಂಸಿಸುವುದಿಲ್ಲವೋ ಅವರು ಎಲ್ಲಿಯೂ ಭಯಪಡುವುದಿಲ್ಲ. ಸರಿಯಾಗಿಯೂ ವಕ್ರವಾಗಿಯೂ ಹೋಗುವ ನದಿಗಳೆಲ್ಲವೂ ಹೇಗೆ ಸಮುದ್ರಕ್ಕೆ ಹೋಗಿ ಸೇರುವುವೋ ಹಾಗೆ ಎಲ್ಲಾ ಅಧರ್ಮಗಳೂ ಹಿಂಸೆಯಲ್ಲಿ ಪ್ರವೇಶಿಸುತ್ತವೆ.

ಯಾರು ಎಲ್ಲರಿಗೂ ಅಭಯದಾನವನ್ನು ಮಾಡುವನೋ ಅವನು ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವನು. ಸರ್ವಯಜ್ಞಗಳಲ್ಲಿ ದೀಕ್ಷೆಯನ್ನು ಹೊಂದಿದ ಫಲವನ್ನು ಹೊಂದುವನು.

ಇನ್ನು ಯಾರು ಶಾಸ್ತ್ರಗಳಲ್ಲಿ ಹೇಳಿದ ವರ್ಣಾಶ್ರಮ ಧರ್ಮಗಳನ್ನು ಅನುಸರಿಸುತ್ತಾರೋ ಅವರು ಯಮಲೋಕವನ್ನು ಹೊಂದುವುದಿಲ್ಲ. ಬ್ರಹ್ಮ

ಚಾರಿಯೂ ಗೃಹಸ್ಥನೂ ವಾನಪ್ರಸ್ಥನೂ ಯತಿಯೂ ತಮ್ಮ ಧರ್ಮಗಳನ್ನು ಅನುಸರಿಸುವವರು. ಸ್ವರ್ಗದಲ್ಲಿ ವಾಸಮಾಡುವರು. ಯಾರು ಅನ್ನದಾನ ಮಾಡುವರೋ ಧರ್ಮಕ್ಕಾಗಿ ಭಾವಿ ಇತ್ಯಾದಿಗಳನ್ನು ಮಾಡಿಸುವರೋ ಪಂಚ ಯಜ್ಞಗಳನ್ನು ಮಾಡುವರೋ ದಯೆಯುಳ್ಳವರಾಗಿರುತ್ತಾರೋ ಅವರು ಯಮ ಲೋಕವನ್ನು ನೋಡಲಾರರು. ಇಂದ್ರಿಯ ವಿಷಯಗಳಲ್ಲಿ ಆಸಕ್ತಿ ರಹಿತರಾಗಿ ವೇದವಾದಿಗಳಾಗಿ ನಿತ್ಯವೂ ಅಗ್ನಿಪೂಜೆಯನ್ನು ಆಶಕ್ತರಾದವರು ಸ್ವರ್ಗವನ್ನು ಹೊಂದುವರು.

ಯುದ್ಧದಲ್ಲಿ ಸುತ್ತಲೂ ಶತ್ರುಗಳು ಬಂದಿರುವಾಗ ದೈನ್ಯಹೀನರಾಗಿ ಪರಾಕ್ರಮ ಶಾಲಿಗಳಾಗಿ ಯುದ್ಧಮಾಡಿ ಸಾಯುವವರು ಸೂರ್ಯಲೋಕದ ಮಾರ್ಗದಿಂದ ಹೋಗುವರು. ಅನಾಥರಿಗಾಗಿಯೂ ಸ್ತ್ರೀಯರಿಗಾಗಿಯೂ ಬ್ರಾಹ್ಮಣರಿಗಾಗಿಯೂ ಮರೆಹೊಂದಿದವರನ್ನು ರಕ್ಷಿಸುವುದಕ್ಕಾಗಿಯೂ ಯಾರು ಪ್ರಾಣಗಳನ್ನು ಬಿಡುವರೋ ಅವರು ಸ್ವರ್ಗವನ್ನು ಹೊಂದುವರು.

ಯಾರು ಅಂಗಹೀನರನ್ನು ಮುದುಕರನ್ನು ಬಾಲಕರನ್ನೂ ರೋಗಿಷ್ಠರನ್ನು ಅನಾಥರನ್ನು ದರಿದ್ರರನ್ನು ಪೋಷಿಸುವರೋ ಅವರು ಯಾವಾಗಲೂ ಸ್ವರ್ಗದಲ್ಲಿ ಸಂತೋಷ ಪಡುವರು.

ಕೆಸರಿನಲ್ಲಿ ಮುಳುಗಿರುವ ದನವನ್ನು ರೋಗವುಳ್ಳವನಾದ ಬ್ರಾಹ್ಮಣನನ್ನು ನೋಡಿ ಯಾರು ಉದ್ಧರಿಸುವರೋ ಅವರು ಅಶ್ವಮೇಧಯಾಗ ಮಾಡಿದವರು ಹೋಗುವಲೋಕಕ್ಕೆ ಹೋಗುವರು.

ಯಾರು ನಿತ್ಯವೂ ಗೋಗ್ರಾಸವನ್ನು ಕೊಡುತ್ತಾರೋ ನಿತ್ಯವೂ ಗೋವನ್ನು ಸೇವಿಸುತ್ತಾರೋ ಯಾರು ಗೋವಿನ ಮೇಲೆ ಸವಾರಿ ಮಾಡುವುದಿಲ್ಲವೋ ಅವರು ಸ್ವರ್ಗದಲ್ಲಿ ವಾಸಮಾಡುವರು.

ಅಗ್ನಿಪೂಜೆಯಲ್ಲಿಯೂ ಗುರುಪೂಜೆಯಲ್ಲಿಯೂ ದೇವರ ಪೂಜೆಯಲ್ಲಿಯೂ ಸರ್ವರ ಪೂಜೆಯಲ್ಲಿಯೂ ನಿತ್ಯವೂ ಯಾರು ಆಸಕ್ತರಾಗಿರುವರೋ ಆ ಬ್ರಾಹ್ಮಣರು ಸ್ವರ್ಗಕ್ಕೆ ಹೋಗುವರು.

ಒಂದು ಗೋವಿಗೆ ನೀರಡಿಕೆ ಪರಿಹಾರಕ್ಕಾಗಿ ನೀರು ನಿಲ್ಲುವಂತೆ ಒಂದು ತಗ್ಗು ಪ್ರದೇಶವನ್ನು ಯಾರು ತೋಡುವರೋ ಅವರು ಯಮಲೋಕವನ್ನು ನೋಡದೇ ಸದ್ಗತಿಯನ್ನು ಹೊಂದುತ್ತಾರೆ.

ಧರ್ಮಕ್ಕಾಗಿ ಭಾವಿ ಇಳಿಭಾವಿ ಸರೋವರ ಇತ್ಯಾದಿಗಳನ್ನು ಕಟ್ಟಿಸಿದರೆ ಅದರಲ್ಲಿ ಯಾವಾಗಲೂ ನೀರಿನಲ್ಲಿಯೂ ನೆಲದಲ್ಲಿಯೂ ಇರುವ ಪ್ರಾಣಿಗಳು ತಮ್ಮ ಇಚ್ಛಾನುಸಾರವಾಗಿ ನೀರನ್ನು ಕುಡಿಯುತ್ತಾ ಇರುತ್ತವಾದರೆ ಆ ಧರ್ಮಕ್ಕೆ ನಾಶವೇ ಇಲ್ಲ. ಅಲ್ಲಿಯ ನೀರನ್ನು ಜನರು ಹೇಗೆ ಹೇಗೆ ಕುಡಿಯುವರೋ ಹಾಗೆ ಆ ಭಾವಿ ಮೊದಲಾದವನ್ನು ಕಟ್ಟಿಸಿದವನನ್ನು ದೇವತೆಗಳೂ 'ನಿತ್ಯದಾನ ಮಾಡಿದವನಿವನು' ಎಂದು ಹೇಳುವರು. ಧರ್ಮವು ಹೆಚ್ಚಾದಂತೆ ಅಕ್ಷಯವಾದ ಸ್ವರ್ಗಲೋಕವು ಸಿಗುವುದು. ಪ್ರಾಣಿಗಳಿಗೆ ಬದುಕಿರಲಿಕ್ಕೆ ಕಾರಣವಾದದ್ದು ನೀರು. ಪ್ರಾಣಿಗಳು ಪ್ರಾಣಗಳ ನೀರಿನಲ್ಲಿ ಆಶ್ರಯಿಸಿಕೊಂಡಿರುವುವು. ಅಂತಹ ನೀರನ್ನು ಯಾರು ದಾನ ಮಾಡುತ್ತಾರೋ ಅವರು ಸ್ವರ್ಗದಲ್ಲಿ ಪ್ರಕಾಶಿಸುತ್ತಾ ಇರುತ್ತಾರೆ. **ಅಶ್ವತ್ಥ ಇತ್ಯಾದಿ ಪವಿತ್ರಮರಗಳನ್ನು ಬೆಳೆಸಿದವನೂ ನರಕವನ್ನು ನೋಡಲಾರನು. ಹತ್ತು ಮಕ್ಕಳನ್ನು ಪಡೆಯುವುದಕ್ಕಿಂತ ಐದು ಮರಗಳನ್ನು ಬೆಳೆಸುವುದು ಶ್ರೇಷ್ಠವು.** ಮರಗಳು ಎಲೆಗಳಿಂದಲೂ ಹೂಗಳಿಂದಲೂ ಕಾಯಿ ಗಳಿಂದಲೂ ಪಿತೃಗಳಿಗೆ ಸಂತೋಷವನ್ನು ಉಂಟುಮಾಡುವುವು. ದಾರಿಯಲ್ಲಿ ಹೋಗುವ ಜನರಿಗೆ ನೆರಳಾಗುವಂತೆ ಬೆಳೆಸಿದ ಮರವು ಮಾಡುವ ಪರಲೋಕದಲ್ಲಿ ಮಾಡುವ ಸಹಾಯವನ್ನು ಅಗ್ನಿಹೋತ್ರವೂ ಹೆಂಡತಿಯೂ ಮಗನೂ ಮಾಡಲಾರರು. ಯಾರು ಜನರ ಉಪಕಾರಕ್ಕಾಗಿ ಮರವನ್ನು ಬೆಳೆಸುವನೋ ಅವನು ಯಾವಾಗಲೂ ಸುಖವುಳ್ಳವನಾಗಿಯೇ ವಾಸಮಾಡುವನು. ಯಾವಾಗಲೂ ದಾನ ಮಾಡಿದ ಫಲವನ್ನು ಹೊಂದುವನು. ಒಳ್ಳೇ ನೆರಳನ್ನು ಹಣ್ಣುಗಳನ್ನು ಹೂಗಳನ್ನು ಕೊಡುವ ದಾರಿಯಲ್ಲಿ ಬೆಳೆಸಿದ್ದ ಮರಗಳನ್ನು ಯಾರು ಕದಿಯುವರೋ ಆ ಮೂಢರು ಬಹುಕಾಲ ನರಕವನ್ನು ಹೊಂದುವರು.



## ಶನಿಪೀಡಾಪರಿಹಾರವು

ಶನಿಯು ಗ್ರಹಗಳಿಗೆ ರಾಜನೆಂದು ಪ್ರಸಿದ್ಧನಾಗಿರುವನು. ಇವನು ದೇವತೆಗಳಲ್ಲಿ ಪ್ರಸಿದ್ಧನಾಗಿರುವನು. ಭಯಂಕರರೂಪವುಳ್ಳವನು. ಜಟಾಉಳ್ಳವನು. ಬಹು ರೋಮವುಳ್ಳವನು. ದಾನವರಿಗೆ ಭಯವನ್ನು ಉಂಟುಮಾಡುವವನು. ಅವನ ಚರಿತ್ರೆಯು ಲೋಕದಲ್ಲಿ ಅಷ್ಟು ಪ್ರಸಿದ್ಧವಾಗಿರುವುದಿಲ್ಲ. ಪೂರ್ವದಲ್ಲಿ ರಘುವಂಶ ದಲ್ಲಿ ಪ್ರಸಿದ್ಧನಾದ ದಶರಥರಾಜನು ಚಕ್ರವರ್ತಿಯಾಗಿ ಸಪ್ತದ್ವೀಪಗಳಿಗೂ ಅಧಿಪತಿಯಾಗಿದ್ದನು. ಅವನೊಡನೆ ಜ್ಯೋತಿಷ್ಕರು 'ಶನಿಯು ಈಗ ಕೃತ್ತಿಕಾ ನಕ್ಷತ್ರದ

ಅಂತ್ಯದಲ್ಲಿರುವ ಇರುವನು. ಇನ್ನು ರೋಹಿಣಿಯನ್ನು ಭೇದಿಸಿಕೊಂಡು ಹೋಗುವನು. ಇದಕ್ಕೆ ಶಾಕಟಭೇದವೆಂದು ಹೆಸರು. ಇದು ಸುರಾಸುರರಿಗೆ ಭಯಂಕರವಾದದ್ದು. ಇದರಿಂದ ಹನ್ನೆರಡು ವರ್ಷಕಾಲ ದುರ್ಭಿಕ್ಷೆಯು ಉಂಟಾಗುವುದು' ಎಂದು ಹೇಳಿದರು. ಅದನ್ನು ಕೇಳಿ ರಾಜನು ಮಂತ್ರಿಗಳೊಡನೆ ಏನಿದು ಭಯಂಕರವಾದ ವಿಪತ್ತೂ ಬಂದು ಸೇರಿತು ಎಂದು ಯೋಚನೆ ಮಾಡಿದನು. ಜನರೆಲ್ಲರೂ ಈ ವರ್ತಮಾನವನ್ನು ತಿಳಿದು ವ್ಯಾಕುಲರಾದರು. ಜನರೆಲ್ಲರೂ ನಮಗೆ ವಿನಾಶವೇ ಬಂದಿತು ಎಂದು ಹೇಳಿಕೊಂಡರು. ಎಲ್ಲರೂ ಭಯಪಟ್ಟರು.

ರಾಜನು ವಸಿಷ್ಠರೇ ಮೊದಲಾದವರೊಡನೆ ವಿಚಾರಿಸಿದನು. ವಸಿಷ್ಠರು 'ರೋಹಿಣೀನಕ್ಷತ್ರವನ್ನು ಭೇದಿಸಿದರೆ ಪ್ರಜೆಗಳೇ ಇರಲಿಕ್ಕೆ ಆಗಲಾರದು' ಎಂದು ಹೇಳಿದರು. ತರುವಾಯ ದಶರಥನಾಜನು ಮಹಾಸಾಹಸವನ್ನು ಮಾಡಿದನು. ದಿವ್ಯಾಯುಧಗಳಿಂದ ಸಹಿತವಾದ ದಿವ್ಯವಾದ ಧನುಸ್ಸನ್ನು ಹಿಡಿದುಕೊಂಡು ರಥವನ್ನು ಏರಿ ಸೂರ್ಯನ ಮೇಲಿನ ಭಾಗದಲ್ಲಿ ಒಂದೂಕಾಲು ಲಕ್ಷಯೋಜನದಲ್ಲಿರುವ ನಕ್ಷತ್ರಮಂಡಲಕ್ಕೆ ಹೋದವನಾಗಿ ರೋಹಿಣಿಯ ಹಿಂದಿನ ಪಾರ್ಶ್ವಕ್ಕೆ ಹೋದನು. ಮಣಿರತ್ನಗಳಿಂದ ಅಲಂಕೃತವಾದ ದಿವ್ಯವಾದ ಬಂಗಾರದಿಂದ ಮಾಡಿದ ರಥದಲ್ಲಿ ರತ್ನಖಚಿತ ಕಿರೀಟಾದಿಗಳಿಂದ ದಶರಥರಾಜನು ಎರಡನೇ ಸೂರ್ಯನಂತೆ ಪ್ರಕಾಶಿಸಿದನು. ಕಿವಿಯ ಪರ್ಯಂತ ಧನುಸ್ಸಿನ ಹಗ್ಗವನ್ನು ಸೆಳೆದು ಸಂಹಾರಾಸ್ತ್ರವನ್ನು ಜೋಡಿಸಿದನು.

ಶನಿಯು ಸುರಾಸುರರಿಗೆ ಭಯಂಕರವಾದ ಸಂಹಾರಾಸ್ತ್ರವನ್ನು ನೋಡಿ ಅದರ ಭಯದಿಂದ ನಗುತ್ತಾ 'ರಾಜನೇ! ನಿನ್ನ ಪೌರಷವು ಶತ್ರುಗಳಿಗೆ ಅತಿಭಯಂಕರವಾಗಿರುವುದು. ಸಾಮಾನ್ಯದೇವತೆಗಳೂ ಅಸುರರೂ ಮನುಷ್ಯರೂ ಸಿದ್ಧರೂ ವಿದ್ಯಾಧರರೂ ಸರ್ಪಗಳೂ ನಾನು ನೋಡುವ ಮಾತ್ರದಿಂದ ಭಸ್ಮವಾಗಿ ಹೋಗುವರು. ನಿನ್ನ ತೇಜಸ್ಸಿನಿಂದ ಪೌರುಷದಿಂದ ಸಂತುಷ್ಟನಾಗಿರುವೆನು. ನೀನು ಬೇಕಾದ ವರವನನು ಕೇಳಿಕೊ. ಕೊಡುವೆನು' ಎಂದು ಹೇಳಿದನು. ಆಗ ದಶರಥರಾಜನು 'ನದಿಗಳೂ ಸಮುದ್ರಗಳೂ ಚಂದ್ರಸೂರ್ಯರೂ ಭೂಮಿಯೂ ಇರುವವರೆಗೆ ರೋಹಿಣಿಯನ್ನು ಭೇದಿಸಿಕೊಂಡು ಹೋಗಬಾರದು. ಈ ನನ್ನ ಪ್ರಾರ್ಥನೆಯನ್ನು ನಡೆಸಬೇಕು. ಮತ್ತೆ ಯಾವುದನ್ನು ನಾನು ಪ್ರಾರ್ಥಿಸುವುದಿಲ್ಲ' ಎಂದು ಹೇಳಿದನು. ಶನಿಯು ಆ ವರವನ್ನು ಕೊಟ್ಟು ಇನ್ನೊಂದು ವರವನ್ನು ಕೇಳಿಕೊ' ಎಂದನು. ದಶರಥರಾಜನು 'ನೀನು ಶಕಟವನ್ನು ಭೇದಿಸಬಾರದು. ಹನ್ನೆರಡು ವರ್ಷಕಾಲ

ದುರ್ಭಿಕ್ಷೆಯನ್ನು ಯಾವಾಗಲೂ ಉಂಟು ಮಾಡಬಾರದು' ಎಂದು ಹೇಳಿದನು. ಶನಿಯು 'ಹನ್ನೆರಡು ವರ್ಷ ಕಾಲ ದುರ್ಭಿಕ್ಷೆಯು ಯಾವಾಗಲೂ ಬರುವುದಿಲ್ಲ.

ಹೀಗೆ ಮಾಡಿದ ನಿನ್ನ ಕೀರ್ತಿಯು ಮೂರು ಲೋಕದಲ್ಲಿಯೂ ಪ್ರಸಿದ್ಧಿಯನ್ನು ಹೊಂದುವುದು' ಎಂದನು. ದಶರಥರಾಜನು ಈರೀತಿಯಾಗಿ ಎರಡು ವರಗಳನ್ನು ಪಡೆದು ರೋಮಾಂಚವುಳ್ಳವನಾಗಿ ರಥದಲ್ಲಿಯೇ ಕೆಳಗೆ ಧನುಸ್ಸನ್ನು ಹಾಕಿ ಕೈಮುಗಿದು ಸರಸ್ವತೀದೇವಿಯನ್ನು ವಿಘ್ನೇಶನನ್ನು ಧ್ಯಾನಿಸಿ ಶನಿಯನ್ನು ಸ್ತೋತ್ರಮಾಡಿದನು. ಅದನ್ನು ಕೇಳಿ ಶನಿಯು ಸಂತೋಷದಿಂದ ರೋಮಾಂಚ ವುಳ್ಳವನಾಗಿ 'ರಾಜೇಂದ್ರ! ನೀನು ಮಾಡಿದ ಸ್ತೋತ್ರದಿಂದ ನಾನು ಸಂತುಷ್ಟನಾಗಿರು ವೆನು. ಬೇಕಾದ ವರವನ್ನು ಕೇಳಿಕೊ. ಕೊಡುವೆನು' ಎಂದು ಹೇಳಿದನು.

ಅದಕ್ಕೆ ದಶರಥನು 'ಈ ದಿವಸವನ್ನು ಆರಂಭಿಸಿ ದೇವಾಸುರ ಮನುಷ್ಯ ಪಶುಪಕ್ಷ್ಯಾದಿಗಳಲ್ಲಿ ಯಾರಿಗೂ ನೀನು ಪೀಡೆಯನ್ನು ಕೊಡಬಾರದು' ಎಂದು ಹೇಳಿದನು. ಶನಿಯು 'ಪೀಡಿಸುವ ಪ್ರಯುಕ್ತವೇ ನಮಗೆ ಗ್ರಹ ಎಂದು ಹೆಸರು ಬಂದಿರುವುದು. ಆದುದರಿಂದ ಕೊಡಲಿಕ್ಕೆ ಆಗದ ವರವನ್ನು ಕೇಳಿದವನಾಗಿರುವಿ. ಆದರೂ ಯುಕ್ತವಾದ ಒಂದು ವರವನ್ನು ಕೊಡುವೆನು. ನೀನು ಹೇಳಿರುವ ಸ್ತೋತ್ರವನ್ನು ಯಾವ ಮನುಷ್ಯನು ಹೇಳುವನೋ ನಿತ್ಯವೂ ಒಂದು ಬಾರಿಯೋ ಎರಡು ಬಾರಿಯೋ ಹೇಳುವನೋ ಅವನು ಪೀಡಾರಹಿತನಾಗುವನು. ದೇವಾಸುರ ಮನುಷ್ಯ ಸಿದ್ಧರಾಕ್ಷಸರಿಗೆ ಜನ್ಮರಾಶಿಯಲ್ಲಿ ಚತುರ್ಥರಾಶಿಯಲ್ಲಿ ಇದ್ದುಕೊಂಡು ಮರಣವನ್ನು ಕೊಡುವೆನು. ಯಾರು ಶ್ರದ್ಧೆಯುಳ್ಳವನಾಗಿ ಶುಚಿಯಾಗಿ ನನ್ನ ಲೋಹದ ಪ್ರತಿಮೆಯನ್ನು ಶಮೀಪತ್ರಗಳಿಂದ ಪೂಜಿಸಿ ಉದ್ದಿನಿಂದ ಮಿಶ್ರವಾದ ಎಳ್ಳಿನಿಂದ ಯುಕ್ತವಾದ ಅನ್ನವನ್ನು ಲೋಹವನ್ನೂ ಕಪ್ಪಾದ ಗೋವನ್ನೋ ವೃಷಭವನ್ನೋ ಬ್ರಾಹ್ಮಣನಿಗೆ ದಾನ ಮಾಡುವನೋ ನನ್ನ ದಿವಸದಲ್ಲಿ ಅಂದರೆ ಶನಿವಾರದಲ್ಲಿ ವಿಶೇಷವಾಗಿ ಈ ಸ್ತೋತ್ರದಿಂದ ಪೂಜಿಸುವನೋ ಪೂಜಾ ಮಾಡಿ ಸ್ತೋತ್ರ ಮಾಡಿ ಕೈಮುಗಿಯುವನೋ ಅವನಿಗೆ ನಾನು ಯಾವಾಗಲೂ ಪೀಡೆಯನ್ನು ಉಂಟುಮಾಡಲಾರೆನು.

ಗೋಚರದಲ್ಲಿಯೂ ಜನ್ಮಲಗ್ನದಲ್ಲಿಯೂ ದಶೆಗಳಲ್ಲಿ ಅಂತರ್ದಶಿಗಳಲ್ಲಿಯೂ ಅವನ ಪೀಡೆಯನ್ನು ಪರಿಹರಿಸಿ ಯಾವಾಗಲೂ ರಕ್ಷಿಸುವೆನು. ಈರೀತಿಯಾಗಿ ಮಾಡಿ ಜಗತ್ತೂ ಪೀಡೆಯಿಂದ ರಹಿತವಾಗುವುದು. ಈಪ್ರಕಾರವಾಗಿ ಯುಕ್ತಿಯಿಂದ ನಿನಗೆ ವರವನ್ನು ಕೊಟ್ಟಿರುವೆನು' ಎಂದು ಹೇಳಿದನು.

ದಶರಥರಾಜನು ಮೂರು ವರಗಳನ್ನು ಪಡೆದು ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು. ಶನಿಗೆ ನಮಸ್ಕರಿಸಿ ಅವನ ಅನುಜ್ಞೆಯನ್ನು ಪಡೆದು ರಥವನ್ನು ಏರಿ ವೇಗದಿಂದ ತನ್ನ ಸ್ಥಾನಕ್ಕೆ ಬಂದನು. ಶ್ರೇಯಸ್ಸನ್ನು ಹೊಂದಿದನು. ಶನಿವಾರದಲ್ಲಿ ಬೆಳಿಗ್ಗೆ ಎದ್ದು ದಶರಥರಾಜನು ಮಾಡಿರುವ ಶನಿ ಸ್ತೋತ್ರವನ್ನು ಹೇಳಿದರೂ ಕೇಳಿದರೂ ಪಾಪವು ಪರಿಹೃತವಾಗುವುದು. ಆಯುಷ್ಯವು ಹೆಚ್ಚುವುದು. ಸರ್ವಪೀಡೆಯೂ ಹೋಗುವುದು.

## ಶನಿಸ್ತೋತ್ರವು

**ದಶರಥ ಉವಾಚ ॥**

**ನಮಃ ಕೃಷ್ಣಾಯ ನೀಲಾಯ ಶಿತಿಕಂಠನಿಭಾಯ ಚ ।**
**ನಮಃ ಕಾಲಾಗ್ನಿರೂಪಾಯ ಕೃತಾಂತಾಯ ಚ ವೈ ನಮಃ ॥**
**ನಮೋ ನಿರ್ಮಾಂಸದೇಹಾಯ ದೀರ್ಘಶ್ಮಶ್ರುಜಟಾಯ ಚ ।**
**ನಮೋ ವಿಶಾಲನೇತ್ರಾಯ ಶುಷ್ಕೋದರ ಭಯಾಕೃತೇ ॥**
**ನಮಃ ಪುಷ್ಕಲಗಾತ್ರಾಯ ಸ್ಥೂಲರೋಮ್ಣೇ ಚ ವೈ ನಮಃ ।**
**ಸಮೋ ದೀರ್ಘಾಯ ಶುಷ್ಕಾಯ ಕಾಲದಂಷ್ಟ್ರ ನಮೋಽಸ್ತುತೇ ॥**
**ನಮಸ್ತೇ ಕೋಟರಾಕ್ಷಾಯ ದುರ್ನಿರಿಕ್ಷ್ಯಾಯ ವೈ ನಮಃ ।**
**ನಮೋ ಘೋರಾಯ ರೌದ್ರಾಯ ಭೀಷಣಾಯ ಕರಾಲಿನೇ ॥**
**ನಮಸ್ತೇ ಸರ್ವಭಕ್ಷ್ಯಾಯ ಬಲೀಮುಖ ನಮೋಽಸ್ತುತೇ ।**
**ಸೂರ್ಯಪುತ್ರ ನಮಸ್ತೇಽಸ್ತು ಭಾಸ್ಕರೇಭಯದಾಯ ಚ ॥**
**ಅಧೋದೃಷ್ಟೇ ನಮಸ್ತೇಽಸ್ತು ಸಂವರ್ತಕ ನಮೋಽಸ್ತುತೇ ॥**
**ತಪಸಾ ದಗ್ಧದೇಹಾಯ ನಿತ್ಯಂ ಯೋಗರತಾಯ ಚ ।**
**ನಮೋ ನಿತ್ಯಂ ಕ್ಷುಧಾರ್ತಾಯ ಅತೃಪ್ತಾಯ ಚ ವೈ ನಮಃ ॥**
**ಜ್ಞಾನಚಕ್ಷುರ್ನಮಸ್ತೇಽಸ್ತು ಕಶ್ಯಪಾತ್ಮಜಸೂನವೇ ।**
**ತುಷ್ಟೋ ದದಾಸಿ ವೈ ರಾಜ್ಯಂ ರುಷ್ಟೋ ಹರಸಿ ತತ್‌ಕ್ಷಣಾತ್ ॥**
**ದೇವಾಸುರಮನುಷ್ಯಾಶ್ಚ ಸಿದ್ಧವಿದ್ಯಾಧರೋರಗಾಃ ।**
**ತ್ವಯಾ ವಿಲೋಕಿತಾಃ ಸರ್ವೇ ನಾಶಂ ಯಾಂತಿ ಸಮೂಲತಃ ॥**
**ಪ್ರಸಾದಂ ಕುರು ಮೇ ದೇವ ವರಾರ್ಹೋಹಮುಪಾಗತಃ ॥**

ಪದ್ಮ ಪುರಾಣ(ಉತ್ತರಖಂಡ)ಅ.34

# ಭೂಗೋಳ-ಜಂಬೂದ್ವೀಪವು [1]

ಭೂಮಿಯ ಮಧ್ಯದಲ್ಲಿ ಜಂಬೂದ್ವೀಪವಿರುವುದು. ಅದು ತುಂಬಾ ವಿಸ್ತಾರ ವಿರುವುದು. ಇದರಲ್ಲಿ ಒಂಬತ್ತು ವರ್ಷಗಳು ಇರುವುವು. ನವವರ್ಷಗಳಿಂದ ಕೂಡಿದ ಈ ದ್ವೀಪವು ಲವಣ ಸಾಗರದ ಮಧ್ಯದಲ್ಲಿ ಇರುವುದು. ಇದರ ಮಧ್ಯದಲ್ಲಿ ಇಲಾವೃತ ಎಂಬ ಖಂಡ ಇರುವುದು. ಅದರ ಮಧ್ಯದಲ್ಲಿ ಬಂಗಾರದ ಮೇರು ಪರ್ವತವಿರುವುದು. ಜಂಬೂದ್ವೀಪವು ಒಂದು ಲಕ್ಷ ಯೋಜನೆ ವಿಶಾಲವಿರುವುದು. ಮೇರು ಪರ್ವತವು ಲಕ್ಷ ಯೋಜನ ಎತ್ತರವಾಗಿದೆ. ಅದರಲ್ಲಿ ಹದಿನಾರು ಸಾವಿರ ಯೋಜನ ಭೂಮಿಯೊಳಗೆ ಪ್ರವಿಷ್ಟವಾಗಿರುವುದು. ಮೇಲೆ ಎಂಬತ್ತನಾಲ್ಕು ಸಾವಿರ ಯೋಜನ ಎತ್ತರವಿರುವುದು. ಅದರ ಬುಡವು ಹದಿನಾರು ಸಾವಿರ ಯೋಜನ ವಿಶಾಲವಾಗಿರುವುದು. ಮೇಲೆ ಮೂವತ್ತೆರಡು ಸಾವಿರ ಯೋಜನ ವಿಶಾಲ ವಾಗಿರುವುದು. (ಅಂದರೆ ಕೊಡೆಯಂತೆ ಇರುವುದು) ಇಲಾವೃತ ಖಂಡವು ಹದಿ ನೆಂಟು ಸಾವಿರ ಯೋಜನ ವಿಶಾಲವಾಗಿರುವುದು. ಇಲಾವೃತಖಂಡದ ಉತ್ತರದಲ್ಲಿ ರಮ್ಯಕ, ಹಿರಣ್ಮಯ, ಕುರು ಎಂಬ ಖಂಡಗಳು ಒಂದೊಂದು ಒಂಭತ್ತು ಸಾವಿರ ಯೋಜನ ವಿಶಾಲವಾಗಿರುವುವು. ಇವುಗಳ ಮಧ್ಯದಲ್ಲಿ ನೀಲ, ಶ್ವೇತ, ಶೃಂಗವಾನ್ ಎಂಬ ಎರೆಡೆರಡು ಸಾವಿರ ಯೋಜನ ವಿಶಾಲವುಳ್ಳ ಪರ್ವತಗಳಿರುವುವು.

ಆ ಪರ್ವತಗಳ ಪೂರ್ವಪಶ್ಚಿಮಗಳಲ್ಲಿ ಉಪ್ಪುನೀರಿನ ಸಮುದ್ರದವರೆಗೆ ಇರುವುವು. ಹಾಗೆಯೇ ಇಲಾವೃತ ಖಂಡದಿಂದ ದಕ್ಷಿಣದಿಕ್ಕಿನಲ್ಲಿ ಹರಿವರ್ಷ, ಕಿಂಪುರುಷ, ಭಾರತ ವರ್ಷಗಳು ಒಂದೊಂದೂ ಒಂಬತ್ತು ಸಾವಿರ ಯೋಜನಗಳಾಗಿ ಇರುವುವು. ಅವುಗಳ ಮಧ್ಯದಲ್ಲಿ ನಿಷಧ ಹೇಮಕೂಟ, ಹಿಮಾಲಯ ಪರ್ವಗಳು ಒಂದೊಂದೂ ಎರಡು ಸಾವಿರ ಯೋಜನ ವಿಶಾಲಗಳಾಗಿರುವುವು. ಒಟ್ಟಿಗೆ ಜಂಬೂ ದ್ವೀಪವು ಉತ್ತರದಿಂದ ದಕ್ಷಿಣಕ್ಕೆ ಲಕ್ಷ ಯೋಜನ ದೂರವಿರುವುದು. ರಮ್ಯಕ, ಹಿರಣ್ಮಯ, ಕುರು ವರ್ಷಗಳು ಒಂಭೊತ್ತೊಂಬತ್ತು ಯೋಜನಗಳಾಗಿರುವುವು. ಒಟ್ಟಿಗೆ ಇಪ್ಪತ್ತೇಳು ಸಾವಿರ ಯೋಜನಗಳು. ಮಧ್ಯದಲ್ಲಿ ಇಲಾವೃತಖಂಡವು ಹದಿ ನೆಂಟು ಸಾವಿರಯೋಜನ ಒಟ್ಟಿಗೆ ನಲವತ್ತೈದು ಸಾವಿರ ಯೋಜನಗಳು. ಹರಿವರ್ಷ, ಕಿಂಪುರುಷ, ಭಾರತ ವರ್ಷಗಳು ಒಂಭತ್ತೊಂಬತ್ತು ಯೋಜನಗಳು ಒಟ್ಟಿಗೆ ಇಪ್ಪತ್ತೇಳು ಸಾವಿರ ಯೋಜನೆಗಳು, ಒಟ್ಟಿಗೆ ಇಪ್ಪತ್ತೆರಡು ಸಾವಿರ ಯೋಜನ ಗಳಾದವು.

1. ಭಾಗ. V-16

ಮೇರುಪರ್ವತವು ಹದಿನಾರು ಸಾವಿರ ಯೋಜನಗಳು ಆಗ ಎಂಭತ್ತೆಂಟು ಸಾವಿರ ಯೋಜನಗಳಾದವು. ನೀಲ, ಶ್ವೇತ, ಶೃಂಗವರ್ಷ, ನಿಷಧ, ಹೇಮಕೂಟ, ಹಿಮಾಲಯ ಎಂಬ ಆರು ಪರ್ವತಗಳು ಒಂದೊಂದೂ ಎರಡು ಸಾವಿರ ಯೋಜನಗಳು. ಒಟ್ಟಿಗೆ ಹನ್ನೆರಡು ಸಾವಿರ ಯೋಜನಗಳು. ಒಟ್ಟಿಗೆ ನೂರು ಸಾವಿರ ಅಂದರ ಲಕ್ಷ ಯೋಜನಗಳಾದವು. ಈ ಪರ್ವತಗಳಲ್ಲಿ ನೀಲ ಮತ್ತು ನಿಷಧ ಎಂಬ ಪರ್ವತಗಳು ಲಕ್ಷಯೋಜನ ಉದ್ದವಾಗಿರುವುವು. ಶ್ವೇತ, ಹೇಮಕೂಟ ಎಂಬ ಪರ್ವತಗಳು ತೊಂಭತ್ತುಸಾವಿರ ಯೋಜನ ಉದ್ದವಾಗಿರುವುವು. ಶೃಂಗವಾನ್, ಹಿಮಾಲಯ ಪರ್ವತಗಳು ಎಂಭತ್ತೆಂಟು ಸಾವಿರ ಯೋಜನ ಉದ್ದವಾಗಿರುವುವು. ಇಲಾವೃತ ಖಂಡದ ಪಶ್ಚಿಮದಲ್ಲಿ ಕೇತುಮಾಲ ಎಂಬ ಖಂಡವು ಇರುವುದು. ಅದು ಮೂವತ್ತೊಂದು ಸಾವಿರ ಯೋಜನ ವಿಶಾಲವಾಗಿರುವುದು. ಪೂರ್ವದಿಕ್ಕಿನಲ್ಲಿ ಭದ್ರಾಶ್ವ ವರ್ಷವಿರುವುದು. ಅದೂ ಮೂವತ್ತ ಒಂದು ಸಾವಿರ ಯೋಜನ ವಿಶಾಲವಾಗಿರುವುದು. ಒಟ್ಟಿಗೆ ಅರವತ್ತ ಎರಡು ಸಾವಿರ ಯೋಜನ ವಿಶಾಲವಾಗಿರುವುವು. ಇಲಾವೃತ ವರ್ಷಕ್ಕೂ ಕೇತುಮಾಲ ಖಂಡಕ್ಕೂ ಮಧ್ಯದಲ್ಲಿ ಶೃಂಗವಾನ್ ಎಂಬ ಪರ್ವತವು ಎರಡು ಸಾವಿರ ಯೋಜನ ವಿಶಾಲವಾಗಿರುವುದು. ಇಲಾವೃತ ವರ್ಷಕ್ಕೂ ಭದ್ರಾಶ್ವವರ್ಷಕ್ಕೂ ಮಧ್ಯದಲ್ಲಿ ಗಂಧಮಾದನ ಎಂಬ ಪರ್ವತವು ಎರಡು ಸಾವಿರ ಯೋಜನ ವಿಶಾಲವಿರುವುದು. ಒಟ್ಟಿಗೆ ಎರಡು ಪರ್ವತಗಳು ನಾಲ್ಕು ಸಾವಿರ ಯೋಜನಗಳು. ಒಟ್ಟಿಗೆ ಅರವತ್ತ ಆರು ಸಾವಿರ ಯೋಜನವಾದರು. ಅದಕ್ಕೆ ಇಲಾವೃತ ವರ್ಷ ಹದಿನೆಂಟು ಸಾವಿರ ಯೋಜನವು ಸೇರಿದರೆ ಎಂಭತ್ತನಾಲ್ಕು ಸಾವಿರ ಯೋಜನವಾಯಿತು.

ಇನ್ನು ಮೇರುಪರ್ವತದ ಹದಿನಾರು ಸಾವಿರ ಯೋಜನವು ಸೇರಿದರೆ ನೂರುಸಾವಿರ ಅಂದರೆ ಲಕ್ಷ ಯೋಜನವಾಗುವುದು. ಮಾಲ್ಯವಾನ್ ಗಂಧಮಾದನ ಎಂಬ ಪರ್ವತಗಳು ನೀಲಪರ್ವದಿಂದ ನಿಷಧ ಪರ್ವತದವರೆಗೆ ಇರುವುವು ಅಂದರೆ ಮೂವತ್ತನಾಲ್ಕು ಸಾವಿರ ಯೋಜನ ಉದ್ದವಾಗಿರುವುವು. (ಹದಿನೆಂಟು ಸಾವಿರ ಯೋಜಜನ ಇಲಾವೃತ ವರ್ಷ ಹದಿನಾರು ಸಾವಿರ ಯೋಜನ ಮೇರುಪರ್ವತ ಒಟ್ಟಿಗೆ ಸೇರಿ ಮೂವತ್ತನಾಲ್ಕು ಸಾವಿರ ಯೋಜನಗಳು) ಎಂಟು ಪರ್ವತಗಳೂ ಹತ್ತುಸಾವಿರ ಯೋಜನ ಎತ್ತರವಾಗಿರುವುವು. ಮೇರುಪರ್ವತದ ಸುತ್ತಲೂ ಮಂದರ ಮೇರುಮಂದರ ಸುಪಾರ್ಶ್ವ ಕುಮುದ ಎಂದು ಹೆಸರುಳ್ಳ ಹತ್ತುಸಾವಿರ ಯೋಜನ ವಿಸ್ತಾರವಾದ ಪೀಠದಂತೆ ಇರುವ ಪರ್ವತಗಳು ಇರುವುವು.

ಈ ನಾಲ್ಕು ಪರ್ವತಗಳಲ್ಲಿ ಮಾವಿನಮರವೂ ಜಂಬುನೇರಳೆ ಮರವೂ ಕದಂಬ ಎಂಬ ಮರವೂ ಆಲದಮರವೂ ಎಂಬ ನಾಲ್ಕು ಮರಗಳು ಪರ್ವತಗಳ ಧ್ವಜಸ್ತಂಭದಂತೆ ಇರುವುವು. ಅವುಗಳು ಸಾವಿರ ನೂರು ಯೋಜನ ವಿಸ್ತಾರವಾಗಿರುವುವು. ಸಾವಿರದ ನೂರು ಕೊಂಬೆಗಳಿಂದ ಯುಕ್ತವಾಗಿರುವುವು. ಸುತ್ತಲೂ ನೂರು ಯೋಜನ ದಪ್ಪವಾಗಿರುವುವು. ಹಾಲು, ಜೇನುತುಪ್ಪ, ಕಬ್ಬಿನ ರಸ, ಶುದ್ಧನೀರಿನ ನಾಲ್ಕು ಮಡುಗಳು ಇರುವುವು. ಅಲ್ಲಿಯ ನೀರನ್ನು ಸ್ವೀಕರಿಸುವ ಗಂಧರ್ವರು ಸ್ವಾಭಾವಿಕ ಅಣಿಮಾದಿ ಐಶ್ವರ್ಯವನ್ನು ಹೊಂದಿರುವರು. ನಂದನ, ಚೈತ್ರರಥ, ವೈಭ್ರಾಜಕ, ಸರ್ವತೋಭದ್ರ ಎಂಬ ನಾಲ್ಕು ದೇವತೆಗಳ ಉದ್ಯಾನಗಳು ಇರುವುವು. ಅಲ್ಲಿ ದೇವತೆಗಳು ಗಂಧರ್ವರಿಂದ ಗಾಯನ ಮಾಡಲ್ಪಡುತ್ತಾ ದೇವತಾಸ್ತ್ರೀಯರಿಂದ ಕೂಡಿಕೊಂಡು ವಿಹಾರ ಮಾಡುತ್ತಿರುವರು.

ಮಂದರ ಪರ್ವತದ ಮಧ್ಯದಲ್ಲಿ ಸಾವಿರದ ನೂರು ಯೋಜನ ವಿಸ್ತಾರವಾದ ದೇವತೆಗಳು ಉಪಭೋಗಿಸುವ ಮಾವಿನ ಮರದ ಕೊನೆಯಿಂದ ಪರ್ವತದ ಶಿಖರದಷ್ಟು ದೊಡ್ಡದಾದ ಅಮೃತದಂತೆ ಇರುವ ಹಣ್ಣುಗಳು ಕೆಳಗೆ ಬೀಳುವುವು. ಆ ಹಣ್ಣುಗಳು ಒಡೆದು ಹೋಗಿ ಅವುಗಳ ಅತಿ ಸಿಹಿಯಾದ ವಾಸನೆಯುಳ್ಳ ಕೆಂಪಾದ ರಸದಿಂದ ಅರುಣೋದ ಎಂಬ ನದಿಯು ಮಂದರಪರ್ವತದ ಶಿಖರಿಂದ ಕೆಳಗೆ ಬೀಳುತ್ತಾ ಪೂರ್ವದಲ್ಲಿ ಇಲಾವೃತಖಂಡದಲ್ಲಿ ಹರಿಯುತ್ತಾ ಹೋಗುತ್ತಿರುವುದು. ಅದರ ನೀರನ್ನು ಸೇವಿಸುವುದರಿಂದ ಪಾರ್ವತೀದೇವಿಯರ ಸೇವಕಿಯರಾದ ಅಸುರಸ್ತ್ರೀಯರ ಮೈಯ ಸುವಾಸನೆಯುಳ್ಳ ಗಾಳಿಯು ಸುತ್ತಲೂ ಹತ್ತು ಯೋಜನದ ವರೆಗೆ ಬೀಸುತ್ತಿರುವುದು.

ಇದೇ ರೀತಿಯಾಗಿ ಜಂಬೂನೇರಳೆ ಮರದಿಂದಲೂ ಆನೆಯ ತಲೆಯಷ್ಟು ದೊಡ್ಡದಾಗಿರುವ ತುಂಬಾ ಬೀಜಗಳಿಂದ ರಹಿತಗಳಾದ ಹಣ್ಣುಗಳು ಬಹಳ ಎತ್ತರದಿಂದ ಕೆಳಗೆ ಬಿದ್ದು ಅವುಗಳ ರಸದಿಂದ ಜಂಬೂನದಿಯೆಂಬ ನದಿಯು ಮೇರುಮಂದರ ಪರ್ವತ ಶಿಖರದಿಂದ ಹತ್ತುಸಾವಿರ ಯೋಜನ ಎತ್ತರದಿಂದ ಭೂಮಿಗೆ ಇದ್ದು ಇಳಾವೃತಖಂಡದಲ್ಲಿ ದಕ್ಷಿಣದಿಕ್ಕಿನಲ್ಲಿ ಹರಿಯುವುದು. ಆ ನದಿಯ ಎರಡು ತೀರದಲ್ಲಿಯೂ ಇರುವ ಮಣ್ಣು ಆ ಹಣ್ಣಿನ ರಸದಿಂದ ಮಿಶ್ರವಾಗಿ ಗಾಳಿಯ ಸೂರ್ಯನ ಬಿಸಿಲಿನ ಸಂಬಂಧದಿಂದ ಯಾವಾಗಲೂ ದೇವಲೋಕಕ್ಕೆ ಆಭರಣ ಭೂತವಾದ ಜಾಂಬೂನದವೆಂಬ ಬಂಗಾರವಾಗುವುದು. ಅದನ್ನೇ ದೇವತೆಗಳು ತಮ್ಮ ಸ್ತ್ರೀಯರಿಂದ ಸಹಿತರಾಗಿ ಕಿರೀಟ ಇತ್ಯಾದಿ ಆಭರಣರೂಪದಿಂದ ಧರಿಸುವರು.

ಸುಪಾರ್ಶ್ವ ಪರ್ವತದಲ್ಲಿರುವ ಕದಂಬ(ಬೈನೆ) ಎಂಬ ಮರದ ಪೊಂದುಗಳಿಂದ ಐದು ವ್ಯಾಮ(ಮೊಳ) ವಿಶಾಲಗಳಾದ ಮದ್ಯದ ಧಾರೆಗಳು ಸುಪಾರ್ಶ್ವಶಿಖರದಿಂದ ಕೆಳಗೆ ಬಿದ್ದು ಪಶ್ಚಿಮದಿಕ್ಕಿನಲ್ಲಿ ಇಲಾವೃತ ಖಂಡದಲ್ಲಿ ಹರಿಯುತ್ತವೆ. ಆ ಮದ್ಯವನ್ನು ಸೇವಿಸುವವರ ಮುಖದ ಗಾಳಿಯು ನೂರು ಯೋಜನದೂರದವರೆಗೆ ವಾಸನೆಯನ್ನು ಉಂಟುಮಾಡುವುದು. ಕುಮುದಪರ್ವತ ದಲ್ಲಿ ಶತವಲಶ ಎಂಬ ಆಲದಮರವಿರುವುದಷ್ಟೆ. ಅದರ ಕೊಂಬೆಗಳಿಂದ ಹಾಲು ಮೊಸರು ತುಪ್ಪ ಜೇನು ಬೆಲ್ಲ ವಸ್ತ್ರ ಆಭರಣ ಇತ್ಯಾದಿಗಳ ನದಿಗಳು ಕುಮುದ ಪರ್ವತದಿಂದ ಕೆಳಗೆ ಬೀಳುತ್ತಾ ಉತ್ತರದಿಕ್ಕಿನಲ್ಲಿ ಇಲಾವೃತ ಖಂಡದಲ್ಲಿ ಹರಿಯುತ್ತವೆ. ಆ ನದಿಗಳನ್ನು ಸೇವಿಸುವ ಪ್ರಜೆಗಳಿಗೆ ತಲೆಬೆಳ್ಳಗುವುದು, ನೆರಿಯಾಗುವುದು, ಬೆವರುವುದು, ಕಂಪು ಬರುವುದು, ಮರಣ, ಛಳಿ ಇತ್ಯಾದಿ ಉಪದ್ರಗಳೊಂದೂ ಉಂಟಾಗುವುದಿಲ್ಲ. ಬದುಕಿರುವವರೆಗೆ ಸಂತೋಷವೇ ಇರುವುದು.

ಮೇರುಪರ್ವತದ ಬುಡದಲ್ಲಿ ಸುತ್ತಲೂ ಕುರಂಗ, ಕುರರ, ಕುಸುಂಭವ, ಕಂಕತ, ತ್ರಿಕೂಟ, ಶಿಶಿರ, ಪತಂಗ, ರುಚಕ, ನಿಷಧ, ಶಿತಿವಾಸ, ಕಪಿಲ, ಶಂಖ, ವೈದೂರ್ಯ, ಜಾರುಧಿ, ಹಂಸ, ಋಷಭ, ನೀರ, ನಾಗ, ಕಾಲಂಜರ, ನಾರದ ಇತ್ಯಾದಿ ಹೆಸರುಳ್ಳ ಚಿಕ್ಕಚಿಕ್ಕ ಪರ್ವತಗಳು ಪದ್ಮದ ಗೊಂಡೆಯ ಸುತ್ತಲೂ ಕೇಸರಗಳಂತೆ ಇರುವುವು. ಮೇರುಪರ್ವತದ ಪೂರ್ವ ದಿಕ್ಕಿನಲ್ಲಿ ಜಠರ ದೇವಕೂಟ ಎಂಬ ಪರ್ವತಗಳು ಮೇರುವಿನಿಂದ ಹದಿನೆಂಟು ಸಾವಿರ ಯೋಜನ ದೂರದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಇರುವುವು. ಅವು ಎರಡು ಸಾವಿರ ಯೋಜನ ಎತ್ತರವಾಗಿರುವುವು. ಹಾಗೆಯೇ ಪಶ್ಚಿಮದಿಕ್ಕಿನಲ್ಲಿ ಪವನ ಪಾರಿಯಾತ್ರ ಎಂಬ ಪರ್ವತಗಳೂ ಇರುವುವು. ದಕ್ಷಿಣದಿಕ್ಕಿನಲ್ಲಿ ಕೈಲಾಸ ಕರವೀರ ಎಂಬ ಪರ್ವತಗಳು ಪೂರ್ವದಿಂದ ಪಶ್ಚಿಮಕ್ಕೆ ಇರುವುವು. ಹಾಗೆಯೇ ಉತ್ತರದಲ್ಲಿ ಶೃಂಗ ಮಕರ ಎಂಬ ಪರ್ವತಗಳೂ ಇರುವುವು. ಮೇರುಪರ್ವತದ ಪೂರ್ವದಲ್ಲಿ ಇರುವ ಮಂದರ ಪರ್ವತದ ಪೂರ್ವಭಾಗದಲ್ಲಿ ಜಠರ, ದೇವಕೂಟ ಪರ್ವತಗಳು ಇರುವುವು. ಪಶ್ಚಿಮದಲ್ಲಿ ಇರುವ ಸುಪಾರ್ಶ್ವಪರ್ವತದ ಪಶ್ಚಿಮದಲ್ಲಿ ಪವನ ಪಾರಿಯಾತ್ರ ಎಂಬ ಪರ್ವತಗಳಿರುವುವು. ದಕ್ಷಿಣದಲ್ಲಿರುವ ಮೇರು ಮಂದರಪರ್ವತದ ದಕ್ಷಿಣದಲ್ಲಿ ಕೈಲಾಸ ಕರವೀರ ಪರ್ವತಗಳಿರುವುವು. ಉತ್ತರದಲ್ಲಿರುವ ಕುಮುದಪರ್ವತದ ಉತ್ತರದಲ್ಲಿ ಶೃಂಗ ಮಕರ ಎಂಬ ಪರ್ವತಗಳಿರುವುವು. ಈ ರೀತಿಯಾಗಿ

ಬಂಗಾರಮಯವಾದ ಪರ್ವತವು ಸುತ್ತಲೂ ಎಂಟು ಪರ್ವತಗಳಿಂದ ಸಹಿತವಾಗಿ ಸುತ್ತಲೂ ದರ್ಭೆಯ ಪರಿಸರಣದಿಂದ ಕೂಡಿದ ಅಗ್ನಿಯಂತೆ ಪ್ರಕಾಶಿಸುವುದು. ಆ ಪರ್ವತಗಳು ಒಂದೊಂದೂ ಎರಡು ಸಾವಿರ ಯೋಜನ ಎತ್ತರವಿರುವುವು. ಮೇರುಪರ್ವತದ ಮೇಲಿನ ಭಾಗದಲ್ಲಿ ಮಧ್ಯದಲ್ಲಿ ಬ್ರಹ್ಮದೇವರ ಬಂಗಾರಮಯ ವಾದ ಹತ್ತುಸಾವಿರ ಯೋಜನ ವಿಶಾಲವಾದ ಚೌಕವಾಗಿರುವ ಶತಕೋಟಿಯೆಂಬ ಪುರವಿರುವುದು. ಅದರ ಸುತ್ತಲೂ ಅಷ್ಟದಿಕ್ಪಾಲಕರಿಗೆ ಅವರವರ ದಿಕ್ಕಿನಲ್ಲಿ ಪಟ್ಟಣ ವಿರುವುದು. ಆ ಪಟ್ಟಣಗಳು ಎರಡುವರೆ ಸಾವಿರ ಯೋಜನ ವಿಶಾಲವಾಗಿರುವುವು.



## ಪ್ಲಕ್ಷಾದಿದೀಪಗಳು [1]

ಜಂಬೂದ್ವೀಪದ ಸುತ್ತಲೂ ಒಂದು ಲಕ್ಷಯೋಜನ ವಿಸ್ತಾರವಾದ ಉಪ್ಪುನೀರಿನ ಸಮುದ್ರವಿರುವುದು. ಆ ಸಮುದ್ರದ ಸುತ್ತಲೂ ಎರಡು ಲಕ್ಷ ಯೋಜನ ವಿಸ್ತಾರವಾದ ಪ್ಲಕ್ಷದ್ವೀಪವಿರುವುದು. ಆ ದ್ವೀಪದಲ್ಲಿ ಪ್ಲಕ್ಷವೆಂಬ ಮರವಿರುವುದು. ಜಂಬೂದ್ವೀಪ ದಲ್ಲಿರುವ ಜಂಬೂವೃಕ್ಷದಂತೆ ಹನ್ನೊಂದು ಸಾವಿರ ಯೋಜನ ಎತ್ತರವಿರುವುದು. ಅಲ್ಲಿ ಏಳು ನಾಲಿಗೆಯುಳ್ಳ ಅಗ್ನಿದೇವರು ಇರುವರು. ಆ ಪ್ಲಕ್ಷದ್ವೀಪಕ್ಕೆ ಪ್ರಿಯವ್ರತ ರಾಜನ ಮಗನಾದ ಇಧ್ಮಜಿಹ್ವನು ರಾಜನಾಗಿರುವನು. ಅವನು ಆ ದ್ವೀಪವನ್ನು ಏಳು ವರ್ಷಗಳನ್ನಾಗಿ ವಿಭಾಗಮಾಡಿರುವನು. ಆ ವರ್ಷಗಳನ್ನು ಅದೇ ಹೆಸರುಳ್ಳ ತನ್ನ ಏಳು ಜನ ಮಕ್ಕಳಿಗೆ ಕೊಟ್ಟಿರುವನು. ಆ ಮಕ್ಕಳ ಹೆಸರು ಶಿವ, ಯಶಸ್ಯ, ಸುಭದ್ರ, ಶಾಂತ, ಕ್ಷೇಮ, ಅಮೃತ, ಅಭಯ ಎಂದು. ಇಧ್ಮಜಿಹ್ವನು ಮಕ್ಕಳಿಗೆ ವರ್ಷಗಳನ್ನು ಒಪ್ಪಿಸಿ ತಾನು ಪರಮಾತ್ಮನ ಧ್ಯಾನದಲ್ಲಿ ಆಸಕ್ತನಾಗಿದ್ದನು. ಆ ದ್ವೀಪದಲ್ಲಿ ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ, ಮೇಘಮಾಲ ಎಂದು ಏಳು ಪರ್ವತಗಳೂ ಅರುಣಾ, ಅನುಗುಣಾ, ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ ಎಂಬ ಏಳು ನದಿಗಳೂ ಇರುವುವು. ಆ ನದಿಗಳ ನೀರಿನಲ್ಲಿ ಸ್ನಾನಾದಿಗಳನ್ನು ಮಾಡಿ ಪವಿತ್ರರಾದ ಹಂಸ, ಪತಂಗ, ಗೋಧ್ಯಾಯನ, ಸತ್ಯಾಂಗ ಎಂದು ಹೆಸರುಳ್ಳ ನಾಲ್ಕು ಜಾತಿಯವರಾದ ಜನರು ಸಾವಿರ ವರ್ಷ ಆಯುಷ್ಯವುಳ್ಳವರು ದೇವತೆಗಳಂತೆ ಕಾಣಿಸುವವರಾಗಿ ಸೂರ್ಯದೇವರಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಪೂಜಿಸುತ್ತಿರುವರು.

1. ಭಾಗ. V-20

ಪ್ಲಕ್ಷದ್ವೀಪವೇ ಮೊದಲಾದ ಐದು ದ್ವೀಪಗಳಲ್ಲಿ ಇರುವ ಪುರುಷರಿಗೆ ಆಯುಷ್ಯವೂ ಇಂದ್ರಿಯ ಸಾಮರ್ಥ್ಯವೂ ದೇಹಾದಾರ್ಢ್ಯವೂ ಇತ್ಯಾದಿಗಳೆಲ್ಲವೂ ಒಂದೇ ರೀತಿಯಾಗಿ ಇರುವುವು. ಪ್ಲಕ್ಷದ್ವೀಪದ ಸುತ್ತಲೂ ಎರಡು ಲಕ್ಷ ಯೋಜನ ವಿಸ್ತಾರವಾದ ಕಬ್ಬಿನ ರಸದ ಸಮುದ್ರವಿರುವುದು. ಅದರ ಸುತ್ತಲೂ ನಾಲ್ಕು ಲಕ್ಷ ಯೋಜನ ವಿಸ್ತಾರವುಳ್ಳ ಶಾಲ್ಮಲದ್ವೀಪವಿರುವುದು. ಅದರಲ್ಲಿ ಜಂಬೂವೃಕ್ಷಕ್ಕಿಂತ ಒಂದೂವರೆಪಾಲು ಇರುವ ಅಂದರೆ ಹದಿನಾರು ಸಾವಿರದ ಐನೂರು ಯೋಜನ ವಿಶಾಲವಾದ ಶಾಲ್ಮಲವೃಕ್ಷವಿರುವುದು. ಅಲ್ಲಿ ವೇದದಿಂದ ಸ್ತುತ್ಯರಾದ ಪಕ್ಷಿರಾಜರಾದ ಗರುಡದೇವರ ವಾಸಸ್ಥಾನವಿರುವುದು. ಆ ದ್ವೀಪಕ್ಕೆ ಪ್ರಿಯವ್ರತ ರಾಜನ ಮಗನಾದ ಯಜ್ಞಬಾಹುವು ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹ, ವಾರಿಭದ್ರ, ಆಪ್ಯಾಯನ, ಅಭಿಜಾತ ಎಂದು ಹೆಸರುಳ್ಳ ತನ್ನ ಏಳು ಮಕ್ಕಳಿಗೆ ಅದೇ ಹೆಸರುಳ್ಳ ಏಳು ವರ್ಷಗಳನ್ನು ವಿಭಾಗಮಾಡಿಕೊಟ್ಟಿರುವನು. ಆ ವರ್ಷದಲ್ಲಿ ಸುರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಶ್ರುತಿ ಎಂಬ ಏಳು ಪರ್ವತಗಳೂ ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ ಏಳು ನದಿಗಳೂ ಇರುವುವು. ಆ ವರ್ಷದಲ್ಲಿ ಇರುವ ಶ್ರುತಧರ, ವೀರ್ಯಧರ, ವಸುಂಧರ, ಊರ್ಧ್ವಧರ ಎಂದು ಹೆಸರುಳ್ಳ ಜನರು ಚಂದ್ರನಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಪೂಜಿಸುತ್ತಿರುವರು.

ಶಾಲ್ಮಲದ್ವೀಪದ ಸುತ್ತಲೂ ನಾಲ್ಕು ಲಕ್ಷ ಯೋಜನ ವಿಸ್ತಾರವುಳ್ಳ ಮದ್ಯದ ಸಮುದ್ರವಿರುವುದು. ಅದರ ಸುತ್ತಲೂ ಎಂಟುಲಕ್ಷಯೋಜನ ವಿಸ್ತಾರವುಳ್ಳ ಕುಶದ್ವೀಪವಿರುವುದು. ಅಲ್ಲಿ ಭಗವಂತನಿಂದ ನಿರ್ಮಿತವಾದ ದರ್ಭೆಯ ಸಮೂಹವು ಅಗ್ನಿಯಂತೆ ಪ್ರಕಾಶಿಸುತ್ತಾ ದಿಕ್ಕುಗಳನ್ನು ಪ್ರಕಾಶಗೊಳಿಸುವುದು. ಆ ದ್ವೀಪದ ಅಧಿಪತಿಯಾದ ಪ್ರಿಯವ್ರತರಾಜನ ಮಗನಾದ ಹಿರಣ್ಯರೇತನು ತನ್ನ ಮಕ್ಕಳಾದ ವಸುದಾನ, ದೃಢರುಚಿ, ನಾಭಿಗುಪ್ತ, ಸತ್ಯವ್ರತ, ವಿಪ್ರ, ವಾಮದೇವ ಎಂದು ಹೆಸರುಳ್ಳವರಿಗೆ ಅದೇ ಹೆಸರುಳ್ಳ ಏಳು ವರ್ಷಗಳನ್ನು ಚಕ್ರ, ಚತುಃಶೃಂಗ, ಕಪಿಲ, ಭಿನ್ನಕೂಟ, ದೇವಾನೀಕ, ಊರ್ಧ್ವರೋಮ, ದ್ರವಿಣ ಎಂಬ ಪರ್ವತಗಳೂ ರಸಕುಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವಿಂದಾ, ದೇವಗರ್ಭ, ಘೃತಚ್ಯುತಾ, ಆಂತ್ರಮಾಲಾ ಎಂಬ ನದಿಗಳೂ ಇರುವುವು. ಆ ನದಿಗಳ ನೀರನ್ನು ಉಪಯೋಗಿಸುತ್ತಿರುವ ಅಲ್ಲಿ ಇರುವ ಕುಶಲ, ಕೋವಿದ, ಅಭಿಯುಕ್ತ, ಕುಲಕ ಎಂದು ಹೆಸರುಳ್ಳ ನಾಲ್ಕು ವರ್ಣದವರು ಅಗ್ನಿಯಲ್ಲಿ ಅಂತರ್ಯಾಮಿಯಾದ

ಪರಮಾತ್ಮನನ್ನು ಪೂಜಿಸುತ್ತಿರುವರು. ಕುಶ ದ್ವೀಪದ ಸುತ್ತಲೂ ಎಂಟು ಲಕ್ಷ ಯೋಜನ ವಿಸ್ತಾರವುಳ್ಳ ತುಪ್ಪದ ಸಮುದ್ರ ವಿರುವುದು. ಅದರ ಸುತ್ತಲೂ ಹದಿನಾರು ಲಕ್ಷಯೋಜನ ವಿಸ್ತಾರವಾದ ಕ್ರೌಂಚದ್ವೀಪವಿರುವುದು. ಅಲ್ಲಿ ಕ್ರೌಂಚ ಎಂಬ ಹೆಸರುಳ್ಳ ಪರ್ವತವು ಷಣ್ಮುಖನ ಶಕ್ತಿಯೆಂಬ ಆಯುಧದಿಂದ ಪೀಡಿತವಾದ ಪ್ರದೇಶವುಳ್ಳದ್ದಾಗಿದ್ದರೂ ಸಿಹಿಮೊಸರಿನ ಸಮುದ್ರದಿಂದ ಅಭಿಷೇಕ ಮಾಡಲ್ಪಡತಕ್ಕದ್ದಾಗಿ ವರುಣದೇವರಿಂದ ರಕ್ಷಿಸಲ್ಪಡುತ್ತಾ ಭಯರಹಿತರಾಗಿ ಇರುವುದು. ಆ ದ್ವೀಪದಲ್ಲಿ ಪ್ರಿಯವ್ರತರಾಜನ ಮಗನಾದ ಘೃತಪೃಷ್ಠನೆಂಬುವನು ಆಮ, ಮಜ್ಯ, ಮೇಘಪೃಷ್ಠ, ಸುಧಾಮ, ಋಷಿಜ್ವಾ, ಲೋಹಿತಾವರ್ಣ, ವನಸ್ಪತಿ ಎಂದು ಹೆಸರುಳ್ಳ ಏಳು ಜನ ಮಕ್ಕಳಿಗೆ ಅದೇ ಹೆಸರುಳ್ಳ ಏಳು ವರ್ಷಗಳನ್ನು ವಿಭಾಗಮಾಡಿಕೊಟ್ಟು ತಾನು ಪರಮಾತ್ಮನ ಪಾದಾರವಿಂದನನ್ನು ಹೊಂದಿದನು.

ಆ ವರ್ಷಗಳಲ್ಲಿ ಶುಕ್ಲ, ವರ್ತಮಾನ, ಉಪರ್ಹಣ, ಉಪಭೋಜನ, ನಂದ, ನಂದನ, ಸರ್ವಭದ್ರ ಎಂದು ಏಳು ಪರ್ವತಗಳು. ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವಿತ್ರಾ, ಶುಕ್ಲಾ ಎಂಬ ನದಿಗಳು ಇರುವುವು. ಆ ನದಿಗಳ ನೀರನ್ನು ಉಪಯೋಗಿಸಿ ಪವಿತ್ರರಾದ ಗುರು, ಋಷಭ, ದ್ರವಿಣ, ದೇವ ಎಂದು ಹೆಸರುಳ್ಳ ನಾಲ್ಕು ಜಾತಿಯ ಜನರು ನೀರಿನಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಪೂಜಿಸುತ್ತಿರುವರು.

ಕ್ರೌಂಚದ್ವೀಪದ ಸುತ್ತಲೂ ಹದಿನಾರು ಲಕ್ಷ ಯೋಜನ ವಿಶಾಲವುಳ್ಳ ಸಿಹಿಮೊಸರಿನ ಸಮುದ್ರ ವಿರುವುದು. ಅದರ ಸುತ್ತಲೂ ಮೂವತ್ತೆರಡು ಯೋಜನ ವಿಸ್ತಾರವಾದ ಶಾಕದ್ವೀಪ ವೆಂಬ ದ್ವೀಪವಿರುವುದು. ಅದರಲ್ಲಿ ಶಾಕ ಎಂದು ಹೆಸರುಳ್ಳ ಮರವಿರುವುದು. ಅದರಿಂದಲೇ ಆ ದ್ವೀಪಕ್ಕೆ ಶಾಕದ್ವೀಪವೆಂಬ ಹೆಸರು ಬಂದಿರುವುದು. ಆ ಮರದ ಸುವಾಸನೆಯು ಆ ದ್ವೀಪದಲ್ಲಿಯೆಲ್ಲಾ ಇರುವುದು. ಆ ದ್ವೀಪಕ್ಕೂ ಪ್ರಿಯವ್ರತರಾಜನ ಮಗನಾದ ಮೇಧಾತಿಥಿಯೆಂಬವನು ಪುರೋಜವ, ಮನೋಜವ, ವೇಪಮಾನ, ಧೂಮ್ರಾನೀಕ, ವಿಚಿತ್ರರೇಫ, ಬಹುರೂಪ, ವಿಶ್ವಾಧಾರ ಎಂಬ ಹೆಸರುಳ್ಳ ಏಳುಜನ ಮಕ್ಕಳಿಗೆ ಅದೇ ಹೆಸರುಳ್ಳ ಏಳು ವರ್ಷಗಳನ್ನು ವಿಭಾಗಮಾಡಿ ಕೊಟ್ಟು ಪರಮಾತ್ಮನಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ತಪೋವನಕ್ಕೆ ಪ್ರವೇಶಿಸಿದನು. ಆ ವರ್ಷಗಳಲ್ಲಿ ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ತೋತ, ದೇವಪಾಲ, ಮಹಾನಸ ಎಂಬ ಏಳು ಪರ್ವತಗಳೂಸ ಅನಘಾ, ಆಯುರ್ದಾ, ಉಭಯಸೃಷ್ಟಿ, ಅಪರಾಜಿತಾ, ಪಂಚಪದೀ, ಸಹಸ್ರ ಶ್ರುತಿ, ನಿಜಧೃತಿ

ಎಂಬ ಏಳು ನದಿಗಳೂ ಇರುವುವು. ಧತವ್ರತ, ಸತ್ಯವ್ರತ, ದಾನವ್ರತ, ಅನುವ್ರತ ಎಂದು ಹೆಸರುಳ್ಳ ಆ ದ್ವೀಪದಲ್ಲಿರುವ ನಾಲ್ಕು ಜಾತಿಯ ಜನರು ವಾಯುದೇವರಲ್ಲಿ ಅಂತರ್ಯಾಮಿ ಯಾದ ಪರಮಾತ್ಮನನ್ನು ಸೇವಿಸುವರು.

ಶಾಕದ್ವೀಪದ ಸುತ್ತಲೂ ಮೂವತ್ತೆರಡು ಲಕ್ಷ ಯೋಜನ ವಿಸ್ತಾರವುಳ್ಳ ಗಟ್ಟಿಯಾದ ಹಾಲಿನ ಸಮುದ್ರವಿರುವುದು. ಆ ಸಮುದ್ರದ ಸುತ್ತಲೂ ಅರವತ್ತನಾಲ್ಕು ಲಕ್ಷಯೋಜನ ವಿಶಾಲವುಳ್ಳ ಪುಷ್ಕರದ್ವೀಪವಿರುವುದು. ಅದರಲ್ಲಿ ಅಗ್ನಿಯ ಜ್ವಾಲೆಯಂತೆ ಪ್ರಕಾಶಿಸುವ ಹತ್ತುಸಾವಿರ ಬಂಗಾರದ ದಳಗಳಿಂದ ಕೂಡಿದ ದೊಡ್ಡ ಕಮಲವಿರುವುದು. ಆ ದ್ವೀಪದ ಮಧ್ಯದಲ್ಲಿ ಮಾನಸೋತ್ತರ ಎಂದು ಹೆಸರುಳ್ಳ ಒಂದೇ ಪರ್ವತವಿರುವುದು. ಅದು ಹತ್ತು ಸಾವಿರ ಯೋಜನ ಹತ್ತು ಸಾವಿರಯೋಜನ ಎತ್ತರವಾಗಿರುವುದು. ಅದರಲ್ಲಿ ನಾಲ್ಕುದಿಕ್ಕುಗಳಲ್ಲಿ ನಾಲ್ಕು ದಿಕ್ಪಾಲಕರ ಪಟ್ಟಣಗಳು ಇರುವುವು. ಆ ಪರ್ವತದ ಮೇಲೆಯೇ ಮೇರುಪರ್ವತಕ್ಕೆ ಪ್ರದಕ್ಷಿಣೆ ಬರುವ ಸೂರ್ಯರಥದ ಚಕ್ರವು ಸುತ್ತುತ್ತಿರುವುದು. ಆ ದ್ವೀಪಕ್ಕೆ ಪ್ರಿಯವ್ರತರಾಜನ ಮಗನಾದ ವೀತಿಹೋತ್ರನು ರಾಜನು. ಅವನಿಗೆ ರಮಣ, ಧಾತಕಿ ಎಂಬ ಇಬ್ಬರು ಮಕ್ಕಳು. ವೀತಿಹೋತ್ರನು ಇಬ್ಬರು ಮಕ್ಕಳಿಗೆ ಆ ಹೆಸರುಳ್ಳ ಎರಡು ವರ್ಷಗಳನ್ನು ವಿಭಾಗ ಮಾಡಿಕೊಟ್ಟು ಪರಮಾತ್ಮನಲ್ಲಿ ಆಸಕ್ತನಾಗಿರುವನು. ಅಲ್ಲಿಯ ಜನರು ಬ್ರಹ್ಮದೇವರಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಪೂಜಿಸುತ್ತಿರು ವರು. ಆ ದ್ವೀಪದ ಸುತ್ತಲೂ ಅರವತ್ತನಾಲ್ಕು ಲಕ್ಷ ಯೋಜನ ವಿಶಾಲವಾದ ಸಿಹಿನೀರಿನ ಸಮುದ್ರವಿರುವುದು. ಅದರ ಸುತ್ತಲೂ ತೊಂಭತ್ತಾರುಲಕ್ಷ ಯೋಜನ ವಿಸ್ತಾರವಾದ ಕನ್ನಡಿಯಂತೆ ಹೊಳೆಯುವ ಬಂಗಾರದ ಪ್ರದೇಶವಿರುವುದು. ಅಲ್ಲಿ ಯಾವ ಪದಾರ್ಥವು ಬಿದ್ದರೂ ತೆಗೆಯಲಿಕ್ಕೆ ಸಿಗಲಾರದು. ಆದುದರಿಂದ ಅದು ಸರ್ವಪ್ರಾಣಿಗಳಿಂದ ರಹಿತವಾಗಿರುವುದು.

ಅದರ ಸುತ್ತಲೂ ಲೋಕಾಲೋಕ ಪರ್ವತವಿರುವುದು. ಲೋಕಾಲೋಕ ಪರ್ವತದ ಒಳಗಿನ ಪರದೇಶಕ್ಕೆ ಸೂರ್ಯನ ಬೆಳಕು ಬೀಳುವ ಕಾರಣ ಲೋಕವೆಂದು ಹೆಸರು. ಹೊರಗಿನ ಭಾಗಕ್ಕೆ ಸೂರ್ಯನ ಬೆಳಕು ಬೀಳದ ಕಾರಣ ಅಲೋಕವೆಂದು ಹೆಸರು. ಲೋಕ ಅಲೋಕಗಳ ಮಧ್ಯದಲ್ಲಿ ಇರುವ ಕಾರಣ ಪರ್ವತಕ್ಕೆ ಲೋಕಾಲೋಕ ಲೋಕತ್ರಯವನ್ನು ಸೃಷ್ಟಿ ಮಾಡಿದ ಮೇಲೆ ಭಗವಂತನು ಲೋಕಾಲೋಕಪರ್ವತವನ್ನು ಸೃಷ್ಟಿಮಾಡಿರುವನು. ಅದು ಐವತ್ತೊಂದು ಲಕ್ಷ ಯೋಜನ ಎತ್ತರವಿರುವುದು. ಐವತ್ತುವರೆಲಕ್ಷ ಯೋಜನ ವಿಶಾಲವಿರುವುದು.

ಸೂರ್ಯನನ್ನು ಆರಂಭಿಸಿ ಧ್ರುವನಕ್ಷತ್ರ ಪರ್ಯಂತಗಳ ರಶ್ಮಿಗಳು ಮೂರುಲೋಕರಲ್ಲಿ ವಿಸ್ತೃತಗಳಾದವು. ಈ ಪರ್ವತದ ಕೆಳಗೇ ಇರುತ್ತವೆ. ಮೇಲೆ ಇರುವುದಿಲ್ಲ. ಇಷ್ಟು ಪ್ರದೇಶವು ದೇವಮನುಷ್ಯಾದಿಗಳಿಗೆ ವ್ಯವಹಾರಕ್ಕೆ ಯೋಗ್ಯವಾಗಿ ಲೋಕವೆಂಬ ಹೆಸರುಳ್ಳದ್ದಾಗಿರುವುದು. ಲೋಕಾಲೋಕಪರ್ವತದ ವರೆಗೆ ಇರುವ ಪ್ರದೇಶವು ಐವತ್ತು ಕೋಟಿಯೋಜನ ಭೂಗೋಲದ ನಾಲ್ಕನೇ ಒಂದು ಭಾಗವು. ಅಂದರೆ ಬ್ರಹ್ಮಾಂಡಪ್ರದೇಶದಲ್ಲಿ ನಾಲ್ಕು ಭಾಗವು. ಒಂದು ಭಾಗವು ಘನೋದಕವು. ಎರಡನೆಯದ್ದು ಅಂಧಂತಮಸ್ಸು. ಮೂರನೇ ಭಾಗವು ಲೋಕಾಲೋಕಪರ್ವತವು. ನಾಲ್ಕನೇ ಭಾಗವು ಬಂಗಾರದ ಭೂಮಿಯನ್ನು ಆರಂಭಿಸಿ ಮೇರುಪರ್ವತದವರೆಗೆ. ಮೂರುವರೆ ಕೋಟಿ ಯೋಜನವಾಗುವುದು. (1+1+2+2+4+4+8+8+16+ 16+32+32+64+64+96=350) (50 ಲಕ್ಷ ಲೋಕಾಲೋಕ ಪರ್ವತವು 350+50=400. ಲೋಕಪ್ರದೇಶಕ್ಕಿಂತ ಎರಡು ಪಾಲು ಅಂಧಂತಮಸ್ಸು 700 ಲಕ್ಷ ಯೋಜನ 700+400=1100 ಲಕ್ಷಯೋಜನ. ಅಂಧಂತಮಸ್ಸಿಗಿಂತ ಎರಡುಪಾಲು (1400 ಲಕ್ಷ ಯೋಜನ 1100+1400=2500 ಲಕ್ಷ ಯೋಜನ ಅಂದರೆ ಇಪ್ಪತ್ತೈದು ಕೋಟಿ ಯೋಜನವಾಗುವುದು) ಆ ಪರ್ವತ ಮೇಲೆ ನಾಲ್ಕು ದಿಕ್ಕುಗಳಲ್ಲಿ ಬ್ರಹ್ಮದೇವರಿಂದ ಸ್ಥಾಪಿತಗಳಾದ ಋಷಭ ಪುಷ್ಕರಚೂಡ, ವಾಮನ, ಅಪರಾಜಿತ ಎಂದು ಹೆಸರುಳ್ಳ ಲೋಕಸ್ಥಿತಿಗೆ ಕಾರಣಗಳಾದ ನಾಲ್ಕು ಶ್ರೇಷ್ಠ ಆನೆಗಳು ಇರುವುವು. ಆ ಪರ್ವತದಲ್ಲಿಯೇ ಭಗವಂತನು ವಿಷ್ವಕ್ಸೇನನೇ ಮೊದ ಲಾದ ಭೃತ್ಯರಿಂದ ಕೂಡಿಕೊಂಡು ಸಕಲಲೋಕಕ್ಷೇಮಕ್ಕಾಗಿ ಸನ್ನಿಹಿತನಾಗಿರುವನು. ಲೋಕಾಲೋಕಪರ್ವತದ ಹೊರಗಿನ ಭಾಗದಲ್ಲಿ ಅಣಿಮಾದಿ ಅಷ್ಟೈಶ್ವರ್ಯ ವುಳ್ಳವರು ಸಂಚರಿಸುವರೆಂದು ಹೇಳುತ್ತಾರೆ. ಬ್ರಹ್ಮಾಂಡದ ಮಧ್ಯದಲ್ಲಿ ಸೂರ್ಯನು ಇರುವನು. ಸೂರ್ಯಮಂಡಲದಿಂದ ಸುತ್ತಲೂ ಬ್ರಹ್ಮಾಂಡದ ಗೋಡೆಗೆ ಇಪ್ಪತ್ತೈದು ಕೋಟಿ ಯೋಜನವಾಗುವುದು. ಸೂರ್ಯನಲ್ಲಿ ಅಂತರ್ಯಾಮಿಯಾದ ಸೂರ್ಯ ನೆಂದು ಹೆಸರುಳ್ಳ ಪರಮಾತ್ಮನು ದೇವಮನುಷ್ಯ ಮೊದಲಾದ ಸಮಸ್ತರಿಗೂ ಸ್ವಾಮಿಯಾಗಿರುವನು.



# ಒಂಭತ್ತು ವರ್ಷಗಳಲ್ಲಿರುವ ಭಗವಂತನ ರೂಪಗಳು[1]

ಇಲಾವೃತವರ್ಷದಲ್ಲಿ ರುದ್ರದೇವರೊಬ್ಬರೇ ಪುರುಷರು. ರುದ್ರದೇವರ ಶಾಪದಿಂದ ಅಲ್ಲಿಗೆ ಬಂದ ಪುರುಷರೆಲ್ಲರೂ ಸ್ತ್ರೀಯರಾಗುವರು. ಆದುದರಿಂದ ಅಲ್ಲಿ ಇರುವ ಎಲ್ಲರೂ ಸ್ತ್ರೀಯರೇ. ಅಲ್ಲಿ ರುದ್ರದೇವರು ಪಾರ್ವತೀದೇವಿಯರೇ ಪ್ರಧಾನರಾಗಿ ಉಳ್ಳ ಸಾವಿರಾರು ಸ್ತ್ರೀಯರಿಂದ ಸೇವಿತರಾಗಿ ಶೇಷದೇವರಲ್ಲಿ ಅಂತರ್ಯಾಮಿಯಾದ ಸಂಕರ್ಷಣನಾಮಕ ಪರಮಾತ್ಮನನ್ನು ಧ್ಯಾನಮಾಡುತ್ತಾ ಸ್ತೋತ್ರ ಮಾಡುತ್ತಾ ಇರುವರು. ಭದ್ರಾಶ್ವವರ್ಷದಲ್ಲಿ ಹಯಗ್ರೀವರೂಪಿ ಪರಮಾತ್ಮನು ಸನ್ನಿಹಿತನಾಗಿರುವನು. ಅಲ್ಲಿ ಇರುವ ಭದ್ರಶ್ರವಾ ಎಂಬ ಧರ್ಮನ ಮಗನು ಅವನ ಜನರೂ ಆ ಹಯಗ್ರೀವದೇವರನ್ನು ಸೇವಿಸುತ್ತಿರುವರು. ಹರಿವರ್ಷವರ್ಷದಲ್ಲಿ ನರಸಿಂಹದೇವರು ಸನ್ನಿಹಿತರಾಗಿರುವರು. ಅಲ್ಲಿ ಪ್ರಹ್ಲಾದನು ಅಲ್ಲಿರುವ ಜನರಿಂದ ಕೂಡಿಕೊಂಡು ನರಸಿಂಹದೇವರನ್ನು ಸ್ತೋತ್ರ ಮಾಡುತ್ತಾ ಇರುವನು. ಕೇತುಮೂಲವರ್ಷದಲ್ಲಿ ಕಾಮದೇವನಲ್ಲಿ ಸನ್ನಿಹಿತನಾದ ಪ್ರದ್ಯುಮ್ನ ಎಂದು ಹೆಸರುಳ್ಳ ಭಗವಂತನ ರೂಪವನ್ನು ರಮಾದೇವಿಯರು ರತಿದೇವಿಯಲ್ಲಿ ಸನ್ನಿಹಿತರಾಗಿದ್ದುಕೊಂಡು ಅಲ್ಲಿ ಇರುವ ಜನರಿಂದ ಕೂಡಿಕೊಂಡು ಸ್ತೋತ್ರ ಮಾಡುತ್ತಿರುವರು. ರಮ್ಯಕವರ್ಷದಲ್ಲಿ ಮತ್ಸ್ಯರೂಪಿಯಾದ ಪರಮಾತ್ಮನು ಸನ್ನಿಹಿತನಾಗಿರುವನು. ಮನುವು ಮಹಾಭಕ್ತಿಯಿಂದ ಮತ್ಸ್ಯರೂಪಿಯಾದ ಪರಮಾತ್ಮನನ್ನು ಸೇವಿಸುತ್ತಿರುವನು. ಹಿರಣ್ಮಯ ವರ್ಷದಲ್ಲಿ ಕೂರ್ಮರೂಪಿಯಾದ ಪರಮಾತ್ಮನು ಸನ್ನಿಹಿತನಾಗಿರುವನು. ಅಲ್ಲಿರುವ ಅರ್ಯಮಾ ಎಂಬುವನು ಅಲ್ಲಿಯ ಜನರಿಂದ ಕೂಡಿಕೊಂಡು ಆ ಪರಮಾತ್ಮನನ್ನು ಸೇವಿಸುವನು. ಉತ್ತರ ಕುರುವರ್ಷದಲ್ಲಿ ವರಾಹರೂಪಿಯಾದ ಪರಮಾತ್ಮನು ಸನ್ನಿಹಿತನಾಗಿರುವನು. ಅವನನ್ನು ಭೂದೇವಿಯು ಸ್ತೋತ್ರ ಮಾಡುತ್ತಿರುವಳು. ಕಿಂಪುರುಷ ವರ್ಷದಲ್ಲಿ ಹನುಮಂತದೇವರು ಅಲ್ಲಿ ಸನ್ನಿಹಿತರಾಗಿರುವ ರಾಮಚಂದ್ರದೇವರನ್ನು ಅಲ್ಲಿರುವ ಜನರಿಂದ ಕೂಡಿಕೊಂಡು ಭಕ್ತಿಯಿಂದ ಸೇವಿಸುತ್ತಾ ಸ್ತೋತ್ರಮಾಡುತ್ತಾ ಇರುವರು. ಅಲ್ಲಿರುವ ಆರ್ಷ್ಟಿಷೇಣನಿಂದ ಮತ್ತು ಗಂಧರ್ವರಿಂದ ಗಾಯನ ಮಾಡಲ್ಪಡುವ ರಾಮದೇವರ ಕಥೆಯನ್ನು ಕೇಳುತ್ತಲೂ ಇರುವರು. ಭಾರತವರ್ಷದಲ್ಲಿ ನಾರದರು ಅಲ್ಲಿರುವ ಜನರಿಂದ ಕೂಡಿರುವ ನರನಾರಾಯಣರನ್ನು ಸ್ತೋತ್ರಮಾಡುತ್ತಾ

1. ಭಾಗ. V-17 ರಿಂದ 19 ಅ.

ಇರುವರು. ಭಾರತವರ್ಷದಲ್ಲಿ ಅನೇಕ ನದಿಗಳೂ ಪರ್ವತಗಳೂ ಇರುವುವು. ಮಲಯಮಂಗಲಪ್ರಸ್ಥ ಮೈನಾಕ ತ್ರಿಕೂಟ ಋಷಭ ಕನಕ ಕೊಲ್ಲ ಸಹ್ಯ ವೇದಗಿರಿ ಋಷ್ಯಮೂಕ ಶ್ರೀಶೈಲ ವೆಂಕಟ ಮಹೇಂದ್ರ ವಾರಿಧಾರ ವಿಂಧ್ಯ ಶುಕ್ತಿಮಾನ್ ದಕ್ಷಗಿರಿ ಪಾರಿಯಾತ್ರ ದ್ರೋಣ ಚಿತ್ರಕೂಟ ಗೋವರ್ಧನ ರೈವತಕ ಕಕುಭ ನೀಲ ಕೋಕಾಮುಖ ಇಂದ್ರನೀಲ ಕಾಮಗಿರಿ ಇನ್ನೂ ಅನೇಕ ಪರ್ವತಗಳಿರುವುವು. ಇವುಗಳ ಪ್ರದೇಶದಿಂದ ಅಸಂಖ್ಯಾತ ನದಿಗಳೂ ಉಂಟಾಗಿರುವುವು. ಹೆಸರಿನಿಂದಲೇ ಪವಿತ್ರರನ್ನಾಗಿ ಮಾಡುವ ಈ ನದಿಗಳ ಭಾರತವರ್ಷದ ಪ್ರಜೆಗಳು ಸ್ನಾನ ಮೊದಲಾದವುಗಳಿಗೆ ಉಪಯೋಗಿಸುವರು. ಚಂದ್ರವಟಾ, ತಾಮ್ರಪರ್ಣೀ, ಅವಟೋದಕಾ, ಕೃತಮಾಲಾ, ವೈಹಾಯಸೀ, ಕಾವೇರೀ, ವೇಣೀ, ಪಯೋದಾ, ಶರ್ಕರಾವರ್ತಾ, ತುಂಗಭದ್ರಾ, ಕೃಷ್ಣಾ, ಭೀಮರಥೀ, ಗೋದಾವರೀ, ನಿರ್ವಿಂಧ್ಯಾ, ಪಯೋಷ್ಣೀ, ತಾಪೀ, ಸುರಸಾ, ನರ್ಮದಾ, ಚರ್ಮಣ್ವತೀ, ಸಿಂಧು, ಅಂಧಶೋಣ ಎಂಬ ನದಿಗಳು, ವೇದಸ್ಮೃತಿ, ಋಷಿಕುಲ್ಯಾ, ವಿಸೋಮಾ, ಕೌಶಿಕೀ, ಮಂದಾಕಿನೀ, ಯಮುನಾ, ಸರಸ್ವತೀ, ದೃಷದ್ವತೀ, ಗೋಮತೀ, ಸರಯೂ, ಓಘವತೀ, ಸಪ್ತವತೀ, ಘೋಷಣಾ, ಸುಷೋಮಾ, ಶತಮಾಲಾ, ಚಂದ್ರಭಾಗಾ, ಶುತುದ್ರೀ, ಮರುದ್ವೃದಾ ವಿತಸ್ತಾ, ಅಸಿಕ್ನೀ, ವಿಶ್ವಾ ಎಂಬ ಮಹಾನದಿಗಳು ಇರುವುವು. ಈ ಭಾರತವರ್ಷದಲ್ಲಿ ಹುಟ್ಟಿದ ಜನರು ಸಾತ್ವಿಕ ರಾಜಸ ತಾಮಸ ಕರ್ಮಗಳಿಂದ ಯೋಗ್ಯಗತಿಗಳನ್ನು ಹೊಂದುವರು. ಸ್ವರ್ಗಲೋಕಕ್ಕೆ ಹೋದವರೂ ತಮ್ಮ ಪುಣ್ಯಶೇಷದಿಂದ ಈ ಭಾರತವರ್ಷದಲ್ಲಿಯೇ ಹುಟ್ಟಲಿಕ್ಕೆ ಅಪೇಕ್ಷೆಯನ್ನು ಹೊಂದುವರು. ಜಂಬೂದ್ವೀಪಕ್ಕೆ ಎಂಟು ಉಪದ್ವೀಪಗಳು. ಸಗರರಾಜನ ಮಕ್ಕಳು ಕುದುರೆಯನ್ನು ಹುಡುಕುವಾಗ ಭೂಮಿಯನ್ನು ಅಗೆಯುವಾಗ ಮಾಡಲ್ಪಟ್ಟವು. ಅವುಗಳ ಹೆಸರು ಸ್ವರ್ಣಪ್ರಸ್ಥ ಚಂದ್ರಶುಕ್ಲ ಆವರ್ತನ ರಮಣಕ ಮುದಾಹರಣ ಪಾಂಚಜನ್ಯ ಸಿಂಹಲ ಲಂಕಾ ಎಂದು. ಈರೀತಿಯಾಗಿ ಜಂಬೂದ್ವೀಪವು ಇರುವುದು.



# ಸೂರ್ಯಸಂಚಾರವು [1]

ಉದ್ದು ಇತ್ಯಾದಿಗಳನ್ನು ಬೇಳೆ ಮಾಡಿದರೆ ಎರಡು ಬೇಳೆಗಳೂ ಒಂದೇ ಆಕಾರದಿಂದ ಇರುವುವೋ ಅದೇ ರೀತಿಯಿಂದ ಭೂಮಂಡಲವು ಎಷ್ಟು ವಿಸ್ತಾರವಾಗಿರುವುದೋ ಸ್ವರ್ಗಲೋಕವೂ ಅಷ್ಟೇ ವಿಸ್ತಾರವಾಗಿರುವುದು. ಮಧ್ಯದಲ್ಲಿ ಅಂತರಿಕ್ಷವು ಇರುವುದು. ಅಂತರಿಕ್ಷದ ಮಧ್ಯದಲ್ಲಿ ಇದ್ದುಕೊಂಡು ಸೂರ್ಯನು ಮೂರುಲೋಕವನ್ನು ಪ್ರಕಾಶಗೊಳಿಸುವನು. ಸೂರ್ಯನು ಉದಗಯನ ದಕ್ಷಿಣಾಯನ ವೈಷುವ ಎಂದು ಹೆಸರುಳ್ಳ ದೀರ್ಘ ಹ್ರಸ್ವ ಸಮಾನಗತಿಗಳಿಂದ ಆರೋಹಣ ಅವರೋಹಣ ಸಮಸ್ಥಾನಗಳಲ್ಲಿ ಆವಾವ ಸಮಯಕ್ಕೆ ಸರಿಯಾಗಿ ಮಕರಾದಿ ರಾಶಿಗಳಲ್ಲಿ ಹಗಲು ರಾತ್ರಿಗಳನ್ನು ದೀರ್ಘಹ್ರಸ್ವ ಸಮಾನಗಳನ್ನಾಗಿ ಮಾಡುವನು.

ಯಾವಾಗ ಸೂರ್ಯನು ಮೇಷ ತುಲಾ ರಾಶಿಗಳಲ್ಲಿ ಸೂರ್ಯನು ಇರುವನೋ ಆಗ ಹಗಲು ರಾತ್ರಿಗಳು ಸಮಾನಗಳಾಗಿ ಇರುವುವು. ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾರಾಶಿಗಳಲ್ಲಿ ಸಂಚರಿಸುತ್ತಿರುವಾಗ ಹಗಲು ಹೆಚ್ಚಾಗುತ್ತಲೂ ರಾತ್ರಿಯು ಕಡಿಮೆಯಾಗುತ್ತಲೂ ಇರುವುದು. ಒಂದೊಂದು ತಿಂಗಳಲ್ಲಿ ಒಂದೊಂದು ಘಳಿಗೆಯೇ ಹಗಲು ಹೆಚ್ಚಾಗುತ್ತಾ ಬರುತ್ತದೆ. ಹಗಲು ಹೆಚ್ಚಾಗುತ್ತಾ ಬಂದಂತೆ ರಾತ್ರಿಯು ಕಡಿಮೆಯಾಗುತ್ತಾ ಬರುತ್ತದೆ. ರಾತ್ರಿ ಹಗಲು ಒಟ್ಟಿಗೆ ಅರುವತ್ತು ಘಳಿಗೆಯೇ ಆಗುವುದು. ವೃಶ್ಚಿಕ, ಧನು, ಮಕರ, ಕುಂಭ, ಮೀನ ರಾಶಿಗಳಲ್ಲಿ ಇರುವಾಗ ಹಗಲು ಕಡಿಮೆಯಾಗುತ್ತಾ ರಾತ್ರಿಯು ಹೆಚ್ಚಾಗುತ್ತಲೂ ಇರುತ್ತದೆ. ದಕ್ಷಿಣಾಯನವು ಬರುವವರೆಗೆ ಹಗಲು ಹೆಚ್ಚಾಗುವುದು. ರಾತ್ರಿಯು ಕಡಿಮೆಯಾಗುವುದು. ಮಾನಸೋತ್ತರ ಪರ್ವತದ ಮೇಲೆ ಸೂರ್ಯರಥದ ಚಕ್ರವು ತಿರುಗುವ ಸ್ಥಳವು ಒಂಭತ್ತು ಕೋಟಿ ಐವತ್ತೊಂದು ಲಕ್ಷಯೋಜನವೆಂದು ಹೇಳುವರು. ಅದರಲ್ಲಿ ಮೇರು ಪರ್ವತದ ಪೂರ್ವದಿಕ್ಕಿನಲ್ಲಿ ದೇವಧಾನಿಯೆಂದು ಹೆಸರುಳ್ಳ ಇಂದ್ರದೇವರ ಪಟ್ಟಣವಿರುವುದು. ದಕ್ಷಿಣದಿಕ್ಕಿನಲ್ಲಿ ಸಂಯಮನಿಯೆಂಬ ಯಮದೇವರ ಪಟ್ಟಣವಿರುವುದು. ಪಶ್ಚಿಮದಿಕ್ಕಿನಲ್ಲಿ ನಿಮ್ಲೋಚನಿಯೆಂಬ ವರುಣ ದೇವರ ಪಟ್ಟಣವಿರುವುದು. ಉತ್ತರದಿಕ್ಕಿನಲ್ಲಿ ವಿಭಾವರೀ ಎಂಬ ಚಂದ್ರನ ಪಟ್ಟಣವಿರುವುದು. ಒಂದೊಂದು ಸ್ಥಳದಲ್ಲಿ ಉದಯ ಮಧ್ಯಾಹ್ನ ಅಸ್ತಮಯ ಮಧ್ಯರಾತ್ರಿ

---

1. ಭಾಗ. V-21

ಮೇರುಪರ್ವತದ ನಾಲ್ಕು ದಿಕ್ಕುಗಳಲ್ಲಿ ಆಗುವುವು. ಇಲಾವೃತ ಖಂಡದಲ್ಲಿ ಇರುವ ಜನರಿಗೆ ದಿವಸಮಧ್ಯದಲ್ಲಿಯೇ ಸೂರ್ಯನು ಪ್ರಕಾಶಿಸುವನು. ಮೇರುಪರ್ವತದ ಎಡಪಾರ್ಶ್ವದಿಂದಲೇ ಸಂಚರಿಸುತ್ತಿರುವನು. ಎಲ್ಲಿ ಸೂರ್ಯನು ಉದಯಿಸುವನೋ ಅದರ ಸಮಾನವಾದ ಮೇರುಪರ್ವತದ ಪಶ್ಚಿಮಪಾರ್ಶ್ವದಲ್ಲಿ ಅಸ್ತಮಯ ವಾಗುವುದು. ದಕ್ಷಿಣಾಯನದಲ್ಲಿ ಸ್ವಲ್ಪ ದಕ್ಷಿಣಭಾಗದಲ್ಲಿ ಉದಯಿಸಲು ಸ್ವಲ್ಪ ದಕ್ಷಿಣ ಪಶ್ಚಿಮದಲ್ಲಿ ಮುಳುಗುವನು. ಉತ್ತರಾಯಣದಲ್ಲಿ ಸ್ವಲ್ಪ ಉತ್ತರಪಶ್ಚಿಮ ದಲ್ಲಿ ಮುಳುಗುವನು. ಸೂರ್ಯನು ಇಂದ್ರಪುರಿಯಾದ ದೇವಧಾನಿಯಿಂದ ಹೊರಟು ಹದಿನೈದು ಘಳಿಗೆಯಲ್ಲಿ ಎರಡುವರೆ ಕೋಟಿ ಯೋಜನ ಮತ್ತು ಹನ್ನೆರಡುವರೆ ಲಕ್ಷಯೋಜನ ಮತ್ತು ಇಪ್ಪತ್ತೈದು ಸಾವಿರ ಯೋಜನ ದೂರವಿರುವ ಸಂಯಮನೀಪಟ್ಟಣಕ್ಕೆ ಬರುವನು. ಹೀಗೆಯೇ ವಿಭಾವರೀ ಇತ್ಯಾದಿ ಪುರಗಳಿಗೂ ಹೋಗುವನು. ಹಾಗೆಯೇ ಜ್ಯೋತಿಶ್ಚಕ್ರದಿಂದ ಕೂಡಿಕೊಂಡು ಚಂದ್ರಾದಿಗಳೂ ಉದಯಿಸುತ್ತಾರೆ. ಮುಳುಗುತ್ತಾರೆ. ಸೂರ್ಯದೇವರ ರಥವು ಒಂದು ಮುಹೂರ್ತ ದಲ್ಲಿ ಮೂವತ್ತ ನಾಲ್ಕು ಲಕ್ಷ ಮತ್ತು ಎಂಟುನೂರು ಯೋಜನ ದೂರ ಸಂಚರಿಸು ವುದು. ಸೂರ್ಯರಥಕ್ಕೆ ಹನ್ನೆರಡು ಮಾಸಾಭಿಮಾನಿಗಳಿಂದ ಅಭಿಮನ್ಯಮಾನ ಗಳಾದ ಹನ್ನೆರಡು ಅರಗಳುಳ್ಳ ಒಂದೇ ಚಕ್ರವಿರುವುದು. ಅಕ್ಷಮರವು ಎರಡೂವರೆ ಕೋಟಿ ಮತ್ತು ಏಳು ಲಕ್ಷ ಯೋಜನವಿರುವುದು. ಆ ಅಕ್ಷಮರದ ಒಂದು ಭಾಗವು ಮೇರುಪರ್ವತಶಿಖರದಲ್ಲಿ ಜೋಡಿಸಿ ಇರುವುದು. ಮತ್ತೊಂದು ಭಾಗವು ಮಾನಸೋತ್ತರ ಪರ್ವತದಲ್ಲಿ ಇರುವುದು. ಆ ಭಾಗದಲ್ಲಿಯೇ ರಥದ ಚಕ್ರ ವಿರುವುದು. ಸೂರ್ಯರಥದ ಚಕ್ರವು ಗಾಣದಂತೆ ಮಾನಸೋತ್ತರ ಪರ್ವತದಲ್ಲಿ ಸುತ್ತುತ್ತಾ ಇರುವುದು. ಆ ದೀರ್ಘ ಅಕ್ಷದ ಮರದಲ್ಲಿ ಚಕ್ರವಿರುವ ಭಾಗದಲ್ಲಿ ಇನ್ನೊಂದು ಅಕ್ಷಮರವನ್ನು ಸಿಕ್ಕಿರುವರು. ಆ ಅಕ್ಷಮರವು ದೊಡ್ಡ ಅಕ್ಷಮರದ ನಾಲ್ಕನೇ ಒಂದು ಭಾಗದಷ್ಟು ಉದ್ದವಾಗಿರುವುದು. ಅದರ ಮತ್ತೊಂದು ಭಾಗವು ಧ್ರುವಲೋಕದಲ್ಲಿರುವುದು. ಸೂರ್ಯರಥದಲ್ಲಿ ಸೂರ್ಯನು ಕೂತುಕೊಳ್ಳುವ ಸ್ಥಾನವು ಮೂವತ್ತಾರು ಲಕ್ಷ ಯೋಜನ ಉದ್ದವಾಗಿಯೂ ಅದರ ನಾಲ್ಕನೇ ಒಂದು ಭಾಗ ವಿಶಾಲವಾಗಿಯೂ ಇರುವುದು. ರಥದ ಕುದುರೆಯನ್ನು ಕಟ್ಟುವ ಮರವು ದೊಡ್ಡ ಅಕ್ಷಮರದಷ್ಟು ಉದ್ದವಾಗಿರುವುದು. ಆಮರದಲ್ಲಿ ಅರುಣನಿಂದ ಕಟ್ಟಲ್ಪಟ್ಟ ಏಳು ಕುದುರೆಗಳು ರಥವನ್ನು ಎಳೆದುಕೊಂಡು ಹೋಗುವುವು. ಕುದುರೆಯನ್ನು ಕಟ್ಟುವ ಮರದ ಉತ್ತರ ಭಾಗವು ಕುದುರೆಯ ಕುತ್ತಿಗೆಯಲ್ಲಿ ಇರುವುದು. ಅದರ

ದಕ್ಷಿಣಭಾಗವು ವಾಯುಪಾಶದಿಂದ ಬದ್ಧವಾಗಿ ಧ್ರುವ ಸ್ಥಾನದಿಂದ ಜೋಲುತ್ತಿರುವುದು. ಯುಗಾರ್ಧವೆಂಬ ಇನ್ನೊಂದು ಮರವು ಕುದುರೆ ಹೆಗಲಿನಿಂದ ಹೊರಟ ಮರದ ಅಗ್ರಭಾಗದಲ್ಲಿ ಸಿಕ್ಕಿಸಲ್ಪಟ್ಟಿರುವುದು. ಅದರ ಇನ್ನೊಂದು ಭಾಗವು ಚಕ್ರದಲ್ಲಿ ಸಿಕ್ಕಿಸಿರುವ ದೀರ್ಘ ಅಕ್ಷಮರದ ಅಗ್ರದಲ್ಲಿ ಸಿಕ್ಕಿಲಸಲ್ಪಟ್ಟಿರುವುದು. ರಥದ ಚಕ್ರ ಅಕ್ಷಮರವು ಅಲ್ಲಿಯೇ ಸಿಕ್ಕಿಸಲ್ಪಟ್ಟಿರುವುದು. ಆ ಯುಗಾರ್ಧದಿಂದ ಕೂಡಿಕೊಂಡು ಹ್ರಸ್ವಾಕ್ಷವು ಧ್ರುವನಕ್ಷತ್ರವನ್ನು ಆಶ್ರಯಿಸಿಕೊಂಡು ಇದೆ. ಸೂರ್ಯನ ಮುಂಭಾಗದಲ್ಲಿ ಅರುಣನು ಕೂತುಕೊಂಡು ಸಾರಥ್ಯವನ್ನು ಮಾಡುವನು. ಅಂಗುಷ್ಠದ ಗಂಟಿನಷ್ಟು ದೊಡ್ಡವರಾಗಿರುವ ವಾಲಖಿಲ್ಯರೆಂಬ ಅರವತ್ತು ಸಾವಿರ ಮುನಿಗಳು ಸ್ತೋತ್ರ ಮಾಡುತ್ತಾ ಇರುವರು. ಹಾಗೆಯೇ ಇತರ ಋಷಿಗಳೂ ಗಂಧರ್ವರೂ ಅಪ್ಸರಸ್ತ್ರೀಯರೂ ಸರ್ಪಗಳೂ ತಚ್ಚರೂ ರಾಕ್ಷಸರೂ ದೇವತೆಗಳೂ ಏಳು ಜನರು ಒಂದೊಂದು ತಿಂಗಳಲ್ಲಿ ಬೇರೆಬೇರೆ ಜನರು ಸೂರ್ಯಾಂತರ್ಯಾಮಿ ಪರಮಾತ್ಮನನ್ನು ಪ್ರತ್ಯೇಕ ಪ್ರತ್ಯೇಕ ಹೆಸರುಳ್ಳವರಾಗಿ ಬೇರೆಬೇರೆ ಹೆಸರುಳ್ಳವರಾಗಿ ಬೇರೆಬೇರೆ ಕರ್ಮಗಳಿಂದ ಹನ್ನೆರಡು ಜನರು ಸೇವಿಸುವರು. ಒಂಭತ್ತುವರೆ ಕೋಟಿ ಮತ್ತು ಒಂದು ಲಕ್ಷಯೋಜನ ದೂರವುಳ್ಳ ಭೂಮಂಡಲವನ್ನು ಒಂದು ಕ್ಷಣದಲ್ಲಿ ಎರಡು ಸಾವಿರ ಯೋಜನ ಮತ್ತು ನಾಲ್ಕು ಮೈಲು ದೂರಕ್ಕೆ ಸೂರ್ಯ ರಥವು ಸಂಚರಿಸುವುದು.



## ಹನ್ನೆರಡು ಮಾಸಗಳಲ್ಲಿ ಸೂರ್ಯರಥದಲ್ಲಿ ಇರುವವರು [1]

ಸೂರ್ಯದೇವರ ರಥದಲ್ಲಿ ಚೈತ್ರಮಾಸದಲ್ಲಿ **ಧಾತಾ** ಎಂಬ ಆದಿತ್ಯನೂ ಕೃತಸ್ಥಳೀ ಎಂಬ ಅಪ್ಸರಸ್ತ್ರೀಯೂ, ಹೇತಿ ಎಂಬ ರಾಕ್ಷಸನೂ ವಾಸುಕಿಯೆಂಬ ನಾಗನೂ, ರಥಕೃತ್ ಎಂಬ ತಚ್ಚನೂ ಪುಲಸ್ತ್ಯ ಎಂಬ ಋಷಿಗಳೂ, ತುಂಬುರು ಎಂಬ ಗಂಧರ್ವನೂ ಇರುವರು.

ವೈಶಾಖಮಾಸದಲ್ಲಿ **ಅರ್ಯಮಾ** ಎಂಬ ಆದಿತ್ಯನೂ, ಪುಂಜಕಸ್ಥಳೀ ಎಂಬ ಅಪ್ಸರಸ್ತ್ರೀಯೂ, ಪ್ರಹೇತಿ ಎಂಬ ರಾಕ್ಷಸನೂ, ಕಚ್ಚನೀರ ಎಂಬ ನಾಗನೂ, ಅಥೌಜಾ ಎಂಬ ತಚ್ಚನೂ, ಪುಲಹ ಎಂಬ ಋಷಿಗಳೂ ನಾರದ ಎಂಬ ಗಂಧರ್ವನೂ ಇರುವರು.

ಜ್ಯೇಷ್ಠಮಾಸದಲ್ಲಿ **ಮಿತ್ರ** ಎಂಬ ಆದಿತ್ಯನೂ, ಮೇನಕಾ ಎಂಬ ಅಪ್ಸರಸ್ತ್ರೀಯು,

ಪೌರುಷೇಯ ಎಂಬ ರಾಕ್ಷಸನೂ, ತಕ್ಷಕ ಎಂಬ ನಾಗನೂ, ರಥಸ್ವನ ಎಂಬ ತಚ್ಚನೂ ಅತ್ರಿ ಎಂಬ ಋಷಿಗಳೂ ಹಾಹಾ ಎಂಬ ಗಂಧರ್ವನೂ ಇರುವರು.

ಆಷಾಢಮಾಸದಲ್ಲಿ **ವರುಣ** ಎಂಬ ಆದಿತ್ಯನೂ ರಂಭಾ ಎಂಬ ಅಪ್ಸರಸ್ತ್ರೀಯೂ, ಸಹಜನ್ಯ ಎಂಬ ರಾಕ್ಷಸನೂ, ಶುಕ್ರ ಎಂಬ ನಾಗನೂ, ಚಿತ್ರಸ್ವನ ಎಂಬ ತಚ್ಚನೂ, ವಸಿಷ್ಠ ಎಂಬ ಋಷಿಗಳೂ, ಹೂಹೂ ಎಂಬ ಗಂಧರ್ವನೂ ಇರುವರು.

ಶ್ರಾವಣಮಾಸದಲ್ಲಿ **ಇಂದ್ರ** ಎಂಬ ಆದಿತ್ಯನೂ, ಪ್ರಮ್ಲೋಚಾ ಎಂಬ ಅಪ್ಸರಸ್ತ್ರೀಯೂ, ಸ್ವರ್ಯ ಎಂಬ ರಾಕ್ಷಸನೂ, ಏಲಾಪತ್ರ ಎಂಬ ನಾಗನೂ, ಸ್ರೋತ ಎಂಬ ತಚ್ಚನೂ ಅಂಗಿರಾ ಎಂಬ ಋಷಿಗಳೂ, ವಿಶ್ವಾವಸು ಎಂಬ ಗಂಧರ್ವನೂ ಇರುವರು.

ಭಾದ್ರಪದಮಾಸದಲ್ಲಿ **ವಿವಸ್ವಾನ್** ಎಂಬ ಸೂರ್ಯನೂ, ಅನುಮ್ಲೋಚಾ ಎಂಬ ಅಪ್ಸರಸ್ತ್ರೀಯೂ, ವ್ಯಾಘ್ರ ಎಂಬ ರಾಕ್ಷಸನೂ, ಶಂಖಪಾಲ ಎಂಬ ನಾಗನೂ, ಆಸಾರಗಣ ಎಂಬ ತಚ್ಚನೂ, ಭೃಗು ಎಂಬ ಋಷಿಗಳೂ, ಉಗ್ರಸೇನ ಎಂಬ ಗಂಧರ್ವನೂ ಇರುವರು.

ಆಶ್ವಯುಜಮಾಸದಲ್ಲಿ **ತ್ವಷ್ಟಾ** ಎಂಬ ಆದಿತ್ಯನೂ, ತಿಲೋತ್ತಮಾ ಎಂಬ ಅಪ್ಸರಸ್ತ್ರೀಯೂ, ಋಚೀಕತನಯ ಎಂಬ ರಾಕ್ಷಸನೂ, ಕಂಬಲ ಎಂಬ ನಾಗನೂ, ಶತಜಿತ್ ಎಂಬ ತಚ್ಚನೂ, ಬ್ರಹ್ಮರಾತ ಎಂಬ ಋಷಿಯೂ, ಧೃತರಾಷ್ಟ್ರ ಎಂಬ ಗಂಧರ್ವನೂ ಇರುವರು.

ಕಾರ್ತಿಕಮಾಸದಲ್ಲಿ **ವಿಷ್ಣು** ಎಂಬ ಆದಿತ್ಯನೂ, ರಂಭಾ ಎಂಬ ಅಪ್ಸರಸ್ತ್ರೀಯೂ, ಅಶ್ವ ಎಂಬ ರಾಕ್ಷಸನೂ, ಅಶ್ವತರ ಎಂಬ ನಾಗನೂ, ಸತ್ಯಕ ಎಂಬ ತಚ್ಚನೂ, ವಿಶ್ವಾಮಿತ್ರ ಎಂಬ ಋಷಿಗಳೂ, ಸೂರ್ಯವರ್ಚ ಎಂಬ ಗಂಧರ್ವನೂ ಇರುವರು.

ಮಾರ್ಗಶಿರಮಾಸದಲ್ಲಿ **ಅಂಶು** ಎಂಬ ಆದಿತ್ಯನೂ, ಊರ್ವಶೀಯೆಂಬ ಅಪ್ಸರಸ್ತ್ರೀಯೂ, ವಿದ್ಯುಚ್ಛಂಕು ಎಂಬ ರಾಕ್ಷಸನೂ, ಮಹಾಶಂಖ ಎಂಬ ನಾಗನೂ, ತಾರ್ಕ್ಷ್ಯ ಎಂಬ ತಚ್ಚನೂ, ಕಶ್ಯಪ ಎಂಬ ಋಷಿಗಳೂ, ಧೃತಸೇನ ಎಂಬ ಗಂಧರ್ವನೂ ಇರುವರು.

ಪುಷ್ಯಮಾಸದಲ್ಲಿ **ಭಗ** ಎಂಬ ಆದಿತ್ಯನೂ ಪೂರ್ವಚಿತ್ತ ಎಂಬ ಅಪ್ಸರಸ್ತ್ರೀಯೂ, ಸ್ಫೂರ್ಜ ಎಂಬ ರಾಕ್ಷಸನೂ, ಕರ್ಕೋಟಕ ಎಂಬ ನಾಗನೂ ಆಯು ಎಂಬ ತಚ್ಚನೂ

ಅರಿಷ್ಟನೇಮಿ ಎಂಬ ಋಷಿಯೂ, ಊರ್ಣ ಎಂಬ ಗಂಧರ್ವನೂ ಇರುವರು.

ಮಾಘಮಾಸದಲ್ಲಿ **ಪೂಷ** ಎಂಬ ಆದಿತ್ಯನೂ, ಘೃತಾಚೀ ಎಂಬ ಅಪ್ಸರಸ್ತ್ರೀಯೂ, ವಾತ ಎಂಬ ರಾಕ್ಷಸನೂ, ಧನಂಜಯ ಎಂಬ ನಾಗನೂ, ಸುಷೇಣ ಎಂಬ ತಚ್ಚನೂ, ಗೌತಮ ಎಂಬ ಋಷಿಗಳೂ, ಸುರುಚಿ ಎಂಬ ಗಂಧರ್ವನೂ ಇರುವರು.

ಫಾಲ್ಗುನಮಾಸದಲ್ಲಿ **ಪರ್ಜನ್ಯ** ಎಂಬ ಆದಿತ್ಯನೂ, ಋತು ಎಂಬ ಅಪ್ಸರಸ್ತ್ರೀಯೂ, ವಿಶ್ವ ಎಂಬ ರಾಕ್ಷಸನೂ, ಐರಾವತ ಎಂಬ ನಾಗನೂ, ಸೇನಜಿತ್ ಎಂಬ ತಚ್ಚನೂ ಭರದ್ವಾಜ ಎಂಬ ಋಷಿಯೂ, ವರ್ಚಾ ಎಂಬ ಗಂಧರ್ವನೂ ಇರುವರು.

ಇವರಲ್ಲಿ ವಿಷ್ಣುವೆಂಬ ಆದಿತ್ಯನು ಸಾಕ್ಷಾತ್ ಪರಮಾತ್ಮನ ರೂಪವೇ. ಇತರ ಹನ್ನೊಂದು ಆದಿತ್ಯರು ಬೇರೆ ಜೀವರು. ಅವರಲ್ಲಿ ಆವಾವ ಹೆಸರಿನಿಂದ ಪರಮಾತ್ಮನು ಸನ್ನಿಹಿತನಾಗಿರುವನು. ಹೀಗೆ ಸೂರ್ಯರಥದಲ್ಲಿ ಒಂದೊಂದು ಮಾಸದಲ್ಲಿ ಏಳೇಳು ಜನರು ಇರುವರು. ಅವರಲ್ಲಿ ಋಷಿಗಳು ಋಗಾದಿಗಳಿಂದ ಆವಾವಾ ಹೆಸರುಳ್ಳ ಆದಿತ್ಯನಾಮಕ ಪರಮಾತ್ಮನನ್ನು ಸ್ತೋತ್ರ ಮಾಡುವರು. ಗಂಧರ್ವರು ಗಾಯನ ಮಾಡುವರು. ಅಪ್ಸರಸ್ತ್ರೀಯರು ಎದುರಲ್ಲಿ ನರ್ತನ ಮಾಡುವರು. ನಾಗಗಳು ರಥವು ಸರಿಯಾಗಿ ಹೋಗುವಂತೆ ಮಾಡುವುವು. ತಚ್ಚರು ರಥವನ್ನು ಸರಿ ಮಾಡುವರು. ಬಲಿಷ್ಠರಾದ ರಾಕ್ಷಸರು ಹಿಂದಿನಿಂದ ರಥವನ್ನು ತಳ್ಳುವರು. ಇಷ್ಟಮಾತ್ರವಲ್ಲದೆ ವಾಲಖಿಲ್ಯರೆಂದು ಹೆಸರುಳ್ಳ ಅರುವತ್ತು ಸಾವಿರ ಬ್ರಹ್ಮರ್ಷಿಗಳು ಎದುರಲ್ಲಿ ಆದಿತ್ಯನಿಗೆ ಎದುರಾಗಿ ಸ್ತೋತ್ರಮಾಡುತ್ತಾ ಇರುವರು.



## ಪಾತಾಳಾದಿಲೋಕಗಳು [1]

ಸೂರ್ಯಮಂಡಲದ ಕೆಳಗೆ ಹತ್ತುಸಾವಿರ ಯೋಜನ ದೂರದಲ್ಲಿ ರಾಹುವು ನಕ್ಷತ್ರದಂತೆ ಸಂಚರಿಸುವನೆಂದು ಕೆಲವು ಹೇಳುವರು. ಅವನು ಭಗವಂತನ ಅನುಗ್ರಹದಿಂದ ದೇವತೆಗಳಿಂದ ಆವಿಷ್ಟನಾಗಿ ನವಗ್ರಹಗಳಲ್ಲಿ ಒಬ್ಬ ಗ್ರಹನಾಗಿರುವನು. ಸೂರ್ಯಮಂಡಲವು ಹತ್ತುಸಾವಿರ ಯೋಜನ ವಿಶಾಲವಾಗಿರುವುದೆಂದು

1. ಭಾಗ. V-21, 22, 23

ಹೇಳುವರು. ಚಂದ್ರಮಂಡಲವು ಇಪ್ಪತ್ತುಸಾವಿರ ಯೋಜನ ವಿಶಾಲವಾಗಿರುವುದು. ರಾಹುಮಂಡಲವು ನಾಲ್ವತ್ತು ಸಾವಿರ ಯೋಜನ ವಿಶಾಲವಾಗಿರುವುದು. ರಾಹುವು ಪರ್ವಕಾಲದಲ್ಲಿ ಸೂರ್ಯಚಂದ್ರರನ್ನು ಹಿಡಿಯಲು ಓಡುವನು. ಆ ಸಮಯದಲ್ಲಿ ಪರಮಾತ್ಮನಿಂದ ಆಜ್ಞಪ್ತವಾದ ಚಕ್ರಾಯುಧವು ಬರುವುದು. ಅದನ್ನು ನೋಡಿ ಒಂದು ಮುಹೂರ್ತಕಾಲ ಹಾಗೆಯೇ ಇದ್ದು ಭಯಯುಕ್ತವಾದ ಮನಸ್ಸುಳ್ಳವನಾಗಿ ದೂರದಿಂದಲೇ ಹಿಂದಿರುಗಿ ಹೋಗುವನು. ಇದನ್ನು ಜನರು ಗ್ರಹಣವೆನ್ನುವರು. (ಶ್ರೀಭಗವಂತನ ಚಕ್ರವು ಬರುವ ಕಾರಣ ಗ್ರಹಣಕಾಲವು ಪರಮಪುಣ್ಯ ಕಾಲವೆನಿಸುವುದು) ರಾಹುಮಂಡಲದ ಕೆಳಗೆ ಹತ್ತು ಸಾವಿರ ಯೋಜನ ದೂರದಲ್ಲಿ ಸಿದ್ಧ ಚಾರಣ ಭೂತಪ್ರೇತಗಳು ವಿಹಾರಮಾಡುವ ಅಂತರಿಕ್ಷವಿರುವುದು. ಅಲ್ಲಿಯೇ ಗಾಳಿಯು ಬೀಸುತ್ತಿರುವುದು. ಮೇಘಗಳು ಕಾಣಿಸುತ್ತಿರುವುವು. ಅದರ ಕೆಳಗೆ ನೂರು ಯೋಜನದೂರದಲ್ಲಿ ಭೂಮಿಯು ಇರುವುದು. ಆ ನೂರು ಯೋಜನ ಮಧ್ಯದಲ್ಲಿ ಹಂಸ ಭಾಸ ಹದ್ದು ಗರುಡ ಮೊದಲಾದ ಪಕ್ಷಿಗಳು ಹಾರುತ್ತಿರುವುವು. ಭೂಮಿಯ ಕೆಳಗೆ ಏಳು ಲೋಕಗಳಿರುವುವು. ಒಂದೊಂದೂ ಹತ್ತು ಸಾವಿರ ಯೋಜನ ವಿಶಾಲವಾಗಿರುವುವು. ತಾರತಮ್ಯದಿಂದ ಇರುವುವು. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ ಎಂದು ಅವುಗಳ ಹೆಸರು. ಇವುಗಳಿಗೆ ಬಿಲಸ್ವರ್ಗಗಳೆಂದು ಹೆಸರು. ಇವುಗಳಲ್ಲಿ ಸ್ವರ್ಗಕ್ಕಿಂತಲೂ ಅಧಿಕವಾದ ಸಂಪತ್ತು ಇರುವುದು. ದೈತ್ಯರೂ ದಾನವರೂ ಸರ್ಪಗಳೂ ಪತ್ನೀಪುತ್ರಾದಿಗಳಿಂದ ಕೂಡಿದವರಾಗಿ ಬಂಧುಮಿತ್ರಾದಿಗಳಿಂದ ಕೂಡಿದವರಾಗಿ ವರಬಲದಿಂದ ರುದ್ರ ದೇವರಿಂದಲೂ ಭಯವಿಲ್ಲದೆ ಸಂತೋಷದಿಂದ ಇರುತ್ತಿರುವರು. ಆ ಲೋಕಗಳಲ್ಲಿ ಮಯಾಸುರನಿಂದ ಮಾಯೆಯಿಂದ ಮಾಡಲ್ಪಟ್ಟ ನಾನಾ ವಿಧ ಗೋಪುರ ಮನೆ ಇತ್ಯಾದಿಗಳಿಂದ ಅಲಂಕೃತಗಳಾದ ಪಟ್ಟಣಗಳು ಪ್ರಕಾಶಿಸುತ್ತಿರುವುವು. ಉದ್ಯಾನಾದಿ ಗಳಿಂದ ದೇವಲೋಕದ ಸೌಂದರ್ಯವನ್ನು ಅತಿಕ್ರಮಿಸುವುದು. ಅಲ್ಲಿ ರಾತ್ರಿ ಹಗಲು ಮೊದಲಾದ ಕಾಲದಿಂದ ಭಯವಿರುವುದಿಲ್ಲ. ಅಲ್ಲಿ ದೊಡ್ಡ ಸರ್ಪಗಳ ತಲೆಯಲ್ಲಿ ಇರುವ ಮಣಿಗಳು ಕತ್ತಲೆಯನ್ನು ಪರಿಹರಿಸುವುವು. ಇಲ್ಲಿ ಇರುವ ಜನರು ಔಷಧ ರಸಪಾನದಿಂದ ಸ್ನಾನದಿಂದ ರೋಗಗಳೂ ಮನೋವ್ಯಥೆಗಳೂ ತಲೆಬಿಳಿಯಾಗು ವುದೂ ಇತ್ಯಾದಿಗಳೊಂದೂ ಇರುವುದಿಲ್ಲ. ಅಲ್ಲಿ ಪರಮಾತ್ಮನ ಚಕ್ರಾಯುಧದಿಂದ ಹೊರತು ಮರಣವುಂಟಾಗುವುದಿಲ್ಲ. ಆ ಚಕ್ರಾಯುಧವು ಅಲ್ಲಿಗೆ ಪ್ರವೇಶಿಸಲು ಅಸುರಸ್ತ್ರೀಯರ ಗರ್ಭವು ಸ್ರವಿಸಿ ಹೋಗುವುದು.

**ಅತಲ**ಲೋಕದಲ್ಲಿ ಮಯಾಸುರನ ಮಗನಾದ ಬಲ ಎಂಬ ಅಸುರನು ವಾಸ ಮಾಡುತ್ತಿರುವನು. ಅವನು ತೊಂಭತ್ತಾರು ಮಾಯೆಗಳನ್ನು ಉಂಟುಮಾಡಿರುವನು. ಆ ಮಾಯೆಗಳಲ್ಲಿ ಕೆಲವನ್ನು ಈಗಲೂ ಮಾಯಾವಿಗಳು ಧರಿಸಿರುವರು. ಆ ಬಲನು ಬಾಯಿ ಆಕಳಿಕೆ ತೆಗೆಯುವಾಗ ಸ್ವೈರಿಣಿ ಕಾಮಿನಿ ಪುಂಶ್ಚಲಿ ಎಂದು ಹೆಸರುಳ್ಳ ಮೂರು ವಿಧ ಸ್ತ್ರೀಯರು ಉಂಟಾಗಿರುವರು. ಆ ಸ್ತ್ರೀಯರು ಅಲ್ಲಿಗೆ ಪ್ರವೇಶಿಸಿದ ಪುರುಷರಿಗೆ ಹಾಟಕ ಎಂಬ ರಸವನ್ನು ಕುಡಿಸಿ ತಮ್ಮ ವಿಲಾಸದಿಂದ ಸುಖಪಡಿಸುವರು. ಆ ರಸವನ್ನು ಪಾನಮಾಡುವುದರಿಂದ ಪುರುಷರು ಹತ್ತುಸಾವಿರ ಆನೆಗಳ ಬಲವುಳ್ಳವರಾಗಿ ಮದವುಳ್ಳವರಾಗಿ ನಾನು ಈಶ್ವರನು ನಾನು ಸಿದ್ಧನು ಎಂದು ಹೇಳುತ್ತಿರುವರು.

**ವಿತಲ**ಲೋಕದಲ್ಲಿ ಹಾಟಕೇಶ್ವರ ಎಂದು ಹೆಸರುಳ್ಳ ರುದ್ರದೇವರು ತನ್ನ ಭೂತಗಣಗಳಿಂದ ಸಹಿತರಾಗಿ ಪ್ರಜಾಸೃಷ್ಟಿಯು ಅಭಿವೃದ್ಧಿಯಾಗುವುದಕ್ಕಾಗಿ ಪಾರ್ವತಿಯೊಡನೆ ಕ್ರೀಡಿಸುತ್ತಲೇ ಇರುವರು. ಆದರಿಂದ ಅವರ ವೀರ್ಯದಿಂದ ಉಂಟಾದ ಹಾಟಕ ಎಂಬ ನದಿಯು ಹರಿಯುವುದು. ಅದನ್ನು ಗಾಳಿಯಿಂದ ಅಭಿವೃದ್ಧವಾಗಿ ಅಗ್ನಿಯು ಪಾನಮಾಡುವುದು. ಆದರದಿಂದ ಹಾಟಕ ಎಂದು ಹೆಸರುಳ್ಳ ಬಂಗಾರವುಂಟಾಗುವುದು. ಅಸುರರ ಅಂತಃಪುರದಲ್ಲಿ ಹೆಂಗಸರೂ ಗಂಡಸರೂ ಧರಿಸುತ್ತಿರುವರು.

ವಿತಲದ ಕೆಳಗೆ **ಸುತಲ**ದಲ್ಲಿ ಪವಿತ್ರ ಕೀರ್ತಿಯುಳ್ಳವನಾದ ಬಲಿಯು ವಾಸಮಾಡುತ್ತಿರುವನು. ಭಗವಂತನನ್ನು ಸ್ತೋತ್ರ ಮಾಡುತ್ತಾ ಇರುವನು. ಜಗದ್ಗುರುವಾದ ನಾರಾಯಣನು ಗದೆಯನ್ನು ಹಿಡಿದು ದ್ವಾರದಲ್ಲಿಯೇ ಇರುವನು. ಭಕ್ತನ ಮೇಲಿನ ಪ್ರೇಮದಿಂದ ಪರಮಾತ್ಮನು ಹಾಗೆ ಇರುವನು. ರಾವಣನು ದಿಗ್ವಿಜಯಕ್ಕೆ ಬಂದವನು ಯುದ್ಧಕ್ಕೆ ಬಂದು ಆ ಪರಮಾತ್ಮನಿಂದ ಹತ್ತು ಸಾವಿರ ಯೋಜನಕ್ಕೆ ತಳ್ಳಲ್ಪಟ್ಟನು.

ಅದರ ಕೆಳಗೆ **ತಲಾತಲ** ಲೋಕದಲ್ಲಿ ಮಯ ಎಂಬ ಅಸುರನು ವಾಸಮಾಡುತ್ತಿರುವನು. ಅವನ ತ್ರಿಪುರಗಳನ್ನು ಮೂರುಲೋಕದ ಹಿತವನ್ನು ಮಾಡುವ ಅಭಿಪ್ರಾಯವುಳ್ಳ ರುದ್ರದೇವರಿಂದ ನಾಶಮಾಡಿರುವರು. ಆಮೇಲೆ ರುದ್ರದೇವರ ಅನುಗ್ರಹದಿಂದ ಸ್ಥಾನವನ್ನು ಹೊಂದಿ ರುದ್ರದೇವರಿಂದ ರಕ್ಷಿತನಾಗಿ ಸುದರ್ಶನಭಯಹರಿತನಾಗಿ ಇರುವನು.

ಅದರ ಕೆಳಗೆ **ಮಹಾತಲ**ಲೋಕದಲ್ಲಿ ಅನೇಕ ಶಿರಸ್ಸುಳ್ಳ ಸರ್ಪಗಳ

ಕ್ರೋಧವಶವೆಂಬ ಗಣವಿರುವುದು. ಕುಹಕ ತಕ್ಷಕ ಕಾಲಿಯ ಇತ್ಯಾದಿ ಸರ್ಪಗಳೇ ಪ್ರಧಾನಗಳಾಗಿ ಉಳ್ಳ ಸರ್ಪಗಳು ಪರಮಾತ್ಮನ ವಾಹನವಾದ ಗರುಡದೇವರಿಂದ ಯಾವಾಗಲೂ ಭಯಪಡುತ್ತಾ ತಮ್ಮ ಹೆಂಡತಿ ಮಕ್ಕಳಲ್ಲಿ ಆಸಕ್ತಳಾಗಿ ಭಯವನ್ನು ಮರೆತು ಸಂಚರಿಸುತ್ತಾ ಇರುವುವು.

ಅದರ ಕೆಳಗೆ **ರಸಾತಲದಲ್ಲಿ** ದೈತ್ಯರೂ ದಾನವರೂ ಪಣಿ ಎಂದು ಹೆಸರುಳ್ಳ ರಾಕ್ಷಸರೂ ನಿವಾತಕವಚ ಎಂದು ಹೆಸರುಳ್ಳ ರಾಕ್ಷಸರೂ ಹಿರಣ್ಯಪುರ ಎಂಬಲ್ಲಿ ವಾಸಮಾಡುವ ಕಾಲಕೇಯ ಎಂಬ ರಾಕ್ಷಸರೂ ವಾಸಮಾಡುವರು. ಅವರೆಲ್ಲರೂ ದೇವತೆಗಳಿಗೆ ಶತ್ರುಗಳು. ಅವರು ಸ್ವಭಾವದಿಂದಲೇ ಮಹಾಸಾಮರ್ಥ್ಯವುಳ್ಳವರು. ಮಹಾಸಾಹಸಿಗಳು. ಪರಮಾತ್ಮನ ತೇಜಸ್ಸಿನಿಂದಲೇ ನಷ್ಟವಾದ ಗರ್ವಉಳ್ಳವರಾಗಿರುವರು. ಪಣಿಯೆಂಬ ರಾಕ್ಷಸರು ಯೋಗಬಲದಿಂದ ಸರ್ಪಾಕಾರವುಳ್ಳವರಾಗಿ ಬಿಲದಲ್ಲಿಯೇ ಇರುವರು. ಇಂದ್ರದೇವರ ದೂತಿಯಾದ ಸರಮಾ ಎಂಬ ನಾಯಿಯ ಮಾಯಿಯಿಂದ ಇಂದ್ರದೇವರಿಂದ ಭಯಪಡುತ್ತಿರುವರು.

ಆದರ ಕೆಳಗೆ **ಪಾತಾಳದಲ್ಲಿ** ವಾಸುಕಿ ಶಂಖ ಕುಲಿಕ ಮಹಾಶಂಖ ಶ್ವೇತ ಧನಂಜಯ ಧೃತರಾಷ್ಟ್ರ ಶಂಖಚೂಡ ಕಂಬಲ ಅಶ್ವತರ ದೇವದತ್ತ ಮೊದಲಾದ ಮಹಾಸರ್ಪಗಳು ವಾಸಮಾಡುವುವು. ಅವುಗಳಿಗೆ ಐದು ಏಳು ಹತ್ತು ನೂರು ಸಾವಿರ ಶಿರಸ್ಸುಳ್ಳಗಳಿರುವುವು. ಅವುಗಳ ಹೆಡೆಗಳಲ್ಲಿರುವ ಪ್ರಕಾಶಮಾನಗಳಾದ ಮಹಾಮಣಿಗಳಿಂದ ಪಾತಾಳದಲ್ಲಿ ಇರುವ ಕತ್ತಲೆಯೆಲ್ಲಾ ನಷ್ಟವಾಗುವುದು. ಪಾತಾಳದ ಬುಡದಲ್ಲಿ ಮೂವತ್ತು ಸಾವಿರ ಯೋಜನ ದೂರದಲ್ಲಿ ಶೇಷದೇವರು ವಾಸಮಾಡುವರು. ಅವರು ಸಾವಿರ ತಲೆಗಳ ಮಧ್ಯದಲ್ಲಿ ಒಂದು ತಲೆಯಲ್ಲಿ ಭೂಮಂಡಲವನ್ನು ಸಾಸಿವೆಕಾಳನ್ನು ಧರಿಸುವಂತೆ ಅನಾಯಾಸದಿಂದ ಧರಿಸಿಕೊಂಡು ಇರುವರು. ನಾಗಕನ್ಯೆಯರು ಅವರಿಗೆ ಸೇವೆಯನ್ನು ಮಾಡುತ್ತಿರುವರು. ದೇವತೆಗಳು ಗಂಧರ್ವರು ಮೊದಲಾದವರು ಅವರನ್ನು ಧ್ಯಾನಮಾಡುತ್ತಿರುವರು. ಬ್ರಹ್ಮದೇವರ ಸಭೆಯಲ್ಲಿ ನಾರದರು ತುಂಬುರುವಿನಿಂದ ಸಹಿತರಾಗಿ ಆ ಶೇಷದೇವರಲ್ಲಿ ಅಂತರ್ಯಾಮಿಯಾದ ಪರಮಾತ್ಮನ ಮಹಿಮೆಯನ್ನು ಗಾನ ಮಾಡುತ್ತಿರುವರು.



# ಗ್ರಹಗಳ ಸ್ಥಿತಿ [1]

ಭೂಲೋಕ ಸ್ವರ್ಗಲೋಕಗಳ ಮಧ್ಯದಲ್ಲಿ ಅಂತರಿಕ್ಷದಲ್ಲಿ ಕಾಲಚಕ್ರದಲ್ಲಿ ಇದ್ದುಕೊಂಡು ಸೂರ್ಯನು ರಾಶಿ ಎಂದು ಹೆಸರುಳ್ಳ ಸಂವತ್ಸರದ ಅವಯವಗಳಾದ ಹನ್ನೆರಡು ಮಾಸಗಳನ್ನು ನಡೆಯುವಂತೆ ಮಾಡುತ್ತಾನೆ. ಒಂದು ರಾಶಿಗೆ ಎರಡು ಕಾಲು ನಕ್ಷತ್ರಗಳೆಂದು ಹೇಳುವರು. ಸಂವತ್ಸರದ ಆರನೇ ಒಂದು ಭಾಗಕ್ಕೆ ಋತುವೆಂದು ಹೆಸರು. ಅರ್ಧಕ್ಕೆ ಅಯನವೆನ್ನುವರು. ಸೂರ್ಯನು ಸಂಪೂರ್ಣ ನಭೋಮಂಡಲವನ್ನು ಸಂಚರಿಸುವ ಸಮಯಕ್ಕೆ ಸಂವತ್ಸರ ಪರಿವತ್ಸರ ಇಡಾವತ್ಸರ ಅನುವತ್ಸರ ವತ್ಸರ ಎಂದು ಐದು ಪ್ರಭೇದವುಳ್ಳದ್ದನ್ನಾಗಿ ಹೇಳುವರು. ಸೂರ್ಯನ ಕಿರಣಗಳಿಗಿಂತ ಮೇಲೆ ಲಕ್ಷಯೋಜನಗಳಲ್ಲಿ ಚಂದ್ರನು ಕಾಣಿಸುತ್ತಾ ಸೂರ್ಯನು ಒಂದು ವರ್ಷದಲ್ಲಿ ಸಂಚರಿಸುವ ಭಾಗವನ್ನು ಎರಡು ಎರಡು ಪಕ್ಷಗಳಲ್ಲಿ ಸಂಚರಿಸುವನು. ಸೂರ್ಯನು ಒಂದು ತಿಂಗಳಲ್ಲಿ ಸಂಚರಿಸುವ ಭಾಗವನ್ನು ಒಂದು ತಿಂಗಳು ಸಂಚರಿಸುವ ಭಾಗವನ್ನು ಎರಡು ಕಾಲ ನಕ್ಷತ್ರಗಳಿಂದ ಸಂಚರಿಸುವನು. ಸೂರ್ಯನು ಒಂದು ಪಕ್ಷದಲ್ಲಿ ಸಂಚರಿಸುವ ಭಾಗವನ್ನು ಒಂದೇ ದಿನದಲ್ಲಿ ಸಂಚರಿಸುವನು. ಹೀಗೆ ಶೀಘ್ರವಾಗಿ ಸಂಚರಿಸುವನು. ಶುಕ್ಲಪಕ್ಷದಲ್ಲಿ ವೃದ್ಧಿಯನ್ನು ಹೊಂದುವ ಕಲೆಗಳಿಂದಲೂ ಕೃಷ್ಣಪಕ್ಷದಲ್ಲಿ ಕ್ಷಯವನ್ನು ಹೊಂದುವ ಕಲೆಗಳಿಂದಲೂ ಯುಕ್ತನಾಗಿ ಶುಕ್ಲಪಕ್ಷ ಕೃಷ್ಣಪಕ್ಷಗಳಿಂದ ಪಿತೃಗಳಿಗೆ ಹಗಲು ರಾತ್ರಿಗಳನ್ನು ಮಾಡುವನು. ಸರ್ವಜೀವರಿಗೂ ಚೇಷ್ಟಕನಾಗಿ ಒಂದು ನಕ್ಷತ್ರವನ್ನು ಮೂವತ್ತು ಮುಹೂರ್ತಗಳಲ್ಲಿ ಸಂಚರಿಸುತ್ತಾನೆ. ಚಂದ್ರನಿಂದ ಮೇಲೆ ಲಕ್ಷಯೋಜನ ಎತ್ತರದಲ್ಲಿ ಮೇರುಪರ್ವತದ ದಕ್ಷಿಣದಲ್ಲಿ ಕಾಲವನ್ನು ತಿಳಿಸುವುದಕ್ಕಾಗಿ ಪರಮಾತ್ಮನಿಂದ ಇಡಲ್ಪಟ್ಟ ಅಭಿಜಿತಿನಿಂದ ಸಹಿತಗಳಾದ ಅಶ್ವಿನೀ ಮೊದಲಾದ ಇಪ್ಪತ್ತೆಂಟು ನಕ್ಷತ್ರಗಳಿರುವುವು. ಅವುಗಳ ಮೇಲೆ ಎರಡು ಲಕ್ಷ ಯೋಜನ ಎತ್ತರದಲ್ಲಿ ಶುಕ್ರಗ್ರಹವು ಕಾಣಿಸುವುದು. ಶೀಘ್ರಗತಿ ಮಂದಗತಿ ಸುಮಗತಿಯೆಂಬ ಮೂರುವಿಧ ಗತಿಗಳಿಂದ ಸೂರ್ಯನಂತೆ ಸಂಚರಿಸುವುದು. ಅನೇಕವಾಗಿ ಜನರಿಗೆಲ್ಲಾ ಅನುಕೂಲವಾಗಿರುವ ಗ್ರಹವು. ಶುಕ್ರನ ಮೇಲೆ ಎರಡುಲಕ್ಷ ಯೋಜನ ದೂರದಲ್ಲಿ ಬುಧಗ್ರಹವು ಕಾಣಿಸುವುದು. ಅನೇಕವಾಗಿ ಶುಭವನ್ನು ಉಂಟುಮಾಡುವುದು. ಬುಧನ ಮೇಲೆ ಎರಡು ಲಕ್ಷ ಯೋಜನ ದೂರದಲ್ಲಿ ಅಂಗಾರಕನು ಕಾಣಿಸುವನು. ಮೂರು ಪಕ್ಷಗಳಲ್ಲಿ ಒಂದು

1. ಭಾಗ. V-22

ರಾಶಿಯಲ್ಲಿ ಸಂಚರಿಸುವನು. ಅಂಗಾರಕನ ಮೇಲೆ ಎರಡು ಲಕ್ಷ ಯೋಜನ ದೂರದಲ್ಲಿ ಬೃಹಸ್ಪತಿ ಗ್ರಹವು ಕಾಣಿಸುವುದು. ಒಂದೊಂದು ರಾಶಿಯಲ್ಲಿ ಒಂದೊಂದು ವರ್ಷವಿರುವುದು. ವಕ್ರವಾಗಿರದಿದ್ದರೆ ಅನೇಕವಾಗಿ ಬ್ರಾಹ್ಮಣಕುಲಕ್ಕೆ ಅನುಕೂಲವಾಗಿರುವುದು. ಬೃಹಸ್ಪತಿಗ್ರಹದ ಮೇಲೆ ಎರಡು ಲಕ್ಷ ಯೋಜನ ದೂರದಲ್ಲಿ ಶನೈಶ್ವರಗ್ರಹವು ಕಾಣಿಸುವುದು. ಒಂದೊಂದು ರಾಶಿಯಲ್ಲಿ ಮೂವತ್ತು ತಿಂಗಳು ಇರುವುದು. ಅನೇಕವಾಗಿ ಅಂದರೆ ಏಕಾದಶಸ್ಥಾನದಲ್ಲಿ ಇರುವಾಗ ಹೊರತು, ಅಶುಭವನ್ನು ಉಂಟುಮಾಡುವುದು. ಆಮೇಲೆ ಉತ್ತರದಲ್ಲಿ ಹನ್ನೊಂದು ಲಕ್ಷ ಯೋಜನ ಎತ್ತರದಲ್ಲಿ ಧ್ರುವಲೋಕವು ಇರುವುದು. ಧ್ರುವನಕ್ಷತ್ರವು ಗ್ರಹನಕ್ಷತ್ರಗಳಿಗೆಲ್ಲಾ ಆಶ್ರಯವಾಗಿ ಭಗವಂತನಿಂದ ಧ್ರುವನಕ್ಷತ್ರವನ್ನೇ ಆಶ್ರಯಿಸಿ ವಾಯುವಿನಿಂದ ಪ್ರೇರಿತಗಳಾದ ಕಲ್ಪಪರ್ಯಂತವೂ ಸಂಚರಿಸುತ್ತಿರುವುವು. ಆಕಾಶದಲ್ಲಿ ಮೇಘಗಳೂ ಪಕ್ಷಿಗಳೂ ವಾಯುವಶಗಳಾಗಿ ಹೇಗೆ ಸಂಚರಿಸುವುವೋ ಹಾಗೆಯೇ ನಕ್ಷತ್ರ ಮೊದಲಾದವು ಕರ್ಮನಿರ್ಮಿತಗಮನವುಳ್ಳವುಗಳಾಗಿ ಭೂಮಿಯಲ್ಲಿ ಬೀಳುವುದಿಲ್ಲ. ಕೆಲವರು ಈ ಗ್ರಹಾದಿಗಳು ಚೇಳಿನ ಆಕಾರವುಳ್ಳ ಶಿಂಶುಮಾರ ರೂಪಿಯಾದ ಪರಮಾತ್ಮನ ಯೋಗಸಾಮರ್ಥ್ಯದಿಂದ ಧರಿಸಲ್ಪಟ್ಟಿವೆಯೆನ್ನುವರು. ತಲೆಯನ್ನು ಕೆಳಗೆ ಮಾಡಿಕೊಂಡು ಬಾಲವನ್ನು ಬಗ್ಗಿಸಿಕೊಂಡಿರುವ ಚೇಳಿನ ರೂಪವುಳ್ಳ ಶಿಂಶುಮಾರ ಎಂದು ಹೆಸರುಳ್ಳ ಪರಮಾತ್ಮನ ಬಾಲದ ಅಗ್ರದಲ್ಲಿ ಧ್ರುವನೂ ಮಧ್ಯದಲ್ಲಿ ಪ್ರಜಾಪತಿ, ಅಗ್ನಿ, ಇಂದ್ರ, ಧರ್ಮ ಇವರು ಆಶ್ರಯಿಸಿರುವರು. ಬಾಲದ ಬುಡದಲ್ಲಿ ಧಾತ ವಿಧಾತ ಎನ್ನುವವರು ಕಟಿಯಲ್ಲಿ ಸಪ್ತಋಷಿಗಳೂ ದಕ್ಷಿಣಪಾರ್ಶ್ವದಲ್ಲಿ ಮಖಾ, ಹುಬ್ಬಾ, ಉತ್ತರ, ಹಸ್ತಾ, ಚಿತ್ರಾ, ಸ್ವಾತಿ, ವಿಶಾಖ, ಅನುರಾಧ ನಕ್ಷತ್ರಗಳೂ ಆಶ್ರಯಿಸಿರುವುವು. ಬಲಪಾರ್ಶ್ವದಲ್ಲಿ ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ, ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ ಎಂಬ ನಕ್ಷತ್ರಗಳೂ ಬೆನ್ನಿನಲ್ಲಿ ಆಜವೀಥಿಯೂ, ಆಕಾಶಗಂಗೆಯೂ, ಹೊಟ್ಟೆಯಲ್ಲಿಯೂ ಪುನರ್ವಸು, ಪುಷ್ಯಗಳೂ ಬಲ ಎಡ ಕಟಿಪ್ರದೇಶಗಲ್ಲಿಯೂ ಆರ್ದ್ರಾ ಆಶ್ಲೇಷಾ ನಕ್ಷತ್ರಗಳು ಬಲ ಎಡ ಮೂಗುಗಳಲ್ಲಿಯೂ ಶ್ರವಣ, ಪೂರ್ವಾಷಾಢ ನಕ್ಷತ್ರಗಳು ಬಲ ಎಡ ಕಣ್ಣುಗಳಲ್ಲಿಯೂ ಧನಿಷ್ಠಾ, ಮೂಲ ನಕ್ಷತ್ರಗಳೂ ಮೇಲಿನ ಕಪೋಲದಲ್ಲಿ ಅಗಸ್ತ್ಯರೂ, ಕೆಳಗಿನ ಕಪೋಲದಲ್ಲಿ ಯಮನೂ ಬಾಯಿಯಲ್ಲಿ ಅಂಗಾರಕನೂ ಉಪಸ್ಥದಲ್ಲಿ ಶನೈಶ್ವರನೂ ಭುಜದಲ್ಲಿ ಬೃಹಸ್ಪತಿಯೂ, ಎದೆಯಲ್ಲಿ ಆದಿತ್ಯನೂ, ಹೃದಯದಲ್ಲಿ ನಾರಾಯಣನೂ, ಮನಸ್ಸಿನಲ್ಲಿ ಚಂದ್ರನೂ

ನಾಭಿಯಲ್ಲಿ ಶುಕ್ರನೂ, ಸ್ತನಗಳಲ್ಲಿ ಅಶ್ವಿನೀದೇವತೆಗಳೂ, ಪ್ರಾಣಾಪಾನಗಳಲ್ಲಿ ರಾಹುವೂ, ಕುತ್ತಿಗೆಯಲ್ಲಿ ಕೇತುವೂ, ಕೇತುವು ಸರ್ವಾಂಗಗಳಲ್ಲಿಯೂ, ರೋಮ ಗಳಲ್ಲಿ ತಾರ ಎಂಬ ನಕ್ಷತ್ರಗಳೂ ಆಶ್ರಯಿಸಿಕೊಂಡು ಇರುವುವು. ಈಪ್ರಕಾರವಾದ ಸರ್ವದೇವತೆಗಳಿಗೆ ಆಧಾರಭೂತವಾದ ಶಿಂಶುಮಾರರೂಪಿಯಾದ ಪರಮಾತ್ಮನನ್ನು ಪ್ರತಿನಿತ್ಯವೂ ಸಂಧ್ಯಾಕಾಲದಲ್ಲಿ ನಮಸ್ಕಾರಮಾಡಿ ಸ್ತೋತ್ರಮಾಡಿದರೆ ಮೂರು ಕಾಲದಲ್ಲಿಯೂ ಮಾಡಿದ ಪಾಪವು ಪರಿಹೃತವಾಗುವುದು.



## ಅಶ್ವತ್ಥವನ್ನು ಶನಿವಾರ ಮಾತ್ರ ಮುಟ್ಟಬೇಕು

ಸಮುದ್ರಮಥನದಿಂದ ಉಂಟಾದ ರತ್ನಗಳು ದೇವತೆಗಳಿಗೆ ಲಭಿಸಿದವು. ದೇವತೆಗಳು ಶ್ರೀದೇವಿಯರನ್ನು ಕೌಸ್ತುಭಮಣಿಯನ್ನು ವಿಷ್ಣುವಿಗೆ ಕೊಟ್ಟರು. ಶ್ರೀಪರಮಾತ್ಮನು ಲಕ್ಷ್ಮೀದೇವಿಯರನ್ನು ಪತ್ನಿಯರನ್ನಾಗಿ ಸ್ವೀಕಾರಮಾಡಿದಾಗ ಅವರು ನನ್ನ ಜ್ಯೇಷ್ಠಳಾದ ಅಲಕ್ಷ್ಮಿಗೆ ಮದುವೆಯಾಗದೆ ನನಗೆ ಹೇಗೆ ಮದುವೆ ಯಾಗುವುದು? ಆದುದರಿಂದ ನನ್ನ ಅಕ್ಕನಿಗೆ ಮದುವೆ ಮಾಡಿ ನನಗೆ ಮದುವೆ ಯಾಗಬೇಕು. ಇದು ಸನಾತನ ಧರ್ಮವು ಎಂದರು. ಆ ಮಾತನ್ನು ಕೇಳಿ ಪರಮಾತ್ಮನು ಬಹುದೀರ್ಘ ತಪಸ್ಸುಳ್ಳ ಉದ್ದಾಲಕ ಮುನಿಗಳಿಗೆ ದೊಡ್ಡ ಮುಖವುಳ್ಳ ಶುಭ್ರವಾದ ಹಲ್ಲುಗಳುಳ್ಳ ಮುದುಕಿಯಾದ ಉದ್ದವಾಗಿದ್ದ ಕೆಂಪಾದ ಕಣ್ಣುಗಳುಳ್ಳ ಕ್ರೂರವಾದ ಪಿಂಗಲದ ಬಣ್ಣದ ಕೂದಲುಗಳುಳ್ಳ ಅಲಕ್ಷ್ಮಿಯನ್ನು ಮದುವೆ ಮಾಡಿಕೊಟ್ಟನು. ಉದ್ದಾಲಕರು ಪರಮಾತ್ಮನ ಮಾತಿನಿಂದ ಅವಳನ್ನು ಅಂಗೀಕರಿಸಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದರು. ವೇದಧ್ವನಿಯಿಂದ ಕೂಡಿದ ಹೋಮಧೂಪದ ಗಂಧದಿಂದ ಕೂಡಿದ ವೇದಘೋಷದಿಂದ ಸಹಿತವಾದ ಆ ಆಶ್ರಮವನ್ನು ನೋಡಿ ಅಲಕ್ಷ್ಮಿಯು ವ್ಯಥೆಯುಳ್ಳವಳಾಗಿ ವೇದಧ್ವನಿಯಿಂದ ಕೂಡಿದ ಪ್ರದೇಶವು ನನಗೆ ವಾಸಕ್ಕೆ ಯೋಗ್ಯವಲ್ಲ. ನಾನು ಬರಲಾರೆನು. ಬೇರೆಸ್ಥಳಕ್ಕೆ ಕರೆದುಕೊಂಡು ಹೋಗಿರಿ' ಎಂದು ಹೇಳಿದಳು. ಅದಕ್ಕೆ ಉದ್ದಾಲಕರು 'ಯಾಕೆ ನೀನು ಬರಲಾರೆ? ನಿನಗೆ ಏನು ಅಸಮ್ಮತವಾಗಿದೆ? ನಿನಗೆ ಯೋಗ್ಯವಾದ ವಾಸಸ್ಥಾನವು ಹೇಗೆ ಇರಬೇಕು? ಹೇಳು' ಎಂದರು. ಅದಕ್ಕೆ ಅಲಕ್ಷ್ಮಿಯು 'ಎಲ್ಲಿ ವೇದಧ್ವನಿಯು ಕೇಳಿಸುವುದೋ, ಅತಿಥಿಗಳ ಪೂಜೆಯು ನಡೆಯುವುದೋ, ಯಜ್ಞದಾನಾದಿಗಳು ನಡೆಯುವುದೋ, ಅಲ್ಲಿ ವಾಸಮಾಡಲಾರೆನು. ಉತ್ತಮವಾದ

ನೀತಿ ಕುಶಲವಾದ ಧರ್ಮಯುಕ್ತವಾದ ಪ್ರಿಯವನ್ನು ಹೇಳುವವರಾದ ಜನರು ಇರುವರೋ ಎಲ್ಲಿ ಗುರುದೇವತೆಗಳ ಪೂಜೆಯು ನಡೆಯುವುದೋ ಅಲ್ಲಿ ನಾನು ವಾಸ ಮಾಡಲಾರೆನು. ಎಲ್ಲಿ ಪರಸ್ಪರ ಸ್ನೇಹದಿಂದ ದಾಂಪತ್ಯವು ನಡೆಯುವುದೋ ಎಲ್ಲಿ ಪಿತೃದೇವತೆಗಳ ಅರ್ಚನೆಯು ನಡೆಯುವುದೋ ಅಲ್ಲಿ ನಾನು ವಾಸಮಾಡಲಾರೆನು.

ಯಾವ ಮನೆಯಲ್ಲಿ ರಾತ್ರಿ ರಾತ್ರಿಯಲ್ಲಿ ದಂಪತಿಗಳು ಜಗಳಾಡುತ್ತಿರುವರೋ ಎಲ್ಲ ಅತಿಥಿಗಳು ನಿರಾಶರಾಗಿ ಹಿಂತಿರುಗಿ ಹೋಗುವರೋ ಆ ಸ್ಥಳದಲ್ಲಿ ನನಗೆ ಸಂತೋಷವಾಗುವುದು. ಎಲ್ಲಿ ಜೇಟಾಟವನ್ನು ಆಡುವವರೂ, ಪರರ ಸೊತ್ತನ್ನು ಅಪಹರಿಸುವರೂ, ಪರಸ್ತ್ರೀಯರಲ್ಲಿ ಆಸಕ್ತರಾದವರೂ, ಇರುವರೋ ಎಲ್ಲಿ ದೊಡ್ಡವರಿಗೆ ಸಜ್ಜನರಿಗೆ ಬ್ರಾಹ್ಮಣರಿಗೆ ಅಪಮಾನವಾಗುವುದೋ, ಎಲ್ಲಿ ಯಾವಾಗಲೂ ನಿಷ್ಠುರವಾದ ಮಾತು ನಡೆಯುತ್ತಿರುವುದೋ, ಎಲ್ಲಿ ಗೋಹತ್ಯೆಯೂ ಮದ್ಯಪಾನವೂ ಬ್ರಹ್ಮಹತ್ಯಾದಿ ಪಾಪಗಳೂ ನಡೆಯುತ್ತಿರುವುದೋ, ಅಲ್ಲಿ ನಾನು ಯಾವಾಗಲೂ ವಾಸಮಾಡುವೆನು' ಎಂದಳು.

ಉದ್ದಾಲಕರು ಅವಳ ಮಾತನ್ನು ಕೇಳಿ ವಿಷಾದಯುಕ್ತವಾದ ಮುಖವುಳ್ಳವ ರಾದರು. ಪರಮಾತ್ಮನು ಹೇಳಿದ್ದ ಮಾತನ್ನು ಸ್ಮರಿಸಿಕೊಂಡು ಒಂದನ್ನೂ ಹೇಳಲಿಲ್ಲ. ಮುಂದೆ ಹೋಗುತ್ತಿರಲು ಹೋದಲ್ಲಿ ಎಲ್ಲಾ ಅವರನ್ನು ಪೂಜಿಸುತ್ತಿರುವುದನ್ನು ನೋಡಿ 'ನಾನು ಬರಲಾರೆನು' ಎಂದಳು. ತರುವಾಯ ಉದ್ದಾಲಕರು 'ಅಲಕ್ಷ್ಮಿಯೇ! ಈ ಅಶ್ವತ್ಥಮರದ ಬುಡದಲ್ಲಿ ಒಂದು ಕ್ಷಣ ಇರು ನಿನಗೆ ಯೋಗ್ಯವಾದ ಸ್ಥಾನವನ್ನು ನೋಡಿ ಪುನಃ ಬರುವೆನು' ಎಂದು ಹೇಳಿ ಅವಳನ್ನು ಅಲ್ಲಿಯೇ ಕೂತುಕೊಳ್ಳಿಸಿ ಉದ್ದಾಲಕರು ಹೊರಟುಹೋದರು. ಬಹುಹೊತ್ತಾದರೂ ಉದ್ದಾಲಕರು ಬರಲೇ ಇಲ್ಲ. ತರುವಾಯ ಗಂಡನು ತನ್ನನ್ನು ಬಿಟ್ಟುಹೋದನೆಂದು ಅಳುವವಳಾದಳು. ಅವಳು ಅಳುವುದು ವೈಕುಂಠದಲ್ಲಿ ರಮಾದೇವಿಯರಿಗೆ ಕೇಳಿಸಿತು. ಪರಮಾತ್ಮ ನೊಡನೆ 'ನನ್ನ ಅಕ್ಕನು ಗಂಡನು ಬಿಟ್ಟುಹೋದನೆಂದು ಅಳುತ್ತಿರುವಳು. ನಾನು ತಮಗೆ ಪ್ರಿಯಳಾಗಿದ್ದರೆ ಅವಳನ್ನು ಸಮಾಧಾನಪಡಿಸಿ ಬನ್ನಿರಿ' ಎಂದು ಹೇಳಿದರು.

ಪರಮಾತ್ಮನು ಬಂದು ಅಲಕ್ಷ್ಮಿಯನ್ನು ಸಮಾಧಾನಪಡಿಸಿ 'ಅಲಕ್ಷ್ಮಿಯೇ! ನೀನು ಅಶ್ವತ್ಥಮರದ ಬುಡದಲ್ಲಿ ಸ್ಥಿರವಾಗಿ ಇರು. ಈ ಮರವು ನನ್ನ ಅಂಶವುಳ್ಳದ್ದು. ಶನಿವಾರ ಹೊರತು ಬೇರೆ ದಿವಸಗಳಲ್ಲಿ ನೀನು ವಾಸಮಾಡು. ಶನಿವಾರದಲ್ಲಿ ಇಲ್ಲಿಗೆ ನಿನ್ನ ತಂಗಿಯಾದ ಲಕ್ಷ್ಮಿಯು ಬರುವಳು. ಆದುದರಿಂದ ಅಶ್ವತ್ಥವೃಕ್ಷವು ಶನಿವಾರದಲ್ಲಿ

ಪೂಜ್ಯವಾಗುವುದು. ಪ್ರತಿನಿತ್ಯವೂ ಜ್ಯೇಷ್ಠಳಾದ ನಿಮ್ಮನ್ನು ಪೂಜಿಸುವ ಗೃಹಸ್ಥರಿಗೆ ನಿನ್ನ ತಂಗಿಯ ಅನುಗ್ರಹವಾಗಲಿ' ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಆದುದರಿಂದ ಶನಿವಾರದಲ್ಲಿ ಮಾತ್ರ ಅಶ್ವತ್ಥವೃಕ್ಷವನ್ನು ಮುಟ್ಟಬಹುದು. ಬೇರೆ ದಿವಸಗಳಲ್ಲಿ ಅಲಕ್ಷ್ಮಿಯೂ ಇರುವ ಕಾರಣ ಮುಟ್ಟಬಾರದು.



## ಪುರಾಣಶ್ರವಣದ ಫಲವು [1]

ಕಲಿಯುಗದಲ್ಲಿ ಪುರಾಣಶ್ರವಣವು ಪರಮಪ್ರಶಸ್ತವಾದದ್ದು. ಗೋಹತ್ಯಾ ಮಾಡಿದವನೂ ಸ್ತ್ರೀಹತ್ಯಾಮಾಡಿದವನೂ ಕೃತಘ್ನನೂ ಬ್ರಹ್ಮಹತ್ಯೆ ಮಾಡಿದವನೂ ಪಿತೃಹತ್ಯೆ ಮಾಡಿದವನೂ ಮಾತೃಹತ್ಯೆ ಮಾಡಿದವನೂ ಕುಷ್ಠರೋಗವುಳ್ಳವನೂ ಕದ್ದುಕೊಂಡವನೂ ವಿಶ್ವಾಸಘಾತಕನೂ ಎಲ್ಲರೂ ಕಲಿಯುಗದಲ್ಲಿ ಪುರಾಣ ಶ್ರವಣ ದಿಂದ ಪಾಪರಹಿತರಾಗುವರು. ಬಾಲಕರೂ ವೃದ್ಧರೂ ರೋಗಿಗಳೂ ಫಲೇಚ್ಛೆ ಯುಳ್ಳವರೂ ಫಲೇಚ್ಛೆಯಿಲ್ಲದವರೂ ಉತ್ತಮರೂ ಮಧ್ಯಮರೂ ಅಧಮರೂ ಸ್ತ್ರೀಯರೂ ಶೂದ್ರರೂ ಪತಿತರೂ ಎಲ್ಲರೂ ಪುರಾಣವನ್ನು ಕೇಳಬೇಕು. ಪುರಾಣಶ್ರವಣದಿಂದ ಮನೋರಥವನ್ನು ಹೊಂದುವರು. ಈ ವಿಷಯ ದಲ್ಲಿ ಒಂದು ಇತಿಹಾಸವಿರುವುದು. ಪೂರ್ವದಲ್ಲಿ ದ್ವಾರವತಿಯಲ್ಲಿ ದೇವಶರ್ಮ ಎಂಬ ಬ್ರಾಹ್ಮಣಾಧಮನಿದ್ದನು. ಅವನು ಬ್ರಾಹ್ಮಣ ಕರ್ಮದಿಂದ ಭ್ರಷ್ಟನಾಗಿದ್ದನು. ಪ್ರೇತಕರ್ಮವನ್ನು ಮಾಡುತ್ತಿದ್ದನು. ಯಾವಾಗಲೂ ದುಷ್ಟಕರ್ಮಗಳನ್ನು ಮಾಡು ತ್ತಿದ್ದನು. ಕುಟುಂಬವನ್ನು ರಕ್ಷಿಸುವುದಕ್ಕಾಗಿ ಕಳ್ಳತನವನ್ನು ಮಾಡುತ್ತಿದ್ದನು. ಹಾಗೆಯೇ ಅಲ್ಲಿ ಬಹುವರ್ಷಗಳನ್ನು ಕಳೆಯುವವನಾದನು. ತರುವಾಯ ದೈವೇಚ್ಛೆಯಿಂದ ಜ್ಯೇಷ್ಠಮಾಸವು ಬಂದಿತು. ಊರಿನ ಜನರೆಲ್ಲರೂ ಗೋಮತೀ ನದಿಯಲ್ಲಿ ಪ್ರತಿನಿತ್ಯವೂ ಸ್ನಾನ ಮಾಡುತ್ತಿದ್ದರು. ಅಲ್ಲಿ ಸ್ನಾನ ಮಾಡಿ ದೇವಾಲಯಕ್ಕೆ ಬಂದು ಅಲ್ಲಿ ಪುರಾಣಹೇಳುವ ಬ್ರಾಹ್ಮಣರನ್ನು ಶಕ್ತಿಯನ್ನು ಅನುಸರಿಸಿ ವಸ್ತ್ರಾಲಂಕಾರಾದಿಗಳಿಂದ ಪೂಜಿಸಿ ಜ್ಯೇಷ್ಠಮಾಸದ ಮಹಿಮೆಯನ್ನು ಕೇಳುತ್ತಿದ್ದರು. ಹೀಗೆ ಎರಡು ಯಾಮವಿದ್ದು ಆಮೇಲೆ ಮನೆಗೆ ಹೋಗುತ್ತಿದ್ದರು.

ದೇವಶರ್ಮನು ಅಲ್ಲಿಗೆ ಬಂದು ಏನನ್ನೂ ಕದ್ದುಕೊಂಡು ಹೋಗಲಿ ಎಂದು

1. ಭ.ಪು.ಫಾ.ಮಾ.ಮಾ. ಅ-40

ಯೋಚಿಸುತ್ತಿದ್ದನು. ಅವನಿಗೆ ಒಂದನ್ನೂ ಕದ್ದುಕೊಳ್ಳಲಿಕ್ಕೆ ಸಿಗಲಿಲ್ಲ. ಹೀಗೆಯೇ ಬಹುದಿವಸಗಳು ಕಳೆದುಹೋದವು. ಈ ದಿನವೋ ನಾಳೆಯೋ ವಸ್ತ್ರಾಭರಣಗಳನ್ನು ಅಪಹರಿಸುವೆ ನೆಂದು ಯೋಚಿಸುತ್ತಿದ್ದನು. ಹೀಗೆಯೇ ಹುಣ್ಣಿಮೆಯೂ ಬಂದಿತು. ಆ ದಿವಸದಲ್ಲಿ ಎಲ್ಲರೂ ಕುತೂಹಲದಿಂದ ಸ್ನಾನವನ್ನು ಮಾಡಿ ಪುರಾಣಶ್ರವಣ ಮಾಡಿದರು. ಪುರಾಣ ಹೇಳುವವರಿಗೆ ವಸ್ತ್ರ ಆಭರಣ ತಾಂಬೂಲ ಫಲ ಇತ್ಯಾದಿಗಳನ್ನು ಕೊಟ್ಟರು. ಅದನ್ನು ನೋಡಿ ಆ ಕಳ್ಳ ಬ್ರಾಹ್ಮಣನು ಈ ಬ್ರಾಹ್ಮಣನನ್ನು ಇಂದು ಕೊಂದು ಹಾಕಿ ಸರ್ವಸ್ವವನ್ನು ಅಪಹರಿಸುವೆನು ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಪೌರಾಣಿಕರನ್ನು ಪೂಜಿಸಿ ನಮಸ್ಕಾರ ಮಾಡಿದನು. ನಾನು ದರಿದ್ರನಾಗಿರು ವೆನು. ನಾನು ದಾಸನೆಂದು ತಿಳಿದುಕೊಂಡು ನನ್ನ ಸೇವೆಯನ್ನು ಸ್ವೀಕರಿಸಬೇಕು. ಎಂದು ಹೇಳಿ ಎಲ್ಲರಿಂದಲೂ ಹೆಚ್ಚಾಗಿ ಕಪಟ ಭಕ್ತಿಯನ್ನು ತೋರಿಸಿದನು. ತರುವಾಯ ಜನರು ಎಲ್ಲರೂ ಹೊರಟು ಹೋದರು. ಆ ವಂಚನಬ್ರಾಹ್ಮಣನೂ ಪೌರಾಣಿಕನೂ ಇಬ್ಬರೇ ಉಳಿದರು. ಪೌರಾಣಿಕನು ಬಂದ ದ್ರವ್ಯವೆಲ್ಲವನ್ನೂ ಸೇರಿಸಿ ದೊಡ್ಡ ಮೂಟೆಯನ್ನು ಕಟ್ಟಿದನು. ಆ ವಂಚಕನ ತಲೆಯಮೇಲೆ ಇಟ್ಟನು.

ತರುವಾಯ ಸ್ನೇಹದಿಂದ ಮಾರ್ಗದಲ್ಲಿ ಮೆಲ್ಲಮೆಲ್ಲನೆ ಹೋಗುತ್ತಿದ್ದನು. ತರುವಾಯ ಬಹುಜನ ಸಂಚಾರವಿರುವ ಸ್ಥಳವು ಬರಲು ಆ ವಂಚಕನು ಆ ಮೂಟೆಯನ್ನು ಹಿಡಿದುಕೊಂಡು ಓಡಿದನು. ಕತ್ತಲೆಯಲ್ಲಿ ಒಂದು ಹಾಳು ಬಾವಿಯಲ್ಲಿ ಬಿದ್ದುಬಿಟ್ಟನು. ಪೌರಾಣಿಕನು ಆ ವಂಚಕನನ್ನು ಕಾಣದೆ ಕೋಲಾಹಲವನ್ನು ಮಾಡಿದನು. 'ಹಾ! ಆ ವಂಚಕನು ನನ್ನ ಸರ್ವಸ್ವವನ್ನು ಅಪಹರಿಸಿದನು. ನಾನು ಆ ಅಯೋಗ್ಯನಲ್ಲಿ ವಿಶ್ವಾಸವನ್ನು ಮಾಡಿದೆನು' ಎಂದು ಕೂಗಿಕೊಂಡನು. ಅದನ್ನು ಕೇಳಿ ಜನರು ರಾಜನೊಡನೆ ಹೇಳಿಕೊಂಡರು. ಎಲ್ಲರೂ ರಾಜಾಜ್ಞೆಯಿಂದ ಹುಡುಕಲಿಕ್ಕೆ ಆರಂಭಿಸಿದರು. ಸೂರ್ಯೋದಯವಾಗಲು ಕೆಲವರು ಬಾವಿಯಲ್ಲಿ ಬಿದ್ದಿರುವ ಅವನನ್ನು ನೋಡಿ ರಾಜನಿಗೆ ತಿಳಿಸಿದರು. ಅವನನ್ನು ಬಾವಿಯಿಂದ ಮೇಲೆ ಎಳೆದುಹಾಕಿ ಸರ್ವಸ್ವವನ್ನು ಪೌರಾಣಿಕನಿಗೆ ಕೊಟ್ಟರು. ಆ ವಂಚಕನು ಪ್ರಾಣವನ್ನು ಬಿಟ್ಟನು. ತರುವಾಯ ಅವನು ದಿವ್ಯರೂಪವುಳ್ಳವನಾಗಿ ಊರಿನ ಜನರಿಗೆ ನಮಸ್ಕರಿಸಿ ಇದು ನಿಮ್ಮ ಅನುಗ್ರಹ ಎಂದು ಹೇಳಿ ಉತ್ತಮಲಕಕ್ಕೆ ಹೋದನು. ಜನರೆಲ್ಲರೂ ಆಶ್ಚರ್ಯಪಟ್ಟು ಪುರಾಣಶ್ರವಣದ ಮಹಿಮೆಯನ್ನು ಹೊಗಳಿದರು.

**॥ ಶ್ರೀಕೃಷ್ಣಾರ್ಪಣಮಸ್ತು ॥**

# ಆಧಾರ ಗ್ರಂಥಗಳು


01. ಶ್ರೀಮನ್ಮಧ್ವಾಚಾರ್ಯರ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀ ನಿರ್ಣಯ, ಮಹಾಭಾರತ ತಾತ್ಪರ್ಯನಿರ್ಣಯ, ಗೀತಾಭಾಷ್ಯ-ತಾತ್ಪರ್ಯ... ಇತ್ಯಾದಿ

02. ಪದ್ಮಪುರಾಣ (ಆನಂದಾಶ್ರಮ) ಮತ್ತು ಖೋಡೆಫೌಂಡೇಶನ್

03. ಶ್ರೀವೇಂಕಟಾಚಲಮಾಹತ್ಮ್ಯಂ

04. ಗರುಡ ಪುರಾಣ, ಸ್ಕಂದಪುರಾಣ

05. ಮಹಾಭಾರತ ಮೂಲಗ್ರಂಥ - ವಿವಿಧ ಸಂಪಾದನೆಗಳು.

    (ಅ) ಶ್ರೀ ಟಿ.ಆರ್.ಕೃಷ್ಣಾಚಾರ್ 1991 (ಪುನರ್ಮುದ್ರಣ)

    (ಆ) ಗೀತಾಪ್ರೆಸ್, ಗೋರಖಪುರ, 1957

06. ಭಾಗವತ ಮಹಾಪುರಾಣ

07. ಪುರಾಣನಾಮ ಚೂಡಾಮಣಿ (ಮೈಸೂರು ವಿಶ್ವವಿದ್ಯಾಲಯ)

08. Encyclopedia of Puranic Words by - Vettam Mani Motilal Banarasidas Publishers-Delhi. 1993.

09. ಹನ್ನೆರಡು ಮಾಸ ಮಹಾತ್ಮ್ಯಗಳು (ಶ್ರೀರಾಘವೇಂದ್ರತೀರ್ಥ ಪ್ರತಿಷ್ಠಾನ - ಧಾರವಾಡ)

ಇತ್ಯಾದಿಗಳು

# ನಮ್ಮ ಪ್ರಕಟಣೆಗಳು

01. ಗಾಯತ್ರೀ ಹೃದಯ
02. ಗಾಯತ್ರೀ ಭಾವತಿಲಕಂ (ಸಂಸ್ಕೃತ)
03. ಅಹಂ ಬ್ರಹ್ಮಾಸ್ಮಿ
04. ಗುರಿಯಿಲ್ಲದ ದಾರಿ
05. ಗಾಯತ್ರಿಯಲ್ಲಿ ಅಧ್ಯಾತ್ಮದೀಪ
06. ಗಾಯತ್ರಿಯಲ್ಲಿ ವ್ಯಾಸಚಿಂತನೆ
07. ಹರಿನಾಮ ರಹಸ್ಯ
08. ಗೀತಾರ್ಥ ವೈಭವ
09. ಗೀತಾಸಾರ ಸೌರಭ
10. ಭಾಗವತವು ಬೆಳಗಿದ ವೇದಾಂತ ದೀಪಾವಳಿ
11. ಗೀತೆಯಲ್ಲಿ ಪ್ರಾಣತತ್ತ್ವದ ಹಿರಿಮೆ
12. ಭಗವಂತನು ನಿರ್ಗುಣ, ನಿರಾಕಾರನೇ ?
13. ವಾಸುದೇವನಲ್ಲಿ ಗೀತಾಕಟಾಕ್ಷ
14. ಹರಿತತ್ತ್ವ ಚೂಡಾಮಣಿ
15. ಹರಿತೀರ್ಥ ವಿವೇಕ
16. ಭಾಗವತ ರಸ ಸಂದೇಶ
17. ಶಿವರಾತ್ರಿ ರಹಸ್ಯ
18. ವಿರೋಧೋದ್ಧಾರ (ಸಂಸ್ಕೃತ)
19. ಸುಲಲಿತಂ ಶ್ರೀಮದ್ಭಾಗವತಂ - 7 ಸಂಪುಟಗಳಲ್ಲಿ
(ಸಮಗ್ರ ಭಾಗವತದ ಕನ್ನಡಾನುವಾದ)
20. ಸತ್ಕಥಾಸಾಗರ-ಭಾಗ 1, 2, 3, 4

